ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಸೃಷ್ಟಿಖಂಡ—ಮೂರನೆಯ ಭಾಗ

(೨೫—೩೬ ಅಧ್ಯಾಯಗಳು)

ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡವಿದ್ವಾನ್ (ಮದ್ರಾಸು)

ಮೈಸೂರು:

ಶ್ರೀ ಹನುಮಾನ್ ಪ್ರೆಸ್,

೧೯೪೫

॥ ಶ್ರೀಃ ॥

—x—

# ಮುನ್ನುಡಿ



ಪದ್ಮಮಹಾಪುರಾಣದಲ್ಲಿನ ಸೃಷ್ಟಿಖಂಡವನ್ನು ವಾಚಕರ ಅನುಕೂಲಕ್ಕೋಸ್ಕರ ಐದುಭಾಗಗಳನ್ನಾಗಿ ಮಾಡಿಕೊಂಡಿದೆಯೆಂದು ಮೊದಲನೆಯ ಭಾಗದಲ್ಲಿ ತಿಳಿಸಿತ್ತಷ್ಟೆ! ಅದರಂತೆ ಇಪ್ಪತ್ತೈದನೆಯ ಅಧ್ಯಾಯದಿಂದ ಮೊದಲುಮಾಡಿಕೊಂಡು ಮೂವತ್ತಾರನೆಯ ಅಧ್ಯಾಯ ಪೂರ್ತಿಯಾಗಿ ಇದರಲ್ಲಿ ಕೂಡಿಸಿ ಮೂರನೆಯ ಭಾಗವನ್ನಾಗಿ ಪ್ರಕಟಿಸಲಾಗಿದೆ

ಈ ಭಾಗದಲ್ಲಿ ಅನೇಕ ವ್ರತಗಳೂ ಕಥೆಗಳೂ ಉಕ್ತವಾಗಿವೆ. ಆದರೆ ನೀತಿಗಳನ್ನು ನಾವು ಕಥೆಯಿಂದ ಊಹಿಸಿಕೊಳ್ಳಬೇಕೇ ಹೊರತು ಅವನ್ನೇ ಪ್ರತ್ಯೇಕವಾಗಿ ಎತ್ತಿ ಹೇಳಿಲ್ಲ. ಅಲ್ಲದೆ ನೀತಿಯ ಪ್ರಸಂಗಗಳೂ ಕಡಿಮೆಯಾಗಿವೆ. ಆದರೆ ಕಥೆಗಳು ಮಾತ್ರ ಮನೋಹರವಾಗಿ ವೈದಿಕರು ಆಚರಿಸುತ್ತಿರುವ ಒಂದೊಂದು ಆಚಾರಕ್ಕೂ ಕಾರಣಗಳನ್ನು ತೋರಿಸುತ್ತವೆ. ನಾವು ಮಾಡತಕ್ಕ ವ್ರತಗಳಿಗೆ ಈ ಪದ್ಮಪುರಾಣವೇ ಮೂಲವೆಂದು ಖಚಿತವಾಗುತ್ತದೆ.

ಅನೇಕ ಯಾಗಗಳನ್ನೂ, ಉತ್ತಮೋತ್ತಮವಾದ ದಾನಗಳನ್ನೂ ಮಾಡಿದ ಶ್ವೇತನೆಂಬ ರಾಜನು ಅನ್ನದಾನವು ಅತ್ಯಲ್ಪವಾದುದೆಂದು ಮಾಡದಿದ್ದುದರಿಂದ ಅನೇಕ ಸೌಖ್ಯಗಳನ್ನು ಅನುಭವಿಸುತ್ತಿದ್ದರೂ ತನಗೆ ಅನ್ನವು ಸಿಕ್ಕದೆ ತನ್ನ ಹೆಣವನ್ನೇ ತಿಂದುಕೊಂಡಿರುತ್ತಿದ್ದ ವಿಷಯವನ್ನು ಆಲೋಚಿಸಿದರೆ ಅನ್ನದಾನದ ಮಹತ್ವವು ಮನಗಾಣದಿರಲಾರದು. ಬ್ರಹ್ಮನು ಪುಷ್ಕರದಲ್ಲಿ ಮಾಡಿದ ಯಾಗದಲ್ಲಿ ಸಾವಿತ್ರಿಯ ಕ್ಷಾತ್ರವನ್ನು ನೋಡಿದರೆ ನಮ್ಮಗಳ ಮನೆಯ ಜಗಳವು ಜ್ಞಾಪಕಕ್ಕೆ ಬರುವುದಾದರೂ ಸಾವಿತ್ರಿಯ ಮಹಿಮೆಯನ್ನು ಪ್ರಕಾಶಿಸುತ್ತದೆ.

ಇಲ್ಲಿ ವರ್ಣಿತವಾಗಿರುವ ರಾಮಚರಿತ್ರೆಯಲ್ಲಿ ರಾಮನು ತನ್ನ ಮನುಷ್ಯತ್ವವನ್ನು ನೆರವೇರಿಸುತ್ತಿದ್ದ ಬಗೆಯೂ, ರಾಜನಾದರೂ ತನ್ನ ತಮ್ಮಂದಿರನ್ನು ಸಂತೋಷಪಡಿಸಿ ಎಲ್ಲ ಕಡೆಯಲ್ಲಿಯೂ ರಾಜ್ಯದ ಬಿಗಿಯನ್ನು ಏರ್ಪಡಿಸಿ ತಾನು ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದುದೂ, ಅಂತೆಯೇ ವಿಭೀಷಣನಿಗೆ ಹೇಳಿದ ಬುದ್ಧಿವಾದವೂ ಎಲ್ಲರಿಗೂ ಆಚರಣೀಯವಾಗಿವೆ.

ಇಂಥಹ ಉತ್ತಮ ಗ್ರಂಥಗಳು ಕನ್ನಡಿಗರಿಗೆ ತಿಳಿಯುವಂತೆ ಪ್ರಕಾಶಪಡಿಸುತ್ತಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀಜಯಚಾಮರಾಜೇಂದ್ರಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ.** ರವರಿಗೆ ಭಗವಂತನು ಆಯುರಾರೋಗ್ಯ ಐಶ್ವರ್ಯಗಳನ್ನು ಕೊಟ್ಟು ಕಾಪಾಡಲಿ, ಎಂಬುದಾಗಿ ಆ ಸರ್ವೇಶ್ವರನನ್ನು ಅನವರತವೂ ಪ್ರಾರ್ಥಿಸುತ್ತೇನೆ.

ಅನುವಾದಕ :

ಮೈಸೂರು,

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

10—4—1945.

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದರಾಸ್)



# ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಮೂರನೆಯ ಭಾಗದ

## ವಿಷಯಾನುಕ್ರಮಣಿಕೆ

ಪುಟಸಂಖ್ಯೆ

॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಪಂಚವಿಂಶೋಽಧ್ಯಾಯಃ ॥



॥ ಭೀಷ್ಮ ಉವಾಚ ॥

ಶ್ರುತುಮೇತತ್ವತ್ಪ್ರಸಾದಾದ್ವಿಪ್ರವರ್ಯ ಪುರಾತನಂ ।
ಯಜ್ಞಾತ್ವಾ ಮುಚ್ಯತೇ ಪಾಪೈಃ ಶ್ರವಣೇನ ತು ಪುಣ್ಯಭಾಕ್ ॥ ೧ ॥

ಇದಾನೀಂ ಶ್ರೋತುಮಿಚ್ಛಾಮಿ ತೀರ್ಥಮಾಹಾತ್ಮ್ಯಮದ್ಭುತಂ ।
ಬ್ರೂಹಿ ವಿಸ್ತರಶೋ ಬ್ರಹ್ಮನ್ಯಚ್ಛ್ರುತ್ವಾ ಮುಚ್ಯತೇ ನರಃ ॥ ೨ ॥

॥ ಪುಲಸ್ತ್ಯ ಉವಾಚ ॥

ಸಂತಿ ತೀರ್ಥಾನ್ಯನೇಕಾನಿ ಪಾವನಾನಿ ಚ ಸುವ್ರತ ।
ತೇಷಾಂ ಕೀರ್ತನತೋಽಪಿಸ್ಯಾನ್ಮಹಾಪಾತಕನಾಶನಂ ॥ ೩ ॥

---

## ಇಪ್ಪತ್ತೈದನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು– ಎಲೈ ಬ್ರಾಹ್ಮಣೋತ್ತಮನೇ ! ನಿನ್ನ ಅನುಗ್ರಹ ದಿಂದ ಇದನ್ನು ಕೇಳಿದುದಾಯಿತು. ಇದನ್ನು ತಿಳಿದುಕೊಂಡರೆ ಪಾಪವು ಹೋಗುತ್ತದೆ ಕೇಳಿದರೆ ಪುಣ್ಯಬರುತ್ತದೆ.

೨. ಈಗ ತೀರ್ಥದ ಮಹಿಮೆಯನ್ನು ಕೇಳಲು ಇಚ್ಛಿಸುತ್ತೇನೆ. ಇದನ್ನು ವಿಸ್ತಾರವಾಗಿ ಹೇಳು. ಇದನ್ನು ಕೇಳುವುದರಿಂದ ಮನುಷ್ಯನು ಮೋಕ್ಷವನ್ನು ಹೊಂದುವನು.

೩. ಪುಲಸ್ತ್ಯನು ಹೇಳಿದನು– ಎಲೈ ಭೀಷ್ಮನೆ ! ಪವಿತ್ರವಾದ ಅನೇಕ ತೀರ್ಥ ಗಳಿವೆ. ಅವುಗಳ ಹೆಸರನ್ನು ಹೇಳುವುದರಿಂದಲೇ ಮಹಾಪಾಪವೆಲ್ಲವೂ ಹೋಗುತ್ತವೆ.

ತೀರ್ಥಾನಾಂ ದರ್ಶನಂ ಸ್ನಾನಂ ಪುನಸ್ತತ್ರಾವಗಾಹನಂ ।
ಸ್ಮರಣಂ ಸರ್ವತೀರ್ಥಾನಾಂ ವಾಂಛಿತಾರ್ಥಫಲಪ್ರದಂ ॥ ೪ ॥

ಪರ್ವತಾಶ್ಚ ತಥಾ ನದ್ಯಸ್ತೀರ್ಥಾನಿ ಕಥಿತಾನಿ ವೈ ।
ಕ್ಷೇತ್ರಾಣಿ ಚಾಶ್ರಮಾ ಭೀಷ್ಮ ಮಾನಸಾದಿಸರಾಂಸಿ ಚ ॥ ೫ ॥

ಗಚ್ಛತಸ್ತೀರ್ಥಯಾತ್ರಾರ್ಥಂ ಯಾನ್ಯುದ್ದಿಶ್ಯ ಪದೇ ಪದೇ ।
ಅಶ್ವಮೇಧಾದಿಯಜ್ಞಾನಾಂ ಫಲಂ ನಾಸ್ತ್ಯತ್ರ ಸಂಶಯಃ ॥ ೬ ॥

ತೇಷಾಂ ಕಿಂಸ್ವಿದ್ವದಾಮ್ಯತ್ರ ತತ್ತ್ವಂ ಮಾಂ ವಕ್ತುಮರ್ಹಸಿ ॥ ೭ ॥

॥ ಭೀಷ್ಮ ಉವಾಚ ॥

ವಿಷ್ಣೋಶ್ಚರಿತಮಿಚ್ಛಾಮಿ ಶ್ರೋತುಂ ತ್ವತ್ತೋ ದ್ವಿಜೋತ್ತಮ ।
ಯಜ್ಞಪರ್ವತಮಾಸಾದ್ಯ ವಿಷ್ಣುನಾ ಪ್ರಭವಿಷ್ಣುನಾ ॥ ೮ ॥

ಪದಾನಿ ಚೇಹ ದತ್ತಾನಿ ಕಿಮರ್ಥಂ ಪದಪದ್ಧತಿಃ ।
ಕೃತಾ ವೈ ದೇವದೇವೇನ ತನ್ಮೇ ವದ ಮಹಾಮತೇ ॥ ೯ ॥

---

೪. ತೀರ್ಥಗಳ ದರ್ಶನಮಾಡುವುದು. ಅವುಗಳ ನೀರಿನಿಂದ ಸ್ನಾನಮಾಡುವುದು. ಅವುಗಳಲ್ಲಿ ಇಳಿದು ಸ್ನಾನಮಾಡುವುದು. ಅವುಗಳನ್ನೆಲ್ಲಾ ಸ್ಮರಿಸುವುದು. ಇವು ಒಂದೊಂದೂ ಮಹಾಪಾಪಗಳನ್ನು ನಾಶಮಾಡುತ್ತದೆ. ಮತ್ತು ಇಷ್ಟಾರ್ಥಗಳನ್ನು ಕೊಡುತ್ತದೆ.

೫–೭. ಎಲೈ ಭೀಷ್ಮನೇ ಪರ್ವತಗಳೂ, ನದಿಗಳೂ, ಕ್ಷೇತ್ರಗಳೂ, ಆಶ್ರಮಗಳೂ, ಮಾನಸ ಸರೋವರಗಳೂ ಇವುಗಳನ್ನು ತಿಳಿದವರು ಕ್ಷೇತ್ರವೆನ್ನುತ್ತಾರೆ. ತೀರ್ಥವನ್ನುದ್ದೇಶಿಸಿ ಹೋದರೆ ಹೆಜ್ಜೆ ಹೆಜ್ಜೆಗೂ ಅಶ್ವಮೇಧ ಯಜ್ಞದ ಫಲವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ. ಅವುಗಳಲ್ಲಿ ಕೆಲವನ್ನು ವಿವರಿಸುತ್ತೇನೆ. ಅದನ್ನು ಕೇಳುವುದರಲ್ಲಿ ನಿನ್ನ ಇಷ್ಟವೇನು ? ಹೇಳು.

೮–೯. ಭೀಷ್ಮನು ಹೇಳಿದನು– ಎಲೈ ಬ್ರಾಹ್ಮಣ ಶ್ರೇಷ್ಠನೇ ! ವಿಷ್ಣುವಿನ ಚರಿತ್ರೆಯನ್ನು ಕೇಳಲು ಇಚ್ಛಿಸುತ್ತೇನೆ. ಶಕ್ತನಾದ ವಿಷ್ಣುವು ಯಜ್ಞ ಪರ್ವತಕ್ಕೆ ಹೋಗಿ ಹೆಜ್ಜೆಗಳನ್ನಿಟ್ಟನಷ್ಟೆ. ಅದನ್ನು ಏತಕ್ಕೆ ಇಟ್ಟನು ? ಅದನ್ನು ನನಗೆ ಹೇಳು ?

ಕತಮೋ ದಾನವಸ್ತೇನ ವಿಷ್ಣುನಾ ದಮಿತೋತ್ರ ವೈ ।
ಕೃತ್ವಾ ವೈ ಪದವಿನ್ಯಾಸಂ ತನ್ಮೇ ಶಂಸ ಮಹಾಮುನೇ ॥ ೧೦ ॥

ಸ್ವರ್ಲೋಕೇ ವಸತಿರ್ವಿಷ್ಣೋಃ ವೈಕುಂಠಸ್ಯ ಮಹಾತ್ಮನಃ ।
ಸ ಕಥಂ ಮಾನುಷೇ ಲೋಕೇ ಪದನ್ಯಾಸಂ ಚಕಾರ ಹ ॥ ೧೧ ॥

ದೇವಲೋಕೇಷು ವೈ ದೇವಂ ದೇವಾಶ್ಚೇಂದ್ರಪುರೋಗಮಾಃ ।
ತಪಸಾ ಮಹತಾ ಬ್ರಹ್ಮನ್ಪಶ್ಯಂತ್ಯೇ ಯೇ ಸತತಂ ಪ್ರಭುಂ ॥ ೧೨ ॥

ನ ಕಶ್ಚಿದೇನಂ ಶಕ್ನೋತಿ ದ್ರಷ್ಟುಂ ಭಕ್ತ್ಯಾ ವಿನಾ ಪ್ರಭುಂ ।
ಶ್ರೀ ವರಾಹಸ್ಯ ವಸತಿಃ ಮಹರ್ಲೋಕೇ ಪ್ರಕೀರ್ತಿತಾ ॥ ೧೩ ॥

ನೃಸಿಂಹಸ್ಯ ತಥಾ ಪ್ರೋಕ್ತಾ ಜನಲೋಕೇ ಮಹಾತ್ಮನಃ ।
ತ್ರಿವಿಕ್ರಮಸ್ಯ ವಸತಿಸ್ತಪೋಲೋಕೇ ಪ್ರಕೀರ್ತಿತಾ ॥ ೧೪ ॥

ಲೋಕಾನೇತಾನ್ಪರಿತ್ಯಜ್ಯ ಕಥಂ ಭೂಮೌ ಪದದ್ವಯಂ ।
ಕ್ಷೇತ್ರೇ ಪೈತಾಮಹೇ ಚಾಸ್ಮಿನ್ಪುಷ್ಕರೇ ಯಜ್ಞಪರ್ವತೇ ॥ ೧೫ ॥

---

೧೦. ವಿಷ್ಣುವು ಯಾವ ದಾನವನನ್ನು ಅಲ್ಲಿ ನಿಗ್ರಹಿಸಲು ಪದವಿನ್ಯಾಸವನ್ನು ಮಾಡಿದನು ? ಅದನ್ನು ನನಗೆ ಹೇಳು.

೧೧. ಮಹಾತ್ಮನಾದ ವಿಷ್ಣುವು ಯಾವಾಗಲೂ ಸ್ವರ್ಗದಲ್ಲಿರುವನಷ್ಟೆ ! ಅಂತಹ ಸ್ವಾಮಿಯು ಮನುಷ್ಯಲೋಕದಲ್ಲಿ ಪದನ್ಯಾಸವನ್ನು ಮಾಡಲು ಕಾರಣ ವೇನು ?

೧೨–೧೬. ದೇವಲೋಕದಲ್ಲಿ ಇಂದ್ರನೇ ಮುಂತಾದವರು ಬಹಳವಾಗಿ ತಪಸ್ಸಿನಿಂದ ನೋಡಬೇಕು. ಭಕ್ತಿಯಿಲ್ಲದಿದ್ದರೆ ಯಾರೂ ಕೂಡ ಆ ಸ್ವಾಮಿಯನ್ನು ನೋಡಲಾರರು. ವರಾಹಸ್ವಾಮಿಯು ಮಹರ್ಲೋಕದಲ್ಲಿಯೂ, ನೃಸಿಂಹಸ್ವಾಮಿಯು ಜನೋಲೋಕದಲ್ಲಿಯೂ, ತ್ರಿವಿಕ್ರಮಸ್ವಾಮಿಯು ತಪೋಲೋಕದಲ್ಲಿಯೂ ಇದ್ದಾರೆ. ಈ ಲೋಕಗಳನ್ನೆಲ್ಲವನ್ನೂ ಬಿಟ್ಟು ಭೂಮಿಯಲ್ಲಿ ಪದನ್ಯಾಸವನ್ನು ಮಾಡಲು ಕಾರಣ ವೇನು ? ಅದರಲ್ಲೂ ಪಿತಾಮಹನ ಕ್ಷೇತ್ರವಾದ ಈ ಪುಷ್ಕರವಾದ ಯಜ್ಞಪರ್ವತದಲ್ಲಿ

ಪದಾನಿ ಕೃತವಾನ್ಸ್ರುಹ್ಮನ್ನಿಸ್ತರಾನ್ಮಮ ಕೀರ್ತಯ ।
ಶ್ರುತೇನ ಸರ್ವಪಾಪಸ್ಯ ವಿನಾಶೋ ಭವಿತಾ ಧ್ರುವಂ ॥ ೧೬ ॥

॥ ಪುಲಸ್ತ್ಯ ಉವಾಚ ॥

ಸಮ್ಯಕ್ಪೃಷ್ಟಂ ತ್ವಯಾ ವತ್ಸ ಶೃಣು ತ್ವಂ ತು ಸಮಾಹಿತಃ ।
ಯಥಾಪೂರ್ವಂ ಪದನ್ಯಾಸಃ ಕೃತೋ ದೇವೇನ ವಿಷ್ಣುನಾ ॥ ೧೭ ॥

ಯಜ್ಞಪರ್ವತಮಾಸಾದ್ಯ ಶಿಲಾಪರ್ವತರೋಧಸಿ ।
ಪುರಾ ಕೃತಯುಗೇ ಭೀಷ್ಮ ದೇವಕಾರ್ಯಾರ್ಥಸಿದ್ಧಯೇ ॥ ೧೮ ॥

ವಿಷ್ಣುನಾ ತು ಕೃತಂ ಸರ್ವಂ ಪೃಥಿವ್ಯರ್ಥೇ ಪರಂತಪ ।
ತ್ರಿದಿವಂ ಸರ್ವಮಾಕ್ರಾನ್ತಂ ದಾನವೈರ್ಬಲವತ್ತರೈಃ ॥ ೧೯ ॥

ತ್ರೈಲೋಕ್ಯಂ ಚ ಸಮಾನೀತಂ ಜಿತ್ವಾ ದೇವಾನ್ಸವಾಸವಾನ್ ।
ದುನವಾ ಯಜ್ಞಭೋಕ್ತಾರಸ್ತತ್ರಾಸನ್ಬಲವತ್ತರಾಃ ॥ ೨೦ ॥

ಕೃತಾ ಬಾಷ್ಕಲಿನಾ ಸರ್ವೇ ದಾನವೇನ ಬಲೀಯಸಾ ।
ಏವಂ ಭೂತೇ ತಥಾ ಲೋಕೇ ತ್ರೈಲೋಕ್ಯೇ ಸಚರಾಚರೇ ॥ ೨೧ ॥

---

ಹೆಜ್ಜೆಯನ್ನು ಇಡಲು ಕಾರಣವೇನು ? ವಿಸ್ತಾರವಾಗಿ ಹೇಳು. ಅದನ್ನು ಕೇಳುವುದರಿಂದ ನಿಶ್ಚಯವಾಗಿಯೂ ಪಾಪಗಳು ಹೋಗುತ್ತವೆ.

೧೭. ಪುಲಸ್ತ್ಯನು ಹೇಳಿದನು– ಎಲೈ ವತ್ಸನೇ ! ನೀನು ಕೇಳಿದುದು ಸರಿ. ಒಂದೇ ಮನಸ್ಸಿನಿಂದ ಕೇಳು. ವಿಷ್ಣುವು ಪೂರ್ವದಲ್ಲಿ ಪದನ್ಯಾಸವನ್ನು ಹೇಗೆ ಮಾಡಿದನೆಂಬುದನ್ನು ಹೇಳುತ್ತೇನೆ.

೧೮–೨೫. ಎಲೈ ಭೀಷ್ಮನೇ ! ಪೂರ್ವದಲ್ಲಿ ವಿಷ್ಣುವು ದೇವಕಾರ್ಯಕ್ಕೋಸ್ಕರ ಯಜ್ಞ ಪರ್ವತಕ್ಕೆ ಹೋಗಿ ಶಿಲಾಪರ್ವತದ ದಡದಲ್ಲಿ ಈ ಭೂಮಿಗೋಸ್ಕರವಾಗಿ ಪದನ್ಯಾಸವನ್ನು ಮಾಡಿದನು. ಬಲಿಷ್ಠರಾದ ದಾನವರು ಸ್ವರ್ಗವನ್ನೆಲ್ಲಾ ಆಕ್ರಮಿಸಿಕೊಂಡರು. ಇಂದ್ರನೇ ಮುಂತಾದವರನ್ನೆಲ್ಲಾ ಗೆದ್ದು ಮೂರು ಲೋಕವನ್ನೂ ತಮ್ಮ ಅಧೀನವಾಗಿ ಮಾಡಿಕೊಂಡರು. ಅಲ್ಲಿದ್ದ ಬಲಿಷ್ಠನಾದ ಬಾಷ್ಕಲಿಯು ಅಲ್ಲಿರುವ ದಾನವರೆಲ್ಲರೂ ಯಜ್ಞದಲ್ಲಿ ಹವಿಸ್ಸನ್ನು ತಿನ್ನುವಂತೆ ಮಾಡಿದನು. ಲೋಕಗಳು ಕೈಬಿಟ್ಟುಹೋಗಲು ಇಂದ್ರನು ಬಹುವಾದ ವ್ಯಥೆಯನ್ನು ಹೊಂದಿ ತನ್ನ ಬಮ

ಪರಮಾರ್ತಿಂ ಯಯೌ ಶಕ್ರೋ ನಿರಾಶೋ ಜೀವಿತೇ ಸ್ವಕೇ ।
ಸ ಬಾಷ್ಕಲಿರ್ದಾನವೇಂದ್ರೋಽಪವಧ್ಯೋ ಮಮ ಸಂಯುಗೇ ॥ ೨೨ ॥

ಬ್ರಹ್ಮಣೋ ವರದಾನೇನ ಸರ್ವೇಷಾಂ ತು ದಿವೌಕಸಾಂ ।
ತದಹಂ ಬ್ರಹ್ಮಣೋ ಲೋಕೇ ವೃತಸ್ಸರ್ವೈರ್ದಿವೌಕಸೈಃ ॥ ೨೩ ॥

ವ್ರಜಾಮಿ ಶರಣಂ ದೇವಂ ಗತಿರನ್ಯಾ ನ ವಿದ್ಯತೇ ।
ಏವಂ ವಿಚಿಂತ್ಯ ದೇವೇಂದ್ರೋ ವೃತಸ್ಸರ್ವೈರ್ದಿವೌಕಸೈಃ ॥ ೨೪ ॥

ಜಗಾಮ ತ್ವರಿತೋ ಭೀಷ್ಮ ಯತ್ರ ದೇವಃ ಪಿತಾಮಹಃ ।
ಬ್ರಹ್ಮಣಸ್ಸದನಂ ಪ್ರಾಪ್ಯ ವೃತಸ್ತ್ರೈಸ್ತ್ರಿದಿವೌಕಸೈಃ ।
ಅಬ್ರವೀಜ್ಜಗತಃ ಕಾರ್ಯಂ ಪ್ರಾಪ್ತಾಂ ಚಾಪದಮುತ್ತಮಾಂ ॥ ೨೫ ॥

॥ ಇಂದ್ರ ಉವಾಚ ॥

ಕಿಂ ನ ಜಾನಸಿ ವೈ ದೇವ ಕುತೋ ನೋ ಜೀವಿತಂ ತಥಾ ।
ದೈತ್ಯೈಸ್ಸಮಾಹೃತಂ ಸರ್ವಂ ವರದಾನಾಚ್ಚ ತೇ ಪ್ರಭೋ ॥ ೨೬ ॥

---

ಕಿರುವಿಕೆಯಲ್ಲಿ ಆಶೆಯನ್ನು ತೊರೆದನು. ದಾನವ ರಾಜನಾದ ಆ ಬಾಷ್ಕಲಿಯು ಬ್ರಹ್ಮನ ವರದಿಂದ ನನ್ನಿಂದಲಾಗಲಿ, ಇತರ ದೇವತೆಗಳಿಂದಾಗಲಿ ಅವಧ್ಯನಾಗಿದ್ದಾನೆ. ಆದ್ದರಿಂದ ನಾನು ಎಲ್ಲಾ ದೇವತೆಗಳನ್ನೂ ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋಗಿ ಆತನನ್ನು ಶರಣುಹೊಂದುತ್ತೇನೆ. ಬೇರೆ ಗತಿಯೇ ಇಲ್ಲ. ದೇವೇಂದ್ರನು ಈರೀತಿ ಯೋಚಿಸಿ ಎಲ್ಲಾ ದೇವತೆಗಳಿಂದಲೂ ಕೂಡಿಕೊಂಡು ಜಾಗ್ರತೆಯಾಗಿ ಬ್ರಹ್ಮಸದ್ಮಕ್ಕೆಗೆ ಹೋದನು. ಹೀಗೆ ಇಂದ್ರನು ಎಲ್ಲಾ ದೇವತೆಗಳನ್ನೂ ಕರೆದುಕೊಂಡು ಬ್ರಹ್ಮನ ಮನೆಗೆ ಹೋಗಿ ಪ್ರಪಂಚದ ಕಾರ್ಯವನ್ನೂ ತಮಗೆ ಬಂದಿರುವ ಅಗಾಧವಾದ ವಿಪತ್ತನ್ನೂ ವಿಜ್ಞಾಪಿಸಿಕೊಂಡರು.

೨೬. ಇಂದ್ರನು ಹೇಳಿದನು- ಎಲೈ ಸ್ವಾಮಿಯೇ ! ನಿನಗೆ ಗೊತ್ತಿಲ್ಲವೇ ? ನಾನು ಬದುಕುವುದು ಎಲ್ಲಿ ಬಂತು ? ಎಲೈ ಪ್ರಭುವೇ ! ನಿನ್ನ ವರದಾನದಿಂದ ದೈತ್ಯರು ನಮ್ಮದೆಲ್ಲವನ್ನೂ ಕಿತ್ತುಕೊಂಡರು.

ಕಥಿತಂ ವೈ ಮಯಾ ಸರ್ವಂ ಬಾಷ್ಕಲೇಶ್ಚ ದುರಾತ್ಮನಃ ।
ಕ್ರಿಯತಾಂ ಚಾವಿಲಂಬೇನ ಪಿತಾ ತ್ವಂ ನಃ ಪಿತಾಮಹ ॥ ೨೭ ॥

ತತ್ತ್ವಂ ಚಿಂತಯ ದೇವೇಶ ಶಾನ್ತ್ಯರ್ಥಂ ಜಗತಸ್ತ್ವಿಹ ।
ತೇಷಾಮುಪಶ್ಯತಾಂಕಿಂಚಿಚ್ಛ್ರೌತಸ್ಮಾರ್ತಾದಿಕಾಃ ಕ್ರಿಯಾಃ ॥ ೨೮ ॥

ಪ್ರವರ್ತೇರನ್ನಹಾನಿಸ್ತು ತೈರಸ್ಮಾಕಂ ದಿನೇದಿನೇ ।
ಯಥಾ ಹಿ ಪ್ರಾಕೃತೈಃ ಕೈಶ್ಚಿತ್ಸ್ವಾರ್ಥಮುದ್ದಿಶ್ಯ ಭಾಷ್ಯತೇ ॥ ೨೯ ॥

ವಿಜ್ಞಾಪ್ಯಸೇ ತಥಾಸ್ಮಾಭಿರ್ನಿರಸ್ತೋಽಪಕೃತೈಃ ಪ್ರಭೋ ।
ಯದ್ಯೇನೋಽಪಕೃತಂ ಯಸ್ಯ ಸಹಸ್ರಗುಣಿತಂ ಪುನಃ ॥ ೩೦ ॥

ಯೋ ನ ತಸ್ಯೋಽಪಕಾರಾಯ ತತ್ಕರೋತಿ ವೃಥಾ ಮತಿಃ ।
ತಸ್ಯೋಽಪಕಾರಧಗ್ಧಸ್ಯ ನಿಷ್ಪ್ರಪಸ್ಯಾಸತಃ ಪುನಃ ॥ ೩೧ ॥

ನರಕೇಷ್ವಪಿ ನಸ್ಥಾನಮುಸ್ಯದುಷ್ಕೃತಕಾರಿಣಃ ।
ನೈತಾವತ್ಯೈವ ಸಾಧುತ್ವಂ ಕೃತೇ ಯಾತು ಪ್ರತಿಕ್ರಿಯಾ ॥ ೩೨ ॥

---

೨೭. ದುರಾತ್ಮನಾದ ಬಾಷ್ಕಲಿಯು ಮಾಡಿದುದೆಲ್ಲವನ್ನೂ ಹೇಳಿದೆನು. ಜಾಗ್ರತೆಯಾಗಿ ಪ್ರತೀಕಾರವನ್ನು ಮಾಡು. ಎಲೈ ಬ್ರಹ್ಮನೇ ನೀನೇ ನಮಗೆ ತಂದೆಯಾಗಿದ್ದೀಯೆ.

೨೮-೨೯. ಎಲೈ ಬ್ರಹ್ಮನೇ ಜಗತ್ತಿನ ಶಾಂತಿಗೋಸ್ಕರ ಯಾವುದಾದರೂ ಒಂದು ಉಪಾಯವನ್ನು ಯೋಚಿಸು. ಅವರಿಗೆ ತಿಳಿಯದಂತೆ ಶ್ರೌತಸ್ಮಾರ್ತಾದಿ ಕ್ರಿಯೆಗಳು ನಡೆಯಬೇಕು. ಅದರಿಂದ ನಮಗೆ ಯಾವಾಗಲೂ ಹಾನಿ ಬರಕೂಡದು. ಯಾವ ದಡ್ಡನೂ ಕೂಡ ಸ್ವಾರ್ಥದ ಮಾತನ್ನೇ ಆಡಬಾರದು. ಹಾಗೆ ಮಾಡು.

೩೦. ನಾವು ಒಂದು ವಿಜ್ಞಾಪನೆಯನ್ನು ಮಾಡಿಕೊಳ್ಳುತ್ತೇವೆ. ಅಪಕಾರವನ್ನು ಹೊಂದಿ ಕಷ್ಟಪಡುತ್ತಿದ್ದೇವೆ. ಯಾವನಾದರೂ ಅಂತಹ ಯಾರಿಗಾದರೂ ಒಂದು ಉಪಕಾರವನ್ನು ಮಾಡಿದರೆ ಅದು ಅವನಿಗೆ ಸಾವಿರದಷ್ಟಾಗುತ್ತದೆ.

೩೧-೩೩. ಯಾವನು ದೇವತೆಗಳ ಉಪಕಾರಕ್ಕೋಸ್ಕರ ಆ ಶ್ರೌತಸ್ಮಾರ್ತಗಳನ್ನು ಮಾಡುವುದಿಲ್ಲವೋ ಉಪಕಾರಮಾಡದ ಲಜ್ಜೆಯಿಲ್ಲದ ಆ ಕೆಟ್ಟವನಿಗೆ ನರಕದಲ್ಲಿಯೂ ಸ್ಥಾನವು ಸಿಕ್ಕಕೂಡದು. ಆ ಶ್ರೌತಸ್ಮಾರ್ತಗಳನ್ನು ಮಾಡದವರಿಗೆ ಮೇಲೆ

ಸ್ವಾರ್ಥೈರ್ನೀಚಬುದ್ಧೀನಾಮೇತಸ್ಮಾಪಿ ಪ್ರವರ್ತತೇ ।
ಯದ್ಯಸ್ಯ ನಾಭವತ್ಸ್ಥಾನಂ ಜಗತೋಽನ್ಯತ್ರ ದುಃಖದಂ ॥ ೩೩ ॥

ಶತಧಾ ಹೃದಯಂ ದೀರ್ಣಂ ತನ್ನತೃಪ್ತಿಮುಪಾಗತಂ ।
ತತ್ರ ವಾ ಯತ್ರ ಗಂತಾಸ್ಮಾನ್ನಿಮಗ್ನಾನುದ್ಧರಸ್ವ ನಃ ॥ ೩೪ ॥

ಉಪಾಯಕಥನೇನಾಪಿ ಯೇನ ತೇಜಃ ಪ್ರವರ್ಧತೇ ।
ಯಥಾಖ್ಯಾತಂ ಮಯಾ ದೃಷ್ಟ್ವಾ ಜಗತಸ್ತ್ವಮವಸ್ಥಿತಿಂ ॥ ೩೫ ॥

ನಿಸ್ಸ್ವಾಧ್ಯಾಯವಷಟ್ಕಾರಂ ನಿವೃತ್ತೋತ್ಸವಮಂಗಳಂ ।
ತ್ಯಕ್ತಾಧ್ಯಯನಸಂಯೋಗಂ ಮುಕ್ತವಾರ್ತಾಪರಿಗ್ರಹಂ ॥ ೩೬ ॥

ದಂಡನೀತ್ಯಾ ಪರಿತ್ಯಕ್ತಂ ಶ್ವಾಸಮಾತ್ರಾವಶೇಷಿತಂ ।
ಜಗದಾರ್ತಿಮಪಿಪ್ರಾಪ್ತಂ ಪುನಃ ಕಷ್ಟತರಾಂ ದಶಾಂ ।
ಏತಾವತಾ ಹಿ ಕಾಲೇನ ವಯಂ ಗ್ಲಾನಿಮುಪಾಗತಾಃ ॥ ೩೭ ॥

---

ಹೇಳಿದ ಶಿಕ್ಷೆ ಇಷ್ಟೇ ಸಾಲದು. ಕೆಲವರು ಸ್ವಾರ್ಥದ ನೀಚಬುದ್ಧಿಯುಳ್ಳವರು ಇರುವರು. ಇದು ಅವರಿಗೆ ಇರುವುದೇ ಇಲ್ಲ. ಅಂತಹ ಜಗತ್ತಿನವರಿಗೆ ದುಃಖವನ್ನು ಕೊಡುವ ಸ್ಥಾನವು ಒಂದಿಲ್ಲದಿದ್ದರೆ ಆಗ ನನ್ನ ಹೃದಯವು ಸಾವಿರಪಾಲಾಗಿ ಸೀಳಿ ಹೋಗುತ್ತದೆ. ತೃಪ್ತಿಯನ್ನು ಹೊಂದುವುದಿಲ್ಲ. ನೀನು ಎಲ್ಲಿಗೆ ಹೋಗುತ್ತೀಯೋ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗು. ಕಷ್ಟದಲ್ಲಿರುವ ನಮ್ಮನ್ನು ಉದ್ಧಾರ ಮಾಡು. ಯಾವುದಾದರೂ ಉಪಾಯವನ್ನು ಹೇಳು. ಮತ್ತೆ ನಾವು ಪೂರ್ವದ ತೇಜಸ್ಸನ್ನು ಹೊಂದಿ ಹೆಚ್ಚಿಸಿಕೊಳ್ಳಬೇಕು. ಜಗತ್ತಿನ ಈ ಕೆಟ್ಟಸ್ಥಿತಿಯನ್ನು ಹೇಳಿದ್ದೇನೆ ಇದನ್ನು ತಿಳಿದು ಬೇಕಾದಂತೆ ಮಾಡು.

೩೬-೩೭. ಜಗತ್ತಿನಲ್ಲಿ ವೇದಾಧ್ಯಯನ ವಷಟ್ಕಾರಗಳಿಲ್ಲ. ಉತ್ತಮವಾದ ಕೆಲಸವಾಗಲಿ ಮಂಗಳವಾಗಲಿ ಆಚರಿಸಲ್ಪಡುತ್ತಿಲ್ಲ. ಅಧ್ಯಯನವನ್ನೆಲ್ಲಾ ಬಿಟ್ಟಿರುವುದು. ಆಚಾರದ ಚರ್ಚೆಯೇ ಇಲ್ಲ. ದಂಡ ನೀತಿಯ ಸುದ್ದಿಯೇ ಇಲ್ಲ. ಉಸಿರು ಒಂದು ಮಾತ್ರ ಉಳಿದು ಉಸಿರಾಡುತ್ತಿರುವುದು. ಇಂತಹ ಜಗತ್ತು ಬಹು ದುಃಖವನ್ನು ಹೊಂದಿದೆ ಇಷ್ಟರೊಳಗೆ ಅದಕ್ಕಿಂತ ಕಷ್ಟತರ ಸ್ಥಿತಿಯು ನನಗೆ ಬಂದು ಕಾಂತಿಗುಂದಿ ಹೋಗಿದ್ದೇವೆ.

॥ ಬ್ರಹ್ಮೋವಾಚ ॥

ಜಾನಾಮಿ ಬಾಷ್ಕಲಿಂ ಕ್ಷುದ್ರಂ ವರದಾನಾಚ್ಚ ಗರ್ವಿತಂ ।
ಅಜೇಯಂ ಭವತಾಂ ಮನ್ಯೇ ವಿಷ್ಣುಸಾಧ್ಯೋ ಭವಿಷ್ಯತಿ ॥ ೩೮ ॥

॥ ಪುಲಸ್ತ್ಯ ಉವಾಚ ॥

ನಿರುಧ್ಯ ಸಂಸ್ಥಿತೋ ಬ್ರಹ್ಮಾ ಭಾವಂ ತತ್ಸ್ವಮಯಂ ತದಾ ।
ಸಮಾಧಿಸ್ಥಸ್ಯ ತಸ್ಯೈವ ಧ್ಯಾನಮಾತ್ರಾಚ್ಚತುರ್ಭುಜಃ ॥ ೩೯ ॥

ಸ್ತೋಕೇನೈವ ಹಿ ಕಾಲೇನ ಚಿಂತ್ಯಮಾನಸ್ಸ್ವಯಂ ಭುವಾ ।
ಆಜಗಾಮ ಮುಹೂರ್ತೇನ ಸರ್ವೇಷಾಮೇವ ಪಶ್ಯತಾಂ ॥ ೪೦ ॥

॥ ವಿಷ್ಣುರುವಾಚ ॥

ಭೋ ಭೋ ಬ್ರಹ್ಮ ನಿವರ್ತಸ್ವ ಧ್ಯಾನಾದಸ್ಮಾನ್ನಿವಾರಿತಃ ।
ಯದರ್ಥಮಿಷ್ಯತೇ ಧ್ಯಾನಂ ಸೋಽಹಂ ತ್ವಾಂ ಸಮುಪಾಗತಃ ॥ ೪೧ ॥

॥ ಬ್ರಹ್ಮೋವಾಚ ॥

ಮಹಾಪ್ರಸಾದ ಏಷೋತ್ರ ಸ್ವಾಮಿನೋತ್ರ ಪ್ರದರ್ಶನಂ ।
ಕಸ್ಯಾನ್ಯಸ್ಯ ಭವೇದೇಷಾ ಚಿಂತಾ ಯಾ ಜಗತಃ ಪ್ರಭೋ ॥ ೪೨ ॥

---

೩೮. ಬ್ರಹ್ಮನು ಹೇಳಿದನು- ಆ ಬಾಷ್ಕಲಿಯು ಕ್ಷುದ್ರನಾಗಿದ್ದಾನೆಂಬುದನ್ನು ಬಲ್ಲೆ. ವರವನ್ನು ಪಡೆದಿರುವುದರಿಂದ ಗರ್ವಿಷ್ಠನಾಗಿರುವುದನ್ನೂ ಬಲ್ಲೆ. ಅವನು ವಿಷ್ಣುವಿಗೊಬ್ಬನಿಗೇ ಜಯಿಸಲು ಸಾಧ್ಯನೆಂಬುದನ್ನೂ ಬಲ್ಲೆ.

೩೯-೪೦. ಪುಲಸ್ತ್ಯನು ಹೇಳಿದನು- ಆಗ ಒಡನೆಯೇ ಬ್ರಹ್ಮನು ವಾಯುಗಳನ್ನು ನಿರೋಧಮಾಡಿ ತತ್ವ ಸ್ವರೂಪನಾದ ವಿಷ್ಣುವನ್ನು ಚಿಂತಿಸಿದನು. ಹೀಗೆ ಬ್ರಹ್ಮನು ಧ್ಯಾನಸ್ಥನಾಗಿರಲು ಸ್ವಲ್ಪಕಾಲದಲ್ಲಿಯೇ ಆ ವಿಷ್ಣುವು ಎಲ್ಲರೂ ಕಾಣುವಂತೆ ಅಲ್ಲಿಗೆ ಬಂದನು.

೪೧. ವಿಷ್ಣುವು ಹೇಳಿದನು- ಎಲೈ ಬ್ರಹ್ಮನೇ ನಿನ್ನ ಧ್ಯಾನವನ್ನು ಸಾಕು ಮಾಡು. ಯಾರನ್ನು ಕುರಿತು ನೀನು ಧ್ಯಾನಮಾಡುತ್ತಿರುವೆಯೋ ಆ ನಾನೇ ಬಂದಿರುವೆನು.

೪೨. ಬ್ರಹ್ಮನು ಹೇಳಿದನು- ತಾವು ಪ್ರಸನ್ನರಾಗಿ ಬಂದುದು ಮಹಾಪ್ರಸಾದ ಕೊಟ್ಟಂತಾಯಿತು. ಈ ಜಗತ್ತಿನ ಚಿಂತೆಯು ಮತ್ತೆ ಯಾರಿಗೆ ತಾನೇ ಇರುವುದು.

ಮನ್ಯೈವತಾವದುತ್ಪತ್ತಿರ್ಜಗದರ್ಥೇ ವಿನಿರ್ಮಿತಾ ।
ಜಗದೇತತ್ತದರ್ಥೋಽಯಂ ತತ್ತ್ವತೋ ನಾಸ್ತಿ ವಿಸ್ಮಯಃ ॥ ೪೩ ॥

ಭವತಾ ಪಾಲನಂ ಕಾರ್ಯಂ ಸಂಹಾರೇ ರುದ್ರ ಏವ ತು ।
ಏವಂ ಭೂತೇಜಗತ್ಯಸ್ಮಿನ್ ಶಕ್ರಸ್ಯಾಸ್ಯ ಮಹಾತ್ಮನಃ ॥ ೪೪ ॥

ಹೃತ್ಪಂ ರಾಜ್ಯಂ ಬಾಷ್ಕಲಿನಾ ತ್ರೈಲೋಕ್ಯಂ ಸ ಚರಾಚರಂ ।
ಭೃತ್ಯಸ್ಯ ಕ್ರಿಯತಾಂ ಸಾಹ್ಯಂ ಮಂತ್ರದಾನೇನ ಕೇಶವ ॥ ೪೫ ॥

॥ ವಾಸುದೇವ ಉವಾಚ ॥

ಭವತೋ ವರದಾನೇನ ಅವಧ್ಯಸ್ಸ ತು ಸಾಂಪ್ರತಂ ।
ಬುದ್ಧಿಸಾಧ್ಯಸ್ಸ ವೈ ಕಾರ್ಯೋ ಬಂಧನಾದಿಹ ದಾನವಃ । ॥ ೪೬ ॥

ವಾಮನೋಽಹಂ ಭವಿಷ್ಯಾಮಿ ದಾನವಾನಾಂ ವಿನಾಶಕಃ ।
ಮಯಾ ಸಹ ವ್ರಜತ್ವೇಷ ಬಾಷ್ಕಲೇಸ್ತು ನಿವೇಶನಂ ॥ ೪೭ ॥

---

೪೩. ನನ್ನ ಹುಟ್ಟುವಿಕೆಯು ಪ್ರಪಂಚಕ್ಕೋಸ್ಕರವೇ ಆಗಿದೆ. ಈ ಜಗತ್ತು ನನ್ನಿಂದ ರಕ್ಷಣೆಹೊಂದುವುದಕ್ಕೋಸ್ಕರಲೇ ಇರುವುದು. ಸರಿಯಾಗಿ ಯೋಚಿಸಿದರೆ ಇದರಲ್ಲಿ ಆಶ್ಚರ್ಯವೇನೂ ಇಲ್ಲ.

೪೪-೪೫. ಈ ಜಗತ್ತನ್ನು ನೀನು ಕಾಪಾಡಬೇಕು. ರುದ್ರನು ಸಂಹರಿಸಬೇಕು. ಈರೀತಿಯಾದ ಜಗತ್ತಿನಲ್ಲಿ ಇಂದ್ರನ ರಾಜ್ಯವನ್ನು ಬಾಷ್ಕಲಿಯು ಅಪಹರಿಸಿರುವನು. ಆದ್ದರಿಂದ ಉಪಾಯವನ್ನು ಹೇಳಿಕೊಟ್ಟು ಸೇವಕನಾದ ಇಂದ್ರನಿಗೆ ಸಹಾಯಮಾಡು.

೪೬. ವಾಸುದೇವನು ಹೇಳಿದನು- ನೀನು ಕೊಟ್ಟಿರುವ ವರದಿಂದ ಆ ದಾನವನಾದ ಬಲಿಯು ಅವಧ್ಯನಾಗಿರುವನು. ಆದ್ದರಿಂದ ಅವನನ್ನು ನಮ್ಮ ಬುದ್ಧಿಯಿಂದೇನಾದರೂ ಮಾಡಿ ಕಟ್ಟಬೇಕು.

೪೭. ನಾನು ವಾಮನನಾಗಿ ಹುಟ್ಟಿ ದಾನವರನ್ನು ನಾಶಮಾಡುತ್ತೇನೆ. ಆ ಇಂದ್ರನು ನನ್ನೊಡನೆ ಆ ಬಾಷ್ಕಲಿಯಾದ ಬಲಿಯ ಮನೆಗೆ ಬರಲಿ.

ತತ್ರ ಗತ್ವಾ ವರಂ ತ್ವೇಷ ಮುದರ್ಥೇ ಯಾಚತಾಮಿಮಂ ।
ವಾಮನಸ್ಯಾಸ್ಯ ವಿಪ್ರಸ್ಯ ಭೂಮೇ ರಾಜನ್ಪದತ್ರಯಂ ॥ ೪೮ ॥

ಪ್ರಯಚ್ಛಸ್ವ ಮಹಾಭಾಗ ಯಾಚ್ಞೈಷಾ ತು ಮಯಾ ಕೃತಾ ।
ಶಕ್ರೇಣೋಕ್ತೋ ದಾನವೇಂದ್ರೋ ದದ್ಯಾತ್ಸ್ವಮಪಿ ಜೀವಿತಂ ॥ ೪೯ ॥

ಗೃಹ್ಯ ಪ್ರತಿಗ್ರಹಂ ತಸ್ಯ ದಾನವಸ್ಯ ಪಿತಾಮಹ ।
ವಂಚಯಿತ್ವಾ ತತೋ ಬದ್ಧ್ವಾ ಕೃತ್ವಾ ಪಾತಾಳವಾಸಿನಂ ॥ ೫೦ ॥

ಶೌಕರಂ ರೂಪಮಾಸ್ಥಾಯ ವಧಾರ್ಥೇಽಸ್ಯ ದುರಾತ್ಮನಃ ।
ಭವಿಷ್ಯಾಮಿ ನ ಸಂದೇಹೋ ವ್ರಜ ಶಕ್ರ ತ್ವರಾನ್ವಿತಃ ॥ ೫೧ ॥

॥ ಪುಲಸ್ತ್ಯ ಉವಾಚ ॥

ವಿರರಾಮ ತಮುಕ್ತ್ವೈವಮಸ್ತರ್ಧಾನಂ ಗತಶ್ಚ ವೈ ।
ಅಥ ಕಾಲಾಂತರೇ ವಿಷ್ಣಾವದಿತೇರ್ಗರ್ಭತಾಂ ಗತೇ ॥ ೫೨ ॥

ನಿಮಿತ್ತಾನಿ ಶುಭಾನ್ಯೇನಂ ಪ್ರಾದುರ್ಭೂತಾನ್ಯನೇಕಶಃ ।
ಸಮಸ್ತಜಗದಾಧಾರೇ ವಿಷ್ಣೌ ಗರ್ಭತ್ವಮಾಗತೇ ॥ ೫೩ ॥

---

೪೮-೪೯. ಅಲ್ಲಿಗೆ ಹೋಗಿ ನನಗೋಸ್ಕರ ಈ ವರಗಳನ್ನು ಕೇಳಿಕೊಳ್ಳಲಿ. ಏನೆಂದರೆ ಮಹಾನುಭಾವನೇ! ವಾಮನನಾದ ಈ ಬ್ರಾಹ್ಮಣನಿಗೆ ಮೂರು ಹೆಜ್ಜೆ ಸ್ಥಳವನ್ನು ಕೊಡು. ಇದೇ ನಾನು ನಿನ್ನನ್ನು ಕೇಳಿಕೊಳ್ಳುವುದು ಎಂದು. ಇಂದ್ರನು ಹೀಗೆ ಕೇಳಿದಕೂಡಲೇ ಆ ಬಾಷ್ಕಲಿಯಾದ ಬಲಿಯು ತನ್ನ ಪ್ರಾಣಗಳನ್ನು ಬೇಕಾದರೂ ಕೊಟ್ಟುಬಿಡುವನು.

೫೦-೫೧. ಎಲೈ ಪಿತಾಮಹನೇ ಅವನಿಂದ ಆ ದಾನವನ್ನು ತೆಗೆದುಕೊಳ್ಳಲಿ. ಅನಂತರ ಅವನನ್ನು ವಂಚಿಸಿ ಅವನನ್ನು ಕಟ್ಟಿ ಪಾತಾಳದಲ್ಲಿರುವಂತೆ ಮಾಡಿ ಅನಂತರ ವರಾಹಾವತಾರವನ್ನೆತ್ತಿ ಅವನ ವಧೆಯನ್ನು ಮಾಡುತ್ತೇನೆ, ಸಂದೇಹವಿಲ್ಲ. ಎಲೈ ಇಂದ್ರನೇ ನೀನು ಜಾಗ್ರತೆಯಾಗಿ ಹೊರಡು ಎಂದನು.

೫೨-೫೪. ಪುಲಸ್ತ್ಯನು ಹೇಳಿದನು- ಹೀಗೆ ಹೇಳಿ ಸುಮ್ಮನಾಗಿ ಆ ವಿಷ್ಣುವು ಹೊರಟುಹೋದನು. ಹೀಗಿರಲು ಕೆಲವು ಕಾಲದ ಮೇಲೆ ವಿಷ್ಣುವು ಅದಿತಿಯ ಗರ್ಭವನ್ನು ಹೊಂದಿದನು. ಆಗ ನಿಮಿತ್ತಗಳು ಬಹುವಾಗಿ ಕಾಣಿಸಿಕೊಂಡವು. ಸಮಸ್ತ ಜಗತ್ತಿಗೂ ಆಧಾರರೂಪವಾದ ಸ್ವಾಮಿಯು ಗರ್ಭದಲ್ಲಿ ಬರಲು ಒಳ್ಳೇದಾಗುವ

ಶೋಭನಂ ಹಿತಕಾಲಸ್ಯ ನಿಮಿತ್ತಂ ವೈರಸೂಚಿತಂ ।
ನಾಲಿಕೀಕುಸುಮಾನಾಂ ಚ ಸುಗಂಧಸ್ಸುರಭಿರ್ವವೌ ॥ ೫೪ ॥

ಅಥ ವಿಹಿತವಿಧಾನಂ ಕಾಲಮಾಸಾದ್ಯ ದೇವಃ ।
ತ್ರಿದಶಗಣಹಿತಾರ್ಥಂ ಸರ್ವಭೂತಾನುಕಂಪೀ
ವಿಮಲವಿರಳಕೇಶಶ್ಚಂದ್ರಖಂಡೋದಯಶ್ರೀ
ರದಿತಿತನಯಭಾವಂ ದೇವದೇವಶ್ಚಕಾರ ॥ ೫೫ ॥

ಅವತರತಿ ಚ ವಿಷ್ಣೌ ಸಿದ್ಧದೇವಾಸುರಾಣಾ-
ಮನಿಮಿಷನಯನಾನಾಂ ವಿಪ್ರಸೇದುರ್ಮುಖಾನಿ
ಅತಿವಿಗತರಜೋಭಿರ್ವಾಯುಭಿಸ್ಸಂವಹದ್ಭಿ
ರ್ದಿನಮಪಿ ಚ ತದಾಸೀ ಜನ್ಮ ವಿಷ್ಣೋಸ್ಸುಗರ್ಭೇ ॥ ೫೬ ॥

ಪ್ರವಿಶತಿ ಖಲು ಗರ್ಭೇ ಸಾಪಿ ದೇವೀ ಶ್ರಮಾರ್ತಾ
ನತಜಘನಭರಾರ್ತಾ ಮಂದಸಂಚಾರರಮ್ಯಾ ।
ಅಲಸವದನಖೇದಂ ಪಾಂಡುಭಾವಂ ವಹಂತೀ
ಗುರುತರಮವಗಾಢಂ ಗರ್ಭಮೇವೋದ್ವಹಂತೀ ॥ ೫೭ ॥

---

ಕಾಲಕ್ಕೆ ನಿಮಿತ್ತಗಳೂ ವೈರಸೂಚಕವಾದ ಕಾರಣಗಳೂ ಕಂಡುಬಂದುವು. ಜಾಜಿ ಹೂಗಳ ಗಂಧವನ್ನು ಹೊಂದಿ ವಾಯುವು ಬೀಸಿತು.

೫೫. ದೇವತೆಗಳ ಹಿತವನ್ನೂ ಸರ್ವಪ್ರಾಣಿಗಳಲ್ಲಿ ದಯೆಯನ್ನೂ ತೋರಿಸುವನಾಗಿ ಪರಿಶುದ್ಧವಾಗಿಯೂ, ವಿರಳವಾಗಿಯೂ ಇರುವ ಕೇಶಗಳುಳ್ಳ ಚಂದ್ರನಂತೆ ಪ್ರಕಾಶಮಾನನಾಗಿ ತಾನು ಹೇಳಿದ ಕಾಲಕ್ಕೆ ಸರಿಯಾಗಿ ಅದಿತಿಯ ಗರ್ಭದಲ್ಲಿ ಆ ಸ್ವಾಮಿಯು ಹುಟ್ಟಿದನು.

೫೬. ವಿಷ್ಣುವು ಅವತರಿಸುತ್ತಿರಲು ಸಿದ್ಧರು, ದೇವತೆಗಳು, ಅಸುರರು ಇವರುಗಳ ಕಣ್ಣುಗಳೂ ಮುಖಗಳೂ ಕಾಂತಿಗೂಡಿದುವು. ವಾಯುವು ಧೂಳು ಮುಂತಾದುವುಗಳನ್ನು ಬಿಟ್ಟು ಬೀಸುತ್ತಿತ್ತು. ಈರೀತಿ ವಿಷ್ಣುವಿನ ಜನ್ಮವು ಮನೋಹರವಾಗಿತ್ತು.

೫೭. ಹೀಗೆ ವಿಷ್ಣುವು ಗರ್ಭವನ್ನು ಹೊಂದಲು ಆ ಅದಿತಿಯು ಆಶ್ರಮದಿಂದ ಕೂಡಿದವಳಾಗಿ, ಜಘನ ಭಾರದಿಂದಲೂ, ಸಂಚಾರದಲ್ಲಿ ಅಲಸಳಾಗಿಯೂ ಆದಳು. ಮುಖವು ಸೋಮಾರಿತನವುಳ್ಳದ್ದಾಗಿಯೂ, ಬೆಳ್ಳಗೂ, ಗರ್ಭವು ದಪ್ಪವಾಗಿಯೂ ಆಯಿತು.

ತತಃ ಪ್ರವಿಷ್ಟೇ ಖಲು ಗರ್ಭವಾಸಂ
ನಾರಾಯಣೇ ಭೂತಭವಿಷ್ಯಯೋಗಾತ್ ।
ವಿನಾ ಪದಂ ಪ್ರಾಪ್ತಮನೋರಥಾನಿ
ಭೂತಾನಿ ಸರ್ವಾಣಿ ಸದಾ ಬಭೂವುಃ ॥ ೫೮ ॥

ಸಮೀರಣೇ ವಾತಿ ಚ ಮಂದಮಂದಂ
ಪತತ್ಸು ವರ್ಷೇಷು ನಗೋದ್ಭವೇಷು ।
ವಿವಿಕ್ತಮಾರ್ಗೇಷು ದಿಗನ್ತರೇಷು
ಜನೇಷು ವೈ ಸತ್ಯಮುಪಾಗತೇಷು ॥ ೫೯ ॥

ವಿಮುಚ್ಯಮಾನೇ ಗಗನೇ ರಜೋಭಿಃ ।
ಶನೈಶ್ಶನೈರ್ನಶ್ಯತಿ ಚಾಂಧಕಾರೇ ॥ ೬೦ ॥

ಉದರಾನ್ತರ್ಗತೇ ವಿಷ್ಣೌ ದ್ರೋಹಬುದ್ಧಿಸ್ತದಾಭವತ್ ।
ತಾಂ ನಿಶಾಮಯ ರಾಜೇಂದ್ರ ದೇವಮಾತುರ್ಯಥಾಕ್ರಮಾತ್ ॥ ೬೧ ॥

ಕಿಮಹಂ ಕ್ರಮೇಣ ಚೈಕೇನ ಲಂಘಯಾಮಿ ತ್ರಿವಿಷ್ಟಪಂ ।
ಬಾಷ್ಕಲಿಂ ದಾನವೇಂದ್ರಂ ಚ ಕುರ್ಯಾಂ ಪಾತಾಳವಾಸಿನಂ ॥ ೬೨ ॥

---

೫೮. ನಾರಾಯಣನು ನಡೆಯಬೇಕಾದ ಕೆಲಸಗಳಿಗೋಸ್ಕರ ಈರೀತಿ ಗರ್ಭವಾಸವನ್ನು ಪ್ರವೇಶಿಸಲು ಆಗ ತೊಂದರೆ ಇಲ್ಲದೆ ಎಲ್ಲಾ ಪ್ರಾಣಿಗಳೂ ಇಷ್ಟಾರ್ಥವನ್ನು ಹೊಂದುತ್ತಿದ್ದುವು.

೫೯-೬೦. ಗಾಳಿಯು ಮಂದಮಂದವಾಗಿ ಬೀಸುತ್ತಿದ್ದಿತು. ಬೆಟ್ಟದ ಮೇಲಿದ್ದ ಮೋಡಗಳು ಮಳೆಯನ್ನು ಸುರಿಸುತ್ತಿದ್ದುವು. ದಿಕ್ಕಿನ ಮಧ್ಯಭಾಗವು ನಿರ್ಮಲವಾಗಿದ್ದಿತು. ಜನರೆಲ್ಲರೂ ಸತ್ಯಸಂಧರೇ ಆದರು. ಅಂತರಿಕ್ಷವು ಧೂಳಿಲ್ಲದೇ ನಿರ್ಮಲವಾಯಿತು. ಅಂಧಕಾರವು ಮೆಲ್ಲಮೆಲ್ಲಗೆ ಹೋಗುತ್ತಿದ್ದಿತು.

೬೧. ವಿಷ್ಣುವು ಹೀಗೆ ಅದಿತಿಯ ಹೊಟ್ಟೆಯಲ್ಲಿರಲು ಆ ಅದಿತಿಗೆ ಈರೀತಿ ದ್ರೋಹಬುದ್ಧಿಯುಂಟಾಯಿತು. ಅದನ್ನು ಕೇಳು.

೬೨-೬೬. ನಾನು ಒಂದೇ ಹೆಜ್ಜೆಗೆ ದೇವಲೋಕಕ್ಕೆ ನೆಗೆಯಲೇ? ಬಷ್ಕಳನ ಮಗನಾದ ಬಲಿಯನ್ನು ಪಾತಾಳಕ್ಕೆ ತುಳಿಯಲೇ ? ಇಂದ್ರನಿಗೆ ನಾನು ಹಣ

ಶಕ್ರಸ್ಯ ತು ಮಯಾ ದತ್ತಂ ಧನಂ ಲಾವಣ್ಯಮೇವ ಚ ।
ದಾನವಾನಾಂ ವಿನಾಶಾಯ ಏಕ ಏವ ಭವಾಮ್ಯಹಂ ॥ ೬೩ ॥

ಕ್ಷಿಪಾಮಿ ಶರಜಾಲಾನಿ ಚಕ್ರಪಾತಾನ್ಯನೇಕಶಃ ।
ಗದಾಘಾತಾಂಶ್ಚ ವಿವಿಧಾನ್ದಾನವಾನಾಂ ವಿನಾಶನೇ ॥ ೬೪ ॥

ವಿಬುಧಾನ್ದೇವಲೋಕಸ್ಥಾನಧೋಭೂಮೇಸ್ತು ದಾನವಾನ್ ।
ಕರೋಮಿ ಕಾಲಕ್ಷೇಪೇಣ ತತ್ತು ಕಾರ್ಯನ್ಮತೇ ನ ಮೇ ॥ ೬೫ ॥

ನಿಸ್ಸೃತಾ ಸಹಸಾ ವಾಣೀ ವಕ್ತ್ರಮೇವಾಭಿಸಂಸ್ಥಿತಾ ।
ಯೇನೇದಂ ಚಿಂತ್ಯತೇ ಪೂರ್ವಂ ಯನ್ನ ದೃಷ್ಟಂ ನ ಚ ಶ್ರುತಂ ॥ ೬೬ ॥

ಬಂಧನಂ ದನುಮುಖ್ಯಸ್ಯ ಕೃತಂ ಕೋಪೇನ ಪಶ್ಯ ಮೇ ।
ಕಶ್ಯಪಾಯ ಪುರಾ ದತ್ತಂ ಧನಂ ಲಾವಣ್ಯಮೇವ ಚ ॥ ೬೭ ॥

ಕಿಮಯಂ ಚೇತಸೋತ್ಸಾಹೋ ವಾಯುರ್ವಾಥ ಸಮಾಕುಲಃ ।
ಭ್ರಮತೀವ ಹಿ ಮೇ ದೃಷ್ಟಿರ್ನೇದೃಗ್ರೂಪಂ ವಿಚಿನ್ತಿತಂ ॥ ೬೮ ॥

---

ವನ್ನೂ ಲಾವಣ್ಯವನ್ನೂ ಕೊಟ್ಟಿದ್ದೇನೆ. ದಾನವರೆಲ್ಲರನ್ನೂ ಕೊಲ್ಲಲು ನಾನೊಬ್ಬಳೇ ಸಾಕು. ಬಾಣಗಳನ್ನು ಪುಂಖಾನುಪುಂಖವಾಗಿ ಬಿಡಲೇ? ಚಕ್ರಗಳನ್ನು ಬೇಕಾದಂತೆ ಅವರ ಮೇಲೆ ಬಿಡಲೇ? ನಾನಾ ಬಗೆಯಲ್ಲಿ ಗದೆಗಳನ್ನು ಹೊಡೆಯಲೇ? ದಾನವರನ್ನು ಹೇಗೆ ನಾಶಮಾಡಲಿ? ದೇವತೆಗಳನ್ನು ದೇವಲೋಕದಲ್ಲಿಯೂ, ದಾನವರನ್ನು ಪಾತಾಳದಲ್ಲಿಯೂ ಇರುವಂತೆ ಮಾಡಲೆ? ನನ್ನಿಂದ ಹೊರತು ಮತ್ತಾರಿಂದಲೂ ಇದು ಆಗಲಾರದು. ಈ ರೀತಿಯಾಗಿ ಆಕೆಯ ಬಾಯಿಂದ ಮಾತುಗಳು ಯೋಚಿಸದೇ ಹೊರಡುತ್ತಿದ್ದುವು. ಕಾಣದ ಕೇಳದ ಈ ವಿಷಯಗಳನ್ನು ಅದಿತಿಯು ಬಹುವಾಗಿ ಚಿಂತಿಸುತ್ತಿದ್ದಳು.

೬೭-೬೮. ದಾನವೇಂದ್ರನಾದ ಬಲಿಯನ್ನು ಕೋಪದಿಂದ ಬಂಧಿಸುತ್ತೇನೆ. ನೋಡು. ಹಿಂದೆಯೇ ಕಶ್ಯಪನಿಗೆ ಧನವನ್ನೂ ಲಾವಣ್ಯವನ್ನೂ ಕೊಟ್ಟಿದ್ದೇನೆ. ಎಂದು ಯೋಚಿಸುವಳು. ಅನಂತರ ಇದೇನು ನನ್ನ ಮನಸ್ಸಿನ ಉತ್ಸಾಹವೇ ಹೀಗಿದೆಯೋ? ಇಲ್ಲದಿದ್ದರೆ ವಾಯುವಿನ ಪ್ರಕೋಪವುಂಟಾಗಿರುವುದೋ? ನನ್ನ ಕಣ್ಣುಗಳು ತಿರುಗುತ್ತಿರುವಂತೆ ಕಾಣುತ್ತಿದೆ. ಈರೀತಿ ನಾನು ಯಾವಾಗಲೂ ಯೋಚಿಸಿಯೇ ಇರಲಿಲ್ಲವಲ್ಲ.

ಆವಿಷ್ಟಾ ಕಿಮಹಂ ವಚ್ಮಿ ಕೇನಾಪ್ಯಸದೃಶಂ ವಚಃ ।
ವಿಕಲ್ಪವಶ ಮಾಪನ್ನಾಽಭೀಕ್ಷ್ಣಂ ಹಿ ವಿಮಮರ್ಶ ಸಾ ॥ ೬೯ ॥

ಸಧಾರ ದಿವ್ಯಂ ವರ್ಷಾಣಾಂ ಸಹಸ್ರಂ ದಿವ್ಯಮೀಶ್ವರಂ ।
ತತಸ್ಸಮಭವತ್ತಸ್ಯಾಂ ವಾಮನೋ ಭೂತಭಾವನಃ ॥ ೭೦ ॥

ಜಾತೇನ ಯೇನ ಚಕ್ಷೂಂಷಿ ದಾನವಾನಾಂ ಹೃತಾನಿ ವೈ ।
ಜಾತಮಾತ್ರೇ ತತಸ್ತಸ್ಮಿನ್ದೇವದೇವೇ ಜನಾರ್ದನೇ ॥ ೭೧ ॥

ನದ್ಯಸ್ಸ್ವಚ್ಛಾಂಬುವಾಹಿನ್ಯೋ ವವೌ ಗಂಧವಹೋಽನಿಲಃ ।
ಕಶ್ಯಪೋಽಪಿ ಮುದಂ ಲೇಭೇ ತೇನ ಪುತ್ರೇಣ ಭಾಸ್ವತಾ ।
ಸರ್ವೇಷಾಂ ಮಾನಸೋತ್ಸಾಹಸ್ತ್ರೈಲೋಕ್ಯೋದರವಾಸಿನಾಂ ॥ ೭೨ ॥

ಸಂಜಾತಮಾತ್ರೇ ತು ತತೋ ಜನಾರ್ದನೇ
ಸ್ವರ್ಲೋಕತೋ ದುಂದುಭಯೋ ವಿನೇದುಃ ।
ಅತಿಪ್ರಹರ್ಷಾತ್ತು ಜಗತ್ತ್ರಯಸ್ಯ
ಮೋಹಶ್ಚ ದುಃಖಾನಿ ಚ ನಾಶಮೀಯುಃ ॥ ೭೩ ॥

---

೬೯. ಆವೇಶ ಬಂದಂತೆ ನಾನು ಏನು ಹೇಳುತ್ತಿದ್ದೇನೆ? ಇದು ಯಾರಿಗೂ ಯೋಗ್ಯವಲ್ಲವಲ್ಲ ಎಂದು ಅನೇಕ ವಿಕಲ್ಪಗಳನ್ನು ಹೊಂದಿ ಆಕೆಯು ಬಹುವಾಗಿ ವಿಮರ್ಶೆಮಾಡಿದಳು.

೭೦. ದೇವತೆಗಳ ಸಾವಿರ ವರ್ಷಗಳವರೆಗೂ ಆ ಸ್ವಾಮಿಯನ್ನು ಗರ್ಭದಲ್ಲಿ ಹೊಂದಿದ್ದಳು ಅನಂತರ ಆಕೆಯಲ್ಲಿ ಅತ್ಯುತ್ತಮವಾದ ಕುಳ್ಳುಮಗು ಹುಟ್ಟಿತು.

೭೧-೭೨. ಅವನು ಹುಟ್ಟಿದೊಡನೆಯೇ ದಾನವರ ಕಣ್ಣುಗಳು ಕಾಣದಂತಾಯಿತು. ದೇವದೇವನಾದ ಜನಾರ್ದನನು ಹುಟ್ಟಿದೊಡನೆಯೇ ನದಿಗಳು ಸ್ವಚ್ಛವಾದ ನೀರಿನಿಂದ ಹರಿದುವು. ಗಾಳಿಯು ಸುಗಂಧವಾಗಿ ಬೀಸಿತು. ಪ್ರಕಾಶಮಾನವಾದ ಆ ಮಗನಿಂದ ಕಶ್ಯಪನಿಗೂ ಸಂತೋಷವಾಯಿತು. ಮೂರು ಲೋಕದ ವಾಸಿಗಳಾದವರಿಗೆಲ್ಲರಿಗೂ ಮನಸ್ಸಿನಲ್ಲಿ ಉತ್ಸಾಹವಾಯಿತು.

೭೩-೭೬. ಜನಾರ್ದನನು ಹುಟ್ಟಿದೊಡನೆಯೇ ಸ್ವರ್ಗದಲ್ಲಿ ದೇವದುಂದುಭಿಗಳು ಮೊಳಗಿದುವು. ಮೂರು ಲೋಕಕ್ಕೂ ಸಂತೋಷವುಂಟಾದುದರಿಂದ ಅವರ ಅಜ್ಞಾನಗಳೂ ದುಃಖಗಳೂ ನಾಶಹೊಂದಿದುವು. ಗಂಧರ್ವರ ಗುಂಪು ಉಚ್ಚ ಧ್ವನಿ

ಜಗೌ ಚ ಗಂಧರ್ವಗಣೋತಿಮಾತ್ರಂ
ತಾರಸ್ವರೈರ್ಭರ್ತೃವಿಮಿಶ್ರಿತಶ್ಚ ।
ಸುರಾಂಗನಾಹಿ ಸ್ತನಭಾರಯುಕ್ತಾ
ನೃತ್ಯಂತಿ ತತ್ರಾಪ್ಸರಸಾಂ ಸಮೂಹಾಃ ॥ ೭೪ ॥

ತಥೈವ ವಿದ್ಯಾಧರಸಿದ್ಧಸಂಘಾ
ವಿಮಾನಯಾನೈರ್ಮುದಿತಾ ಭ್ರಮಂತಿ ।
ವದಂತಿ ಸತ್ಯಾನೃತಕಾರ್ಯನಿರ್ಣಯಂ
ತಥಾಭಿರಂಗಂ ಪ್ರತಿ ದರ್ಶಯಂತಿ ॥ ೭೫ ॥

ಗಾಯಂತಿ ಗೇಯಂ ವಿನಿವೃತ್ತರಾಗಾ
ಮುಹುರ್ಮುಹುರ್ದುಃಖಸುಖಸ್ಯಭೂತಾಃ ।
ನೃತ್ಯಂತಿ ತಂ ಸ್ವರ್ಗಗತಾಶ್ಚ ತೇ ವೈ
ಧರ್ಮಾರ್ಜಿತಂ ಸ್ವರ್ಗಮಿತೋ ವ್ರಜಂತಿ ॥ ೭೬ ॥

ಇತಿ ವಿಗತವಿಷಾದೇ ನಿರ್ಮಲೇ ಜೀವಲೋಕೇ ।
ತಿಮಿರನಿಕರಮುಕ್ತಾ ನಿರ್ವೃತಿಂ ಪ್ರಾಪ್ತುಕಾಮಾಃ ॥ ೭೭ ॥

---

ಯಿಂದ ಸ್ವಾಮಿಯ ಹೆಸರಿನ ಹಾಡನ್ನು ಬಹುವಾಗಿ ಹಾಡಿತು. ಅಪ್ಸರ ಸ್ತ್ರೀಯರು ಸ್ತನಭಾರದಿಂದ ಕೂಡಿದ್ದರೂ ಕುಣಿದರು. ವಿದ್ಯಾಧರರೂ, ಸಿದ್ಧರೂ ಸಂತೋಷದಿಂದ ವಿಮಾನದಲ್ಲಿ ಸಂಚರಿಸುತ್ತಿದ್ದರು. ಅವರು ಸುಳ್ಳು ನಿಶ್ಚಯಗಳ ನಿರ್ಣಯವನ್ನು ಹೇಳುತ್ತಾ ದೃಷ್ಟಾಂತದಿಂದ ತೋರಿಸುತ್ತಲೂ ಇದ್ದರು. ಅವರು ದುಃಖಸುಖಗಳನ್ನೂ ಅನುಭವಿಸಿದಂತೆಯೇ ಕಾಮಾಸಕ್ತಿಯಿಲ್ಲದೆ ಹಾಡನ್ನು ಹಾಡುತ್ತಿದ್ದರು ಅವರು ಸ್ವರ್ಗಕ್ಕೂ ಹೋಗಿ ಕುಣಿಯುತ್ತಿದ್ದರು. ಧರ್ಮದಿಂದ ಸಿಕ್ಕಿದ ಸ್ವರ್ಗಕ್ಕೂ ಇಲ್ಲಿಂದಲೇ ಹೋಗುತ್ತಿದ್ದರು.

೭೭. ಈ ರೀತಿ ದುಃಖಗಳನ್ನು ಬಿಟ್ಟು ಪ್ರಾಣಿ ಸಮೂಹವು ನಿರ್ಮಲವಾಗಿ ಅಜ್ಞಾನದಿಂದ (ಕಷ್ಟದಿಂದ) ಬಿಡಲ್ಪಟ್ಟು ಸುಖವನ್ನು ಹೊಂದಿತು.

ತತ್ಪ್ರೋಚುಃ ಕೇಚಿದುಚ್ಚೈರ್ಜಯಜಯಭಗವನ್ಸಂಪ್ರಹೃಷ್ಟಾಶ್ಚ ಕೇಚಿ
ದೇವಂಪ್ರೋಕ್ತೈಃ ಪ್ರಣಾದ್ಯೈರವಿರತಮನಸಾ ಸಾಧುವಾದಸ್ತಥಾನ್ಯೈಃ ।
ಧ್ಯಾಯಂತ್ಯನ್ಯೇ ನಿಗೂಢಂ ಜನನಭಯಜರಾಮೃತ್ಯುವಿಚ್ಛೇದಹೇತೋ
ರಿತ್ಯೇವಂ ಕೃತ್ಸ್ನಮಾಸೀಜ್ಜಗದಿದಮಖಿಲಂ ಸರ್ವತಸ್ಸಂಪ್ರಹೃಷ್ಟಂ ॥ ೭೮ ॥

ಪರಮಾತ್ಮಾ ಹ್ಯಯಂ ವಿಷ್ಣುಃ ಬ್ರಹ್ಮಣಾ ಜಗತಃ ಕೃತೇ ।
ಪ್ರಾರ್ಥಿತೋ ವ್ಯಂಗತಾಮೇತಾಮಾರಾಚ್ಚ ಜಗದೀಶ್ವರಃ ॥ ೭೯ ॥

ಏಷ ಬ್ರಹ್ಮಾ ಚ ವಿಷ್ಣುಶ್ಚ ಏಷ ಏವ ಮಹೇಶ್ವರಃ ।
ಏಷ ದೇವಾಶ್ಚ ಯಜ್ಞಾಶ್ಚ ಸ್ವರ್ಗಶ್ಚೈಷ ನ ಸಂಶಯಃ ॥ ೮೦ ॥

ವಿಷ್ಣುವ್ಯಾಪ್ತಮಿದಂ ಸರ್ವಂ ಜಗತ್ಸ್ಥಾವರಜಂಗಮಂ ।
ಏಕಸ್ಸತು ಪೃಥಕ್ತ್ವೇನ ಸ್ವಯಂಭೂರಿತಿ ವಿಶ್ರುತಃ ॥ ೮೧ ॥

ಯಥಾರ್ಥವರ್ಣಕೇ ಸ್ಥಾನೇ ವಿಚಿತ್ರಸ್ಫಾಟಿಕೋ ಮಣಿಃ ।
ತತೋ ಗುಣವಶಾತ್ತಸ್ಯ ಸ್ವಯಂಭೋರನುರಂಜನಂ ॥ ೮೨ ॥

---

೭೮. ಆದರಲ್ಲಿ ಕೆಲವರು ಭಗವಂತನೇ ಜಯ ಜಯ ಎಂದರು. ಮತ್ತೆ ಕೆಲವರು ಸಂತೋಷಗೊಂಡರು. ಮತ್ತೆ ಕೆಲವರು ದೀರ್ಘಧ್ವನಿಯಿಂದ ಹೀಗೆ ಎಂದೆನ್ನುತ್ತಿದ್ದರು. ಇನ್ನೂ ಕೆಲವರು ಸಾಧು ಸಾಧು ಎಂದೆನ್ನುತ್ತಿದ್ದರು. ಉಳಿದವರಲ್ಲಿ ಕೆಲವರು ಈ ಸಂಸಾರದಲ್ಲಿ ಭಯಪಟ್ಟು ಮುಪ್ಪು ಮೃತ್ಯುಗಳನ್ನು ನಾಶಮಾಡಿಕೊಳ್ಳಲು ಧ್ಯಾನಮಾಡುತ್ತಿದ್ದರು. ಈ ರೀತಿ ಪ್ರಪಂಚವೆಲ್ಲವೂ ಸಂತೋಷಗೊಂಡಿದ್ದಿತು.

೭೯. ಬ್ರಹ್ಮನ ಹೇಳಿಕೆಯಿಂದ ಪರಮಾತ್ಮನಾದ ವಿಷ್ಣುವು ಪ್ರಪಂಚಹಿತಕ್ಕೋಸ್ಕರ ಈ ರೀತಿಯಾದ ಕುರೂಪಿತನವನ್ನು ಸಧ್ಯದಲ್ಲಿಯೇ ಹೊಂದಿದನು.

೮೦–೮೧ ಇವನೇ ಬ್ರಹ್ಮನು, ವಿಷ್ಣುವು. ಇವನೇ ಮಹೇಶ್ವರನು. ಇವನೇ ದೇವತೆಗಳು, ಯಜ್ಞವು. ಇವನೇ ಸ್ವರ್ಗವು. ಸಂಶಯವಿಲ್ಲ. ಚರಾಚರಗಳಿಂದ ಕೂಡಿದ ಪ್ರಪಂಚವು ವಿಷ್ಣುವಿನಿಂದ ಸ್ಥಾಪಿಸಲ್ಪಟ್ಟಿದೆ. ಇವನು ಅದ್ವಿತೀಯನಾದರೂ ಬೇರೆ ಸ್ವಯಂಭೂ ಎನ್ನಿಸಿಕೊಂಡಿದ್ದಾನೆ.

೮೨. ಸರಿಯಾದ ಬಣ್ಣದಿಂದ ಕೂಡಿರುವ ಜಾಗದಲ್ಲಿ ಆಶ್ಚರ್ಯಕರವಾದ ಸ್ಫಟಿಕ ಮಣಿ ಒಂದಿದ್ದರೆ ಅದು ಹೇಗೆ ಬಣ್ಣವನ್ನು ಬದಲಾಯಿಸಿಕೊಳ್ಳುವುದೋ ಹಾಗೆ ಗುಣವಶದಿಂದ ಆ ಸ್ವಾಮಿಗೆ ಸ್ವಯಂಭೂ ಎಂಬುದಾಗಿ ಬೇರೆ ರೀತಿ ಗೌರವವುಂಟಾಗಿದೆ.

ಯಥಾಸೌ ಗಾರ್ಹಪತ್ಯೋಽಗ್ನಿರನ್ಯಸಂಜ್ಞಾಂ ಪುನರ್ವ್ರಜೇತ್ ।
ದಕ್ಷಿಣಾವಹನೀಯಾದಿ ಬ್ರಹ್ಮಾದಿಷು ತಥಾಹ್ಯಸೌ ॥ ೮೩ ॥

ಸರ್ವತ್ರ ವಾಮನೋ ದೇವೋ ದೇವಕಾರ್ಯಂ ಕರಿಷ್ಯತಿ ।
ಏವಂ ಚಿಂತಯತಾಂ ತೇಷಾಂ ಭಾವಿತಾನಾಂ ದಿವೌಕಸಾಂ ॥ ೮೪ ॥

ಜಗಾಮ ಶಕ್ರಸಹಿತೋ ಬಾಷ್ಕಲೇಶನಿವೇಶನಂ ।
ದೂರಾದೇವ ಚ ತಾಂ ದೃಷ್ಟ್ವಾ ಪುರೀಂ ತಸ್ಯ ಸಮಾವೃತಾಂ ॥ ೮೫ ॥

ಪಾಂಡುರೈಃ ಖಗಮಾಗಮ್ಯೈಃ ಸರ್ವರತ್ನೋಪಶೋಭಿತೈಃ ।
ನಿತ್ಯಪ್ರಭಿನ್ನೈರ್ಮಾತಂಗೈರಂಜನಾಚಲಸನ್ನಿಭೈಃ ॥ ೮೬ ॥

ಶೋಭಿತಾಂ ಭವನೈರ್ಮುಖ್ಯೈಃ ಸುವಿಭಕ್ತಮಹಾಪಥೈಃ ।
ದೇವನಾಗಕುಲೋತ್ಪನ್ನೈಃ ಶತಸಂಖ್ಯೈರ್ವಿರಾಜಿತಾಂ ॥ ೮೭ ॥

ನಿರ್ಮಾಂಸಗಾತ್ರೈಸ್ತುರಗೈರಲ್ಪಕರ್ಣೈರ್ಮನೋಜವೈಃ ।
ದೀರ್ಘಗ್ರೀವಾಕ್ಷಕೂಟೈಶ್ಚ ಮನೋಜ್ಞೈರುಪಶೋಭಿತಾಂ ॥ ೮೮ ॥

---

೮೩. ಗಾರ್ಹಪತ್ಯ ಎಂಬ ಒಂದಗ್ನಿಯೇ ಹೇಗೆ ದಕ್ಷಿಣಾಗ್ನಿ ಆಹವನೀಯ ಎಂಬ ಹೆಸರನ್ನು ಹೊಂದುತ್ತದೆಯೋ ಹಾಗೆ ಒಬ್ಬ ವಿಷ್ಣುವೇ ಬ್ರಹ್ಮ ರುದ್ರರೆಂಬ ಹೆಸರನ್ನು ಹೊಂದುತ್ತಾನೆ.

೮೪-೮೯. ಈ ವಾಮನಸ್ವಾಮಿಯು ಎಲ್ಲೆಲ್ಲಿಯೂ ಈ ದೇವತೆಗಳ ಕಾರ್ಯವನ್ನೇ ಮಾಡುತ್ತಾನೆ. ಈ ರೀತಿ ದೇವತೆಗಳು ಯೋಚಿಸುತ್ತಿರಲು ಈ ವಾಮನನು ಇಂದ್ರನೊಡನೆ ಆ ಪಟ್ಟಣಕ್ಕೆ ಹೋದನು. ದೂರದಿಂದಲೇ ಈತನ ಪಟ್ಟಣವನ್ನು ನೋಡಿದನು. ಆ ಪಟ್ಟಣವು ಬೆಳ್ಳಗಿದ್ದು ಅಂತರಿಕ್ಷವನ್ನು ಮುಟ್ಟುತ್ತಿರುವ ಸರ್ವ ರತ್ನಗಳಿಂದಲೂ ಕೂಡಿರುವ ಮನೆಗಳಿಂದ ಕೂಡಿದೆ. ಅದರಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿರುವ ದೊಡ್ಡ ರಸ್ತೆಗಳಿಂದ ಕೂಡಿದೆ. ಅಂಜನಪರ್ವತದಂತಿರುವ ಯಾವಾಗಲೂ ಮದೋದಕವನ್ನು ಸುರಿಸುತ್ತಿರುವ ಆನೆಗಳಿಂದ ಕೂಡಿದೆ. ಆನೆಗಳು ದೇವಕುಲನಾಗಗಳೆಂಬ ಪ್ರಸಿದ್ಧವಾದ ಕುಲಗಳಿಂದ ಉತ್ಪನ್ನವಾದುವುಗಳಾಗಿವೆ. ಇವುಗಳು ಅಲ್ಲಿ ಅನೇಕವಾಗಿವೆ. ಮಾಂಸವಿಲ್ಲದ ದೇಹವುಳ್ಳ, ಕಿವಿಯು ಚಿಕ್ಕದಾಗಿರುವ ಮನೋವೇಗವುಳ್ಳ ಉದ್ದವಾದ ಕತ್ತು ಕಣ್ಣುಗಳುಳ್ಳ ಮನೋಹರವಾಗಿರುವ ಕುದುರ

ಪದ್ಮಗರ್ಭಸುವರ್ಣಾಭಾಃ ಪೂರ್ಣಚಂದ್ರನಿಭಾನನಾಃ ।
ಸಂಲ್ಲಾಪೋಲ್ಲಾಪಕುಶಲಾಸ್ತತ್ರವೇಶ್ಯಾಸ್ಸಹಸ್ರಶಃ ॥ ೮೯ ॥

ನ ತತ್ಪುಣ್ಯಂ ನ ಸಾ ವಿದ್ಯಾ ನ ತಚ್ಛಿಲ್ಪಂ ನ ಸಾ ಕಲಾ ।
ಬಾಷ್ಕಲೇರ್ನಪುರೇಸ್ಯಾಥ ನಿವಾಸಂ ಪ್ರತಿಗಚ್ಛತಿ ॥ ೯೦ ॥

ಉದ್ಯಾನಶತಸಂಬಾಧೇ ಸಮಾಜೋತ್ಸವಮಾಲಿನಿ ।
ಅನ್ವಿತೇ ದನುಮುಖ್ಯೈಶ್ಚ ಸರ್ವೈರಂತಕವರ್ಜಿತೈಃ ॥ ೯೧ ॥

ವೀಣಾವೇಣುಮೃದಂಗಾನಾಂ ಶಬ್ದೈಸ್ಸರ್ವತ್ರನಾದಿತೇ ।
ಸದಾ ಪ್ರಹೃಷ್ಟಾ ದನುಜಾ ಬಹುರತ್ನೋಪಶೋಭಿತಾಃ ॥ ೯೨ ॥

ಕ್ರೀಡಮಾನಾಃ ಪ್ರದೃಶ್ಯಂತೇ ಮೇರಾವಿವ ಯಥಾಮರಾಃ ।
ಬ್ರಹ್ಮಘೋಷೋ ಮಹಾಂಸ್ತತ್ರ ದ್ವಿಜವೃಂದ್ಯೈರುದೀರಿತಃ ॥ ೯೩ ॥

ಸಾಜ್ಯಧೂಮೇನ ಚಾಗ್ನೀನಾಂ ವಾಯುನಾ ನಷ್ಟಕಿಲ್ಬಿಷೇ ।
ಸುಗಂಧಧೂಪವಿಕ್ಷೇಪಸುರಭೀಕೃತಮಾರುತೈಃ ॥ ೯೪ ॥

---

ಗಳಿಂದ ಕೂಡಿದೆ. ಪದ್ಮದ ಒಳಗಿರುವ ಬಣ್ಣದಂತೆ ಬಣ್ಣವುಳ್ಳ, ಪೂರ್ಣಚಂದ್ರನಂತೆ ಮುಖವುಳ್ಳ ಮಾತಿನಲ್ಲಿ ಜಾಣೆಯರಾದ ಸೂಳೆಯರು ಅಲ್ಲಿ ಬಹು ಮಂದಿ ಇದ್ದಾರೆ.

೯೦. ಆ ಬಲಿಯ ಪಟ್ಟಣದಲ್ಲಿಲ್ಲದ ಪುಣ್ಯವಿಲ್ಲ. ವಿದ್ಯೆಯಿಲ್ಲ. ಶಿಲ್ಪವಿಲ್ಲ. ಕಲೆಯೂ ಕೂಡ ಇಲ್ಲದಿಲ್ಲ. ಇಂತಹ ಪಟ್ಟಣಕ್ಕೆ ಆ ವಾಮನನು ಹೋಗುತ್ತಿದ್ದನು.

೯೧. ಅಲ್ಲಿ ಅನೇಕ ಉದ್ಯಾನಗಳಿವೆ. ಸಮಾಜದ ಉತ್ಸವಗಳು ಬಹುವಾಗಿ ನಡೆಯುತ್ತವೆ. ಸಾವಿಲ್ಲದಿರುವ ದನು ಮುಖ್ಯರಿಂದ ಕೂಡಿದೆ.

೯೨-೯೫. ಅಲ್ಲಿ ವೀಣೆ ಕೊಳಲು ಮೃದಂಗಗಳು ಯಾವಾಗಲೂ ಧ್ವನಿಮಾಡುತ್ತಿರುತ್ತವೆ. ಅಲ್ಲಿರುವ ದನುಜರು ಯಾವಾಗಲೂ ಸಂತೋಷಗೊಂಡಿರುವರು. ಬಹುವಾದ ರತ್ನದಿಂದ ಪ್ರಕಾಶಿಸುತ್ತಿದ್ದಾರೆ. ಇವರು ಮೇರುವಿನಲ್ಲಿ ದೇವತೆಗಳು ಸುಖಪಡುವಂತೆ ಇಲ್ಲಿ ಸುಖಪಡುತ್ತಿದ್ದಾರೆ. ಅಲ್ಲಿ ಬ್ರಾಹ್ಮಣರು ವೇದಘೋಷವನ್ನು ಬಹುವಾಗಿ ಮಾಡುತ್ತಿದ್ದಾರೆ. ಬೆಂಕಿಯಲ್ಲಿ ಮಾಡಿದ ಹೋಮದ ತುಪ್ಪದ ಹೊಗೆಯಿಂದ ವಾಯುವಿನಲ್ಲಿರುವ ಪಾಪವು ನಾಶವಾಗಿ ಸುಗಂಧ ಧೂಪವನ್ನು ಹಾಕುವುದರಿಂದ ಆ ಗಾಳಿಯು ವಾಸನೆಯುಳ್ಳದ್ದಾಗಿ ಅಲ್ಲಿರುವ ದೈತ್ಯರನ್ನೆಲ್ಲಾ ಸುಗಂಧವುಳ್ಳವರ

ಸುಗಂಧಿದನುಜಾಕೀರ್ಣೇ ಪುರೇ ತಸ್ಮಿಂಸ್ತು ಬಾಷ್ಕಲಿಃ ।
ತ್ರೈಲೋಕ್ಯಂ ತು ವಶೇ ಕೃತ್ವಾ ಸುಖೇನಾಸ್ತೇ ಚ ದಾನವಃ ॥ ೯೫ ॥

ತತ್ರಸ್ಥಃ ಪಾಲಯನ್ನಾಸ್ತೇ ತ್ರೈಲೋಕ್ಯಂ ಸಚರಾಚರಂ ।
ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾದೀ ಜಿತೇಂದ್ರಿಯಃ ॥ ೯೬ ॥

ಸುದರ್ಶಸ್ಸರ್ವಭೂತಾನಾಂ ನಯಾನಯವಿಚಕ್ಷಣಃ ।
ಬ್ರಹ್ಮಣ್ಯಶ್ಚ ಶರಣ್ಯಶ್ಚ ದೀನಾನಾಥಾನುಕಂಪಕಃ ॥ ೯೭ ॥

ವೇದಮಂತ್ರಪ್ರಭೂತ್ಸಾಹಶಕ್ತಿಭಿಶ್ಚ ಸಮನ್ವಿತಃ ।
ಷಾಡ್ಗುಣ್ಯವಿಷಯೋತ್ಸಾಹಃ ಸ್ಮಿತಪೂರ್ವಾಭಿಭಾಷಿತಃ ॥ ೯೮ ॥

ವೇದವೇದಾಂಗತತ್ವಜ್ಞೋ ಯಜ್ಞಯಾಜೀ ತಪೋರತಃ ।
ಅಕ್ಷುದ್ರಃ ಶೀಲನಿಯತಃ ಸರ್ವಸತ್ವಾವಿಹಿಂಸಕಃ ॥ ೯೯ ॥

ಮಾನ್ಯಮಾನಯಿತಾ ಶುದ್ಧಃ ಸುಮುಖಃ ಪೂಜ್ಯಪೂಜಕಃ ।
ಸರ್ವಾರ್ಥವಿದನಾಧೃಷ್ಯಃ ಸುಭಗಃ ಪ್ರಿಯದರ್ಶನಃ ॥ ೧೦೦ ॥

---

ನ್ನಾಗಿ ಮಾಡಿದೆ. ಅಂತಹ ದನುಜರಿರುವ ಆ ಪಟ್ಟಣದಲ್ಲಿ ಬಾಷ್ಕಲಿಯಾದ ಬಲಿಯು ಮೂರು ಲೋಕವನ್ನೂ ಸ್ವಾಧೀನಮಾಡಿಕೊಂಡು ಸುಖವಾಗಿದ್ದೇನೆ.

೯೬-೧೦೨. ಆ ಪಟ್ಟಣದಲ್ಲಿದ್ದುಕೊಂಡು ಚರಾಚರಗಳಿಂದ ಕೂಡಿದ ಮೂರು ಲೋಕವನ್ನೂ ಆಳುತ್ತಿದ್ದಾನೆ. ಅವನು ಧರ್ಮವನ್ನು ತಿಳಿದಿದ್ದಾನೆ. ಉಪಕಾರ ಸ್ಮರಣೆಯುಳ್ಳವನು ಸತ್ಯವಾದಿ ಇಂದ್ರಿಯನಿಗ್ರಹವುಳ್ಳವನು. ಎಲ್ಲರಿಗೂ ನೋಡಲು ರಮ್ಯನಾಗಿದ್ದಾನೆ. ಒಳ್ಳೆಯದು ಕೆಟ್ಟದ್ದನ್ನು ತಿಳಿಯುವವನು. ವೇದವನ್ನು ಬಲ್ಲವನು. ರಕ್ಷಕನು. ದೀನರು ಅನಾಥರುಗಳಲ್ಲಿ ದಯೆಯುಳ್ಳವನು. ವೇದಶಕ್ತಿ, ಮಂತ್ರಶಕ್ತಿ, ಪ್ರಭುಶಕ್ತಿ, ಉತ್ಸಾಹಶಕ್ತಿ ಇವುಗಳಿಂದ ಕೂಡಿದ್ದಾನೆ. ಷಡ್ಗುಣಗಳಲ್ಲಿ ಉತ್ಸಾಹವುಳ್ಳವನು. ನಗುತ್ತ ಮಾತನಾಡುವವನು. ವೇದವೇದಾಂಗಗಳ ತತ್ವವನ್ನು ತಿಳಿದಿರುವವನು. ಯಜ್ಞಗಳನ್ನು ಮಾಡುವವನು. ತಪಸ್ವಿಯು. ಕ್ಷುದ್ರತನವಿಲ್ಲ. ಶೀಲವಂತ. ಒಂದು ಪ್ರಾಣಿಯನ್ನೂ ಹಿಂಸೆಮಾಡುವುದಿಲ್ಲ. ಗೌರವಸ್ಥರಿಗೆ ಗೌರವವನ್ನು ಕೊಡುವವನು. ಶುದ್ಧನು. ಪ್ರಸನ್ನನು. ಪೂಜ್ಯರನ್ನು ಪೂಜಿಸುವವನು. ಎಲ್ಲಾ ವಿಷಯಗಳನ್ನೂ ಬಲ್ಲವನು. ಧೈರ್ಯವಂತನು. ಚೆನ್ನಾಗಿರುವವನು.

ಬಹುಧನ್ಯೋ ಬಹುಧನೋ ಬಹುದಾನಶ್ಚ ದಾನವಃ ।
ತ್ರಿವರ್ಗಸಾಧಕೋ ನಿತ್ಯಂ ತ್ರೈಲೋಕ್ಯವರಪೂರುಷಃ ॥ ೧೧೧ ॥

ಸ್ವಪುರೀನಿಲಯೋ ನಿತ್ಯಂ ದೇವದಾನವದರ್ಪಹಾ ।
ಸ ಚೈವಂ ಪಾಲಯಾಮಾಸ ತ್ರೈಲೋಕ್ಯೇ ಸಕಲಾಃ ಪ್ರಜಾಃ ॥ ೧೧೨ ॥

ನಾಧರ್ಮಃ ಕಶ್ಚಿದಪ್ಯಾಸೀತ್ತಸ್ಮಿನ್ರಾಜನಿ ದಾನವೇ ।
ನ ದೀನೋ ವ್ಯಾಧಿತೋವಾಪಿ ಅಲ್ಪಾಯುರ್ವಾಥ ದುಃಖಿತಃ ॥
ಮೂರ್ಖೋ ವಾ ಮಂದರೂಪೋ ವಾ ದುರ್ಭಗೋ ವಾ ನಿರಾಕೃತಃ॥೧೧೩॥

ಏಕತ್ರ ದೇಹೇ ಸಕಲಂ ಗುಣೌಘಂ
ದೃಷ್ಟ್ವಾ ಚ ಮತ್ವಾ ಚ ವಿಶಿಷ್ಟಬುದ್ಧಿಃ ।
ಪ್ರಸಾದಯನ್ದೈತ್ಯವರಂ ಮಹಾತ್ಮಾ
ಪುರಂದರಃ ಪ್ರಾಪ ದನುಪ್ರಧಾನಂ ॥ ೧೧೪ ॥

---

ಸುಂದರನು ಧ್ಯಾನವನ್ನು ಕೂಡಿಟ್ಟಿರುವವನು. ಹಣವಂತನು. ಬಹುವಾಗಿ ದಾನ ಮಾಡುವ ದಾನಿ. ಧರ್ಮ, ಕಾಮ, ಅರ್ಥಗಳನ್ನು ಯಾವಾಗಲೂ ಸಾಧಿಸುತ್ತಿರುವವನು. ಮೂರುಲೋಕಕ್ಕೂ ಬೇಕಾದುದನ್ನು ಕೊಡುವವನು. ಯಾವಾಗಲೂ ರಾಜಧಾನಿಯಲ್ಲಿಯೇ ಇದ್ದುಕೊಂಡಿರುವವನು. ದೇವತೆಗಳ ಮತ್ತು ರಾಕ್ಷಸರ ದರ್ಪವನ್ನು ನಾಶಮಾಡುವವನು. ಇಂತಹ ಬಲಿಯು ಮೂರುಲೋಕದ ಪ್ರಜೆಗಳನ್ನೂ ಕಾಪಾಡುತ್ತಲಿರುವವನು.

೧೧೩. ಆ ದಾನವನು ರಾಜ್ಯವಾಳುತ್ತಿರಲಾಗಿ ಧರ್ಮನಿರತನಲ್ಲದವನು ಒಬ್ಬನೂ ಇರಲಿಲ್ಲ. ದೀನನಾಗಲಿ, ರೋಗಿಷ್ಠನಾಗಲಿ, ಅಲ್ಪಾಯುಸ್ಸುಳ್ಳವನಾಗಲಿ, ದುಃಖಿಯಗಲಿ, ಮೂರ್ಖನಾಗಲಿ, ಸೋಮಾರಿಯಾಗಲಿ, ಅಯೋಗ್ಯನಾಗಲಿ, ಜಾತಿಗೆಟ್ಟವನಾಗಲಿ ಇರಲಿಲ್ಲ.

೧೧೪. ಈ ಬುದ್ಧಿವಂತನಾದ ಇಂದ್ರನು ಎಲ್ಲಾ ಗುಣಗಳೂ ಆ ದೇಹದಲ್ಲಿ ಇರುವುದನ್ನು ನೋಡಿಯೂ, ತಿಳಿದೂ, ಆ ಬಲಿಯನ್ನು ಗೌರವಿಸುತ್ತ ಅವನಲ್ಲಿಗೆ ಹೋದನು.

ತೇಜೋಯುಕ್ತಂ ದಾನವಂ ತಂ ತಪನ್ತಮಿವ ಭಾಸ್ಕರಂ ।
ತ್ರೈಲೋಕ್ಯಧಾರಣೇ ಶಕ್ತೋ ವಿಸ್ಮಿತಸ್ಸ ತದಾಭವತ್ ॥ ೧೦೫ ॥

ಅನ್ತಃಪುರೇಣ ವೈ ಗತ್ವಾ ದಾನವೇಂದ್ರಾಯ ಪಾರ್ಥಿವ ।
ಇದ ಮೂಚುಸ್ತದಾ ಗತ್ವಾ ದಾನವಾ ಯುದ್ಧದುರ್ಮದಾಃ ॥ ೧೦೬ ॥

॥ ದಾನವಾ ಊಚುಃ ॥

ಆಶ್ಚರ್ಯಮಿತಿ ವೈ ಕೃತ್ವಾ ಇಂದ್ರೋಭ್ಯೇತಿ ಪುರೀಂ ತವ ।
ಏಕಾಕೀ ದ್ವಿಜಮುಖ್ಯೇನ ವಾಮನೇನ ಸಹ ಪ್ರಭೋ ॥ ೧೦೭ ॥

ಅಸ್ಮಾಭಿರ್ಯದನುಷ್ಠೇಯಂ ಶೀಘ್ರಂ ತನ್ನೋ ವದಸ್ವ ಹ ।
ದಾನವಾನಬ್ರವೀತ್ಸರ್ವಾನ್ಪುರೇ ಚಾಸ್ಮಿನ್ನಲಂಕೃತೇ ।
ಪ್ರವೇಶ್ಯತಾಂ ದೇವರಾಜಃ ಪೂಜ್ಯಸ್ಸ ತು ಮಯಾದ್ಯ ವೈ ॥ ೧೦೮ ॥

---

೧೦೫. ಪ್ರಕಾಶಿಸುತ್ತಿರುವ ಸೂರ್ಯನಂತೆ ತೇಜಸ್ಸಿನಿಂದ ಕೂಡಿದ ಆ ದಾನವನನ್ನು ನೋಡಿ ಮೂರು ಲೋಕವನ್ನು ಧರಿಸುವುದರಲ್ಲಿ ಶಕ್ತನಾದ ಇಂದ್ರನು ಆಶ್ಚರ್ಯಗೊಂಡನು.

೧೦೬. ಯುದ್ಧದಲ್ಲಿ ಶೂರರಾದ ದಾನವರು ಅಂತಃಪುರಮಾರ್ಗದಿಂದ ಒಳಗೆ ಹೋಗಿ ಆ ಬಲಿಗೆ ಇಂತೆಂದರು.

೧೦೭. ದಾನವರು ಹೇಳಿದರು– ಎಲೈ ದಾನವೇಂದ್ರನೇ ಇಂದ್ರನು ನಿನ್ನ ರಾಜ್ಯದಲ್ಲಿ ಆಶ್ಚರ್ಯವನ್ನು ಕಂಡು ಒಬ್ಬಂಟಿಗನಾಗಿ ಒಬ್ಬ ಕುಳ್ಳನಾದ ಬ್ರಾಹ್ಮಣನನ್ನು ಜೊತೆಯಲ್ಲಿ ಕರೆದುಕೊಂಡು ಬರುತ್ತಿದ್ದಾನೆ. ನಾವು ಏನು ಮಾಡಬೇಕೆಂಬುದನ್ನು ಬೇಗ ಹೇಳು.

೧೦೮. ಆಗ ಬಲಿಯು ಈ ಊರನ್ನು ಅಲಂಕಾರಮಾಡಿಸಿ ಆತನನ್ನು ಕರೆದುಕೊಂಡು ಬನ್ನಿ. ಆ ದೇವರಾಜನು ನನಗೆ ಪೂಜ್ಯನು. ಎಂದು ಅವರೆಲ್ಲರಿಗೂ ಉತ್ತರಕೊಟ್ಟನು.

॥ ಪುಲಸ್ತ್ಯ ಉವಾಚ ॥

ಏವಮುಕ್ತ್ವಾ ದಾನವೇಂದ್ರಃ ಪ್ರತಿಷಿದ್ಧ್ಯ ಚ ದಾನವಾನ್ ।
ಏಕಾಕೀ ನಿರ್ಯಯೌ ತತ್ರ ಶಕ್ರದರ್ಶನಕಾಂಕ್ಷಯಾ ॥ ೧೦೯ ॥

ಸಪ್ತಮಾಯಾಂ ತು ಕಕ್ಷ್ಯಾಯಾಂ ಪುರೇ ತಸ್ಮಿನ್ನಲಂಕೃತೇ ।
ಏತಸ್ಮಿನ್ನೇವ ಕಾಲೇ ತು ವಾಮನಸ್ಸ ಚ ವಾಸವಃ ॥ ೧೧೦ ॥

ಆಗತೌ ದನುನಾಥೇನ ಪ್ರೇಮ್ಣಾ ಚೈವಾವಲೋಕಿತೌ ।
ಕೃತಾರ್ಥಂ ಮನ್ಯತಾತ್ಮಾನಂ ಪ್ರಣಿಪಾತಪುರಸ್ಸರಂ ॥ ೧೧೧ ॥

ಉವಾಚ ರಾಜಾ ವಚನಂ ದಾನವಾನಾಂ ಧುರಂಧರಃ ।
ಅಚಿಂತಯುತ್ತದಾ ಹೃಷ್ಟೋ ನಾಸ್ತಿ ಧನ್ಯಃ ಸಮೋ ಮಯಾ ॥ ೧೧೨ ॥

ಯೋಽಹಂ ಶ್ರಿಯಾ ವೃತಶ್ಶಕ್ರಂ ಪಶ್ಯಾಮಿ ಗೃಹಮಾಗತಂ ।
ಅರ್ಥಿತುಂ ಕಾಮಯಾನಸ್ತು ಮಾಮಯಂ ಯಾಚಯಿಷ್ಯತಿ ॥ ೧೧೩ ॥

ಗೃಹಾಗತಸ್ಯ ವಾಸ್ಯಾಹಂ ದಾಸ್ಯೇ ಪ್ರಾಣಾನಪಿ ಧ್ರುವಂ ।
ದಾರಾನ್ಪುತ್ರಾಂಸ್ತಥಾಗಾರಂ ತ್ರೈಲೋಕ್ಯೇ ಕಾ ಕಥಾ ಮಮ ॥ ೧೧೪ ॥

---

೧೦೯. ಪುಲಸ್ತ್ಯನು ಹೇಳಿದನು– ಆ ಬಲಿಯು ಹೀಗೆಂದು ಹೇಳಿ ದಾನವರೆಲ್ಲರನ್ನೂ ಸಮಾಧಾನಪಡಿಸಿ ಇಂದ್ರನನ್ನು ನೋಡಲು ಒಬ್ಬನೇ ಹೊರಟನು

೧೧೦–೧೧೨. ಆ ಅರಮನೆಯಲ್ಲಿ ಏಳನೆಯ ಅಂಗಳದಲ್ಲಿ (ತೊಟ್ಟಿಯಲ್ಲಿ) ಅಲಂಕರಿಸಿದರು. ಅಲ್ಲಿಗೆ ಆ ಶಕ್ರವಾಮನರು ಬಂದರು. ಅವರನ್ನು ಬಲಿಯು ಪ್ರೀತಿಪೂರ್ವಕವಾಗಿ ನೋಡಿದನು. ಮತ್ತು ತನ್ನನ್ನು ಮನಸ್ಸಿನಿಂದಲೇ ಕೃತಾರ್ಥನನ್ನಾಗಿ ತಿಳಿದುಕೊಂಡನು. ಮತ್ತು ಅವರಿಗೆ ನಮಸ್ಕರಿಸಿ ಆ ದಾನವೇಂದ್ರನು ಇಂತೆಂದನು. ಮತ್ತು ನನಗಿಂತಲೂ ಧನ್ಯರು ಇನ್ನಿಲ್ಲವೆಂದೂ ಯೋಚಿಸಿದನು

೧೧೩-೧೧೪. ಈ ಇಂದ್ರನು ಸಂತೋಷದಿಂದ ನನ್ನ ಮನೆಗೆ ಬಂದಿರುವುದನ್ನು ನೋಡಿದರೆ ಯಾಚನೆಗೋಸ್ಕರ ಬಂದಿರುವಂತೆ ಕಾಣುತ್ತದೆ. ನನ್ನನ್ನು ಕೇಳಿಯೂ ಕೇಳುತ್ತಾನೆ. ನನ್ನ ಮನೆಗೆ ಬಂದಿರುವ ಇವನಿಗೆ ನಾನು ಹೆಂಡಿರನ್ನಾಗಲಿ ಮಕ್ಕಳನ್ನಾಗಲಿ ಕೊನೆಗೆ ಪ್ರಾಣಗಳನ್ನೇ ಆಗಲಿ ಕೊಟ್ಟುಬಿಡುವೆನು. ಮೂರು ಲೋಕವನ್ನೂ ಕೇಳಿದರೆ ಕೊಡುವುದು ಎಷ್ಟರದು ! ಎಂದು ಯೋಚಿಸಿದನು.

ಆಗತಸ್ಸಮ್ಮುಖಸ್ತಸ್ಯ ಅಂಕಮಾನೀಯ ಸಾದರಂ ।
ಪರಿಷ್ವಜ್ಯಾಭಿನಂದ್ಯೈನಂ ಗೃಹಂ ಪ್ರಾವೇಶಯತ್ಸ್ವಕಂ ॥
ತಸ್ಯಾರ್ಘ್ಯಾಚಮನೀಯಾದ್ಯೈಃ ಕೃತ್ವಾ ಪೂಜಾಂ ಪ್ರಯತ್ನತಃ ॥ ೧೧೫ ॥

॥ ಬಾಷ್ಕಲಿರುವಾಚ ॥

ಅದ್ಯ ಮೇ ಸಫಲಂ ಜನ್ಮ ಪೂರ್ಣಾಸ್ಸರ್ವೇ ಮನೋರಥಾಃ ।
ಯಸ್ತ್ವಾಂ ಪಶ್ಯಾಮಿ ಶಕ್ರಾದ್ಯ ಸ್ವಯಮೇವ ಗೃಹಾಗತಂ ॥ ೧೧೬ ॥

ಖ್ಯಾಪ್ಯೋಽಹಂ ದನುಮುಖ್ಯಾನಾಂ ದೇವರಾಜ ತ್ವಯಾ ಕೃತಃ ।
ಆಗಚ್ಛತಾ ಮಮ ಗೃಹಂ ಪುಣ್ಯಾತಾ ತು ಪರಾ ಹಿ ಮೇ ॥ ೧೧೭ ॥

ಅಗ್ನಿಷ್ಟೋಮಾದಿಭಿರ್ಯಜ್ಞೈಸ್ಸಮ್ಯಗಿಷ್ಟೈಸ್ತು ಯತ್ಫಲಂ ।
ತತ್ಫಲಂ ಸಮವಾಪ್ಯೇತ ತ್ವಯಿ ದೃಷ್ಟೇ ಪುರದಂರ ॥ ೧೧೮ ॥

---

೧೧೫. ಹೀಗೆಂದು ಯೋಚಿಸಿ ಆ ಬಲಿಯು ಇಂದ್ರನನ್ನು ಎದುರುಗೊಂಡು ಆತನನ್ನು ತೊಡೆಯ ಮೇಲೆ ಕೂರಿಸಿಕೊಂಡು ಆಲಂಗಿಸಿ ಅಭಿನಂದಿಸಿ ತನ್ನ ಮನೆಗೆ ಕರೆದುಕೊಂಡುಹೋಗಿ ಅರ್ಘ್ಯ, ಆಚಮನೀಯ ಮುಂತಾದುವುಗಳಿಂದ ಪೂಜಿಸಿದನು.

೧೧೬-೧೧೮ ಬಾಷ್ಕಲಿಯಾದ ಬಲಿಯು ಇಂತೆಂದನು- ಎಲೈ ಶಕ್ರನೇ! ನೀನೇ ನನ್ನ ಮನೆಗೆ ಬಂದಿರುವುದನ್ನು ನೋಡಿದರೆ ನನ್ನ ಜನ್ಮವು ಸಫಲವಾಯಿತು. ಎಲ್ಲಾ ಮನೋರಥಗಳೂ ಪೂರ್ಣವಾದುವು. ಎಲೈ ದೇವರಾಜನೇ! ನೀನು ನನ್ನನ್ನು ದನುಗಳ ಮುಖ್ಯರಲ್ಲಿ ಪ್ರಸಿದ್ಧನಾಗುವಂತೆ ಮಾಡಿದೆ. ನೀನೇ ನನ್ನ ಮನೆಗೆ ಬಂದಿರುವುದರಿಂದ ನಾನು ಮಹಾ ಪುಣ್ಯಶಾಲಿಯು. ಎಲೈ ಪುರಂದರನೇ ಸ್ವಲ್ಪವೂ ಲೋಪವಿಲ್ಲದಂತೆ ಅಗ್ನಿಷ್ಟೋಮಾದಿಯಜ್ಞಗಳನ್ನು ಮಾಡಿದರೆ ಯಾವ ಫಲವು ಬರುವುದೋ ನಿನ್ನನ್ನು ನೋಡಿದುದರಿಂದ ಆ ಯಾಗ ಮಾಡಿದ ಫಲವೇ ಬಂದಿರುವುದು. ಋತ್ವಿಕ್ಕುಗಳಿಗೆ ಭೂಮಿದಾನ ಗೋದಾನಗಳನ್ನು ಮಾಡುವುದರಿಂದ ಬರುವ ಫಲವು ನನಗೆ ಬಂದಿದೆ. ಅಥವಾ ರಾಜಸೂಯಯಾಗಮಾಡಿದ ಫಲವೇ ಬಂದಿತೆಂದು ಹೇಳಬಹುದು.

ಯತ್ಫಲಂಭೂಮಿ ದಾನೇನ ಗವಾಂ ದಾನೇನ ಋತ್ವಿಜೇ ।
ಮಮಾದ್ಯ ತತ್ಫಲಂ ಭೂತಮಥವಾ ರಾಜಸೂಯಕಂ ॥ ೧೧೯ ॥

ನಾಲ್ಪೇನ ತಪಸಾ ಲಭ್ಯಂ ದರ್ಶನಂ ತವ ವಾಸವ ।
ಏವಂ ಗೇಹೆ ಮಯಾ ಯತ್ತೇ ಪ್ರಿಯಂ ಕಾರ್ಯಂ ವದಸ್ವ ತತ್ ॥ ೧೨೦ ॥

ವಿಕಲ್ಪೋನ್ಯೋ ನ ಭವತಾ ಹೃದಿ ಕಾರ್ಯಃ ಕಥಂಚನ ।
ಕೃತಂ ತದ್ಧಿ ವಿಜಾನೀಷ್ವ ಯದ್ಯಪಿಸ್ಯಾತ್ಸುದುಷ್ಕರಂ ॥ ೧೨೧ ॥

ಪುಣ್ಯೋಽಹಂ ಪುಣ್ಯತಾಂ ಪ್ರಾಪ್ತೋ ದರ್ಶನಾತ್ತವ ಶತ್ರುಹನ್ ।
ಯತ್ತೇ ದೇವವರೈರ್ವಂದ್ಯೌ ವಂದಿತೌ ಚರಣೌ ಮಯಾ ॥ ೧೨೨ ॥

ಕಿಮಾಗಮನಕೃತ್ಯಂ ತೇ ಮಯಿ ಸರ್ವಂ ವದ ಪ್ರಭೋ ।
ಅತ್ಯಾಶ್ಚರ್ಯಮಿದಂ ಮನ್ಯೇ ತವಾಗಮನಕಾರಣಂ ॥ ೧೨೩ ॥

॥ ಇಂದ್ರ ಉವಾಚ ॥

ಜಾನೇಹಂ ದನುಮುಖ್ಯಾನಾಂ ಪ್ರಧಾನಂ ತ್ವಾಂ ತು ಬಾಷ್ಕಲೇ ।
ನಾತ್ಯಾಶ್ಚರ್ಯಮಿದಂ ಭಾತಿ ತ್ವಯಿ ಹೃಷ್ಟೇ ಸುರೋತ್ತಮೇ ॥ ೧೨೪ ॥

---

೧೧೯-೧೨೦. ಎಲೈ ವಾಸವನೇ ನಿನ್ನ ದರ್ಶನವು ಸ್ವಲ್ಪ ತಪಸ್ಸಿಗೆ ಲಭ್ಯವಾಗ ತಕ್ಕದಲ್ಲ. ಹೀಗಿರುವಾಗ ನನ್ನ ಮನೆಯಲ್ಲಿ ನಿನಗಾಗಬೇಕಾಗಿರುವುದೇನು? ಹೇಳು.

೧೨೧. ಮನಸ್ಸಿನಲ್ಲಿಯೂ ಅನುಮಾನವನ್ನು ಹೊಂದಲೇಬೇಡ. ಅದು ಕಷ್ಟವಾದುದಾಗಿದ್ದರೂ ಕೈಗೂಡಿತೆಂದೇ ತಿಳಿ.

೧೨೨. ಎಲೈ ಶತ್ರುಸೂದನನೇ ನಾನೇ ಪುಣ್ಯವಂತನು. ನಿನ್ನ ದರ್ಶನದಿಂದ ಮತ್ತೂ ಪುಣ್ಯವಂತನಾದೆನು. ಯಾತಕ್ಕೆಂದರೆ ದೇವಾದಿ ದೇವತೆಗಳು ನಮಸ್ಕರಿಸುವ ನಿನ್ನ ಪಾದಗಳನ್ನು ನಾನು ನಮಸ್ಕರಿಸಿದೆನು.

೧೨೩. ನೀನು ಬಂದಿರುವುದು ಬಹು ಆಶ್ಚರ್ಯವನ್ನುಂಟುಮಾಡಿದೆ. ಏಕೆ ಬಂದಿದ್ದೀಯೆ? ಅದೆಲ್ಲವನ್ನೂ ನನ್ನಲ್ಲಿ ಹೇಳು.

೧೨೪-೧೨೫. ಇಂದ್ರನು ಹೇಳಿದನು- ಎಲೈ ಬಾಷ್ಕಲಿಯೇ ನೀನು ದನು ಮುಖ್ಯರಲ್ಲಿ ಪ್ರಧಾನನೆಂಬುದನ್ನು ಬಲ್ಲೆನು. ಅಸುರ ಶ್ರೇಷ್ಠನಾದ ನಿನ್ನನ್ನು ನೋಡಿ

ವಿಮುಖಾ ನಾರ್ಥಿನೋ ಯಾಂತಿ ಭವತೋ ಗೃಹಮಾಗತಾಃ ।
ಅರ್ಥಿನಾಂ ಕಲ್ಪವೃಕ್ಷೋಽಸಿ ದಾತಾ ಚಾನ್ಯೋ ನ ವಿದ್ಯತೇ ॥ ೧೨೫ ॥

ಪ್ರಭಯಾ ಸೂರ್ಯತುಲ್ಯೋಽಸಿ ಗಾಂಭೀರ್ಯೇ ಸಾಗರೋಪಮಃ ।
ಕ್ಷಮಿತ್ವೇನ ಧರಾತುಲ್ಯಃ ಶ್ರಿಯಾ ನಾರಾಯಣೋಪಮಃ ॥ ೧೨೬ ॥

ಬ್ರಾಹ್ಮಣಃ ಕಶ್ಯಪಕುಲೇ ಜಾತೋಽಯಂ ವಾಮನಶ್ಶುಭೇ ।
ಪ್ರಾರ್ಥಿತೋಽಹಮನೇನೈವ ಭೂಮೇರ್ದೇಹಿ ಕ್ರಮತ್ರಯಂ ॥ ೧೨೭ ॥

ಮಮಾಗ್ನಿಶರಣಾರ್ಥಾಯ ಯೇನ ಕುರ್ಯಾಂ ಮುಖಂ ತ್ವಿಹ ।
ತದಸ್ಯ ಕಾರಣಂ ಕೃತ್ವಾ ಅರ್ಥಿತೈಷಾ ತವ ಪ್ರಭೋ ॥ ೧೨೮ ॥

ಲೋಕತ್ರಯಂ ಮೇಽಪಹೃತಂ ತ್ವಯಾ ವಿಕ್ರಮ್ಯ ಬಾಷ್ಕಲೇ ।
ನಿರ್ಗತಿಕೋ ನಿರ್ಧನೋಽಸ್ಮಿ ಯದ್ದಾಸ್ಯೇ ನ ತದಸ್ತಿ ಮೇ ॥ ೧೨೯ ॥

---

ದರೆ ಇದೇನೂ ಆಶ್ಚರ್ಯಕರವಲ್ಲ. ನಿನ್ನ ಮನೆಗೆ ಬಂದ ಅತಿಥಿಗಳು ಯಾವಾಗಲೂ ವಿಮುಖರಾಗಿ ಹೋಗುವುದೇ ಇಲ್ಲ. ಅತಿಥಿಗಳಿಗೆ ಕಲ್ಪವೃಕ್ಷವಾಗಿದ್ದೀಯೆ. ನಿನ್ನಂತಹ ದಾತೃವು ಬೇರೊಬ್ಬನಿಲ್ಲ.

೧೨೬. ಕಾಂತಿಯಲ್ಲಿ ಸೂರ್ಯನಂತಿದ್ದೀಯೆ. ಗಂಭೀರದಲ್ಲಿ ಸಮುದ್ರದಂತೆ ಇದ್ದೀಯೆ. ಕ್ಷಮಿಸುವುದರಲ್ಲಾದರೆ ಧರೆಗೆ ಸಮನಾಗಿದ್ದೀಯೆ. ಐಶ್ವರ್ಯದಲ್ಲಿ ನಾರಾಯಣನಂತಿದ್ದೀಯೆ.

೧೨೭-೧೨೮. ಈ ಕುಳ್ಳನಾದ ಬ್ರಾಹ್ಮಣನು ಉತ್ತಮವಾದ ಕಶ್ಯಪಕುಲದಲ್ಲಿ ಹುಟ್ಟಿದವನು. ಈತನು ನನ್ನನ್ನು ಯಜ್ಞಮಾಡಲು ಅಗ್ನಿಪ್ರತಿಷ್ಠೆಗೋಸ್ಕರ ಮೂರು ಹೆಜ್ಜೆ ಭೂಮಿಯನ್ನು ಕೇಳಿದನು. ಅದೇ ಕಾರಣಕ್ಕೋಸ್ಕರವಾಗಿ ನಾನು ಇವನೊಡನೆ ಬಂದಿದ್ದೇನೆ.

೧೨೯. ನನ್ನ ಮೂರು ಲೋಕಗಳನ್ನೂ ನೀನು ಪರಾಕ್ರಮದಿಂದ ಕಿತ್ತು ಕೊಂಡು ಬಿಟ್ಟೆ. ನನಗೆ ಗತಿಯಿಲ್ಲ. ಹಣವೂ ಇಲ್ಲ. ಕೊಡಲು ಯಾವುದೂ ಇಲ್ಲ.

ಭವಂತಂ ಯಾಚಯಿಷ್ಯಾಮಿ ಪರಾರ್ಥೇನಾಪಿ ಚಾತ್ಮನಃ ।
ಅರ್ಥಿತ್ವಂ ನ ಮಮಾಪ್ಯಸ್ಯ ಯದ್ಯೋಗ್ಯಂ ತತ್ಸಮಾಚರ ॥ ೧೩೦ ॥

ಜಾತೋಽಪಿ ಕಾಶ್ಯಪೇ ಚ ತ್ವಂ ವಂಶೇ ವಂಶವಿವರ್ಧನಃ ।
ದಿತ್ಯಾಸ್ತ್ವಂ ಗರ್ಭಸಂಭೂತಃ ಪಿತಾ ತ್ರೈಲೋಕ್ಯಪೂಜಿತಃ ॥ ೧೩೧ ॥

ಏವಂ ಭೂತಮಹಂ ಜ್ಞಾತ್ವಾ ತೇನ ತ್ವಾಂ ಯಾಚಯಾಮ್ಯಹಂ ।
ಅಸ್ಯಾಗ್ನಿ ಶರಣಾರ್ಥಾಯ ದೀಯತಾಂ ತು ಕ್ರಮತ್ರಯಂ ॥ ೧೩೨ ॥

ಅತೀವ ಹ್ರಸ್ವಗಾತ್ರಸ್ಯ ವಾಮನಸ್ಯಾಸ್ಯ ದಾನವ ।
ಭೂಮಿಭಾಗೇ ಚ ಪಾರಕ್ಯೇ ದಾತುಂ ನ ತ್ವಹಮುತ್ಸಹೇ ॥ ೧೩೩ ॥

ಏತದೇವಮಯಾ ದತ್ತಂ ಯದ್ಭವಾನರ್ಥಿತೋಽಸಿ ಮೇ ।
ಗುರವೋ ಯದಿ ಮನ್ಯಂತೇ ಮಂತ್ರಿಣೋ ವಾ ಯದಾನುಜಾಃ ॥ ೧೩೪ ॥

ಬಾಂಧವಾ ವಾ ತಥಾ ಚಾನ್ಯೇ ಭೂಮೇರಸ್ಯ ಪದತ್ರಯಂ ।
ಅರ್ಥಿತ್ವೇನ ಮದೀಯೇನ ಸ್ವಕುಲಂ ಚಾನ್ವವೇಕ್ಷ್ಯ ಚ ॥ ೧೩೫ ॥

---

೧೩೦. ನಿನ್ನನ್ನು ಪರನಿಗೋಸ್ಕರ ಯಾಚಿಸುತ್ತೇನೆ. ನನಗೋಸ್ಕರವಲ್ಲ. ಯಾಚಕನು ನಾನಲ್ಲ ಈ ವಿಷಯದಲ್ಲಿ ಯೋಗ್ಯವಾದ ರೀತಿಯಲ್ಲಿ ನಡೆದುಕೊ

೧೩೧-೧೩೩. ನೀನೂ ಕೂಡ ಕಾಶ್ಯಪ ವಂಶದಲ್ಲಿ ಹುಟ್ಟಿದವನು. ವಂಶವನ್ನು ಬೆಳೆಸುವವನು. ಮಹಿಮಳಾದ ದಿತಿಯ ಗರ್ಭದಲ್ಲಿ ಹುಟ್ಟಿದ್ದೀಯೆ. ನಿನ್ನ ತಂದೆಯು ಮೂರು ಲೋಕಗಳಿಂದಲೂ ಪೂಜೆಹೊಂದುತ್ತಿದ್ದಾನೆ. ಹೀಗಿರುವ ನಿನ್ನನ್ನು ತಿಳಿದು ಇಲ್ಲಿಗೆ ಬಂದಿದ್ದೇನೆ. ಆದರಿಂದಲೇ ನಿನ್ನನ್ನು ಯಾಚಿಸುತ್ತೇನೆ. ಇವನು ಬಹು ಕುಳ್ಳನು. ಇಂತಹವನಿಗೆ ಅಗ್ನಿಯ ಪ್ರತಿಷ್ಠೆಗೋಸ್ಕರ ಮೂರು ಹೆಜ್ಜೆ ಭೂಮಿಯನ್ನು ಕೊಡು. ಭೂಮಿಯೆಲ್ಲವೂ ಮತ್ತೊಬ್ಬನದಾಗಿರುವಾಗ ಅದನ್ನು ನಾನು ಕೊಡಲು ಸಾಧ್ಯವಲ್ಲ. ನೀನಾದರೆ ರಾಜ್ಯಕೊಡಬಹುದು.

೧೩೪-೧೩೬. ನಾನು ಈ ಮೂರು ಹೆಜ್ಜೆ ಸ್ಥಳವನ್ನು ಕೊಡಿಸುವೆನೆಂದು ವಾಗ್ದಾನಮಾಡಿದ್ದೇನೆ. ಆದ್ದರಿಂದಲೇ ನಿನ್ನನ್ನು ನಾನು ಕೇಳಿಕೊಳ್ಳುತ್ತಿರುವೆನು ಗುರುಗಳನ್ನೂ ಮಂತ್ರಿಗಳನ್ನು ತಮ್ಮಂದಿರನ್ನೂ ಬಾಂಧವರನ್ನೂ ಇತರರನ್ನೂ ಕೇಳು. ಅವರು ಆಗಲಿ ಎಂದರೆ ಮೂರು ಹೆಜ್ಜೆ ಭೂಮಿಯನ್ನು ಕೊಡು. ನಾನು ಅರ್ಥಿಯಾಗಿ

ಗೃಹಾಯಾತೇ ಮಯಿ ತಥಾ ಯದ್ಯೋಗಂ ತತ್ಸಮಾಚರ ।
ಯದಿ ತೇ ರುಚಿರಂ ವೀರ ದಾನವೇಂದ್ರ ಮಹಾದ್ಯುತೇ ॥
ತದಸ್ಮೈ ದೀಯತಾಂ ಶೀಘ್ರಂ ವಾಮನಾಯ ಮಹಾಮತೇ ॥ ೧೩೬ ॥

॥ ಬಾಷ್ಕಲಿರುವಾಚ ॥

ದೇವೇಂದ್ರ ಸ್ವಾಗತಂ ತೇಸ್ತು ಸ್ವಸ್ತಿ ಪ್ರಾಪ್ನುಹಿ ವಾಂಛಿರಂ ।
ತ್ವಂ ಸಮೀಕ್ಷಸ್ವ ಚಾತ್ಮಾನಂ ಸರ್ವೇಷಾಂ ಚ ಪರಾಯಣಂ ॥ ೧೩೭ ॥

ತ್ವಯಿ ಭಾರಂ ಸಮಾವೇಶ್ಯ ಸುಖಮಾಸ್ತೇ ಪಿತಾಮಹಃ ।
ಧ್ಯಾನಧಾರಣಯಾ ಯುಕ್ತಃ ಚಿನ್ತಯಾನಃ ಪರಂ ಪದಂ ॥ ೧೩೮ ॥

ಸಂಗ್ರಾಮೈರ್ಬಹುಭಿಃ ಖಿನ್ನೋ ಜಗಚ್ಚಿನ್ತಾಮಪಾಸ್ಯತು ।
ಕ್ಷೀರಾಬ್ಧೌ ಸಂಗಮಾಶ್ರಿತ್ಯ ಸುಖಂ ಸ್ವಪತಿ ಕೇಶವಃ ॥ ೧೩೯ ॥

ಕೈಲಾಸೇ ಪರ್ವತಶ್ರೇಷ್ಠೇ ಕೃತ್ತಿವಾಸಾ ಉಮಾಪತಿಃ ।
ರಮತೇ ಭಾರ್ಯಯಾ ಸಾರ್ಧಂ ಭಾರಂ ತ್ವಯಿ ನಿವೇಶ್ಯ ವೈ ॥ ೧೪೦ ॥

---

ಬಂದಿರುವುದನ್ನೂ ನಿನ್ನ ಕುಲವನ್ನೂ ನಾನಾಗಿಯೇ ನಿನ್ನ ಮನೆಗೆ ಬಂದಿರುವುದನ್ನೂ ಯೋಚಿಸಿ ಯೋಗ್ಯರೀತಿಯಲ್ಲಿ ನಡೆದುಕೋ

೧೩೭. ಬಾಷ್ಕಲಿಯು ಹೇಳಿದನು– ಎಲೈ ದೇವೇಂದ್ರನೇ ನಿನಗೆ ಸ್ವಾಗತ ವಿರಲಿ. ಒಳ್ಳೆಯದಾಗಲಿ. ನಿನ್ನ ಇಷ್ಟವನ್ನು ಶೀಘ್ರದಲ್ಲಿ ಹೊಂದು. ನೀನು ನಿನ್ನ ದೊಡ್ಡಸ್ತಿಕೆಯನ್ನೂ ಎಲ್ಲರೂ ನಿನ್ನನ್ನೇ ಆಶ್ರಯಿಸಿಕೊಂಡಿರುವುದನ್ನೂ ನೋಡು.

೧೩೮. ಪಿತಾಮಹನಾದ ಬ್ರಹ್ಮನು ನಿನ್ನಲ್ಲಿ ಭಾರವನ್ನಿಟ್ಟು ಧ್ಯಾನಧಾರಣೆ ಗಳಿಂದ ಪರಮಪದವನ್ನು ಚಿಂತಿಸುತ್ತ ಇರುವನು

೧೩೯-೧೪೦. ಬಹುವಾಗಿ ಯುದ್ಧಮಾಡಿ ಬಳಲಿದ ಕೇಶವನು ಪ್ರಪಂಚದ ಯೋಚನೆಯನ್ನು ಬಿಟ್ಟು ಅವೆಲ್ಲವನ್ನೂ ನಿನ್ನ ಮೇಲೆ ಹಾಕಿ ಕ್ಷೀರಸಮುದ್ರದಲ್ಲಿ ಲಕ್ಷ್ಮಿಯೊಡನೆ ಸುಖವಾಗಿ ಮಲಗಿದ್ದಾನೆ. ಉಮಾಪತಿಯಾದ ಶಿವನೂ ಕೂಡ ಪರ್ವತಶ್ರೇಷ್ಠವಾದ ಕೈಲಾಸದಲ್ಲಿ ಹೆಂಡತಿಯೊಡನೆ ಸುಖವಾಗಿ ರಮಿಸುತ್ತಿರುವನು. ಅವನೂ ನಿನ್ನ ಮೇಲೆ ಪ್ರಪಂಚದ ಭಾರವನ್ನು ಹಾಕಿರುವನು.

ಅನ್ಯೇತು ದಾನವಾಃ ಪೂರ್ವೇ ಬಲಿಭ್ಯೋ ಬಲಿನಸ್ಸದಾ ।
ಅಸಹಾಯೇನ ತೇ ಶಕ್ರ ಸರ್ವೇ ತೇ ವಿನಿಪಾತಿತಾಃ ॥ ೧೪೧ ॥

ಆದಿತ್ಯಾ ದ್ವಾದಶ್ಚೈವೇಹ ರುದ್ರಾಶ್ಚೈಕಾದಶಾಪಿ ವಾ ।
ಅಶ್ವಿನೌ ವಸವಶ್ಚೈವ ಧರ್ಮಶ್ಚೈವ ಸನಾತನಃ ॥ ೧೪೨ ॥

ತ್ವದ್ಬಾಹುಬಲಮಾಶ್ರಿತ್ಯ ತ್ರಿದಿವೇ ಮಖಭಾಗಿನಃ ।
ತ್ವಯಾ ಕ್ರತುಶತೈರಿಷ್ಟಂ ಸಮಾಪ್ತವರದಕ್ಷಿಣೈಃ ॥ ೧೪೩ ॥

ತ್ವಯಾ ಚ ನಿಹತೋ ವೃತ್ರೋ ನಮುಚಿಃ ಪಾಕಶಾಸನ ।
ತ್ವದಾಜ್ಞಾಕಾರಿಣಾ ಪೂರ್ವಂ ವಿಷ್ಣುನಾ ಪ್ರಭವಿಷ್ಣುನಾ ॥ ೧೪೪ ॥

ಹಿರಣ್ಯಕಶಿಪುರ್ಯೋತ್ರ ಜಂಘೇ ಚಾರೋಪ್ಯ ಘಾತಿತಃ ।
ವಜ್ರಪಾಣಿನಮಾಯಾಂತಮೈರಾವಣಶಿರೋಗತಂ ॥ ೧೪೫ ॥

ಸಂಗ್ರಾಮಭೂಮೌ ದೃಷ್ಟ್ವಾ ತ್ವಾಂ ಸರ್ವೇ ನಶ್ಯಂತಿ ದಾನವಾಃ ।
ಯೇ ತ್ವಯಾ ನಿರ್ಜಿತಾಃ ಪೂರ್ವಂ ದಾನವಾ ಬಲವತ್ತರಾಃ ॥ ೧೪೬ ॥

---

೧೪೧. ಪೂರ್ವದಲ್ಲಿ ಬಲಿಗಿಂತಲೂ ಬಲಿಷ್ಠರಾದ ದಾನವರು ಸಹಾಯ ಶೂನ್ಯರಾದುದರಿಂದ ನಿನ್ನಿಂದ ಅವರೆಲ್ಲರೂ ಕೊಲ್ಲಲ್ಪಟ್ಟರು.

೧೪೨–೧೪೩. ದ್ವಾದಶಾದಿತ್ಯರೂ ಏಕಾದಶರುದ್ರರೂ, ಅಶ್ವಿನಿ ದೇವತೆಗಳೂ ವಸುಗಳೂ, ಧರ್ಮನೂ ಇವರೆಲ್ಲರೂ ನಿನ್ನ ಬಾಹುಬಲದಿಂದಲೇ ಸ್ವರ್ಗದಲ್ಲಿದ್ದುಕೊಂಡು ಯಜ್ಞದಲ್ಲಿ ಭಾಗವನ್ನು ಹೊಂದುತ್ತಾರೆ. ನೀನು ಸಮಗ್ರವಾದ ಪದಾರ್ಥಗಳಿಂದಲೂ ದಕ್ಷಿಣೆಗಳಿಂದಲೂ ಕೂಡಿಕೊಂಡು ನೂರು ಯಾಗಗಳನ್ನು ಮಾಡಿದ್ದೀಯೆ.

೧೪೪–೧೪೬. ಎಲೈ ಪಾಕಶಾಸನನೇ ನೀನು ವೃತ್ರನನ್ನೂ, ನಮುಚಿಯನ್ನೂ ಕೊಂದೆ. ನಿನ್ನ ಅಪ್ಪಣೆಯಿಂದ ಶಕ್ತನಾದ ವಿಷ್ಣುವು ಹಿರಣ್ಯಕಶಿಪುವನ್ನು ತೊಡೆಯ ಮೇಲಿಟ್ಟುಕೊಂಡು ಕೊಂದನು. ನೀನು ವಜ್ರಾಯುಧವನ್ನು ಹಿಡಿದು ಐರಾವತವನ್ನು ಹತ್ತಿ ಬಂದರೆ ಯುದ್ಧದಲ್ಲಿ ತೊಡಗಿರುವ ದಾನವರೆಲ್ಲರೂ ಓಡುತ್ತಾರೆ. ಎಲೈ ಇಂದ್ರನೇ ನೀನು ಹಿಂದೆ ಜಯಿಸಿದ ಬಲಿಷ್ಠರಾದ ದಾನವರ ಸಾವಿರ ಪಾಲಿನಲ್ಲಿ ಒಂದು

ಸಹಸ್ರಾಂಶೇನ ತುಲ್ಯಸ್ತೇ ನ ಭವಾಮಿ ಕಥಂಚನ ।
ಏವಂ ವಿಧೋಽಸಿ ದೇವೇಂದ್ರ ಮಮ ಕಾ ಗಣನಾ ಭವೇತ್ ॥ ೧೪೭ ॥

ಮಾಂ ಸಮುದ್ಧರ್ತುಕಾಮೇನ ತ್ವಯೇಹಾಗಮನಂ ಕೃತಂ ।
ಕರಿಷ್ಯಾಮಿ ನ ಸಂದೇಹೋ ದಾಸ್ಯೇ ಪ್ರಾಣಾನಪಿ ಧ್ರುವಂ ॥ ೧೪೮ ॥

ಕಿಮರ್ಥಂ ದೇವರಾಜೋಕ್ತಾ ಭೂಮಿರೇಷಾ ತ್ವಯಾ ಹಿ ಮೇ ।
ಇಮೇ ದಾರಾಸ್ಸುತಾ ಗಾವೋ ಯಚ್ಚಾನ್ಯದ್ವಿದ್ಯತೇ ವಸು ॥ ೧೪೯ ॥

ತ್ರೈಲೋಕ್ಯರಾಜ್ಯಮಖಿಲಂ ವಿಪ್ರಸ್ಯಾಸ್ಯ ಪ್ರದೀಯತಾಂ ।
ಕೃಪಾಕರಂ ಭವೇನ್ಮಹ್ಯಂ ಪೂರ್ವೇಷಾಂ ಚ ನ ಸಂಶಯಃ ॥ ೧೫೦ ॥

ಗೃಹಾಯಾತಸ್ಯ ಶಕ್ರಸ್ಯ ದತ್ತಂ ಬಾಷ್ಕಲಿನಾ ಪುರಾ ।
ಅನ್ಯೋಽಪಿ ಯೋಽರ್ಥೀ ಮೇ ಪ್ರಾಪ್ತಃ ಸ ಮೇ ಪ್ರಿಯತರಸ್ಸದಾ ॥ ೧೫೧ ॥

ಭವಾಂಸ್ತತ್ರ ವಿಶೇಷೇಣ ವಿಚಾರೋ ನೇಹ ವಾ ಕ್ವಚಿತ್ ।
ಬೃಹತ್ರೂಪಾ ಮೇ ದೇವೇಶ ಯದ್ಭೂಮೇಸ್ತು ಪದತ್ರಯಂ ॥ ೧೫೨ ॥

---

ಪಾಲನ್ನೂ ನಾನು ಹೊಂದಿಲ್ಲ. ನೀನು ಈ ರೀತಿ ಶಕ್ತನಾಗಿರುವಾಗ್ಯೆ ನಿನಗೆ ನಾನು ಯಾವ ಲೆಕ್ಕದಲ್ಲಿದ್ದೇನೆ ? ನನ್ನನ್ನು ಉದ್ಧರಿಸಬೇಕೆಂದೇ ನೀನು ಇಲ್ಲಿಗೆ ಬಂದಿದ್ದೀಯೆ ನಿನ್ನ ಇಷ್ಟವನ್ನು ನೆರವೇರಿಸುತ್ತೇನೆ. ಸಂದೇಹವಿಲ್ಲ ಪ್ರಾಣಗಳನ್ನಾದರೂ ಕೊಡುತ್ತೇನೆ. ನಿಶ್ಚಯವು.

೧೪೯-೧೫೦. ಎಲೈ ದೇವರಾಜನೇ, ಭೂಮಿಯನ್ನು ಮಾತ್ರವೇ ಕೊಡಿಸು ತ್ತೇನೆಂದೇಕೆ ಹೇಳಿದೆ? ಈ ಹೆಂಡಿರು ಮಕ್ಕಳು, ಈ ಹಸುಗಳು, ಇನ್ನೂ ಉಳಿದ ಹಣ ಮೂರುಲೋಕದ ರಾಜ್ಯವೆಲ್ಲವನ್ನೂ ಇವನಿಗೆ ಕೊಡು. ಆಗ ನೀನು ನನ್ನ ಕೃಪೆಗೂ, ನನ್ನ ಪೂರ್ವಿಕರ ಕೃಪೆಗೂ ಪಾತ್ರನಾಗುವುದರಲ್ಲಿ ಸಂಶಯವಿಲ್ಲ.

೧೫೧. ಬಾಷ್ಕಲಿಯು ಮನೆಗೆ ಬಂದ ಇಂದ್ರನಿಗೆ ಬೇಕಾದುದನ್ನು ಕೊಟ್ಟನು ಎಂದು ತಿಳಿ. ಅರ್ಥಿಯಾಗಿ ಮತ್ತೆ ಯಾರು ಬಂದರೂ ಅವನೂ ನನಗೆ ಪ್ರಿಯನೇ.

೧೫೨-೧೫೩. ಅದರಲ್ಲಿಯೂ ತಿಳುವಳಿಕೆಯುಳ್ಳ ನೀನಂತೂ ಯೋಚನೆ ಏನ್ನೇ ಮಾಡಬೇಡ. ಆದರೆ ಮೂರು ಹೆಜ್ಜೆ ಭೂಮಿಯನ್ನು ಕೊಡುವುದು ನನಗೆ

ಬ್ರಾಹ್ಮಣಸ್ಯ ವಿಶೇಷೇಣ ಪ್ರಾರ್ಥಿತೇನ ತ್ವಯಾ ಪ್ರಭೋ ।
ದಾಸ್ಯೇ ಗ್ರಾಮವರಾನಸ್ಯ ಭವತಸ್ತು ತ್ರಿವಿಷ್ಟಪಂ ॥ ೧೫೩ ॥

ಅಶ್ವಾನ್ಗಜಾನ್ಭೂಮಿಧನಂ ಸ್ತ್ರಿಯಶ್ಚೋದ್ಭಿನ್ನಚೂಚುಕಾಃ ।
ಯಾಸಾಂ ದರ್ಶನಮಾತ್ರೇಣ ವೃದ್ಧೋಽಪಿ ತರುಣಾಯತೇ ॥ ೧೫೪ ॥

ಸ್ತ್ರಿಯೋ ವಾ ವಸುಧಾ ಚೈಷಾ ವಾಮನಸ್ಯ ಪ್ರತಿಗೃಹಂ ।
ಪ್ರತಿದಾಸ್ಯಾಮಿ ದೇವೇಂದ್ರ ಪ್ರಸಾದಃ ಕ್ರಿಯತಾಂ ಹಿ ಮೇ ॥ ೧೫೫ ॥

॥ ಪುಲಸ್ತ್ಯ ಉವಾಚ ॥

ಏತಾವದುಕ್ತೇ ವಚನೇ ತದಾ ಬಾಷ್ಕಲಿನಾ ನೃಪ ।
ಪುರೋಧಾಹ್ಯುಶನಾ ಪ್ರಾಹ ದಾನವೇಂದ್ರಂ ತದಾ ವಚಃ ॥ ೧೫೬ ॥

॥ ಉಶನೋವಾಚ ॥

ಭವಾನ್ರಾಜಾ ನ ಸಂದೇಹ ಐಶ್ವರ್ಯೇಷ್ವವಿಧೇಸ್ಥಿತಃ ।
ಯುಕ್ತಾಯುಕ್ತಂ ನ ಜಾನಾಸಿ ದೇಯಂ ಕಸ್ಯ ಮಯಾ ಕ್ವಚಿತ್ ॥ ೧೫೭ ॥

---

ಒಹು ಲಜ್ಜಾಕರವು. ಅದರಲ್ಲಿಯೂ ಕೇಳತಕ್ಕವನು ಬ್ರಾಹ್ಮಣನು. ಆದ್ದರಿಂದ ಅವನಿಗೆ ಉತ್ತಮವಾದ ಗ್ರಾಮಗಳನ್ನೂ ಕೊಡುತ್ತೇನೆ. ನಿನಗೆ ದೇವಲೋಕವನ್ನೂ ಕೊಡುತ್ತೇನೆ.

೧೫೪. ಕುದುರೆಗಳನ್ನೂ ಆನೆಗಳನ್ನೂ ಹಣವನ್ನೂ ಕೊಡುತ್ತೇವೆ. ಈಗ ತಾನೇ ಯೌವನ ಬರುತ್ತಿರುವ ಅವರನ್ನು ನೋಡಿದೊಡದೆಯೇ ಮುದುಕನಿಗೂ ಪ್ರಾಯವುಕ್ಕುವಂತಹ ಯುವತಿಯರನ್ನೂ ಕೊಡುತ್ತೇನೆ.

೧೫೫. ಸ್ತ್ರೀಯರನ್ನೂ ಈ ಭೂಮಿಯನ್ನೂ ವಾಮನನಿಗೆ ದಾನಕೊಡುತ್ತೇನೆ. ನನಗೆ ಅನುಗ್ರಹಮಾಡಲಿ ಎಂದನು.

೧೫೬. ಪುಲಸ್ತ್ಯನು ಹೇಳಿದನು- ಬಲಿಯು ಇಷ್ಟೊಂದು ಮಾತನ್ನಾಡಲು ಅವನ ಪುರೋಹಿತನಾದ ಶುಕ್ರನು ಆ ಬಲಿಯನ್ನು ಕುರಿತು ಇಂತೆಂದನು.

೧೫೭-೧೬೨. ಶುಕ್ರನು ಹೇಳಿದನು– ಎಲೈ ಬಲಿಯೇ ನೀನು ರಾಜನು. ಅಷ್ಟ ವಿಧವಾದ ಐಶ್ವರ್ಯವೂ ನಿನಗೆ ತುಂಬಿದೆ. ಯುಕ್ತಾಯುಕ್ತಗಳು ನಿನಗೆ ಗೊತ್ತಿಲ್ಲ.

ಮಂತ್ರಿಭಿಸ್ತು ಸಮಾಲೋಚ್ಯ ಯುಕ್ತಾಯುಕ್ತಂ ಸಮೀಕ್ಷ್ಯ ಚ ।
ಪ್ರಾಪ್ತಂ ತ್ರೈಲೋಕ್ಯರಾಜ್ಯತ್ವಂ ಜಿತ್ವಾ ದೇವಾನ್ಸವಾಸವಾ್ ॥ ೧೫೮ ॥

ವಾಕ್ಯಸ್ಯಾಸ್ಯಾವಸಾನೇ ತು ಭವಾನ್ಪ್ರಾಪ್ಸ್ಯಸಿ ಬಂಧನಂ ।
ಯ ಏಷ ವಾಮನೋ ರಾಜನ್ವಿಷ್ಣುರೇವ ಸನಾತನಃ ॥ ೧೫೯ ॥

ನಾಸ್ಯ ವೈ ಭವತಾ ದೇಯಂ ಪಿತಾ ತೇ ಘಾತಿತಸ್ತ್ವಯಂ ।
ಅಯಂ ತೇ ಪಿತೃಹಾ ಪ್ರಾಪ್ತೋ ಮಾತೃಹಾ ಬಂಧುಘಾತಕಃ ॥ ೧೬೦ ॥

ವಂಶೋಚ್ಛೇದಕರಸ್ತುಭ್ಯಂ ಭೂತಶ್ಚೈವ ಭವಿಷ್ಯತಿ ।
ನ ಚೈಷಧರ್ಮಂ ಜಾನಾತಿ ದೇವಾನಾಂ ಚ ಹಿತೇ ರತಃ ॥ ೧೬೧ ॥

ಮಾಯಾವಿನಾ ದಾನವಾ ಯೇ ಮಾಯಯಾ ಯೇನ ನಿರ್ಜಿತಾಃ ।
ಮಾಯಯಾ ಬ್ರಾಹ್ಮಣಂ ರೂಪಂ ವಾಮನಂ ತೇ ಪ್ರದರ್ಶಿತಂ ॥ ೧೬೨ ॥

---

ಮಂತ್ರಿಗಳೊಡನೆ ಯೋಚಿಸಿ ಯೋಗ್ಯವಾದುದು ಅಯೋಗ್ಯವಾದುದು ಇವನ್ನು ತಿಳಿದುಕೊಡು. ನೀನು ಯಾರಿಗೆ ಕೊಡಬೇಕೆಂಬುದನ್ನು ತಿಳಿದಿಲ್ಲವಲ್ಲ. ಇಂದ್ರನೇ ಮೊದಲಾದ ದೇವತೆಗಳನ್ನೂ ಜಯಿಸಿ ತ್ರಿಲೋಕಾಧಿಪತ್ಯವನ್ನು ಹೊಂದಿದ್ದೀಯೆ. ಆದರೆ ಈ ಮಾತು ಮುಗಿಯುವುದರೊಳಗೆ ನೀನು ಕಟ್ಟಲ್ಪಡುತ್ತೀಯೆ. ಎಲೈ ರಾಜನೇ ಈ ವಾಮನನು ಪುರಾತನನಾದ ವಿಷ್ಣುವು. ಇವನಿಗೆ ನೀನು ದಾನಕೊಡಬೇಡ. ಇವನೇ ನಿನ್ನ ತಂದೆಯನ್ನೂ ಕೊಂದವನು. ನಿನ್ನ ತಂದೆಯನ್ನು ಕೊಂದ ಈತನು ಬಂದಿದ್ದಾನೆ. ನಿನ್ನ ತಾಯಿ ಬಂಧುಗಳನ್ನೂ ಕೊಂದಿರುವವನೇ ಇವನು. ನಿಮ್ಮ ವಂಶವನ್ನೆಲ್ಲಾ ನಾಶಮಾಡಿದ್ದಾನೆ. ಹಿಂದೆ ಮಾಡಿಯೂ ಇದ್ದಾನೆ. ಮುಂದೆಯೂ ಮಾಡುತ್ತಾನೆ. ಇವನಿಗೆ ಧರ್ಮವೆಂಬುದೇ ಗೊತ್ತಿಲ್ಲ. ಯಾವಾಗಲೂ ದೇವತೆಗಳ ಹಿತದಲ್ಲಿಯೇ ನಿರತನು. ಇವನು ಮಾಯಾವಿ. ಆ ಮಾಯೆಯಿಂದಲೇ ದಾನವರನ್ನೆಲ್ಲಾ ಗೆದ್ದಿರುವನು. ಮಾಯೆಯಿಂದಲೇ ಬ್ರಾಹ್ಮಣನಾಗಿ ಈ ವಾಮನ ರೂಪವನ್ನು ನಿನಗೆ ತೋರಿಸುತ್ತಿರುವನು.

ಅತ್ರ ಕಿಂ ಬಹುನೋಕ್ತೇನ ನಾಸ್ಯ ದೇಯಂ ತು ಕಿಂಚನ ।
ಮಕ್ಷಿಕಾಪಾದಮಾತ್ರಂ ತು ಭೂಮೇರಪಿ ಪ್ರತಿಗ್ರಹಂ ॥
ವಿನಾಶಮೇಷ್ಯಸಿ ಕ್ಷಿಪ್ರಂ ಸದ್ಯಸ್ಸತ್ಯಂ ಮಯಾಶ್ರುತಂ ॥ ೧೬೩ ॥

॥ ಪುಲಸ್ತ್ಯ ಉವಾಚ ॥

ಗುರುಣಾಪ್ಯೇವಮುಕ್ತಸ್ತು ಭೂಯೋ ವಾಕ್ಯಮಥಾಬ್ರವೀತ್ ॥ ೧೬೪ ॥

॥ ಭಾಷ್ಕಲಿರುವಾಚ ॥

ಧರ್ಮಾರ್ಥಿನಾ ಮಯಾ ಸರ್ವಂ ಪ್ರತಿಜ್ಞಾತಂ ಗುರೋ ತ್ವಿದಂ ।
ಪ್ರತಿಜ್ಞಾಪಾಲನಂ ಕಾರ್ಯಂ ಸತಾಂ ಧರ್ಮಸ್ಸನಾತನಃ ॥ ೧೬೫ ॥

ಯದ್ಯೇಷ ಭಗವಾನ್ವಿಷ್ಣುಃ ನಾಸ್ತಿ ಧನ್ಯತರೋ ಮಯಾ ।
ಗೃಹ್ಯ ಪ್ರತಿಗ್ರಹಂ ಮತ್ತೋ ಯದಿ ದೇವಾನ್ಪ್ರಭೂಷತಿ ॥ ೧೬೬ ॥

ಭೂಯೋಽಪಿ ಧನ್ಯತಾಂ ನೀತೋ ದೇವೇನಾನೇನ ವೈ ಗುರೋ ।
ಯಂ ಯೋಗಿನೋ ಧ್ಯಾನಯುಕ್ತಾ ಧ್ಯಾಯಮಾನಾ ಹಿ ದರ್ಶನಂ ॥ ೧೬೭ ॥

---

೧೬೩. ಈ ವಿಷಯದಲ್ಲಿ ಬಹಳ ಹೇಳುವುದರಿಂದ ಪ್ರಯೋಜನವಿಲ್ಲ. ನೊಣದ ಕಾಲಿನಷ್ಟು ಭೂದಾನವನ್ನು ಕೂಡ ಈತನಿಗೆ ಕೊಡಬೇಡ. ಒಡನೆಯೇ ನಾಶವಾಗುತ್ತೀಯೆ. ನಿಶ್ಚಯವು. ನಿನಗೆ ಬುದ್ಧಿವಾದವನ್ನು ಹೇಳಿದ್ದೇನೆ.

೧೬೪. ಪುಲಸ್ತ್ಯನು ಹೇಳಿದನು- ಗುರುವಾದ ಶುಕ್ರನು ಹೀಗೆ ಹೇಳಲು ಬಲಿಯು ಅವನಿಗೆ ಮತ್ತೆ ಇಂತೆಂದನು.

೧೬೫. ಬಾಷ್ಕಲಿಯು ಹೇಳಿದನು- ಎಲೈ ಗುರುವೇ ಧರ್ಮವನ್ನಪೇಕ್ಷಿಸುವ ನಾನು ಇದನ್ನು ಪ್ರತಿಜ್ಞೆಮಾಡಿದೆನು. ಪ್ರತಿಜ್ಞೆಯನ್ನು ಪಾಲಿಸಬೇಕು. ಇದು ಸತ್ಪುರುಷರಿಗೆ ಪೂರ್ವದಿಂದಲೂ ಬಂದ ಧರ್ಮವು.

೧೬೬. ಇವನು ಭಗವಂತನಾದ ವಿಷ್ಣುವೇ ಆಗಿದ್ದರೆ ನನಗಿಂತಲೂ ಧನ್ಯರು ಇನ್ನಿಲ್ಲ. ನನ್ನಿಂದ ದಾನವನ್ನು ತೆಗೆದುಕೊಂಡು ದೇವತೆಗಳನ್ನು ಕಾಪಾಡುವ ಪಕ್ಷದಲ್ಲಿ ಎಲೈ ಗುರುವೇ ನಾನು ಬಹು ಧನ್ಯತೆಯನ್ನು ಹೊಂದುವೆನು.

೧೬೭. ಯಾವ ವಿಷ್ಣುವನ್ನು ಧ್ಯಾನಮಾಡಿದರೂ ಯೋಗಿಗಳೂ, ಬ್ರಾಹ್ಮಣರೂ, ದರ್ಶನವನ್ನು ಹೊಂದುವುದಿಲ್ಲವೋ ಅಂತಹ ವಿಷ್ಣುವು ನನಗೆ ದರ್ಶನವನ್ನು ಕೊಟ್ಟಿದ್ದ ಪಕ್ಷದಲ್ಲಿ ನಾನು ಎಲ್ಲರಿಗಿಂತಲೂ ಧನ್ಯನೇಸೇ.

ನ ಲಭಂತೇ ತಥಾ ವಿಪ್ರಾಃ ಸೋಽಯಂದೃಷ್ಟೋ ಮಯಾ ಯದಿ ।
ದಾನಾನಿ ಯೇ ಪ್ರಯಚ್ಛಂತಿ ಸಕುಶೋದಕಪಾಣಿನಾ ॥ ೧೬೮ ॥

ಪ್ರೀಯತಾಂ ಭಗವಾನ್ವಿಷ್ಣುಃ ಪರಮಾತ್ಮಾ ಸನಾತನಃ ।
ಏತಸ್ಮಿನ್ನುಕ್ತವಚನೇ ಅಪವರ್ಗಸ್ಯ ಭಾಗಿನಃ ॥ ೧೬೯ ॥

ಯದತ್ರ ಕಾರ್ಯಕರಣೇ ವಿಕಲ್ಪೋ ಮೇ ಬಭೂವ ಹ ।
ಉಪದಿಷ್ಟೋ ಹಿ ಭವತಾ ಬಾಲತ್ವೇ ಚಾವಧಾರಿತಂ ॥ ೧೭೦ ॥

ಶತ್ರಾವಪಿ ಗೃಹಾಯಾತೇ ನಾಸ್ತ್ಯದೇಯಂ ತು ಕಿಂಚನ ।
ಏತದೇವ ವಿಚಿಂತ್ಯಾಹಂ ಪ್ರಾಣಾನಪಿ ಸ್ವಕಾನ್ಗುರೋ ॥ ೧೭೧ ॥

ವಾಮನಸ್ಯ ಪ್ರದಾಸ್ಯಾಮಿ ಶಕ್ರಸ್ಯಾಪಿ ತ್ರಿವಿಷ್ಟಪಂ ।
ಅಪೀಡಾಕಾರಿ ಯದ್ದಾನಂ ತದ್ದಾನಮಿಹ ದೀಯತೇ ।
ಪೀಡಾಕರಂ ತು ಯದ್ದಾನಂ ತದಮಂಗಳವತ್ಪುನಃ ॥ ೧೭೨ ॥

॥ ಪುಲಸ್ತ್ಯ ಉವಾಚ ॥

ಏತಚ್ಛ್ರುತ್ವಾ ಗುರುಸ್ತತ್ರ ತ್ರಪಯಾಧೋಮುಖಸ್ಥಿತಃ ॥ ೧೭೩ ॥

---

೧೬೮-೧೬೯. ದರ್ಭೆ ನೀರುಗಳನ್ನು ಕೈಲಿಟ್ಟುಕೊಂಡು ದಾನವನ್ನು ಕೊಡುವ ದಾನಿಗಳು ಪರಮಾತ್ಮನೂ, ಸನಾತನನೂ, ಭಗವಂತನೂ, ಆದ ವಿಷ್ಣುವು ಪ್ರೀತನಾಗಲಿ ಎಂದು ಈ ಮಾತನ್ನು ಹೇಳಿದರೇನೇ ಅವರು ಮೋಕ್ಷಭಾಗಿಗಳಾಗುತ್ತಾರೆ

೧೭೦-೧೭೨. ಈ ಕೆಲಸದಲ್ಲಿ ನನಗೆ ಸಂದೇಹಬಂದರೆ ನೀನು ನನಗೆ ಬಾಲ್ಯದಲ್ಲಿ ಉಪದೇಶಮಾಡಿರುವ, ಶತ್ರುವು ಮನೆಗೆ ಬಂದರೂ ಅವನಿಗೆ ಬೇಕಾದುದನ್ನು ಕೊಡಬೇಕು ಎಂಬುದನ್ನು ತಿಳಿದಿದ್ದೇನೆ. ಇದನ್ನೇ ನಾನು ಯೋಚಿಸಿ ನನ್ನ ಪ್ರಾಣಗಳನ್ನಾದರೂ ವಾಮನನಿಗೆ ಕೊಡುತ್ತೇನೆ. ಶಕ್ರನಿಗೆ ಸ್ವರ್ಗವನ್ನೂ ಕೊಡುತ್ತೇನೆ. ಪೀಡೆಯನ್ನುಂಟುಮಾಡದೇ ಕೊಡುವ ದಾನವೇ ದಾನವು ಪೀಡೆಮಾಡಿಕೊಡುವ ದಾನವಾದರೋ ಅಮಂಗಳವಾದುದು.

೧೭೩. ಪುಲಸ್ತ್ಯನು ಹೇಳಿದನು- ಗುರುವು ಈ ಮಾತನ್ನು ಕೇಳಿ ಲಜ್ಜೆಯಿಂದ ತಲೆ ತಗ್ಗಿಸಿಕೊಂಡು ನಿಂತನು.

॥ ಬಾಷ್ಕಲಿರುವಾಚ ॥

ಅರ್ಥಿತಾ ಭವತಾ ದೇವ ದೇಯಾ ಸರ್ವಧರಾ ಮಯಾ ।
ತ್ರಪಾಕರಂ ಭವೇನ್ಮಹ್ಯಂ ಯದಸ್ಯ ಭೂಪದತ್ರಯಂ ॥ ೧೭೪ ॥

॥ ಇಂದ್ರ ಉವಾಚ ॥

ಸತ್ಯಮೇತದ್ದಾನವೇಂದ್ರ ಯದುಕ್ತಂ ಭವತಾ ಹಿ ಮೇ ।
ಭೂಮೇಃ ಕ್ರಮತ್ರಯಾರ್ಥಿತ್ವಂ ದ್ವಿಜೇನಾನೇನ ಮೇ ಕೃತಂ ॥ ೧೭೫ ॥

ಏತಾವತಾ ತ್ವಯಂ ಚಾರ್ಥೀ ಮಯಾಪ್ಯಸ್ಯ ಕೃತೇ ಭವಾನ್ ।
ದನುಪುತ್ರ ಯಾಚಿತೋಽಸ್ಮಿ ವರಮೇತತ್ಪ್ರದೀಯತಾಂ ॥ ೧೭೬ ॥

॥ ಬಾಷ್ಕಲಿರುವಾಚ ॥

ಕ್ರಮತ್ರಯಂ ವಾಮನಾಯ ದೇವರಾಜ ಪ್ರಯಚ್ಛ ಮೇ ।
ತತ್ರ ತ್ವಂ ಸುಚಿರಂ ಕಾಲಂ ಸುಖೀ ಸುರಪತೇ ವಸ ॥ ೧೭೭ ॥

ಏವಮುಕ್ತ್ವಾ ಬಾಷ್ಕಲಿನಾ ವಾಮನಾಯ ಪದತ್ರಯಂ ।
ತೋಯಪೂರ್ವಂ ತದಾ ದತ್ತಂ ಪ್ರೀಯತಾಂ ಮೇ ಹರಿಸ್ಸ್ವಯಂ ॥ ೧೭೮ ॥

---

೧೭೪. ಬಾಷ್ಕಲಿಯು ಹೇಳಿದನು- ಎಲೈ ದೇವೇಂದ್ರನೇ ! ನೀನೇನೋ ಯೋಚಿಸಿದೆ. ನಾನು ಭೂಮಿಯನ್ನೆಲ್ಲಾ ಕೊಟ್ಟುಬಿಡುತ್ತೇನೆ. ಇವನಿಗೆ ಮೂರು ಹೆಜ್ಜೆ ಭೂಮಿಕೊಡುವುದೆಂದರೆ ನನಗೆ ನಾಚಿಕೆಯಾಗುತ್ತದೆ.

೧೭೫-೧೭೬. ಇಂದ್ರನು ಹೇಳಿದನು- ಎಲೈ ದಾನವೇಂದ್ರನೇ ನೀನು ಹೇಳಿದುದು ಸತ್ಯವು. ಈ ಬ್ರಾಹ್ಮಣನು ನನ್ನನ್ನು ಮೂರು ಹೆಜ್ಜೆ ಭೂಮಿಯನ್ನು ಯಾಚಿಸಿದನು. ನಾನೂ ಇವನಿಗೋಸ್ಕರ ಅಷ್ಟನ್ನೇ ಕೇಳುವುದು. ನಾನೂ ಅಷ್ಟನ್ನೇ ಇವನಿಗೆ ಪ್ರತಿಜ್ಞೆಮಾಡಿರುವುದು. ಎಲೈ ದನುಪುತ್ರನೇ! ಇದನ್ನು ನೀನು ಕೊಡು.

೧೭೭. ಬಾಷ್ಕಲಿಯು ಹೇಳಿದನು- ಎಲೈ ದೇವೇಂದ್ರನೇ! ನನ್ನ ಭೂಮಿಯಲ್ಲಿ ಮೂರುಹೆಜ್ಜೆ ಭೂಮಿಯನ್ನು ಆ ವಾಮನನಿಗೆ ಕೊಡು. ಅಲ್ಲಿ ನೀನೂ ಬಹು ಕಾಲ ಸುಖವಾಗಿ ವಾಸಮಾಡು.

೧೭೮. ಬಲಿಯು ಹೀಗೆಂದು ಹೇಳಿ ವಾಮನನಿಗೆ ನೀರನ್ನು ಬಿಟ್ಟುಕೊಂಡು ಹರಿಯು ಸುಪ್ರೀತನಾಗಲಿ. ಎಂದು ದಾನವನ್ನು ಕೊಟ್ಟನು.

ವತ್ತೇ ತು ದಾನವೇಂದ್ರೇಣ ತ್ಯಕ್ತ್ವಾ ರೂಪಂ ತು ವಾಮನಂ ।
ಹರಿರಾಚಕ್ರಮೇ ಲೋಕಾನ್ದೇವಾನಾಂ ಹಿತಕಾಮ್ಯಯಾ ॥ ೧೭೯ ॥

ಯಜ್ಞಪರ್ವತಮಾಸಾದ್ಯ ಸ್ಥಿತ್ವಾ ದೇವ ಉದಙ್ಮುಖಃ ।
ದೇವಸ್ಯ ವಾಮಚರಣೇ ನಿವಿಷ್ಟೋ ದಾನವಾಲಯಃ ॥ ೧೮೦ ॥

ತತ್ರ ಕ್ರಮಂ ಸ ಪ್ರಥಮಂ ದದೌ ಸೂರ್ಯೇ ಜಗತ್ಪತಿಃ ।
ದ್ವಿತೀಯಂ ಚ ಧ್ರುವೇ ದೇವಃ ತೃತೀಯೇನ ಚ ಪಾರ್ಥಿವ ॥ ೧೮೧ ॥

ಬ್ರಹ್ಮಾಂಡಂ ತಾಡಿತಂ ತೇನ ದೇವೇನಾದ್ಭುತಕರ್ಮಣಾ ।
ಅಂಗುಷ್ಠಾಗ್ರೇಣ ವೈ ಭಿನ್ನೇ ಜಲಂ ಭೂರಿವಿನಿಸ್ಸೃತಂ ॥ ೧೮೨ ॥

ಪ್ಲಾವಯಿತ್ವಾ ಬ್ರಹ್ಮಲೋಕಂ ಸರ್ವಲೋಕಾನನುಕ್ರಮಾತ್ ।
ಧ್ರುವಸ್ಥಾನಂ ಸೂರ್ಯಲೋಕಂ ಪ್ಲಾವ್ಯ ತಂ ಯಜ್ಞಪರ್ವತಂ ॥ ೧೮೩ ॥

---

೧೭೯. ದಾನವೇಂದ್ರನು ಹೀಗೆ ದಾನಕೊಡಲು ಹರಿಯು ವಾಮನ ರೂಪವನ್ನು ಬಿಟ್ಟು ದೇವತೆಗಳ ಹಿತಕೋಸ್ಕರ ಲೋಕಗಳನ್ನು ಆಕ್ರಮಿಸಿದನು.

೧೮೦. ಯಜ್ಞಪರ್ವತಕ್ಕೆ ಹೋಗಿ ಆ ಸ್ವಾಮಿಯು ಉತ್ತರಮುಖನಾಗಿ ನಿಂತು ಕೊಂಡು ತನ್ನ ಎಡಗಾಲಿನ ಹೆಜ್ಜೆಯನ್ನು ಆ ದಾನವರ ಪಟ್ಟಣಗಲ್ಲಿ ಇಟ್ಟುಕೊಂಡನು.

೧೮೧-೧೮೨. ದಾನವರ ಪಟ್ಟಣದ ಮೇಲೆ ಮೊದಲನೆಯ ಹೆಜ್ಜೆಯನ್ನಿಟ್ಟು ಎರಡನೆಯ ಹೆಜ್ಜೆಯನ್ನು ಸೂರ್ಯಮಂಡಲಕ್ಕೆ (ಆಕಾಶಕ್ಕೆ) ಇಟ್ಟನು. ಮೂರನೆಯ ಕಾಲಿನಿಂದ ಆ ಅದ್ಭುತಕರ್ಮವುಳ್ಳ ಸ್ವಾಮಿಯು ಬ್ರಹ್ಮಾಂಡವನ್ನು ಒದ್ದನು. ಆಗ ಅಂಗುಷ್ಟದ ತುದಿಯಿಂದ ಬ್ರಹ್ಮಾಂಡವು ಒಡೆದುಹೋಗಲು ಬಹುವಾಗಿ ನೀರು ಸುರಿಯಿತು.

೧೮೩-೧೮೪. ಮೊದಲು ಆ ನೀರು ಬ್ರಹ್ಮಲೋಕವನ್ನು ನೆನೆಸಿ ಆಮೇಲೆ ಕ್ರಮವಾಗಿ ಎಲ್ಲಾ ಲೋಕಗಳನ್ನೂ ನೆನೆಸುತ್ತ ಧ್ರುವಸ್ಥಾನವಾದ ಸೂರ್ಯಲೋಕ ವನ್ನೂ ನೆನೆಸಿ ಯಜ್ಞಪರ್ವತವನ್ನೂ ನೆನೆಸಿ ಆ ಮೇಲೆ ಪುಷ್ಕರಕ್ಕೆ ಸೇರಿತು.

ಪ್ರವಿಷ್ಟಾ ಪುಷ್ಕರಂ ದೇವೀ ಗತ್ವಾ ವಿಷ್ಣುಪದಾನ್ವಿತಂ ।
ಪದಾನಿ ತಾನಿ ಜಾತಾನಿ ವೈಷ್ಣವಾನಿ ಧರಾತಳೇ ॥ ೧೮೪ ॥

ತತ್ರಾಶ್ರಮೇ ತು ಯೋ ಗತ್ವಾ ಸ್ನಾನಂ ವಾಪ್ಯಾಂ ಸಮಾಚರೇತ್ ।
ಅಶ್ವಮೇಧಫಲಂ ತಸ್ಯ ದರ್ಶನಾದೇವ ಜಾಯತೇ ॥ ೧೮೫ ॥

ಏಕವಿಂಶಕುಲೋಪೇತೋ ವೈಕುಂಠಂ ಲೋಕಮಾಪ್ನುಯಾತ್ ।
ಭುಕ್ತ್ವಾ ಸ ವಿಪುಲಾನ್ಭೋಗಾನ್ಕಲ್ಪಾನಾಂ ತು ಶತತ್ರಯಂ ॥ ೧೮೬ ॥

ತದಂತೇ ಜಾಯತೇ ರಾಜಾ ಸಾರ್ವಭೌಮಃ ಕ್ಷಿತಾವಿಹ ।
ತೋಯಧಾರಾ ತು ಯಾ ಭೀಷ್ಮ ಅಂಗುಷ್ಠಾಗ್ರಾದ್ವಿನಿಸ್ಸೃತಾ ॥ ೧೮೭ ॥

ನದೀ ಸಾ ವೈಷ್ಣವೀ ಪ್ರೋಕ್ತಾ ವಿಷ್ಣುಪಾದಸಮುದ್ಭವಾ ।
ಅನೇಕಕಾರಣೈರ್ಜಾತಾ ಗಂಗಾ ವಿಷ್ಣುಪದೇ ನೃಪ ॥ ೧೮೮ ॥

ಯಯಾ ಸರ್ವಮಿದಂ ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಂ ।
ಅಂಗುಷ್ಠಾಗ್ರಕ್ಷತಾದ್ದಂಡಾದ್ಯತ್ಪ್ರವಿಷ್ಟಂ ಜಲಂ ಶುಭಂ ॥ ೧೮೯ ॥

---

ಆಗ ಆ ವಿಷ್ಣುವಿನ ಕಾಲುಗಳ ಮೇಲೆ ಹರಿದು ತೋರಿದಳು ಈ ರೀತಿ ಆ ವೈಷ್ಣವ ಪದಗಳು ಭೂಮಿಯಲ್ಲಿ ಉಂಟಾದುವು.

೧೮೫. ಆ ಆಶ್ರಮಕ್ಕೆ ಹೋಗಿ ಅಲ್ಲಿರುವ ಕೊಳದಲ್ಲಿ ಸ್ನಾನಮಾಡಿದರೆ ಅಶ್ವಮೇಧ ಫಲವು ಲಭಿಸುವುದು. ದರ್ಶನದಿಂದಲೂ ಲಭಿಸುವುದು.

೧೮೫-೧೮೮. ಅಂತಹವನು ಇಪ್ಪತ್ತೊಂದು ತಲೆಗಳನ್ನು ಸೇರಿಸಿಕೊಂಡು ವೈಕುಂಠದಲ್ಲಿ ವಾಸಮಾಡುತ್ತಾನೆ. ಅಲ್ಲಿ ಅನೇಕ ಸುಖಗಳನ್ನು ಅನುಭವಿಸುತ್ತಾ ಮುನ್ನೂರು ಕಲ್ಪಗಳವರೆಗೂ ಇರುತ್ತಾನೆ. ಅನಂತರ ಈ ಲೋಕದಲ್ಲಿ ಚಕ್ರವರ್ತಿಯಾಗುತ್ತಾನೆ. ಆತನ ಕಾಲಿನ ಅಂಗುಷ್ಟದಿಂದ ಕೆಳಗೆ ಬಂದ ನೀರು ವಿಷ್ಣುವಿನ ಪಾದದಿಂದ ಹುಟ್ಟಿದ ನದಿಯಾಗಿ ವೈಷ್ಣವೀ ನದಿ ಎನ್ನಿಸಿಕೊಂಡಿತು. ಅದೇನೆ ಅನೇಕ ಕಾರಣಗಳಿಂದ ಹುಟ್ಟಿದ ಗಂಗಾನದಿಯಾಗಿದೆ.

೧೮೯-೧೯೨. ಆ ನದಿಯು ಚರಾಚರಾತ್ಮಕವಾದ ಈ ಮೂರುಲೋಕಗಳನ್ನೂ ವ್ಯಾಪಿಸಿದೆ. ಅಂಗುಷ್ಠದ ತುದಿಯು ತಗುಲಿದುದರಿಂದ ಹೊರಗೆ ಹೊರಟ ಆ ನೀರು ದೇವನದೀ ಎನ್ನಿಸಿಕೊಂಡಿತು ಆ ಮೇಲಕ್ಕೆತ್ತಿದ್ದ ಕಾಲು ಇರುವ ಜಾಗವು

ಪ್ರಾಪ್ತಂ ದೇವನದೀತ್ವಂ ಚ ಸಾ ತು ವಿಷ್ಣು ಪದೀ ಸ್ಮೃತಾ ।
ದೇವನದ್ಯಾ ತಯಾ ವ್ಯಾಪ್ತಂ ಬ್ರಹ್ಮಾಂಡಂ ಸಚರಾಚರಂ ॥ ೧೯೦ ॥

ವಿಭೂತಿಭಿರ್ಮಹಾಭಾಗ ಸರ್ವಾನುಗ್ರಹಕಾಮ್ಯಯಾ ।
ಸ ಬಾಷ್ಕಲಿರ್ವಾಮನೇನ ಉಕ್ತಃ ಪೂರಯ ವಿಕ್ರಮಾ ॥ ೧೯೧ ॥

ಅಧೋಮುಖಸ್ತದಾ ಜಾತಃ ಉತ್ತರಂ ನಾಸ್ಯವಿಂದತ ।
ಮೌನೀಭೂತಂ ತು ತಂ ದೃಷ್ಟ್ವಾ ಪುರೋಧಾ ವಾಕ್ಯಮಬ್ರವೀತ್ ॥ ೧೯೨ ॥

॥ ಶುಕ್ರ ಉವಾಚ ॥

ಸ್ವಾಭಾವಿಕೀ ದಾನಸೃಷ್ಟಿಃ ನ ಷು ಸೃಷ್ಟಾವಯಂ ಕ್ಷಮಃ ।
ಯಾವತೀಯಂ ಧರಾ ದೇವ ಸಾ ದತ್ತಾನೇನ ತೇ ಪ್ರಭೋ ॥ ೧೯೩ ॥

॥ ಪುಲಸ್ತ್ಯ ಉವಾಚ ॥

ಉಕ್ತೋ ಬಾಷ್ಕಲಿನಾ ವಿಷ್ಣುರ್ಧ್ಯಾನಸ್ಮಾತ್ರಾ ವಸುಂಧರಾ ।
ಯಾ ಸೃಷ್ಟಾ ಭವತಾ ಪೂರ್ವಂ ಸಾ ಮಯಾ ನ ಚ ಗೋಪಿತಾ ॥ ೧೯೪ ॥

---

ವಿಷ್ಣುಪದೀ ಎನ್ನಿಸಿಕೊಂಡಿತು. ಈ ರೀತಿ ಆ ದೇವನದಿಯಿಂದ ಚರಾಚರದಿಂದ ಕೂಡಿದ ಈ ಬ್ರಹ್ಮಾಂಡವು ವ್ಯಾಪಿಸಲ್ಪಟ್ಟಿದೆ. ಆ ವಿಷ್ಣುವು ತನ್ನ ಮಹಿಮೆಯಿಂದ ಎಲ್ಲರಿಗೂ ಅನುಗ್ರಹಮಾಡಬೇಕೆಂಬ ಇಚ್ಛೆಯಿಂದ ಹೀಗೆ ಮಾಡಿದನು. ಆಗ ವಾಮನನು ಮತ್ತೊಂದು ಹೆಜ್ಜೆಗೆ ಜಾಗಕೊಡೆಂದು ಕೇಳಲು ಬಲಿಯು ತಲೆತಗ್ಗಿಸಿಕೊಂಡು ಉತ್ತರವನ್ನು ಹೇಳಲಾರದವನಾದನು. ಅವನು ಸುಮ್ಮನಾದುದನ್ನು ನೋಡಿ ಪುರೋಹಿತನಾದ ಶುಕ್ರನು ಇಂತೆಂದನು.

೧೯೩. ಶುಕ್ರನು ಹೇಳಿದನು- ಎಲೈ ದೇವನೇ! ದಾನದರೀತಿಯು ಸ್ವಭಾವವಾದುದು. ನೀನು ದಾನವನ್ನೇ ಬೇರೆ ರೀತಿಯಾಗಿ ಉಪಯೋಗಿಸಿಕೊಂಡಿದ್ದೀಯೆ. ಅಲ್ಲದೆ ಸೃಷ್ಟಿಮಾಡುವದಕ್ಕೆ ಈ ಬಲಿಗೆ ಶಕ್ತಿಯೂ ಇಲ್ಲ. ಈ ಭೂಮಿಯ ಎಷ್ಟಿದೆಯೋ ಅಷ್ಟನ್ನೂ ಈತನು ನಿನಗೆ ಕೊಟ್ಟಿರುವನು.

೧೯೪-೧೯೫. ಪುಲಸ್ತ್ಯನು ಹೇಳಿದನು- ಆಗ ಬಲಿಯು ಎಲೈ ಸ್ವಾಮಿಯ ನೀನು ಸೃಷ್ಟಿಮಾಡಿದಷ್ಟು ಭೂಮಿಯೂ ಇದ್ದೇ ಇದೆ. ನಾನು ಮುಚ್ಚಿಕೊಂಡಿ...

ಅಲ್ಪಾಭೂಮಿರ್ಭವಾನ್ದೀರ್ಘೋ ನ ತು ಸೃಷ್ಟೇರಹಂ ಕ್ಷಮಃ ।
ಇಚ್ಛಾಶಕ್ತಿಃ ಪ್ರಭವತಿ ಪ್ರಭೂಣಾಂ ದೇವ ಸರ್ವದಾ ॥ ೧೯೫ ॥

ನಿರುತ್ತರಂ ತದಾ ವಿಷ್ಣುರ್ಮತ್ವಾ ತಂ ಸತ್ಯವಾದಿನಂ ।
ಬ್ರೂಹಿ ದಾನವಮುಖ್ಯತ್ವಂ ಕಂ ತೇ ಕಾಮಂ ಕರೋಮ್ಯಹಂ ॥ ೧೯೬ ॥

ಮಮ ಹಸ್ತಗತಂ ತೋಯಂ ತ್ವಯಾ ದತ್ತಂ ತು ದಾನವ ।
ತೇನ ತ್ವಂ ವರಯೋಗ್ಯೋಸಿ ವರಾಣಾಂ ಭಾಜನಂ ಶುಭಂ ॥ ೧೯೭ ॥

ದಾಸ್ಯೇ ಹಂ ಭವತಃ ಕಾಮಮರ್ಥಂ ಯೇನ ವೃಣುಷ್ವ ಹ ।
ವಿಜ್ಞಪ್ತಸ್ಸ ತದಾ ತೇನ ದೇವದೇವೋ ಜನಾರ್ದನಃ ॥ ೧೯೮ ॥

॥ ಬಾಷ್ಕಲಿರುವಾಚ ॥

ಭಕ್ತಿಂ ವೃಣೋಮಿ ದೇವೇಶ ತ್ವದ್ಧಸ್ತಾನ್ಮರಣಂ ಹಿ ಮೇ ।
ವ್ರಜಾಮಿ ಶ್ವೇತದ್ವೀಪಂ ತೇ ದುರ್ಲಭಂ ಯತ್ತಪಸ್ವಿನಾಂ ॥ ೧೯೯ ॥

---

ಆದರೆ ನೀನು ದೊಡ್ಡವನಾದೆ. ಭೂಮಿಯು ಸ್ವಲ್ಪವಾಯಿತು. ಸೃಷ್ಟಿಸುವ ಯೋಗ್ಯತೆಯು ನನಗಿಲ್ಲ. ನೀನು ಪ್ರಭುವಾದುದರಿಂದ ನಿನ್ನ ಇಚ್ಛೆಯಂತೆ ಶಕ್ತಿಯೂ ಇರುವುದು.

೧೯೬. ಆಗ ಬಲಿಯು ನಿರುತ್ತರನಾಗಲು ವಿಷ್ಣುವು ಅವನು ಸತ್ಯವಾದಿ ಎಂದು ತಿಳಿದು ಎಲೈ ದಾನವೇಂದ್ರನೇ! ನಿನಗೇನು ಬೇಕು? ಹೇಳು. ಕೊಡುತ್ತೇನೆ. ಎಂದನು.

೧೯೭. ನನ್ನ ಕೈಯಲ್ಲಿರುವ ನೀರು ನೀನು ಕೊಟ್ಟುದು. ಆದ್ದರಿಂದ ನೀನು ವರಯೋಗ್ಯನಾಗಿದ್ದೀಯೆ. ಶುಭಕಾರ್ಯವೇ ವರಕ್ಕೆ ಯೋಗ್ಯವಾದುದು.

೧೯೮. ನಾನು ನಿನಗೆ ಕಾಮ ಅರ್ಥಗಳನ್ನೂ ಕೊಡುತ್ತೇನೆ. ವರವನ್ನು ಕೇಳಿಕೋ ಎನ್ನಲು ಆಗ ಬಲಿಯು ಈ ರೀತಿ ವಿಜ್ಞಾಪಿಸಿದನು.

೧೯೯. ಬಾಷ್ಕಲಿಯು ಹೇಳಿದನು– ಎಲೈ ದೇವೇಶನೇ! ನಾನು ಭಕ್ತಿಯನ್ನು ಅಪೇಕ್ಷಿಸುತ್ತೇನೆ. ನಿನ್ನ ಕೈಯಿಂದಲೇ ನನಗೆ ಮರಣವಾಗಬೇಕು. ಮತ್ತು ತಪಸ್ವಿಗಳಿಗೂ ದುರ್ಲಭವಾದ ಶ್ವೇತದ್ವೀಪವನ್ನು ಹೊಂದಬೇಕು.

॥ ಪುಲಸ್ತ್ಯ ಉವಾಚ ॥

ಆಹೈವಮುಕ್ತೋ ವಿಷ್ಣುಸ್ತಂ ತಿಷ್ಠಸ್ವೈಕಂ ಯುಗಾನ್ತರಂ ।
ವರಾಹರೂಪೀ ಯದಾಹಂ ಪ್ರವೇಕ್ಷ್ಯಾಮಿ ಧರಾತಲಂ ॥ ೨೦೦ ॥

ತದಾ ಹನಿಷ್ಯೇऽಹಂ ತ್ವಾಂ ತು ಮದಂಗೇ ಲಯಮೇಷ್ಯಸಿ ।
ಉಕ್ತೋऽಥ ದಾನವಸ್ತೇನ ಅಪಾಸರ್ಪತ್ತದಗ್ರತಃ ॥ ೨೦೧ ॥

ವಾಮನೇನ ಸಮಾಕ್ರಾನ್ತಾಃ ಸರ್ವೇ ಲೋಕಾ ಜಿಷ್ಣ್ಯಕ್ಷತಾ ।
ಅಸುರೈಸ್ತ್ಯೈಸ್ತದಾ ತ್ಯಕ್ತಾ ದೇವಾನಾಂ ಸತ್ಯರಕ್ಷಣೈಃ ॥ ೨೦೨ ॥

ಪಾತಾಳಂ ಚ ಸತಾ ತೇನ ಆಕ್ರಾನ್ತಂ ಹರಿಮೇಧಸಾ ।
ಅಸುರೈಸ್ತ್ಯೈಸ್ತದಾ ಘೋರೈರ್ದಶಭಿಶ್ಯಂತನೋऽಸ್ನುತ ॥ ೨೦೩ ॥

ದೇವೋ ಹೃತ್ವಾ ಚ ತ್ರೈಲೋಕ್ಯಂ ಜಗಾಮಾದರ್ಶನಂ ವಿಭುಃ ।
ಪಾತಾಳ ನಿಲಯಶ್ಚಾಪಿ ಸುಖಮಾಸ್ತೇ ಸ ಬಾಷ್ಕಲಿಃ ॥ ೨೦೪ ॥

---

೨೦೦-೨೦೧. ಪುಲಸ್ತ್ಯನು ಹೇಳಿದನು- ಆಗ ವಿಷ್ಣುವು ಎಲೈ ಬಲಿಯೇ ನೀನು ಇನ್ನು ಒಂದು ಯಾಗಾಂತರ ಕಾಲವಿರು. ನಾನು ವರಾಹ ರೂಪವನ್ನು (ಹಂದಿ) ಹೊಂದಿ ಪಾತಾಳಕ್ಕೆ ಬಂದಾಗ ನಿನ್ನನ್ನು ಕೊಲ್ಲುತ್ತೇನೆ ಆಗ ನೀನು ನನ್ನ ಅವಯವದಲ್ಲಿ ಸೇರಿ ಹೋಗುತ್ತೀಯೆ. ಎನ್ನಲು ಆಗ ಬಲಿಯು ಅವನ ಎದುರನ್ನು ಬಿಟ್ಟು ಮಗ್ಗುಲಾದನು.

೨೦೨-೨೦೩. ಎಲೈ ಭೀಷ್ಮನೇ! ಆಗ ವಾಮನನು ತೆಗೆದುಕೊಳ್ಳಲಿಚ್ಛೆಯಿಂದ ಲೋಕವೆಲ್ಲವನ್ನೂ ಆಕ್ರಮಿಸಿಕೊಂಡನು. ಆಗ ದೇವತೆಗಳ ಹಿತಕ್ಕೋಸ್ಕರ ರಾಕ್ಷಸರೆಲ್ಲರೂ ಭೂಲೋಕವನ್ನು ಬಿಟ್ಟು ಹೊರಟುಹೋದರು. ಹರಿಮೇದಸ್ಸೆಂಬುವನೂ ಮತ್ತು ಹತ್ತು ಜನ ದಾನವಶ್ರೇಷ್ಠರೂ ಘೋರರೂ ಆದವರು ಪಾತಾಳಲೋಕವನ್ನು ಸೇರಿಕೊಂಡರು.

೨೦೪. ಸ್ವಾಮಿಯು ಮೂರು ಲೋಕವನ್ನೂ ತೆಗೆದುಕೊಂಡು ಹೊರಟು ಹೋದನು. ಬಲಿಯು ಪಾತಾಳಕ್ಕೆ ಸೇರಿಕೊಂಡು ಸುಖವಾಗಿದ್ದನು.

ಶಕ್ರೋಽಪಿ ಪಾಲಯಾಮಾಸ ವಿಪಶ್ಚಿದ್ಭುವನತ್ರಯಂ ।
ಅಯಂ ತ್ರೈವಿಕ್ರಮೋ ನಾಮ ಪ್ರಾದುರ್ಭಾವೋ ಜಗದ್ಗುರೋಃ ॥ ೨೦೫ ॥

ಗಂಗಾಸಂಭವಸಂಯುಕ್ತಃ ಸರ್ವಕಲ್ಮಷನಾಶನಃ ।
ವಿಷ್ಣೋಃ ಪದಾನಾಮೇಕಾನ್ತ ಉತ್ಪತ್ತಿಃ ಕಥಿತಾ ನೃಪ ॥ ೨೦೬ ॥

ಯಾಂ ಶ್ರುತ್ವಾ ತು ನರೋ ಲೋಕೇ ಸರ್ವಪಾಪೈಃ ಪ್ರಮುಚ್ಯತೇ ।
ದುಸ್ಸ್ವಪ್ನೋ ದುರ್ವಿಚಿಂತಾ ಚ ದುಷ್ಕರಂ ದುಷ್ಕೃತಾನಿ ಚ ॥ ೨೦೭ ॥

ಕ್ಷಿಪ್ರಂ ನಾಶಂ ಸಮಾಯಾನ್ತಿ ದೃಷ್ಟೇ ವಿಷ್ಣುಪದತ್ರಯೇ ।
ಯುಗಾನುಕ್ರಮತೋ ದೃಷ್ಟ್ವಾ ಪಾಪಿನೋ ಜನ್ತವಸ್ತಥಾ ॥ ೨೦೮ ॥

ಸೂಕ್ಷ್ಮತಾ ದರ್ಶಿತಾ ಭೀಷ್ಮ ವಿಷ್ಣುನಾ ಪದದರ್ಶನೇ ।
ಯಸ್ತ್ವಾರೋಹತಿ ತಸ್ಮಿಂಸ್ತು ಮೌನವಾನ್ಮಾನವೋ ಭುವಿ ॥ ೨೦೯ ॥

---

೨೦೫-೨೦೬. ಇಂದ್ರನೂ ಕೂಡ ಬುದ್ಧಿವಂತಿಕೆಯಿಂದ ಮೂರು ಲೋಕವನ್ನೂ ಪಾಲಿಸುತ್ತಿದ್ದನು. ಇದೇ ಆ ಜಗದ್ಗುರುವಿನ ತ್ರಿವಿಕ್ರಮಾವತಾರವು. ಗಂಗೆಯ ಉತ್ಪತ್ತಿಯಿಂದ ಕೂಡಿದ, ಸರ್ವಪಾಪನಾಶಕವಾದ ವಿಷ್ಣುವಿನ ಪಾದಗಳು ಒಂದು ಜಾಗದಲ್ಲಿ ಬಂದಿರುವುದರ ಉತ್ಪತ್ತಿಯ ವಿಷಯವನ್ನು ಹೇಳಿದೆನು.

೨೦೭-೨೦೮. ಇದನ್ನು ಕೇಳಿದ ಮನುಷ್ಯನು ಎಲ್ಲಾ ಪಾಪಗಳನ್ನೂ ಕಳೆದುಕೊಳ್ಳುತ್ತಾನೆ. ಕೆಟ್ಟ ಸ್ವಪ್ನ, ಕೆಟ್ಟಚಿಂತೆ, ಕಷ್ಟಗಳು, ಪಾಪಗಳು ಎಲ್ಲವೂ ಕೂಡ ಈ ವಿಷ್ಣುಪದಗಳನ್ನು ನೋಡಿದರೆ ಜಾಗ್ರತೆಯಾಗಿ ಹೋಗುತ್ತವೆ. ಪಾಪಿಯಾದ ಪ್ರಾಣಿಗಳು ಯುಗಕ್ರಮದಿಂದ ನೋಡಿದರೂ ಪಾಪದಿಂದ ಮುಕ್ತರಾಗುತ್ತಾರೆ.

೨೦೯-೨೧೦. ವಿಷ್ಣುಪದವನ್ನು ನೋಡುವುದರಿಂದ ಉಂಟಾಗುವ ವಿಷಯಗಳನ್ನು ಹೇಳಿದೆನು. ಪುಷ್ಕರಯಾತ್ರೆಯನ್ನು ಮಾಡಿ ಅದರ ಮೇಲೆ ಮೌನವಾಗಿ

ಕೃತ್ವಾ ತ್ರಿಪುಷ್ಕರೀಂ ಯಾತ್ರಾಮಶ್ವಮೇಧಫಲಂ ಲಭೇತ್ ।
ಮುಚ್ಯತೇ ಸರ್ವಪಾಪೇಭ್ಯೋ ಮೃತೋ ವಿಷ್ಣುಪದೇ ವ್ರಜೇತ್ ॥ ೨೧೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ವಿಷ್ಣುಪದೋತ್ಪತ್ತಿ
॥ ಕಥನಂ ನಾಮ ಪಂಚವಿಂಶೋಽಧ್ಯಾಯಃ ॥

---

ನಿಲ್ಲುವವನು ಅಶ್ವಮೇಧ ಫಲವನ್ನು ಹೊಂದುತ್ತಾನೆ. ಎಲ್ಲಾ ಪಾಪಗಳೂ ಹೋಗುತ್ತವೆ. ಸತ್ತನಂತರ ವೈಕುಂಠವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ವಿಷ್ಣುಪದೋತ್ಪತ್ತಿಕಥನವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಷಡ್ವಿಂಶೋಽಧ್ಯಾಯಃ ॥



॥ ಭೀಷ್ಮ ಉವಾಚ ॥

ಭಗವನ್ಮಹದಾಶ್ಚರ್ಯಂ ಬಾಷ್ಕಲೇರ್ಬಂಧನಂ ಹಿ ಯತ್ ।
ಕೃತಂ ತ್ರಿವಿಕ್ರಮಂ ರೂಪಂ ಯದಾ ಸಂಯಮಿತೋ ಬಲಿಃ ॥ ೧ ॥

ಏತನ್ಮಯಾ ಶ್ರುತಂ ಸರ್ವಂ ಕಥ್ಯಮಾನಂ ದ್ವಿಜೋತ್ತಮೈಃ ।
ಪಾತಾಳೇ ವಸತೇದ್ಯಾಪಿ ವಿರೋಚನಸುತೋ ಬಲಿಃ ॥ ೨ ॥

ನಾಗತೀರ್ಥಂ ಯಥಾ ಭೂತಂ ಪಿಶಾಚಾನಾಂ ಚ ಸಂಭವಂ ।
ಶಿವದೂತೀ ಕಥಂ ಚಾತ್ರ ಕೇನ ಕ್ಷೇಮಂಕರೀ ಕೃತಾ ॥ ೩ ॥

---

### ಇಪ್ಪತ್ತಾರನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು—ಎಲೈ ಸ್ವಾಮಿಯೇ! ಈ ಬಲಿಯ ಬಂಧನವು ಬಹು ಆಶ್ಚರ್ಯದಿಂದ ಕೂಡಿದೆ. ಬಲಿಯನ್ನು ಕಟ್ಟುವಾಗ ವಿಷ್ಣುವು ತ್ರಿವಿಕ್ರಮ ರೂಪವನ್ನು ತಾಳಿದನು.

೨. ಹಿಂದೆ ಬ್ರಾಹ್ಮಣರು ಹೇಳುತ್ತಿದ್ದಾಗಲೂ ಇದನ್ನು ಕೇಳಿದ್ದೇನೆ. ವಿರೋಚನನ ಮಗನಾದ ಬಲಿಯು ಈಗಲೂ ಪಾತಾಳದಲ್ಲಿ ವಾಸಮಾಡುತ್ತಿದ್ದಾನೆ.

೩. ಇಲ್ಲಿರುವ ನಾಗತೀರ್ಥವು ಹೇಗೆ ಸೃಷ್ಟಿಯಾಯಿತು? ಪಿಶಾಚಗಳು ಹೇಗೆ ಹುಟ್ಟಿದುವು? ಶಿವದೂತಿಯು ಹೇಗೆ ಉತ್ಪನ್ನಳಾದಳು? ಕ್ಷೇಮಂಕರಿಯ ವಿಷಯವೇನು?

ಅಂತರಿಕ್ಷಂ ಪುಷ್ಕರಂ ತು ಕೇನ ನೀತಂ ಮಹಾಮುನೇ ।
ತದಾಚಕ್ಷ್ವ ಚ ಮೇ ಸರ್ವಂ ಯಥಾವದ್ಬಲಿಬಂಧನಂ ॥ ೪ ॥

ಭೂಮೇಃ ಪ್ರಕ್ರಮಣಂ ಪೂರ್ವಂ ಕೃತಂ ದೇವೇನ ವಿಷ್ಣುನಾ ।
ದ್ವಿತೀಯಂ ಕಾರಣಂ ತಚ್ಚ ಯೇನ ದೇವಶ್ಚಕಾರ ಹ ॥ ೫ ॥

ತತ್ತ್ವತಸ್ತ್ವಂ ಹಿ ಮೇ ಸರ್ವಂ ಯಥಾ ಭೂತಂ ತಥಾ ವದ ।
ಪಾಪಕ್ಷಯಕರಂ ಹ್ಯೇತಚ್ಛ್ರೋತವ್ಯಂ ಭೂತಿಮಿಚ್ಛತಾ ॥ ೬ ॥

॥ ಪುಲಸ್ತ್ಯ ಉವಾಚ ॥

ಪ್ರಶ್ನಭಾರಸ್ತ್ವಯಾ ರಾಜನ್ಕೌತುಕಾದೇವ ಕೀರ್ತಿತಃ ।
ಕಥಯಾಮಿ ಹಿ ತೇ ಸರ್ವಂ ಯಥಾಪೂರ್ವಂ ನೃಪೋತ್ತಮ ॥ ೭ ॥

ವಿಷ್ಣೋಃ ಪದಾನುಷಂಗೇಣ ಬಂಧನಂ ಬಾಷ್ಕಲೇರಿಹ ।
ಶ್ರುತಂ ತದ್ಭವತಾ ಸರ್ವಂ ಮಯಾ ತೇ ಪರಿಕೀರ್ತಿತಂ ॥ ೮ ॥

---

೪. ಪುಷ್ಕರವನ್ನು ಯಾರು ಅಂತರಿಕ್ಷಕ್ಕೆ ತೆಗೆದುಕೊಂಡು ಹೋದರು ? ಬಲಿ ಬಂಧನವನ್ನು ಹೇಳಿದಂತೆ ಅದೆಲ್ಲವನ್ನೂ ಹೇಳು.

೫. ವಿಷ್ಣುವು ಭೂಮಿಯನ್ನು ಆಕ್ರಮಿಸಿದುದು ಮೊದಲನೆಯ ಕಾರಣ ವಾಯಿತು. ಆ ಸ್ವಾಮಿಯು ಮಾಡಿದ ಎರಡನೆಯ ಕಾರಣವನ್ನು ಹೇಳು.

೬. ಇದೆಲ್ಲವನ್ನೂ ನಡೆದಂತೆಯೇ ನನಗೆ ಹೇಳು. ಅದು ಪಾಪಕ್ಷಯಕರ ವಾದುದರಿಂದ ಕೇಳತಕ್ಕದ್ದು.

೭. ಪುಲಸ್ತ್ಯನು ಹೇಳಿದನು- ಎಲೈ ದೊರೆಯೇ! ನೀನೇನೊ ಆಸೆಯಿಂದ ಈ ಪ್ರಶ್ನೆಯನ್ನು ಕೇಳಿದೆ. ಆದರೆ ಅದು ಬಹು ದೊಡ್ಡದು. ಆದರೆ ಅದೆಲ್ಲವನ್ನೂ ಪೂರ್ವದಲ್ಲಿ ನಡೆದಂತೆಯೇ ಹೇಳುತ್ತೇನೆ.

೮. ವಿಷ್ಣುವಿನ ಪಾದನ್ಯಾಸದಿಂದ ಬಲಿಯ ಬಂಧನವನ್ನು ಕ್ರಮವಾಗಿ ಹೇಳಿದೆ. ಅದನ್ನು ನೀನು ಕೇಳಿದ್ದೀಯೆ.

ಭೂಯೋಽಪಿ ಬಲಿನಾ ಭೀಷ್ಮ ಪ್ರಾಪ್ತೇ ವೈವಸ್ವತೇಽಂತರೇ ।
ತ್ರೈಲೋಕ್ಯಂ ಬಲಿನಾಕ್ರಾಂತಂ ವಿಷ್ಣುನಾ ಪ್ರಭುವಿಷ್ಣುನಾ ॥ ೯ ॥

ಗತ್ವಾ ಚೈಕಾಕಿನಾ ಯಜ್ಞೇ ತಥಾ ಸಂಯಮಿತೋ ಬಲಿಃ ।
ಭೂಯೋಽಪಿ ದೇವದೇವೇನ ಭೂಮೇಃ ಪ್ರಕ್ರಮಣಂ ಕೃತಂ ॥ ೧೦ ॥

ಪ್ರಾದುರ್ಭಾವೋ ವಾಮನಸ್ಯ ತದಾ ಭೂತೋ ನರಾಧಿಪ ।
ಪುನಸ್ತ್ರಿವಿಕ್ರಮೋ ಭೂತೋ ವಾಮನೋಽಭೂದವಾಮನಃ ॥ ೧೧ ॥

ಉತ್ಪತ್ತಿರೇಷಾ ತೇ ಸರ್ವಾ ಕಥಿತಾ ಕುರುನಂದನ ।
ನಾಗಾನಾಂ ತು ಯಥಾ ತೀರ್ಥಂ ತಚ್ಛೃಣುಷ್ವ ಮಹಾವ್ರತ ॥ ೧೨ ॥

ಅನಂತೋ ವಾಸುಕಿಶ್ಚೈವ ತಕ್ಷಕಶ್ಚ ಮಹಾಬಲಃ ।
ಕರ್ಕೋಟಕಶ್ಚ ನಾಗೇಂದ್ರಃ ಪದ್ಮಶ್ಚಾನ್ಯಸ್ಸರೀಸೃಪಃ ॥ ೧೩ ॥

ಮಹಾಪದ್ಮಸ್ತಥಾ ಶಂಖಃ ಕುಳಿಕಶ್ಚಾಪರಾಜಿತಃ ।
ಏತೇ ಕಶ್ಯಪದಾಯಾದಾ ಏಭಿರಾಪೂರಿತಂ ಜಗತ್ ॥ ೧೪ ॥

---

೯. ಮತ್ತೆ ವೈವಸ್ವತಮನ್ವಂತರದಲ್ಲಿ ಬಲಿಯು ಪ್ರಪಂಚವನ್ನಾಕ್ರಮಿಸಿಕೊಳ್ಳಲು ಆಗಲೂ ವಿಷ್ಣುವು ಮೂರು ಲೋಕಗಳನ್ನೂ ಆಕ್ರಮಿಸಿದನು.

೧೦. ಒಬ್ಬಂಟಿಕನಾಗಿ ಬಲಿಯ ಯಜ್ಞಕ್ಕೆ ಹೋಗಿ ಆಗಲೂ ವಿಷ್ಣುವು ಭಿಕ್ಷೆಬೇಡಿ ಭೂಮಿಯನ್ನು ತ್ರಿವಿಕ್ರಮಾವತಾರದಿಂದ ಆಕ್ರಮಿಸಿದನು.

೧೧. ಆಗಲೂ ಕೂಡ ವಾಮನಾವತಾರವನ್ನು ವಾಮನನಲ್ಲದಿದ್ದರೂ ಮಾಡಿ ತ್ರಿವಿಕ್ರಮಾವತಾರವನ್ನೂ ಮಾಡಿದನು.

೧೨. ಈ ವಾಮನನ ಉತ್ಪತ್ತಿಯನ್ನು ಸೂಕ್ಷ್ಮವಾಗಿ ಹೇಳಿದೆನು. ನಾಗತೀರ್ಥದ ವಿಷಯವನ್ನು ಹೇಳುತ್ತೇನೆ. ಕೇಳು.

೧೩-೧೪. ಅನಂತ, ವಾಸುಕಿ, ತಕ್ಷಕ, ಕರ್ಕೋಟಕ, ಪದ್ಮ, ಮಹಾಪದ್ಮ, ಶಂಖ, ಕುಳಿಕ ಎಂಬುವರು ಕಶ್ಯಪನ ಮಕ್ಕಳು. ಇವರಿಂದಲೇ ಈ ಪ್ರಪಂಚವು ತುಂಬಿದೆ.

ಏತೇಷಾಂ ಸುಪ್ರಸೂತ್ಯಾ ತು ಇದಮಾಪೂರಿತಂ ಜಗತ್ ।
ಕುಟಿಲಾ ಭೀಮಕರ್ಮಾಣ ಸ್ತೀಕ್ಷ್ಣಾಸ್ಯಾಶ್ಚ ವಿಷೋಲ್ಬಣಾಃ ॥ ೧೫ ॥

ದೃಷ್ಟ್ವಾ ಸಂಸ್ಪೃಶ್ಯ ಮನುಜಾನ್ಕುರ್ಭಸ್ಮ ಕ್ಷಣಾತ್ತು ತೇ ।
ತದ್ದರ್ಶನಾದೇವ ನಾಶೋ ಮನುಷ್ಯಾಣಾಂ ನರಾಧಿಪ ॥ ೧೬ ॥

ಅಹನ್ಯಹನಿ ಜಾಯೇತ ಕ್ಷಯಃ ಪರಮದಾರುಣಃ ।
ಆತ್ಮನಸ್ತು ಕ್ಷಯಂ ದೃಷ್ಟ್ವಾ ಪ್ರಜಾಸ್ಸರ್ವಾಸ್ಸಮಸ್ತತಃ ॥ ೧೭ ॥

ಜಗ್ಮುಶ್ಶರಣ್ಯಂ ಶರಣಂ ಬ್ರಹ್ಮಾಣಂ ಪರಮೇಶ್ವರಂ ।
ಇಮಮೇವಾರ್ಥಮುದ್ದಿಶ್ಯ ಪ್ರಜಾಸ್ಸರ್ವಾ ಮಹೀಪತೇ
ಊಚುಃ ಕಮಲಜಂ ದೃಷ್ಟ್ವಾ ಪುರಾಣಂ ಬ್ರಹ್ಮಸಂಜ್ಞಕಂ । ॥ ೧೮ ॥

॥ ಪ್ರಜಾ ಊಚುಃ ॥

ದೇವ ದೇವೇಶ ಲೋಕಾನಾಂ ಪ್ರಸೂತೇ ಪರಮೇಶ್ವರ ।
ತ್ರಾಹಿ ನಸ್ತೀಕ್ಷ್ಣದಂಷ್ಟ್ರಾಣಾಂ ಭುಜಂಗಾನಾಂ ಮಹಾತ್ಮನಾಂ ॥ ೧೯ ॥

---

೧೫-೧೮. ಇವರುಗಳ ಪೀಳಿಗೆಯಿಂದ ಈ ಪ್ರಪಂಚವು ತುಂಬಿಕೊಂಡಿವೆ. ಇವು ವಕ್ರಬುದ್ಧಿಯುಳ್ಳವು. ಭಯಂಕರವಾದ ಕೆಲಸವನ್ನು ಮಾಡುತ್ತವೆ. ಮುಖವು ವಿಷಪೂರಿತವಾದುದು. ಮನುಷ್ಯರನ್ನು ನೋಡಿದಕೂಡಲೇ ಕಚ್ಚಿ ಕ್ಷಣಕಾಲದಲ್ಲಿಯೇ ಭಸ್ಮವನ್ನಾಗಿ ಮಾಡುತ್ತವೆ. ಅವುಗಳನ್ನು ನೋಡುವುದರಿಂದಲೇ ಮನುಷ್ಯರು ಕ್ಷಣ ಕಾಲದಲ್ಲಿ ನಾಶವಾಗುತ್ತಾರೆ. ಈ ರೀತಿಯಾಗಿ ನಿತ್ಯವೂ ಬಹುವಾದ ಕ್ಷಯವು ಅವು ಗಳಿಂದ ಆಗುತ್ತಿದ್ದಿತು. ಆಗ ಪ್ರಜೆಗಳು ತಮಗುಂಟಾಗುತ್ತಿರುವ ನಾಶವನ್ನು ನೋಡಿ ರಕ್ಷಕನಾದ ಬ್ರಹ್ಮನ ಬಳಿಗೆ ಹೋಗಿ ಅವನನ್ನು ನೋಡಿ ಇದೇ ವಿಷಯವನ್ನು ವಿಜ್ಞಾಪಿಸಿಕೊಂಡರು.

೧೯-೨೦. ಪ್ರಜೆಗಳು ಹೇಳಿದರು- ಎಲೈ ದೇವದೇವನೇ! ಲೋಕಗಳಿಗೆಲ್ಲಾ ಉತ್ಪತ್ತಿಸ್ಥಾನನೇ ! ಈ ಕ್ರೂರವಾದ ತೀಕ್ಷ್ಣವಾದ ಹಲ್ಲುಗಳುಳ್ಳ ಹಾವುಗಳಿಂದ

ಅಹನ್ಯಹನಿ ಭೂತಾನಿ ಭಕ್ಷ್ಯಂತೇ ತೈರ್ದುರಾತ್ಮಭಿಃ ।
ನಶ್ಯೇಯುರುರಗೈರ್ದಷ್ಟಾ ಮನುಷ್ಯಾಃ ಪಶವಃ ಪ್ರಭೋ ॥ ೨೦ ॥

ದಿನೇ ದಿನೇ ಭಯಂ ದೇವ ಪಶ್ಯಾಮ ಉರಗಾದ್ಭೃಶಂ ।
ಮನುಷ್ಯಂ ಪಶುಯೂಥಂ ವಾ ತತ್ಸರ್ವಂ ಭಸ್ಮಸಾದ್ಭವೇತ್ ॥ ೨೧ ॥

ತ್ವಯಾ ಸೃಷ್ಟಿಃ ಕೃತಾ ದೇವ ಕ್ಷೀಯತೇ ತು ಭುಜಂಗಮೈಃ ।
ಏತಜ್ಞಾತ್ವಾ ಯದುಚಿತಂ ತತ್ಕುರುಷ್ವ ಪಿತಾಮಹ ॥ ೨೨ ॥

॥ ಬ್ರಹ್ಮೋವಾಚ ॥

ಅಹಂ ರಕ್ಷಾಂ ವಿಧಾಸ್ಯಾಮಿ ಭವತೀನಾಂ ನ ಸಂಶಯಃ ।
ವ್ರಜಧ್ವಂ ಸ್ವನಿಕೇತಾನಿ ನೀರುಜೋ ಗತಸಾಧ್ವಸಾಃ ॥ ೨೩ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತೋ ಗತಾಸ್ಸರ್ವಾ ಬ್ರಹ್ಮಣಾ ವ್ಯಕ್ತಮೂರ್ತಿನಾ ।
ಆಜಗ್ಮುಃ ಪರಮಪ್ರೀತ್ಯಾ ಸ್ತುತ್ವಾ ಚೈವ ಸ್ವಯಂಭುವಂ ॥ ೨೪ ॥

---

ನಮ್ಮನ್ನು ರಕ್ಷಿಸು. ಪ್ರತಿದಿನವೂ ಆ ಕೆಟ್ಟ ಹಾವುಗಳು ಪ್ರಾಣಿಗಳನ್ನು ತಿನ್ನುತ್ತಿರುತ್ತವೆ. ಈರೀತಿ ಅವುಗಳಿಂದ ಕಚ್ಚಲ್ಪಟ್ಟ ಮನುಷ್ಯರೂ ಪಶುಗಳೂ ನಾಶವಾಗುತ್ತಿದ್ದಾರೆ.

೨೧. ಎಲೈ ದೇವನೇ ದಿನದಿನಕ್ಕೂ ಆ ಸರ್ಪಗಳ ದೆಸೆಯಿಂದ ಭಯವು ಹೆಚ್ಚುತ್ತಿದೆ. ಮನುಷ್ಯರಾಗಲಿ ಪಶುಗಳಾಗಲಿ ಅವನ್ನು ಕಂಡೊಡನೆಯೇ ಭಸ್ಮವಾಗುತ್ತಾರೆ.

೨೨. ಎಲೈ ದೇವನೇ ! ನೀನು ಮಾಡಿದ ಸೃಷ್ಟಿಯನ್ನು ಈ ಹಾವುಗಳು ಹಾಳುಮಾಡುತ್ತಿವೆ. ಇದನ್ನು ತಿಳಿದು ನಿನಗೆ ಯಾವುದು ಸರಿಯೆಂದು ತೋರುತ್ತದೆಯೋ ಅದನ್ನು ಮಾಡು.

೨೩. ಬ್ರಹ್ಮನು ಹೇಳಿದನು– ನಾನು ನಿಮ್ಮನ್ನು ಕಾಪಾಡುತ್ತೇನೆ. ನೀವು ಹೆದರಿಕೆಯನ್ನು ಬಿಟ್ಟು ಹೋಗಿರಿ. ಸಂಶಯವಿಲ್ಲ.

೨೪. ಪುಲಸ್ತ್ಯನು ಹೇಳಿದನು– ವ್ಯಕ್ತಮೂರ್ತಿಯಾದ ಬ್ರಹ್ಮನು ಹೀಗೆ ಹೇಳಲು ಆ ಪ್ರಜೆಗಳು ಪ್ರೀತಿಯಿಂದ ಆತನನ್ನು ಸ್ತುತಿಸಿ ಹೊರಟು ಹೋದರು.

ಪ್ರಗತಾಸು ಪ್ರಜಾಸ್ವೇವಂ ಸಮಾಹೂಯ ಭುಜಂಗಮಾನ್ ।
ಶಶಾಪ ಪರಮುಕ್ರುದ್ಧೋ ವಾಸುಕಿಪ್ರಮುಖಾಂಸ್ತಥಾ ॥ ೨೫ ॥

॥ ಬ್ರಹ್ಮೋವಾಚ ॥

ಯಸ್ಮಾನ್ಮತ್ಪ್ರಭವಾನ್ನಿತ್ಯಂ ಕ್ಷಯಂ ನಯತ ಮಾನುಷಾನ್ ।
ಅತೋನ್ಯಸ್ಮಿನ್ಭವೇಭೂಯಾನ್ಮತ್ತಃ ಕೋಪಾತ್ಸುದಾರುಣಾತ್ ॥ ೨೬ ॥

ಭವತಾಂ ಹಿ ಕ್ಷಯೋ ಘೋರೋ ಭಾವ್ಯೋ ವೈವಸ್ವತೇಂತರೇ ।
ತಥಾನ್ಯಃ ಸೋಮವಂಶೀಯೋ ರಾಜಾ ವೈ ಜನಮೇಜಯಃ ॥ ೨೭ ॥

ಧಕ್ಷ್ಯತೇ ಸರ್ಪಸತ್ರೇಣ ಪ್ರದೀಪ್ತೇ ಹವ್ಯವಾಹನೇ ।
ಮಾತೃಷ್ವಸುಶ್ಚ ವಚನಾತ್ತಾರ್ಕ್ಷ್ಯೋ ವೋ ಭಕ್ಷಯಿಷ್ಯತಿ ॥ ೨೮ ॥

ಏವಂ ವೋ ಭವಿತಾ ನಾಶಃ ಸರ್ವೇಷಾಂ ದುಷ್ಟಚೇತಸಾಂ ।
ಶಪ್ತಾಃ ಕುಲಸಹಸ್ರಸ್ಯ ಯಾವದೇಕಂ ಕುಲಂ ಸ್ಥಿತಂ ॥ ೨೯ ॥

---

೨೫. ಆ ಪ್ರಜೆಗಳೆಲ್ಲರೂ ಹೊರಟು ಹೋದ ಮೇಲೆ ಬ್ರಹ್ಮನು ಸರ್ಪಗಳೆಲ್ಲವನ್ನೂ ಕರೆದು ಆ ವಾಸುಕಿ ಪ್ರಮುಖರ ಮೇಲೆ ಬಹು ಕೋಪಗೊಂಡು ಶಪಿಸಿದನು.

೨೬. ಬ್ರಹ್ಮನು ಹೇಳಿದನು– ಎಲೈ ಸರ್ಪಗಳಿರಾ! ನನ್ನಿಂದ ಉತ್ಪನ್ನರಾದ ಮನುಷ್ಯರೇ ಮುಂತಾದುವುಗಳನ್ನು ನಾಶಮಾಡುತ್ತಿರುವುದರಿಂದ ಬೇರೆಯ ಜನ್ಮದಲ್ಲಿ ನೀವು ನನ್ನ ಈ ದಾರುಣಕೋಪದಿಂದ ಕ್ಷಯವನ್ನು ಹೊಂದಿರಿ. ಆದ್ದರಿಂದ ವೈವಸ್ವತಮನ್ವಂತರದಲ್ಲಿ ನಿಮಗೆ ಘೋರವಾದ ಕ್ಷಯವುಂಟಾಗಲಿ. ಎಂದನು.

೨೭-೨೮. ಸೋಮವಂಶದ ರಾಜನಾದ ಜನಮೇಜಯನು ಸರ್ಪಯಾಗ ಮಾಡಿ ಉರಿಯುತ್ತಿರುವ ಬೆಂಕಿಯಲ್ಲಿ ನಿಮ್ಮನ್ನು ಸುಡುತ್ತಾನೆ. ಗರುಡನು ಕೂಡ ಚಿಕ್ಕಮ್ಮನ ಮಾತಿನಂತೆ ನಿಮ್ಮೆಲ್ಲರನ್ನೂ ತಿನ್ನುವನು.

೨೯. ಈರೀತಿ ದುಷ್ಟರಾದ ನಿಮ್ಮಗಳಿಗೆ ನಾಶವುಂಟಾಗಲಿ ಮತ್ತು ನಿಮ್ಮ ಸಾವಿರಕುಲಗಳಲ್ಲಿ ಒಂದು ಕುಲವು ನಿಲ್ಲುವವರೆಗೂ ಎಲ್ಲರೂ ನಾಶವಾಗಿರಿ. ಎಂದು ಶಪಿಸಿದನು.

॥ ಪುಲಸ್ತ್ಯ ಉವಾಚ ॥

ಏವಮುಕ್ತೇ ತು ವೇಪಂತೋ ಬ್ರಹ್ಮಣಾ ಭುಜಗೋತ್ತಮಾಃ ।
ನಿಪತ್ಯ ಪಾದಯೋಸ್ತಸ್ಯ ಇದಮೂಚುರ್ವಚಸ್ತದಾ ॥ ೩೦ ॥

॥ ಸರ್ಪಾ ಊಚುಃ ॥

ಭಗವನ್ಕುಟಿಲಾಜಾತಿರಸ್ಮಾಕಂ ಭವತಾ ಕೃತಾ ।
ವಿಷೋಲ್ಬಣತ್ವಂ ಕ್ರೂರತ್ವಂ ದಂಶಕತ್ವಂ ಚ ನಸ್ಸದಾ ॥ ೩೧ ॥
ಸಂಪಾದಿತಂ ತ್ವಯಾ ದೇವ ಇದಾನೀಂ ಶಪಸೇ ಕಥಂ ।

॥ ಬ್ರಹ್ಮೋವಾಚ ॥

ಯದಿ ನಾಮ ಮಯಾ ಸೃಷ್ಟಾ ಭವಂತಃ ಕುಟಿಲಾಶಯಾಃ ।
ತತಃ ಕಿಂ ಬಹುನಾ ನಿತ್ಯಂ ಭಕ್ಷಯಧ್ವಂ ಗತವ್ಯಥಾಃ ॥ ೩೨ ॥

॥ ನಾಗಾ ಊಚುಃ ॥

ಮರ್ಯಾದಾಂ ಕುರು ದೇವೇಶ ಸ್ಥಾನಂ ಚೈವ ಪೃಥಕ್ಪೃಥಕ್ ।
ಮನುಷ್ಯಾಣಾಂ ತಥಾಸ್ಮಾಕಂ ಸಮಯಂ ದೇವ ಕಾರಯ ॥ ೩೩ ॥

---

೩೦. ಪುಲಸ್ತ್ಯನು ಹೇಳಿದನು- ಬ್ರಹ್ಮನು ಹೀಗೆನ್ನಲು ಆ ಸರ್ಪಗಳು ಒಡನೆಯೇ ಆ ಬ್ರಹ್ಮನ ಕಾಲುಗಳ ಮೇಲೆ ಬಿದ್ದು ಇಂತೆಂದುವು

೩೧ ಸರ್ಪಗಳು ಹೇಳಿದುವು- ಸ್ವಾಮಿಯೇ, ನಮ್ಮ ಜಾತಿಯನ್ನು ಕುಟಿಲವಾಗಿ ಸೃಷ್ಟಿಸಿದವನೇ ನೀನು. ವಿಷವು ಹೆಚ್ಚಾಗಿರುವಂತೆಯೂ, ಕ್ರೂರಿಗಳಾಗಿರುವಂತೆಯೂ, ಕಚ್ಚುವಂತೆಯೂ, ಕಲ್ಪಿಸಿ ಸೃಷ್ಟಿಸಿದವನೇ ನೀನು. ಈಗ ಶಾಪವನ್ನು ನೀನೇ ಹೇಗೆತಾನೇ ಕೊಡುತ್ತೀಯೆ ?

೩೨. ಬ್ರಹ್ಮನು ಹೇಳಿದನು- ಎಲೈ ಸರ್ಪಗಳಿರಾ ! ನಾನು ನಿಮ್ಮನ್ನು ವಕ್ರಬುದ್ಧಿಯುಳ್ಳವರನ್ನಾಗಿ ಸೃಷ್ಟಿಸಿದ ಮಾತ್ರದಿಂದಲೇ ನಿತ್ಯವೂ, ಸ್ವಲ್ಪವೂ ಸಂಕಟಪಡದೆ ಬಹಳ ಪ್ರಾಣಿಗಳನ್ನು ತಿನ್ನುತ್ತಿರಬೇಕೆ ?

೩೩. ನಾಗಗಳು ಹೇಳಿದುವು– ಎಲೈ ದೇವನೇ ! ನಮಗೂ ಮನುಷ್ಯರಿಗೂ ಒಂದು ಎಲ್ಲೆಯನ್ನು ಕಲ್ಪಿಸಿ ಬೇರೆ ಬೇರೆ ಸ್ಥಳಗಳನ್ನು ಗೊತ್ತುಮಾಡು. ಮತ್ತು ಮನುಷ್ಯರಿಗೂ ನಮಗೂ ಒಂದು ನಿಯಮವನ್ನು ಮಾಡು.

ಶಾಪೋ ಯೋ ಭವತಾ ದತ್ತೋ ಮಾನುಷೋ ಜನಮೇಜಯಃ ।
ನಾಶಂ ನಃ ಸರ್ಪಸತ್ರೇಣ ಉಲ್ಬಣಂ ಚ ಕರಿಷ್ಯತಿ ॥ ೩೪ ॥

॥ ಬ್ರಹ್ಮೋವಾಚ ॥

ಜರತ್ಕಾರುರಿತಿ ಖ್ಯಾತೋ ಭವತಾಂ ಬ್ರಹ್ಮವಿತ್ತಮಃ ।
ಜರತ್ಕನ್ಯಾ ತಸ್ಯ ದೇಯಾ ತಸ್ಯಾಂ ಉತ್ಪತ್ಸ್ಯತೇ ಸುತಃ ॥ ೩೫ ॥

ರಕ್ಷಾಕರ್ತಾ ಸ ವೋ ವಿಪ್ರೋ ಭವತಾಂ ಕುಲಪಾಲನಃ ।
ತಥಾ ಕರೋಮಿ ವೋ ನಾಗಾಃ ಸಮಯಂ ಮನುಜೈಸ್ಸಹ ॥ ೩೬ ॥

ತದೇಕಮನಸಸ್ಸರ್ವೇ ಶೃಣುಧ್ವಂ ಮಮ ಶಾಸನಂ ।
ಸುತಳಂ ವಿತಳಂ ಚೈವ ತೃತೀಯಂ ಚ ತಳಾತಳಂ ॥ ೩೭ ॥

ದತ್ತಂ ಚ ತ್ರಿಪ್ರಕಾರಂ ವೈ ಗೃಹಂ ತತ್ರ ಗಮಿಷ್ಯಥ ।
ತತ್ರ ಭೋಗಾನ್ಬಹುವಿಧಾನ್ಭುಂಜಾನಾ ಮಮ ಶಾಸನಾತ್ ॥ ೩೮ ॥

---

೩೪. ನೀನು ಮನುಷ್ಯನಾಗಿರುವ ಜನಮೇಜಯನು ಸರ್ಪಯಾಗದಲ್ಲಿ ನಾಶಮಾಡುವನೆಂದು ಶಾಪಕೊಟ್ಟಿರುವೆಯಷ್ಟೆ. ಆ ಶಾಪವು ನಮ್ಮನ್ನು ಬಹು ಕಷ್ಟಕ್ಕೀಡುಮಾಡಿದೆ.

೩೫. ಬ್ರಹ್ಮನು ಹೇಳಿದನು– ಜರತ್ಕಾರುವೆಂಬುವನು ಬ್ರಹ್ಮಜ್ಞಾನಿಯೊಬ್ಬ ನಿರುವನು. ನಿಮ್ಮ ಜರತ್ತಿನ ಮಗಳಾದ ಜರತ್ಕನ್ಯೆಯನ್ನು ಅವನಿಗೆ ಕೊಡಿರಿ ಅವಳಲ್ಲಿ ಒಬ್ಬ ಮಗನು ಹುಟ್ಟುತ್ತಾನೆ.

೩೬. ಅವನು ನಿಮ್ಮ ಕುಲಪಾಲನೆಯನ್ನೂ ಮಾಡಿ ನಿಮ್ಮನ್ನೂ ರಕ್ಷಿಸುತ್ತಾನೆ. ಆ ರೀತಿಯಾಗಿ ನಿಮ್ಮಗಳಿಗೂ ಆ ಮನುಷ್ಯರಿಗೂ ಕಟ್ಟಳೆಯನ್ನು ಮಾಡುತ್ತೇನೆ

೩೭-೪೦. ಆದ್ದರಿಂದ ಒಂದೇ ಮನಸ್ಸಿನಿಂದ ನನ್ನ ಮಾತನ್ನು ಕೇಳಿರಿ. ಸುತಳ ವಿತಳ, ತಲಾತಳವೆಂಬ ಮೂರು ಲೋಕಗಳನ್ನು ನಿಮಗೆ ಮನೆಯಾಗಿ ಕೊಟ್ಟಿದ್ದೇನೆ ಅಲ್ಲಿಗೆ ನೀವು ಹೋಗಿ ನಾನಾವಿಧವಾದ ಭೋಗಗಳನ್ನು ಅನುಭವಿಸುತ್ತಾ ನನ್ನ

ತಿಷ್ಠಧ್ವಂ ಸಪ್ತಮಂ ಯಾವತ್ಕಾಲಂ ತಂ ತು ಪುನಃಪುನಃ ।
ತತೋ ವೈವಸ್ವತಸ್ಯಾದೌ ಕಾಶ್ಯಪೇಯೋ ಭವಿಷ್ಯತಿ ॥ ೩೯ ॥

ದಾಯಾದಸ್ಸರ್ವದೇವಾನಾಂ ಸುಪರ್ಣಸ್ಯ ಚ ಧೀ ಮತಃ ।
ತದಾ ಪ್ರಸೂತಿಸ್ಸರ್ಪಾಣಾಂ ದಗ್ಧಾ ವೈ ಚಿತ್ರಭಾನುನಾ ।
ಭವತಾಂ ಚೈವ ಸರ್ವೇಷಾಂ ಭವಿಷ್ಯತಿ ನ ಸಂಶಯಃ ॥ ೪೦ ॥

ಯೇ ಯೇ ಕ್ರೂರಾ ಭೋಗಿನೋ ದುರ್ವಿನೀತಾ
ಸ್ತೇಷಾಮನ್ತೋ ಭವಿತಾ ನಾನ್ಯಥೈತತ್ ।
ಕಾಲಪ್ರಾಪ್ತಂ ಭಕ್ಷಯಧ್ವಂ ಚ ಸತ್ವಂ
ತಥಾಪಕಾರೇ ಚ ಕೃತೇ ಮನುಷ್ಯಂ ॥ ೪೧ ॥

ಮಂತ್ರೌಷಧೈರ್ಗಾರುಡೈಶ್ಚೈವ ತಂತ್ರೈ
ರ್ಬಂಧೈರ್ಜುಷ್ಟಾ ಮಾನವಾ ಯೇ ಭವಂತಿ ।
ತೇಭ್ಯೋ ಭೀತೈರ್ವರ್ತಿತವ್ಯಂ ನ ಚಾನ್ಯಾ
ವೃತ್ತಿಃ ಕಾರ್ಯಾ ನಾನ್ಯಥಾವೋವಿನಾಶಃ ॥ ೪೨ ॥

---

ಅಪ್ಪಣೆಯನ್ನು ಪಾಲಿಸುತ್ತ ಇಲ್ಲಿಗೆ ಏಳನೆಯ ಯುಗದವರೆಗೂ ಇರಿ. ಅನಂತರ ವೈವಸ್ವತಮನ್ವಂತರದ ಆದಿಯಲ್ಲಿ ಕಶ್ಯಪನಿಗೆ ಒಬ್ಬ ಮಗನಾಗುವನು. ಅವನು ದೇವತೆಗಳಿಗೂ, ಪಕ್ಷಿಗಳಿಗೂ ದಾಯಾದಿಯು. ಆಗ ನಿಮ್ಮಗಳ ವಂಶವು ಬೆಂಕಿಯಿಂದ ನಾಶವಾಗುತ್ತದೆ.

೪೧. ಕ್ರೂರರೂ, ದುರ್ವಿನೀತರೂ, ಆದ ಸರ್ಪಗಳು ಸಾಯಲೇ ಬೇಕು. ಬೇರೆ ವಿಧಿಯೇ ಇಲ್ಲ, ನಿಮಗೆ ಹಸಿವಿನ ಕಾಲಕ್ಕೆ ಸಿಕ್ಕಿದ ಪ್ರಾಣಿಗಳನ್ನೂ ತಿನ್ನಿರಿ ಮತ್ತು ನಿಮಗೆ ಅಪಕಾರಮಾಡಿದ ಮನುಷ್ಯರುಗಳನ್ನೂ ತಿನ್ನಿರಿ.

೪೨. ಮಂತ್ರ, ಔಷಧ, ಗಾರುಡ ವಿದ್ಯ, ತಂತ್ರಗಳು ಬಂಧಗಳು ಇವನ್ನು ಬಲ್ಲ ಮನುಷ್ಯರಿಗೆ ಹೆದರಿಕೊಂಡು ನಡೆಯಿರಿ. ಅದಕ್ಕೆ ವ್ಯತಿರಿಕ್ತವಾಗಿ ನಡೆಯ ಬೇಡಿರಿ. ಹೀಗೆ ನಡೆದರೆ ನೀವುಗಳು ನಾಶವಾಗುತ್ತೀರಿ.

॥ ಪುಲಸ್ತ್ಯ ಉವಾಚ ॥

ಇತೀರಿತೇ ಬ್ರಹ್ಮಣಾ ವೈ ಭುಜಂಗಾ
ಜಗ್ಮುಸ್ಸ್ವಸ್ಥಾನಂ ಕ್ಷ್ಮಾತಲಾಖ್ಯಂ ಹಿ ಸರ್ವೇ ।
ತಸ್ಥುರ್ಭೋಗಾನ್ಭುಂಜಮಾನಾಶ್ಚ ಸರ್ವೇ
ರಸಾತಲೇ ಲೀಲಯಾ ಸಂಸ್ಥಿತಾಸ್ತೇ ॥ ೪೩ ॥

ಏವಂ ಶಾಪಂ ತು ತೇ ಲಬ್ಧ್ವಾ ಪ್ರಸಾದಂ ಚ ಚತುರ್ಮುಖಾತ್ ।
ತಸ್ಥುಃ ಪಾತಾಳನಿಲಯೇ ಮುದಿತೇನಾಂತರಾತ್ಮನಾ ॥ ೪೪ ॥

ತತಃ ಕಾಲಾಂತರೇ ಭೂತೇ ಪುನರೇವಂ ವ್ಯಚಿಂತಯನ್ ।
ಭವಿತಾ ಭಾರತೋ ರಾಜಾ ಪಾಂಡವೇಯೋಮಹಾಯಶಾಃ ॥ ೪೫ ॥

ಅಸ್ಮಾಕಂ ತು ಕ್ಷಯಕರೋ ದೈವಯೋಗೇನ ಕೇನಚಿತ್ ।
ಕಥಂ ತ್ರಿಭುವನೇ ನಾಥಃ ಸರ್ವೇಷಾಂ ಚ ಪಿತಾಮಹಃ ॥ ೪೬ ॥

---

೪೩. ಪುಲಸ್ತ್ಯನು ಹೇಳಿದನು- ಬ್ರಹ್ಮನು ಹೀಗೆ ಹೇಳಲು ಹಾವುಗಳೆಲ್ಲಾ ಪಾತಾಳಕ್ಕೆ ಹೊರಟುಹೋದುವು. ಅಲ್ಲಿ ಭೋಗಗಳನ್ನು ಅನುಭವಿಸುತ್ತ ಸುಖವಾಗಿ ಇದ್ದುವು

೪೪. ಹೀಗೆ ಆ ಹಾವುಗಳು ಬ್ರಹ್ಮನಿಂದ ಶಾಪವನ್ನೂ, ಅನುಗ್ರಹವನ್ನೂ ಪಡೆದು ಸಂತೋಷದಿಂದ ಪಾತಾಳದಲ್ಲಿದ್ದುವು.

೪೫-೪೬. ಹೀಗೆ ಕೆಲವುಕಾಲ ಕಳೆಯಲು ಮತ್ತೆ ಅವು ಇಂತು ಯೋಚಿಸಿದುವು. ಪಾಂಡವರ ವಂಶಸ್ಥನಾದ ಯಶಸ್ವಿಯಾದ ಜನಮೇಜಯರಾಜನು ಹುಟ್ಟಿ ರಾಜನಾಗುವನು. ಅವನು ಯಾವುದೋ ಒಂದು ನಮ್ಮ ದುರದೃಷ್ಟದಿಂದ ನಮಗೆ ನಾಶಕನಾಗುವನು. ಮೂರು ಲೋಕಕ್ಕೂ ಒಡೆಯನಾದ, ಎಲ್ಲರಿಗೂ ಪಿತಾಮಹನಾದ

ಸೃಷ್ಟಿಕರ್ತಾ ಜಗದ್ವಂದ್ಯಃ ಶಾಪಮಸ್ಮಾಸು ದತ್ತವಾನ್ ।
ದೇವಂ ವಿರಂಚಿನಂ ಮುಕ್ತ್ವಾ ಗತಿರನ್ಯಾ ನ ವಿದ್ಯತೇ ॥ ೪೭ ॥

ವೈರಾಜೇ ಭವನಶ್ರೇಷ್ಠೇ ತತ್ರ ದೇವಸ್ಸ ತಿಷ್ಠತಿ ।
ಸ ದೇವಃ ಪುಷ್ಕರಸ್ಥೋ ವೈ ಯಜ್ಞಂ ಯಜತಿ ಸಾಂಪ್ರತಂ ॥ ೪೮ ॥

ಗತ್ವಾ ಪ್ರಸಾದಯಾಮಸ್ತಂ ವರಂ ತುಷ್ಟಃ ಪ್ರದಾಸ್ಯತಿ ।
ಏವಂ ವಿಂಚಿತ್ಯ ತೇ ಸರ್ವೇ ಆಗತಾಸ್ತೇ ತ್ರಿಪುಷ್ಕರಂ ॥ ೪೯ ॥

ಯಜ್ಞಪರ್ವತಮಾಸಾದ್ಯ ಶೈಲಭಿತ್ತಿಮುಪಾಶ್ರಿತಾಃ ।
ದೃಷ್ಟ್ವಾ ನಾಗಾಂಸ್ತದಾ ಶಾಂತಾನ್ವಾರಿಧಾರೌಘಶೀತಳಾನ್ ॥ ೫೦ ॥

ಉದಙ್ಮುಖೀ ವಿನಿಷ್ಕ್ರಾಂತಾ ಸರ್ವೇಷಾಂ ತು ಸುಖಪ್ರದಾ ।
ನಾಗತೀರ್ಥಂ ತತೋ ಜಾತಂ ಪೃಥಿವ್ಯಾಂ ಖ್ಯಾತಿಮಾಗತಂ ॥ ೫೧ ॥

---

ಸೃಷ್ಟಿಕರ್ತನಾದ ಬ್ರಹ್ಮನು ನಮಗೆ ಶಾಪವನ್ನು ಕೊಟ್ಟನು. ಆ ಬ್ರಹ್ಮನನ್ನು ಬಿಟ್ಟು ನಮಗೆ ಬೇರೆ ಗತಿಯಿಲ್ಲ. ಆತನಾದರೋ ವೈರಾಜವೆಂಬ ಶ್ರೇಷ್ಠವಾದ ಮನೆಯಲ್ಲಿದ್ದಾನೆ. ಈಗ ಅದೇ ಸ್ವಾಮಿಯು ತ್ರಿಪುಷ್ಕರದಲ್ಲಿ ಯಾಗವನ್ನು ಮಾಡುತ್ತಾನೆ. ಅಲ್ಲಿಗೆ ಹೋಗಿ ಆ ಸ್ವಾಮಿಯನ್ನು ಶುಶ್ರೂಷಿಸಿ ಅನುಸರಿಸೋಣ. ಸಂತೋಷಪಟ್ಟು ವರವನ್ನು ಕೊಡುವನು. ಎಂದು ಅವೆಲ್ಲವೂ ಯೋಚಿಸಿ ತ್ರಿಪುಷ್ಕರಕ್ಕೆ ಬಂದುವು.

೫೦-೫೧. ಆಗ ಸರ್ಪಗಳು ಯಜ್ಞಪರ್ವತಕ್ಕೆ ಬಂದು ಬೆಟ್ಟದ ಗೋಡೆಗಳಲ್ಲಿ ಸೇರಿಕೊಂಡವು. ಆಗ ನೀರಿನ ಹನಿಯಿಂದ ಅವು ಶೀತವನ್ನು ಹೊಂದಿದುವು. ಆಗ ಉತ್ತರಾಭಿಮುಖವಾಗಿ ಒಂದು ನದಿಯು ಎಲ್ಲರಿಗೂ ಒಳ್ಳೆಯದಾಗಿ ಹರಿಯಿತು. ಅದೇ ನಾಗತೀರ್ಥವಾಯಿತು. ಅದೇ ರೀತಿಯಾಗಿ ಭೂಮಿಯಲ್ಲಿಯೂ ಪ್ರಖ್ಯಾತವಾಯಿತು.

ನಾಗಕುಂಡಂ ತು ವೈ ಕೇಚಿತ್ಸರಿಚ್ಚಾನ್ಯೇ ತಥಾಬ್ರುರ್ವ ।
ಪುಣ್ಯಕೃತ್ಸರ್ವತೀರ್ಥೇಷು ಸರ್ಪಾಣಾಂ ವಿಷನಾಶನಂ ॥ ೫೨ ॥

ಸ್ನಾನಂ ಕುರ್ವಂತಿ ಯೇ ಮರ್ತ್ಯಾ ಭಕ್ತ್ಯಾ ಶ್ರಾವಣಪಂಚಮೀಂ ।
ನ ತೇಷಾಂ ತು ಕುಲೇ ಸರ್ಪಾಃ ಪೀಡಾಂ ಕುರ್ವಂತಿ ಕರ್ಹಿಚಿತ್ ॥ ೫೩ ॥

ಶ್ರಾದ್ಧಂ ಪಿತೃಣಾಂ ಯೇ ತತ್ರ ಕರಿಷ್ಯಂತಿ ನರಾ ಭುವಿ ।
ಬ್ರಹ್ಮಾ ತುಷ್ಟಃ ಪರಂ ಸ್ಥಾನಂ ದಾಸ್ಯತೇ ನಾತ್ರಸಂಶಯಃ ॥ ೫೪ ॥

ನಾಗಾನಾಂ ತು ಭಯಂ ಜ್ಞಾತ್ವಾ ಬ್ರಹ್ಮಾ ಲೋಕಪಿತಾಮಹಃ ।
ಪೂರ್ವೋಕ್ತಂ ತು ಪುನರ್ವಾಕ್ಯಂ ಬ್ರಹ್ಮಣಾ ಶ್ರಾವಿತಸ್ತಥಾ ॥ ೫೫ ॥

ಪಂಚಮೀ ಸಾತಿಥಿರ್ಧನ್ಯಾ ಸರ್ವಪಾಪಹರಾ ಶುಭಾ ।
ಯತೋಸ್ಯಾಮೇವ ಸುತಿಥೌ ನಾಗಾನಾಂ ಕಾರ್ಯಮುದ್ಭುತಂ ॥ ೫೬ ॥

ಏತಸ್ಯಾಂ ಸರ್ವತೋ ಯಸ್ತು ಕಟ್ವಮ್ಲಂ ಪರಿವರ್ಜಯೇತ್ ।
ಕ್ಷೀರೇಣ ತರ್ಪಯೇನ್ನಾಗಾಂಸ್ತೇ ತು ಯಾಸ್ಯಂತಿ ಮಿತ್ರತಾಂ ॥ ೫೭ ॥

---

೫೨-೫೪. ಆ ಸ್ಥಳವನ್ನು ಕೆಲವರು ನಾಗಕುಂಡವೆಂದೆನ್ನುತ್ತಾರೆ. ಕೆಲವರು ನಾಗನದಿಯೆಂದೆನ್ನುತ್ತಾರೆ. ಇದು ಸರ್ವತೀರ್ಥಗಳಲ್ಲಿಯೂ ಪುಣ್ಯತಮವಾದುದ ಸರ್ಪಗಳ ವಿಷವನ್ನು ನಾಶಮಾಡುತ್ತದೆ. ಶ್ರಾವಣ ಪಂಚಮಿಯ ದಿನ ಯಾರು ಇಲ್ಲಿ ಭಕ್ತಿಯಿಂದ ಸ್ನಾನಮಾಡುವರೋ ಅವರ ಕುಲಕ್ಕೆ ಸರ್ಪಗಳು ಯಾವ ವಿಧವಾದ ತೊಂದರೆಯನ್ನೂ ಮಾಡುವುದಿಲ್ಲ ಅಲ್ಲಿ ಯಾರು ಶ್ರಾದ್ಧಮಾಡುತ್ತಾರೆಯೋ ಅವರಿಗೆ ಬ್ರಹ್ಮನು ತುಷ್ಟನಾಗಿ ಉತ್ತಮಸ್ಥಾನವನ್ನು ಕೊಡುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ.

೫೫-೫೭. ಲೋಕಪಿತಾಮಹನಾದ ಬ್ರಹ್ಮನು ಸರ್ಪಗಳಿಗೆ ಬಂದಿದ್ದ ತೊಂದರೆಯನ್ನು ತಿಳಿದು ಹಿಂದೆ ಹೇಳಿದುದನ್ನೇ ಹೇಳಿದನು. ಆ ಪಂಚಮಿಯು ಧನ್ಯವಾದುದು. ಸರ್ವ ಪಾಪಗಳನ್ನು ನಾಶಮಾಡುತ್ತದೆ. ಯಾತಕ್ಕೆಂದರೆ ಈ ತಿಥಿಯಲ್ಲಿಯೇ ಸರ್ಪಗಳು ಅದ್ಭುತಕಾರ್ಯವನ್ನು ಮಾಡುತ್ತಿದ್ದುವು. ಈ ತಿಥಿಯಲ್ಲಿ ಜನರು ಹುಳಿಯನ್ನೂ, ಕಾರವನ್ನೂ ಬಿಡಬೇಕು. ಹಾಲಿನಿಂದ ಆ ಸರ್ಪಗಳಿಗೆ ತೃಪ್ತಿಪಡಿಸಿದರೆ ಅವು ಮಿತ್ರತ್ವವನ್ನು ಹೊಂದುತ್ತವೆ.

॥ ಭೀಷ್ಮ ಉವಾಚ ॥

ಶಿವದೂತೀ ಯಥಾ ಜಾತಾ ಯೇನ ಚೈವ ನಿವೇಶಿತಾ ।
ತನ್ಮೇ ಸರ್ವಂ ಯಥಾತತ್ವಂ ಭವಾನ್ಶಂಸಿತುಮರ್ಹತಿ ॥ ೫೮ ॥

॥ ಪುಲಸ್ತ್ಯ ಉವಾಚ ॥

ಶಿವಾ ನೀಲಗಿರಿಂ ಪ್ರಾಪ್ತಾ ತಪಸೇ ಧೃತಮಾನಸಾ ।
ರೌದ್ರೀ ಜಟೋದ್ಭವಾ ಶಕ್ತಿಸ್ತಸ್ಯಾಶ್ಶೃಣು ನೃಪ ವ್ರತಂ ॥ ೫೯ ॥

ತಪಃ ಕೃತ್ವಾ ಚಿರಂ ಕಾಲಂ ಪಾಲಯಾಮ್ಯಖಿಲಂ ಜಗತ್ ।
ಏವಮುದ್ದಿಶ್ಯ ಪಂಚಾಗ್ನಿಂ ಸಾಧಯಾಮಾಸ ಭಾಮಿನೀ ॥ ೬೦ ॥

ತಸ್ಯಾಃ ಕಾಲಾಂತರೇ ದೇವ್ಯಾಸ್ತಪಂತ್ಯಾಸ್ತಪ ಉತ್ತಮಂ ।
ರುರುರ್ನಾಮ ಮಹಾತೇಜಾ ಬ್ರಹ್ಮದತ್ತವರೋಽಸುರಃ ॥ ೬೧ ॥

ಸಮುದ್ರಮಧ್ಯೇ ರತ್ನಾಖ್ಯಂ ಪುರಮಸ್ತಿ ಮಹಾಧನಂ ।
ತತ್ರ ರಾಜಾ ಸ ದೈತ್ಯೇಂದ್ರಃ ಸರ್ವದೇವಭಯಂಕರಃ ॥ ೬೨ ॥

---

೫೮. ಭೀಷ್ಮನು ಹೇಳಿದನು- ಶಿವದೂತಿಯು ಹೇಗಾದಳೆಂಬುದನ್ನೂ ಅವಳನ್ನು ಯಾರು ಸ್ಥಾಪಿಸಿದರೆಂಬುದನ್ನೂ ಕ್ರಮವಾಗಿ ನೀನು ನನಗೆ ಹೇಳು.

೫೯. ಪುಲಸ್ತ್ಯನು ಹೇಳಿದನು- ಶಿವೆಯು ತಪಸ್ಸಿನಲ್ಲಿ ಮನಸ್ಸಿಟ್ಟು ತಪಸ್ಸು ಮಾಡಲು ನೀಲಪರ್ವತಕ್ಕೆ ಹೋದಳು. ಅಲ್ಲಿ ಅವಳ ಜಡೆಯಿಂದ ರೌದ್ರೀಶಕ್ತಿಯು ಉತ್ಪನ್ನವಾಯಿತು. ಆ ವ್ರತವನ್ನು ಹೇಳುತ್ತೇನೆ. ಕೇಳು.

೬೦. ಬಹುಕಾಲ ತಪಸ್ಸುಮಾಡಿ ಲೋಕವನ್ನೆಲ್ಲಾ ಕಾಪಾಡುತ್ತೇನೆ ಹೀಗೆಂದು ಪಂಚಾಗ್ನಿಗಳ ಮಧ್ಯದಲ್ಲಿ ಆ ಶಿವೆಯು ತಪಸ್ಸನ್ನು ಮಾಡಿದಳು

೬೧. ಆಕೆಯು ತಪಸ್ಸು ಮಾಡುತ್ತಿದ್ದಾಗ ಇತ್ತ ರುರುವೆಂಬ ರಾಕ್ಷಸನು ಬ್ರಹ್ಮನಿಂದ ವರವನ್ನು ಹೊಂದಿ ಪ್ರಕಾಶಿಸುತ್ತಿದ್ದನು.

೬೨-೬೩. ಸಮುದ್ರದ ಮಧ್ಯದಲ್ಲಿ ಬಹಳ ಹಣವುಳ್ಳ ರತ್ನವೆಂಬ ಹೆಸರುಳ್ಳ ಒಂದು ಪಟ್ಟಣವಿದೆ. ಅಲ್ಲಿ ಆ ರುರುವೆಂಬ ರಾಕ್ಷಸನು ರಾಜನಾಗಿದ್ದಾನೆ. ಅವನು

ಅನೇಕ ಶತಸಾಹಸ್ರ ಕೋಟಿಕೋಟಿಶತೋತ್ತರೈಃ ।
ಅಸುರೈರನ್ವಿತಶ್ಶ್ರೀಮಾನ್ದ್ವಿತೀಯೋ ನಮುಚಿರ್ಯಥಾ ॥ ೬೩ ॥

ಕಾಲೇನ ಮಹತಾ ಸೋಽಥ ಲೋಕಪಾಲಪುರಂ ಯಯೌ ।
ಜಿಗೀಷುಸ್ಸೈನ್ಯಸಂವೀತೋ ದೇವೈರ್ವೈರಮರೋಚಯತ್ ॥ ೬೪ ॥

ಉತ್ತಿಷ್ಠತಸ್ತಸ್ಯ ಮಹಾಸುರಸ್ಯ
ಸಮುದ್ರತೋಯಂ ವವೃಧೇ ತು ವೇಗಾತ್ ।
ಅನೇಕನಕ್ರಗ್ರಹಮೀನಯುಕ್ತಂ
ಸಂಪ್ಲಾವಯತ್ಪರ್ವತ ಸಾನುದೇಶಾನ್ ॥ ೬೫ ॥

ಅಂತಸ್ಥಿತಾನೇಕಸುರಾರಿಸಂಘಂ
ವಿಚಿತ್ರವರ್ಮಾಯುಧಚಿತ್ರಶೋಭಂ ।
ಭೀಮಂ ಬಲಂ ವಲಿತಚಾರುವಿಚಿತ್ರಯೋಧಂ
ವಿನಿರ್ಯಯೌ ಸಿಂಧುಜಲಾದ್ವಿಶಾಲಂ ॥ ೬೬ ॥

---

ಎಲ್ಲಾ ದೇವತೆಗಳಿಗೂ ಭಯಂಕರನು. ಅವನು ಅನೇಕ ಸಾವಿರ ಕೋಟಿಯುಳ್ಳ ರಾಕ್ಷಸರಿಂದ ಕೂಡಿಕೊಂಡು ಎರಡನೆಯ ನಮುಚಿಯಂತಿದ್ದನು.

೬೪. ಬಹುಕಾಲದ ಮೇಲೆ ಲೋಕಪಾಲಕರ ಪಟ್ಟಣಕ್ಕೆ ಅವರನ್ನು ಜಯಿಸಲು ನುಗ್ಗಿ ಅವರೊಡನೆ ವೈರವನ್ನು ಬೆಳೆಸಿದನು.

೬೫. ಅವನು ಆ ಸಮುದ್ರದಿಂದ ಹೊರಗೆ ಬರುತ್ತಿರಲು ಅನೇಕವಾದ ಮೊಸಳೆ ಮೀನು ಮುಂತಾದುವುಗಳೊಡನೆ ಆ ಸಮುದ್ರವು ಉಕ್ಕಿ ಮೇಲಕ್ಕೆದ್ದು ಬೆಟ್ಟಗಳ ತಪ್ಪಲು ಪ್ರದೇಶವನ್ನು ತೊಳೆಯುತ್ತಿದ್ದಿತು.

೬೬. ನಾನಾ ಬಗೆಯಾದ ಆಯುಧಗಳನ್ನುಳ್ಳ ಭಯಂಕರ ಬಲವುಳ್ಳ ವಿಚಿತ್ರರಾದ ಯೋಧರುಳ್ಳ ಆ ಸಮುದ್ರದ ಒಳಗಿರುವ ರಾಕ್ಷಸರ ಗುಂಪು ಬಹುವಾಗಿ ಸಮುದ್ರದ ನೀರಿನಿಂದ ಹೊರಗೆ ಬಂದಿತು.

ತತ್ರ ದ್ವಿಪಾ ದೈತ್ಯಭಟಾಭ್ಯುಪೇತಾಃ
ಸ ಯಾನಘಂಟಾಶ್ಚ ಸಮೃದ್ಧಿಯುಕ್ತಾಃ ।
ವಿನಿರ್ಯಯುಃ ಸ್ವಾಕೃತಿಭಿರ್ಝಷಾಣಾಂ
ಸಮುತ್ವಮುಚ್ಚೈಃ ಖಲು ದರ್ಶಯನ್ತಃ ॥ ೬೭ ॥

ಅಶ್ವಾಸ್ತಥಾ ಕಾಂಚನಸೂತ್ರನದ್ಧಾ
ರೋಹಿತಮತ್ಸ್ಯಾ ಇವ ತೇ ಜಲಾಂತೇ
ವ್ಯವಸ್ಥಿತಾಸ್ತೈಃ ಸಮಮೇವ ತೂರ್ಣಂ
ವಿನಿರ್ಯಯುರ್ಲಕ್ಷಶಃ ಕೋಟಿಶಶ್ಚ ॥ ೬೮ ॥

ತಥಾ ರವಿಸ್ಯಂದನತುಲ್ಯವೇಗಾಃ
ಸುಚಕ್ರದಂಡಾಕ್ಷತವೇಣುಯುಕ್ತಾಃ ।
ರಥಾಶ್ಚ ಯಂತ್ರೋಪರಿಪೀಡಿತಾಂಗಾಃ
ಸ್ಖಲತ್ಪತಾಕಾಃ ಸ್ವನಿತಂ ವಿಚಕ್ರುಃ ॥ ೬೯ ॥

ತಥೈವ ಯೋಧಾಃ ಸ್ವಗಿತೇ ಭವಂತ
ಸ್ತಿತೀರ್ಷವಸ್ತೇ ಪ್ರವರಾಸ್ತ್ರಪಾಣಯಃ
ರಣೇ ರಣೇ ಲಬ್ಧಜಯಾಃ ಪ್ರಹಾರಿಣೋ
ವಿರೇಜುರುಚ್ಚೈರಸುರಾನುಗಾ ಭೃಶಂ ॥ ೭೦ ॥

---

೬೭. ದೈತ್ಯರ ಭಟರಿಂದ ಕೂಡಿದ ಬೆನ್ನಿನ ಮೇಲೆ ಹೊದ್ದಿಕೆಯೂ ಘಂಟೆಯೂ ಉಳ್ಳ, ಸಮೃದ್ಧಿಯಿಂದ ಕೂಡಿದ ಮೀನನ್ನು ಹೋಲುವ ಆನೆಗಳು ತಮ್ಮ ದೊಡ್ಡತನವನ್ನು ತೋರಿಸುತ್ತ ಆ ನೀರಿನಿಂದ ಹೊರಗೆ ಹೊರಟುವು.

೬೮. ಚಿನ್ನದ ದಾರದಿಂದ ಕಟ್ಟಿದ ಕುದುರೆಗಳು ರೋಹಿತವೆಂಬ ಮೀನುಗಳಂತೆ ನೀರಿನ ಮಧ್ಯದಲ್ಲಿ ಇದ್ದು ಆ ಆನೆಗಳೊಡನೆ ಲಕ್ಷಗಟ್ಟಲೆಯಲ್ಲಿಯೂ, ಕೋಟಿಗಟ್ಟಲೆಯಲ್ಲಿಯೂ ಹೊರಹೊಮ್ಮಿದುವು.

೬೯. ಅಂತೆಯೇ ಸೂರ್ಯನ ರಥಕ್ಕೆ ಸಮವಾದ ವೇಗವುಳ್ಳ ಒಳ್ಳೆಯ ಚಕ್ರ ಹಾರೆಕಾಲು ಅಚ್ಚು ಬಿದಿರುಗಳುಳ್ಳ ರಥಗಳು ದೂರಿಯ ಮೇಲೆ ಉಜ್ಜುತ್ತಾ ಪತಾಕಗಳನ್ನು ಅಲ್ಲಾಡಿಸುತ್ತ ಸದ್ದುಗಳನ್ನು ಮಾಡಿದುವು.

೭೦. ಅದೇರೀತಿ ಆನೆಗಳಂತಿರುವ ಉತ್ತಮವಾದ ಅಸ್ತ್ರಗಳುಳ್ಳ ಎಲ್ಲಾ ಯುದ್ಧದಲ್ಲಿಯೂ ಜಯಶಾಲಿಗಳಾದ ಆಳುಗಳು ಆ ರಾಕ್ಷಸರನ್ನು ಅನುಸರಿಸುತ್ತಾ ಪ್ರಕಾಶಿಸಿದರು.

ದೇವೇಷು ಚೈವನಷ್ಟೇಷು ವಿದ್ರುತೇಷು ವಿಶೇಷತಃ ।
ಅಸುರಾಸ್ಸರ್ವದೇವಾನಾಮನ್ವಧಾವಂಸ್ತತಸ್ತತಃ ॥ ೭೧ ॥

ತತೋ ದೇವಗಣಾಸ್ಸರ್ವೇ ದ್ರವಂತೋ ಭಯವಿಹ್ವಲಾಃ ।
ನೀಲಂ ಗಿರಿವರಂ ಜಗ್ಮುರ್ಯತ್ರ ದೇವೀ ಸ್ವಯಂ ಸ್ಥಿತಾ ॥ ೭೨ ॥

ರೌದ್ರೀ ತಮೋನ್ವಿತಾ ಧನ್ಯಾ ಶಾಂಭವೀ ಶಕ್ತಿರುತ್ತಮಾ ।
ಸಂಹಾರಕಾರಿಣೀ ದೇವೀ ಕಾಳರಾತ್ರೀತಿಯಾಂ ವಿದುಃ ॥ ೭೩ ॥

ಸಾ ತು ದೃಷ್ಟ್ವಾ ತದಾ ದೇವಾನ್ಭಯತ್ರಸ್ತಾನ್ವಿಚೇತಸಃ ।
ಪಪ್ರಚ್ಛ ವಿಸ್ಮಯಾದ್ದೇವೀ ಪ್ರೋತ್ಫುಲ್ಲಾಂಬುಜಲೋಚನಾ ॥ ೭೪ ॥

॥ ದೇವ್ಯುವಾಚ ॥

ಪೃಷ್ಠತೋ ವೋ ನ ಪಶ್ಯಾಮಿ ಭಯಂ ಕಿಂಚಿದುಪಾಗತಂ ।
ಕಥಂ ನು ವಿದ್ರುತಾ ದೇವಾ ಸ್ಸರ್ವೇ ಶಕ್ರಪುರಸ್ಸರಾಃ ॥ ೭೫ ॥

---

೭೧. ದೇವತೆಗಳೆಲ್ಲರೂ ಮರೆಯಾಗುತ್ತಾ ಸಿಕ್ಕಿದ ಕಡೆಗೆ ಓಡಿಹೋಗಲು ರಾಕ್ಷಸರು ಆ ದೇವತೆಗಳನ್ನು ಓಡಿಸಿಕೊಂಡು ಹೋದರು.

೭೨. ಆಗ ದೇವತೆಗಳ ಗುಂಪು ಭಯದಿಂದ ಓಡುತ್ತ ದೇವಿಯು ತಪಸ್ಸು ಮಾಡುತ್ತಿದ್ದ ಆ ನೀಲಗಿರಿಗೆ ಹೋಯಿತು.

೭೩. ಆಕೆಯನ್ನು ರೌದ್ರಿಯೆಂದೂ ತಮಸ್ಸಿನಿಂದ ಕೂಡಿರುವಳೆಂದೂ ಉತ್ತಮವಾದ ಶಂಭುಶಕ್ತಿಯೆಂದೂ, ಸಂಹಾರಕಾರಿಣಿಯೆಂದೂ ಕಾಳರಾತ್ರಿಯೆಂದೂ ಕರೆಯುತ್ತಾರೆ.

೭೪. ಆ ದೇವಿಯು ಭಯದಿಂದ ಹೆದರಿರುವ ಬುದ್ಧಿಯು ನಾಶವಾಗಿರುವ ಆ ದೇವತೆಗಳನ್ನು ಆಶ್ಚರ್ಯದಿಂದ ಕಣ್ಣನ್ನು ಅಗಲಿಸಿಕೊಂಡು ನೋಡಿ ಕೇಳಿದಳು.

೭೫. ದೇವಿಯು ಹೇಳಿದಳು- ನಿಮ್ಮ ಹಿಂದೆ ಭಯಪಡಿಸುವ ಪದಾರ್ಥಗಳಾವುವೂ ಇಲ್ಲ. ಆದರೂ ಇಂದ್ರನೇ ಮುಂತಾದ ನೀವೆಲ್ಲರೂ ಏಕೆ ಭಯದಿಂದ ಓಡುತ್ತಿರುವಿರಿ.

॥ ದೇವಾ ಊಚುಃ ॥

ಅಯಮಾಯಾತಿ ದೈತ್ಯೇಂದ್ರೋ ರುರುರ್ಭೀಮಪರಾಕ್ರಮಃ ।
ಚತುರಂಗೇಣ ಸೈನ್ಯೇನ ಮಹತಾ ಪರಿವಾರಿತಃ ।
ತಸ್ಮಾದ್ಭೀತಾ ವಯಂ ದೇವಿ ಭವತೀಂ ಶರಣಂ ಗತಾಃ ॥ ॥ ೭೬ ॥

॥ ಪುಲಸ್ತ್ಯ ಉವಾಚ ॥

ದೇವಾನಾಮಿತಿ ಸಾ ಶ್ರುತ್ವಾ ವಾಕ್ಯಮುಚ್ಚೈರ್ಜಹಾಸ ತು ।
ತಸ್ಯಾ ಹಸನ್ತ್ಯಾ ನಿಶ್ಚೇರುರ್ವರಾಂಗ್ಯಾ ವದನಾತ್ತತಃ ॥ ೭೭ ॥

ಪಾಶಾಂಕುಶಧರಾಸ್ಸರ್ವಾಃ ಪೀನೋನ್ನತಪಯೋಧರಾಃ ।
ಸರ್ವಾಶ್ಶೂಲಧರಾ ಭೀಮಾಃ ಸರ್ವಾದಂಷ್ಟ್ರಾಂಕುಶಾನನಾಃ ॥ ೭೮ ॥

ಬದ್ಧೋರ್ಧ್ವಮುಕುಟಾಸ್ಸರ್ವಾ ಸಂದಷ್ಟದಶನಚ್ಛದಾಃ ।
ಫೂತ್ಕಾರರಾವೈರಶಿವೈಸ್ತ್ರಾಸಯನ್ತ್ಯಶ್ಚ ದಾನವಾನ್ ॥ ೭೯ ॥

ಕಾಶ್ಚಿಚ್ಛುಕ್ಲಾಂಬರಧರಾಃ ಕಾಶ್ಚಿಚ್ಚಿತ್ರಾಂಬರಾಸ್ತಥಾ ।
ಸನೀಲವಸನಾಃ ಕಾಶ್ಚಿದ್ರಕ್ತಪಾನಾತಿಲಾಲಸಾಃ ॥ ೮೦ ॥

---

೭೬. ದೇವತೆಗಳು ಹೇಳಿದರು– ಎಲೈ ದೇವಿಯೇ ಭಯಂಕರ ಪರಾಕ್ರಮವುಳ್ಳ ದೈತ್ಯೇಂದ್ರನಾದ ರುರುವು ಚತುರಂಗ ಸೈನ್ಯದೊಡನೆ ಬರುತ್ತಿರುವನು. ಅಪನಿಂದ ಹೆದರಿ ನಿನ್ನನ್ನು ಶರಣುಹೊಕ್ಕಿದ್ದೇವೆ.

೭೭-೭೯. ದೇವತೆಗಳ ಈ ಮಾತನ್ನು ಕೇಳಿ ಆಕೆಯು ಗಟ್ಟಿಯಾಗಿ ನಕ್ಕಳು. ಹೀಗೆ ನಗುತ್ತಿರುವ ಆವಳ ಬಾಯಿಂದ ಕೆಲವರು ಹೆಂಗಸರು ಹೊರಗೆ ಬಂದರು. ಅವರು ಪಾಶಾಂಕುಶಗಳನ್ನು ಧರಿಸಿದ್ದರು. ದಪ್ಪವಾಗಿಯೂ ಎತ್ತರವಾಗಿಯೂ ಇರುವ ಸ್ತನಗಳನ್ನು ಧರಿಸಿದ್ದರು. ಭಯಂಕರರಾಗಿ ಶೂಲಗಳನ್ನೂ ಹಿಡಿದಿದ್ದರು ಕೋರೆ ದಾಡೆಗಳನ್ನೂ ಧರಿಸಿದ್ದರು. ತಲೆಗೆ ಕಿರೀಟವನ್ನೂ ಹಾಕಿಕೊಂಡಿದ್ದರು. ಕೋಪದಿಂದ ತುಟಿಯನ್ನು ಕಚ್ಚಿಕೊಂಡು ಫೂತ್ಕಾರವನ್ನು ಮಾಡುತ್ತ ದಾನವರನ್ನು ಹೆದರಿಸುತ್ತಿದ್ದರು.

೮೦-೮೧. ಅವರಲ್ಲಿ ಕೆಲವರು ಬಿಳಿಯ ಬಟ್ಟೆಯನ್ನೂ ಕೆಲವರು ಬಣ್ಣಬಣ್ಣದ ಬಟ್ಟೆಯನ್ನೂ, ಕೆಲವರು ಕಪ್ಪುಬಟ್ಟೆಯನ್ನೂ ಉಟ್ಟು ಇಚ್ಛೆಬಂದ ಪಾನಗಳನ್ನು

ನಾನಾರೂಪೈರ್ಮುಖೈಸ್ತಾಸ್ತು ನಾನಾವೇಷವಪುರ್ಧರಾಃ ।
ತಾಭಿರೇವಂ ಕೃತಾ ದೇವೀ ದೇವಾನಾಮಭಯಂಕರೀ ॥ ೮೧ ॥

ಮಾ ಭೈಷ್ಟ ದೇವಾ ಭದ್ರಂ ವೋ ಯಾವದ್ದೂರೇಽಸುರಾದಯಃ ।
ಚತುರಂಗಬಲೋಪೇತೋ ರುರುಸ್ತಾವತ್ಸಮಾಗತಃ ॥ ೮೨ ॥

ತನ್ನೀಲಪರ್ವತವರಂ ದೇವಾನಾಂ ಮಾರ್ಗಮಾರ್ಗಿಣಃ ।
ದೇವಾನಾಮಗ್ರತಸ್ಸೈನ್ಯಂ ದೃಷ್ಟ್ವಾ ದೇವೀ ಸಮಾಕುಲಂ ॥ ೮೩ ॥

ತಿಷ್ಠ ತಿಷ್ಠೇತಿ ಜಲ್ಪಂತೋ ದೈತ್ಯಾಸ್ತೇ ಸಮುಪಾಗತಾಃ ।
ತತಃ ಪ್ರವೃತ್ತಂ ಯುದ್ಧಂ ಚ ತಾಸಾಂ ತೇಷಾಂ ಮಹಾಭಯಂ ॥ ೮೪ ॥

ನಾರಾಚೈರ್ಭಿನ್ನದೇಹಾನಾಂ ದೈತ್ಯಾನಾಂ ಭುವಿ ಸರ್ಪತಾಂ ।
ರೋಷದಂಡಪ್ರಭಗ್ನಾನಾಂ ಸರ್ಪಾಣಾಮಿವ ಸರ್ಪತಾಂ ॥ ೮೫ ॥

ಶಕ್ತಿಭಿರ್ಭಿನ್ನಹೃದಯಾ ಗದಾ ಸಂಚೂರ್ಣಿತೋರಸಃ ।
ಕುಠಾರೋಚ್ಛಿನ್ನಸರಸೋ ಮುಸಲೈರ್ಭಿನ್ನಮಸ್ತಕಾಃ ॥ ೮೬ ॥

---

ಮಾಡುತ್ತ ನಾನಾ ಬಗೆಯಾದ ಮುಖಗಳಿಂದಲೂ ವೇಷಗಳಿಂದಲೂ ಭಯಂಕರರಾಗಿದ್ದರು. ಇಂತಹವರಿಂದ ಆ ದೇವಿಯು ಕೂಡಿಕೊಂಡು ದೇವತೆಗಳಿಗೆ ಅಭಯಂಕರಳಾದಳು.

೮೨. ಎಲೈ ದೇವತೆಗಳಿರಾ ಹೆದರಬೇಡಿ. ನಿಮಗೆ ಒಳ್ಳೆಯದಾಗಲಿ ಆ ಅಸುರನಾದ ರುರುವು ಎಷ್ಟು ದೂರದಲ್ಲಿ ಬರುತ್ತಿರುವನು ? ಎನ್ನುತ್ತಿರುವಷ್ಟರಲ್ಲಿಯೇ ಚತುರಂಗ ಸೇನೆಯೊಡಗೂಡಿದ ರುರುವು ಅಲ್ಲಿಗೆ ಬಂದನು.

೮೩-೮೪. ಆ ರಾಕ್ಷಸರು ದೇವತೆಗಳ ದಾರಿಯನ್ನು ಹುಡುಕುತ್ತಾ ಆ ನೀಲಪರ್ವತಕ್ಕೆ ಬಂದರು. ಮತ್ತು ದೇವತೆಗಳ ಮುಂದೆ ಮಹಾಕಾಳಿಯು ಸೇನೆಯೊಡನೆ ನಿಂತಿರುವುದನ್ನು ನೋಡಿ ನಿಲ್ಲು ನಿಲ್ಲು ಎಂದು ಹೇಳುತ್ತ ಅವರೆಲ್ಲರೂ ಒರಲು ಆ ಎರಡು ಗುಂಪಿಗೂ ಆಗ ಮಹಾಭಯಂಕರವಾದ ಯುದ್ಧವು ನಡೆಯಿತು.

೮೫-೮೬. ಆಗ ನಾರಾಚಗಳಿಂದ ಕತ್ತರಿಸಿದ ದೇಹವುಳ್ಳ ಕೋಪಗೊಂಡು ಶಕ್ತ್ಯಾಯುಧದಿಂದ ಕತ್ತರಿಸಲ್ಪಟ್ಟ ಹೃದಯವುಳ್ಳ ದಂಡಾಯುಧದಿಂದ ಪೆಟ್ಟನ್ನು ತಿಂದು ಭೂಮಿಯಲ್ಲಿ ಹೊರಳುತ್ತಿರುವ ಗದೆಯಿಂದ ಜಜ್ಜಿಹೋದ ಎದೆಯುಳ್ಳ ಕೊಡಲಿಯಿಂದ ಕತ್ತರಿಸಲ್ಪಟ್ಟ ತಲೆಯುಳ್ಳ, ಮುಸಲಾಯುಧದಿಂದ ತಲೆ ಒಡೆದುಕೊಂಡ,

ಭಿನ್ನೋದರಾಸ್ತ್ರಿಶೂಲಾಗ್ರೈಶ್ಛಿನ್ನಗ್ರೀವಾ ವರಾಸಿಭಿಃ ।
ಕ್ಷತಾಶ್ವ ರಥಮಾತಂಗಾ ಪದಾತಾಃ ಪೇತುರಾಹವೇ ॥ ೮೭ ॥

ರಣಭೂಮಿಂ ಸಮಾಸಾದ್ಯ ದೈತ್ಯಾಸ್ಸರ್ವೇ ರುರುಂ ವಿನಾ ।
ತತೋ ಹತಂ ಬಲಂ ದೃಷ್ಟ್ವಾ ರುರುರ್ಮಾಯಾಂ ಸಮಾದದೇ ॥ ೮೮ ॥

ತಯಾ ತಾ ಮೋಹಿತಾ ದೇವ್ಯೋ ದೇವಾಶ್ಚಾಪಿ ರಣಾಜಿರೇ ।
ತಾಮಸ್ಯಾ ಮಾಯಯಾ ದೇವ್ಯಾ ಸರ್ವಮಂಧಂ ತಮೋಭವತ್ ॥ ೮೯ ॥

ತತೋ ದೇವೀ ಮಹಾಶಕ್ತ್ಯಾ ತಂ ದೈತ್ಯಂ ಸಮತಾಡಯತ್ ।
ತಯಾ ತು ತಾಡಿತಸ್ಯಾಜೌ ದೈತ್ಯಸ್ಯ ಪ್ರಗತಂ ತಮಃ ॥ ೯೦ ॥

ಮಾಯಾಯಾಮಥ ನಷ್ಟಾಯಾಂ ತಾಮಸ್ಯಾಂ ದಾನವೋ ರುರುಃ ।
ಪಾತಾಳಮಾವಿಶತ್ತೂರ್ಣಂ ತತ್ರಾಪಿ ಪರಮೇಶ್ವರೀ ॥ ೯೧ ॥

ದೇವೀಭಿಸ್ಸಹಿತಾ ಕ್ರುದ್ಧಾ ಪುರತೋಭಿಮುಖೀ ಸ್ಥಿತಾ ।
ರುರೋಸ್ತು ದಾನವೇಂದ್ರಸ್ಯ ಭೀತಸ್ಯಾಗ್ರೇ ಗತಸ್ಯ ಚ ॥ ೯೨ ॥

---

ತ್ರಿಶೂಲದ ತುದಿಯಿಂದ ಹೊಟ್ಟೆಯನ್ನು ಚುಚ್ಚಿಸಿಕೊಂಡ, ಕತ್ತಿಯಿಂದ ತಲೆಯನ್ನು ಕತ್ತರಿಸಿಕೊಂಡ ನಾಶವಾದ ಆನೆ, ಕುದುರೆ, ರಥಗಳುಳ್ಳ ಆ ಸೈನ್ಯವು ಯುದ್ಧದಲ್ಲಿ ಕೆಳಗೆ ಬಿದ್ದಿತು.

೮೮. ರಣಭೂಮಿಯಲ್ಲಿ ರುರುವು ಹೊರತು ಮಿಕ್ಕವರೆಲ್ಲರೂ ಮಡಿಯಲು ಅದನ್ನು ನೋಡಿ ರುರುವು ಮಾಯೆಯನ್ನು ಆಶ್ರಯಿಸಿದನು.

೮೯. ಆ ಮಾಯೆಯಿಂದ ದೇವತೆಗಳೂ ಆ ಸ್ತ್ರೀಸೈನ್ಯವೂ, ಮೋಹಗೊಳ್ಳಲು ಆ ದೇವಿಯು ಕತ್ತಲೆರೂಪವಾದ ತನ್ನ ಮಾಯೆಯಿಂದ ಎಲ್ಲವನ್ನೂ ಕತ್ತಲೆಯನ್ನಾಗಿ ಮಾಡಿದಳು.

೯೦. ಅನಂತರ ದೇವಿಯು ಮಹಾಶಕ್ತಿಯಿಂದ ಆ ರುರುವನ್ನು ಹೊಡೆಯಲು ಯುದ್ಧರಂಗದ ಆ ರಾಕ್ಷಸಮಾಯೆಯು ನಾಶವಾಯಿತು.

೯೧-೯೪. ಮಾಯೆಯೆಲ್ಲವೂ ನಾಶವಾಗಲು ದಾನವನಾದ ರುರುವು ಜಾಗ್ರತೆಯಾಗಿ ಪಾತಾಳವನ್ನು ಹೊಕ್ಕನು. ಅಲ್ಲಿಗೂ ಆ ದೇವಿಯು ತನ್ನ ಪರಿವಾರದೊಡನೆ ಓಡಿಸಿಕೊಂಡು ಹೋಗಿ ಎದುರಿಸಿದಳು. ದಾನವೇಂದ್ರನು ಭೀತನಾಗಿ ಎದುರಿಗೆ

ನಖಾಗ್ರೇಣ ಶಿರಶ್ಛಿತ್ವಾ ಚರ್ಮ ಚಾದಾಯ ವೇಗಿತಾ ।
ನಿರ್ಯಯಾವಥ ಪಾತಾಳಾತ್ಪುಷ್ಕರಂ ಸಾ ಪುನರ್ಗಿರಿಂ ॥ ೯೩ ॥

ಕನ್ಯಾಸೈನ್ಯೇನ ಮಹತಾ ಬಹುರೂಪೇಣ ಭಾಸ್ವತಾ ।
ದೈವೇಸ್ತು ವಿಸ್ಮಿತೈರ್ದೃಷ್ಟಾ ಚರ್ಮಮುಂಡಧರಾ ರುರೋಃ ॥ ೯೪ ॥

ಸ್ವಕೀಯೇ ತಪಸಸ್ಥಾನೇ ನಿವಿಷ್ಟಾ ಪರಮೇಶ್ವರೀ ।
ತತೋ ದೇವ್ಯೋ ಮಹಾಭಾಗಾಃ ಪರಿವಾರ್ಯ ವ್ಯವಸ್ಥಿತಾಃ ।
ಯಾಚಯಾಮಾಸುರವ್ಯಗ್ರಾಸ್ತಾಂ ದೇವೀಂ ತು ಬುಭುಕ್ಷಿತಾಃ ॥ ೯೫ ॥

॥ ದೇವ್ಯ ಊಚುಃ ॥

ಬುಭುಕ್ಷಿತಾಃ ಸ್ಮೋ ವರದೇ ದೇಹಿ ನೋ ಭೋಜನಂ ಶುಭೇ ॥ ೯೬ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತಾ ತದಾ ದೇವೀ ದಧ್ಯೌ ತಾಸಾಂ ತು ಭೋಜನಂ ।
ನಾಧ್ಯಗಚ್ಛದ್ಯದಾ ತಾಸಾಂ ಭೋಜನಂ ಚಿಂತಿತಂ ಮಹತ್ ॥ ೯೭ ॥

---

ನಿಂತಿರಲು ಉಗುರಿನ ತುದಿಯಿಂದ ತಲೆಯನ್ನು ಕತ್ತರಿಸಿ ಆ ರುರುವಿನ ಚರ್ಮವನ್ನು ತೆಗೆದುಕೊಂಡು ಪಾತಾಳದಿಂದ ಆ ಪುಷ್ಕರಪರ್ವತಕ್ಕೆ ಮತ್ತೆ ಬಂದಳು. ಆ ಕನ್ಯಾಸೈನ್ಯವೆಲ್ಲವೂ ಚಿತ್ರಬಣ್ಣದಿಂದ ಕೂಡಿ ಆಕೆಯನ್ನು ಸುತ್ತಿಕೊಂಡಿದ್ದುವು. ಹೀಗೆ ಸೈನ್ಯದಿಂದ ಆವರಿಸಲ್ಪಟ್ಟು ಆ ರಾಕ್ಷಸನ ಚರ್ಮವನ್ನು ಧರಿಸಿರುವ ಆಕೆಯನ್ನು ದೇವತೆಗಳು ಆಶ್ಚರ್ಯದಿಂದ ನೋಡಿದರು.

೯೫. ಹೀಗೆ ಬಂದು ತಾನು ತಪಸ್ಸು ಮಾಡುತ್ತಿದ್ದ ಸ್ಥಳದಲ್ಲಿ ಆಕೆಯು ನಿಂತಳು ಸೈನಿಕರೆಲ್ಲರೂ ಆ ದೇವಿಯನ್ನು ಸುತ್ತುಗಟ್ಟಿಕೊಂಡು ಹಸಿವುಗೊಂಡವರಾಗಿ ಸ್ವಲ್ಪವೂ ಅಂಜದೆ ಕೇಳಿಕೊಂಡರು.

೯೬. ದೇವಿಯರು ಹೇಳಿದರು—ಎಲೈ ವರದೆಯೇ! ನಾವು ಹಸಿವುಳ್ಳವರಾಗಿದ್ದೇವೆ. ನಮಗೆ ಆಹಾರವನ್ನು ಕೊಡು.

೯೭-೯೮. ಪುಲಸ್ತ್ಯನು ಹೇಳಿದನು—ಇದನ್ನು ಕೇಳಿದ ದೇವಿಯು ಅವರಿಗೆ ಊಟಕ್ಕೋಸ್ಕರ ಯೋಚಿಸಿದಳು. ಆದರೂ ತಾನು ಯೋಚಿಸಿದಂತೆ ಆಹಾರವು

ತದಾ ದಧ್ಯೌ ಮಹಾದೇವಂ ರುದ್ರಂ ಪಶುಪತಿಂ ವಿಭುಂ ।
ಸೋಽಪಿ ಧ್ಯಾನಾತ್ಸಮುತ್ತಸ್ಥೌ ಪರಮಾತ್ಮಾ ತ್ರಿಲೋಚನಃ ॥ ೯೮ ॥

ಉವಾಚ ರುದ್ರಸ್ತಾಂ ದೇವೀಂ ಕಿಂ ತೇ ಕಾರ್ಯಂ ವಿವಕ್ಷಿತಂ ।
ಬ್ರೂಹಿ ದೇವಿ ವರಾರೋಹೇ ಯತ್ತೇ ಮನಸಿ ವರ್ತತೇ ॥ ೯೯ ॥

॥ ಶಿವದೂತ್ಯುವಾಚ ॥

ಛಾಗಗಂಧೇನ ತೇ ದೇವ ಚ್ಛಾಗರೂಪಂ ಚ ದೃಶ್ಯತೇ ।
ಏತಾಸ್ತ್ವಾಂ ಭಕ್ಷಯಿಷ್ಯಂತಿ ಭಕ್ಷ್ಯಂ ಮಾಂಸಂ ಪ್ರದೀಯತಾಂ ॥ ೧೦೦ ॥

ಭಕ್ಷ್ಯಾರ್ಥಿನಾಮಾಸಾಂ ದೇವೇಶ ಕಿಂಚಿದ್ದಾತುಮಿಹಾರ್ಹಸಿ ।
ಖಲೀಕುರ್ವಂತಿ ಮಾಮೇತಾ ಭಕ್ಷ್ಯಾರ್ಥಿನ್ಯೋ ಮಹಾಬಲಾಃ ॥ ೧೦೧ ॥

ಅನ್ಯಥಾ ಮಾಮಪಿ ಬಲಾದ್ಭಕ್ಷಯೇಯುರಿಮಾ ವಿಭೋ
ಏವಂ ಮಾಂ ತು ಸಮಾಲಕ್ಷ್ಯ ಭಕ್ಷ್ಯಂ ಕಲ್ಪಯ ಸತ್ವರಂ ॥ ೧೦೨ ॥

---

ಒದಗದಿರಲು ಮಹಾದೇವನೂ, ಪಶುಪತಿಯೂ, ವಿಭುವೂ ಆದ ರುದ್ರನನ್ನು ಧ್ಯಾನಿಸಿ ದಳು. ಪರಮಾತ್ಮನೂ, ತ್ರಿಲೋಚನನೂ ಆದ ಶಿವನು ಆ ಧ್ಯಾನದಿಂದ ಬಂದನು.

೯೯. ಆಗ ರುದ್ರನು ಎಲೈ ದೇವಿಯೇ ! ನಿನ್ನ ಮನಸ್ಸಿನಲ್ಲಿರುವುದೇನು ? ನೀನು ಏನು ಮಾಡಬೇಕೆಂದಿದ್ದೀಯೆ ? ಅದನ್ನು ಹೇಳೆಂದನು.

೧೦೦. ಶಿವದೂತಿಯು ಹೇಳಿದಳು—ಎಲೈ ಸ್ವಾಮಿಯೆ ! ನಿನ್ನ ರೂಪವು ಆಡಿನ ಗಂಧವುಳ್ಳದ್ದಾಗಿಯೂ, ಆಡಿನ ರೂಪವುಳ್ಳದ್ದಾಗಿಯೂ ಕಾಣುತ್ತಿದೆ ಇವರು ನಿನ್ನನ್ನು ತಿನ್ನುತ್ತಾರೆ. ಇವರಿಗೆ ತಿನ್ನಲು ಮಾಂಸವನ್ನು ಕೊಡು.

೧೦೧-೧೦೨. ಇವರಿಗೆ ತಿನ್ನುವುದಕ್ಕೆ ಏನನ್ನಾದರೂ ಕೊಡು. ಎಲೈ ಸ್ವಾಮಿಯೇ! ಇವರು ಮಹಾಬಲಿಷ್ಠರು. ತಿಂಡಿಯನ್ನಪೇಕ್ಷಿಸುತ್ತಾ ನನ್ನನ್ನು ತೊಂದರೆಪಡಿಸುತ್ತಿದ್ದಾರೆ. ನಾನು ಕೊಡದಿದ್ದರೆ ಬಲಾತ್ಕಾರದಿಂದ ಇವರು ನನ್ನನ್ನೇ ತಿಂದುಬಿಡುವರು. ನನ್ನ ಈ ಸ್ಥಿತಿಯನ್ನು ನೋಡಿ ಇವರಿಗೆ ಬೇಕಾದ ತಿಂಡಿಯನ್ನು ಕಲ್ಪಿಸಿ ಒದಗಿಸಿಕೊಡು.

॥ ರುದ್ರ ಉವಾಚ ॥

ಶಿವದೂತಿ ಬ್ರವೀಮ್ಯೇಕಂ ಪ್ರವೃತ್ತಂ ಯದ್ಯುಗಾಂತರೇ ।
ಗಂಗಾದ್ವಾರೇ ದಕ್ಷಯಜ್ಞಃ ಗಣೈರ್ವಿಧ್ವಂಸಿತೋ ಮಯಾ ॥ ೧೦೩ ॥

ತತ್ರ ಯಜ್ಞೋ ಮೃಗೋ ಭೂತ್ವಾ ಪ್ರದುದ್ರಾವ ಸವೇಗವಾನ್ ।
ಮಯಾ ಬಾಣೇನ ವಿದ್ಧೋಽಸೌ ರುಧಿರೇಣ ಪ್ರಸಿಂಚಿತಃ ॥ ೧೦೪ ॥

ಅಜಗಂಧಸ್ತದಾ ಭೂತೋ ನಾಮ ದೈವೇಸ್ತು ಮೇ ಕೃತಂ ।
ಅಜಗಂಧಸ್ತ್ವಮೇವೇತಿ ದಾಸ್ಯೇ ಚಾನ್ಯತ್ತು ಭೋಜನಂ ॥ ೧೦೫ ॥

ಏತಾಸಾಂ ಶೃಣು ಮೇ ದೇವಿ ಭಕ್ಷ್ಯಮೇಕಂ ಮಯೋದಿತಂ ।
ಕಥ್ಯಮಾನಂ ವರಾರೋಹೇ ಕಾಲರಾತ್ರಿ ಮಹಾಪ್ರಭೇ ॥ ೧೦೬ ॥

ಯಾ ಸ್ತ್ರೀ ಸಗರ್ಭಾ ದೇವೇಶಿ ಅನ್ಯಸ್ತ್ರೀಪರಿಧಾನಕಂ ।
ಪರಿಧತ್ತೇ ಸ್ಪೃಶೇದ್ವಾಪಿ ಪುರುಷಸ್ಯ ವಿಶೇಷತಃ ॥ ೧೦೭ ॥

ಸ ಭಾಗೋಸ್ತು ವರಾರೋಹೇ ಕಾಸಾಂಚಿತ್ಪೃಥಿವೀತಲೇ ।
ಅಪ್ಯೇಕವರ್ಷಂ ಬಾಲಂ ತು ಗೃಹೀತ್ವಾ ತತ್ರ ವೈ ಬಲಾತ್ ॥ ೧೦೮ ॥

---

೧೦೩. ರುದ್ರನು ಹೇಳಿದನು—ಎಲೈ ಶಿವದೂತಿಯೇ, ಒಂದು ವಿಷಯವನ್ನು ಹೇಳುತ್ತೇನೆ, ಕೇಳು. ಅದು ಯುಗಾಂತರದಲ್ಲಿ ನಡೆದ ಕೆಲಸ. ಗಂಗಾದ್ವಾರದಲ್ಲಿ ದಕ್ಷಪ್ರಜಾಪತಿಯ ಯಜ್ಞವನ್ನು ನನ್ನ ಗಣಗಳು ನಾಶಮಾಡಿದರು

೧೦೪. ಅಲ್ಲಿ ಯಜ್ಞವು ಜಿಂಕೆಯ ರೂಪನ್ನು ಹೊಂದಿ ವೇಗದಿಂದ ಓಡುತ್ತಿತ್ತು. ನಾನು ಅದನ್ನು ಬಾಣದಿಂದ ಹೊಡೆದೆನು. ಆ ರಕ್ತವು ನನ್ನ ಮೇಲೆ ಹಾರಿತು.

೧೦೫. ಆಗ ನನ್ನ ಮೈ ಆಡಿನ ವಾಸನೆಯುಳ್ಳದ್ದಾಯಿತು. ದೇವತೆಗಳು ಅಜಗಂಧನೆಂಬುದಾಗಿ ಹೆಸರಿಟ್ಟರು. ನಿಮಗೆ ಬೇರೆ ಭೋಜನವನ್ನು ಕೊಡುತ್ತೇನೆ.

೧೦೬-೧೧೧. ಎಲೈ ದೇವಿಯೇ! ಕೇಳು. ಇವರಿಗೆ ನಾನು ಒಂದು ತಿಂಡಿಯನ್ನು ಹೇಳುತ್ತೇನೆ. ಕಾಳರಾತ್ರಿಯೇ! ಮಹಾಪ್ರಭೆಯೇ, ಗರ್ಭಿಣಿಯಾಗಿರುವ ಹೆಂಗಸು ಮತ್ತೊಬ್ಬಳ ಬಟ್ಟೆಯನ್ನು ಹೊದ್ದರಾಗಲಿ, ಮುಟ್ಟಿದರಾಗಲಿ, ಪರಪುರುಷನ ದಂತೂ ಅತಿಶಯದಿಂದ ಮುಟ್ಟಿದರಾಗಲಿ, ಹೊದ್ದರಾಗಲಿ ಅವರುಗಳು ಇವರಿಗೆ ಭೂಮಿಯಲ್ಲಿ ಆಹಾರವಾಗಿಯಾಗಲಿ ಒಂದು ವರ್ಷದ ಮಗುವನ್ನು ಬಲಾತ್ಕಾರದಿಂದ

ಭುಕ್ತ್ವಾ ತಿಷ್ಠನ್ತು ಸುಪ್ರೀತಾ ಅಪಿವರ್ಷಶತಾನ್ಬಹೂನ್ ।
ಅನ್ಯಾಸ್ತ್ವನ್ಯಾತಿಗೃಹಾಚ್ಛಿದ್ರಂ ಗೃಹ್ಣೀಯುಸ್ತತ್ರ ಪೂಜಿತಾಃ ॥ ೧೦೯ ॥

ನಿವಸಿಷ್ಯಂತಿ ದೇವೇಶಿ ತಥಾ ನ್ಯೈ ಜಾತಹಾರಿಕಾಃ ।
ಗೃಹೇ ಕ್ಷೇತ್ರೇ ತಟಾಕೇ ಚ ವಾಪ್ಯುದ್ಯಾನೇಷು ಚೈವ ಹಿ ॥ ೧೧೦ ॥

ಅನ್ಯೇಷು ಚ ರುದತ್ಯೋ ಯಾಃ ಸ್ತ್ರಿಯಸ್ತಿಷ್ಠಂತಿ ನಿತ್ಯಶಃ ।
ತಾಸಾಂ ಶರೀರಗಾಶ್ಚಾನ್ಯಾಃ ಕಾಶ್ಚಿತ್ತೃಪ್ತಿಮವಾಪ್ನುಯುಃ ॥ ೧೧೧ ॥

॥ ಶಿವದೂತ್ಯುವಾಚ ॥

ಕುತ್ಸಿತಂ ಭವತಾ ದತ್ತಂ ಪ್ರಜಾನಾಂ ಪರಿಪೀಡನಂ ।
ನ ಚ ತೇ ಬುಧ್ಯತೇ ದಾತುಂ ಶಂಕರಸ್ಯ ವಿಶೇಷತಃ ॥ ೧೧೨ ॥

ತ್ರಪಾಕರಂ ಯದ್ಭವತಿ ಪ್ರಜಾನಾಂ ಪರಿಪೀಡಿತಂ ।
ನ ತು ತದ್ಯುಜ್ಯತೇ ದಾತುಮಾಸಾಂ ಭಕ್ಷ್ಯಂ ತು ಶಂಕರ ॥ ೧೧೩ ॥

---

ಹಿಡಿದು ತಿಂದು ನೂರಾರು ವರ್ಷಗಳ ವರೆಗೂ ಸುಪ್ರೀತರಾಗಿರಲಿ ಮತ್ತೆ ಕೆಲವರು ಹೆರಿಗೆಮನೆಯಲ್ಲಿ ಛಿದ್ರವನ್ನು ಹುಡುಕುತ್ತಾ ಅಲ್ಲಿ ಪೂಜೆಯನ್ನು ಹೊಂದುತ್ತಾ ಹುಟ್ಟಿದ್ದನ್ನೇ ಅಪಹರಿಸುತ್ತಾ ವಾಸಮಾಡುತ್ತಿರಲಿ. ಮನೆ, ಬೈಲು, ಕೆರೆ, ಕೊಳ, ಭಾವಿ, ಉದ್ಯಾನ ಇನ್ನೂ ಎಲ್ಲಾ ಸ್ಥಳಗಳಲ್ಲಿಯೂ ಕೂಡ ಯಾವ ಹೆಂಗಸು ಅಳುತ್ತ ಕುಳಿತಿರುವಳೋ ಅವರ ಶರೀರಗಳನ್ನು ಹೊಂದಿ ಮತ್ತೆ ಕೆಲವರು ತೃಪ್ತಿಯನ್ನು ಹೊಂದಿರಲಿ.

೧೧೨-೧೧೩. ಶಿವದೂತಿಯು ಹೇಳಿದಳು- ನೀನು ಕೊಟ್ಟದು ಅಯೋಗ್ಯವೂ ಪ್ರಜೆಗಳಿಗೆ ಪೀಡಾಕರವೂ ಆಗಿದೆ. ಶಂಕರನಾಗಿ ಇವರಿಗೆ ಆಹಾರವನ್ನು ಕೊಡಲು ತಿಳಿಯಲಿಲ್ಲವೇ? ನಾಚಿಕೆಯನ್ನುಂಟುಮಾಡುವುದಾಗಿಯೂ ಪ್ರಜಾಪೀಡಕವಾಗಿಯೂ ಇರುವ ಇದನ್ನು ಆಹಾರವನ್ನಾಗಿ ಕೊಡುವುದು ಶಂಕರನಾದ ನಿನಗೆ ಯೋಗ್ಯವಲ್ಲ.

॥ ರುದ್ರ ಉವಾಚ ॥

ಅವಂತ್ಯಾಂ ತು ಯದಾ ಸ್ಕಂದೋ ಮಯಾ ಪೂರ್ವಂ ತು ಭದ್ರಿತಃ ।
ಚೂಡಾಕರ್ಮಣಿ ವೃತ್ತೇ ಚ ಕುಮಾರಸ್ಯ ತದಾ ಶುಭೇ ॥ ೧೧೪ ॥

ಆಗತ್ಯ ಮಾತರೋ ಭೋಜ್ಯಮಪೂರ್ವಂ ತು ಪ್ರಚಕ್ರಿರೇ ।
ದೇವಲೋಕಾದ್ದೇವಗಣಾ ಮಾತರೋ ಭೋಜ್ಯಮಾಗತಾಃ ॥ ೧೧೫ ॥

ಭುಕ್ತ್ವಾ ಭವಗೃಹೇ ಸರ್ವೇ ಬ್ರಹ್ಮಾದ್ಯಾಸ್ಸುರಸತ್ತಮಾಃ ।
ಗಂಧರ್ವಾಪ್ಸರಸಶ್ಚೈವ ಯಕ್ಷಾಸ್ಸರ್ವೇ ಸಗುಹ್ಯಕಾಃ ॥ ೧೧೬ ॥

ಮೇರ್ವಾದಯಶ್ಶಿಖರಿಣೋ ಗಂಗಾದ್ಯಾಸ್ಸರಿತಸ್ತಥಾ ।
ಸರ್ವೇ ನಾಗಗಣಾಸ್ಸಿದ್ಧಾಃ ಪಕ್ಷಿಣೋಸುರಸೂದನಾಃ ॥ ೧೧೭ ॥

ಡಾಕಿನ್ಯಾ ಸಹ ವೇತಾಳಾ ಭೂತಾಃ ಪ್ರೇತಾ ಗ್ರಹೈಸ್ಸಹ ।
ವಿಮುಕ್ತೇನಾಮುನಾ ದೇವಿ ಯತ್ಸೃಷ್ಟಂ ಬ್ರಹ್ಮಣಾ ಸ್ವಯಂ ।
ತತ್ಸರ್ವಂ ಭೋಜನಂ ತೃಪ್ತ್ಯೈ ಸ್ವಸ್ಥಾನೇಷು ವಿಸರ್ಜಿತಂ ॥ ೧೧೮ ॥

---

೧೧೪-೧೧೮. ರುದ್ರನು ಹೇಳಿದನು– ಅವಂತಿಯಲ್ಲಿ ನಾನು ಸ್ಕಂದನಿಗೆ ಮಂತ್ರವತ್ತಾಗಿ ಚೂಡಾಕರ್ಮ ಮಾಡಿದಾಗ ಸಪ್ತಮಾತೃಗಳು ಬಂದು ಅಡಿಗೆಯನ್ನು ಮಾಡಿದರು. ಅದು ಅಪೂರ್ವವಾಗಿದ್ದಿತು. ಆ ಅಡಿಗೆಯನ್ನು ಊಟಮಾಡಲು ದೇವ ಲೋಕದಿಂದ ದೇವಗಣಗಳೂ, ಮಾತೃಗಳೂ, ಬ್ರಹ್ಮಾದಿದೇವತೆಗಳೂ, ಗಂಧರ್ವರೂ, ಅಪ್ಸರರೂ, ಯಕ್ಷರೂ, ಗುಹ್ಯರೂ, ಮೇರುವೇ ಮುಂತಾದ ಪರ್ವತಗಳೂ ಗಂಗೆಯೇ ಮುಂತಾಗ ನದಿಗಳೂ, ನಾಗರೂ, ಸಿದ್ಧರೂ, ಪಕ್ಷಿಗಳೂ, ಡಾಕಿನಿಗಳೂ, ಬೇತಾಳ ಗಳೂ, ಭೂತಗಳೂ, ಪ್ರೇತಗಳೂ, ಪಿಶಾಚಗಳೂ, ಗ್ರಹಗಳೂ, ಎಲ್ಲರೂ ಬಂದಿದ್ದರು. ಬಹಳ ಹೇಳಿದುದರಿಂದೇನು ? ಬ್ರಹ್ಮನು ಸೃಷ್ಟಿಸಿದವರೆಲ್ಲರೂ ಬಂದಿದ್ದರು. ಅವರೆ ಲ್ಲರೂ ಆ ಅಡಿಗೆಯನ್ನು ಊಟಮಾಡಿ ತಮ್ಮ ತಮ್ಮ ಜಾಗಗಳಲ್ಲಿ ತೃಪ್ತಿ ಹೊಂದಿ ಹೆಚ್ಚಾದುದನ್ನು ಬಿಟ್ಟಿರುವರು. ಅವೆಲ್ಲವೂ ಇವರಿಗೆ ತೃಪ್ತಿಯನ್ನುಂಟುಮಾಡಲಿ.

॥ ಶಿವದೂತ್ಯುವಾಚ ॥

ಆಸಾಂ ಹೃದ್ಯಂ ದೇಹಿ ಭೋಜ್ಯಂ ದುರ್ಲಭಂ ಯತ್ತ್ರಿವಿಷ್ಟಪೇ ।
ಸ್ನೇಹಾಕ್ತಂ ಸಗುಡಂ ಹೃದ್ಯಂ ಸುಪಕ್ವಂ ಪರಿಕಲ್ಪಿತಂ
ಕ್ವಚಿನ್ನಾನ್ಯೇನ ಯದ್ಭುಕ್ತಮಪೂರ್ವಂ ಪರಮೇಶ್ವರ ॥ ೧೧೯ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತಸ್ತದಾ ಸೋಽಪಿ ದೇವದೇವೋ ಮಹೇಶ್ವರಃ ।
ಧರ್ಮಾರ್ಥಂ ಶಾಸ್ತ್ರದೋವಾಚ ಪಾರ್ವತ್ಯಾಶ್ಚೈವ ಸನ್ನಿಧೌ ॥ ೧೨೦ ॥

ಮಯಾ ವೈ ಸಾಧಿತಂ ಚಾನ್ನಂ ಪ್ರಕಾರೈರ್ಬಹುಭಿಃ ಕೃತಂ ।
ತತ್ಸರ್ವಂ ಚ ವ್ಯಯೀಭೂತಂ ನ ಚಾನ್ಯದಿಹವಿದ್ಯತೇ ॥ ೧೨೧ ॥

ಭವತೀಷ್ವಾಗತಾಸ್ವದ್ಯ ಕಿಂ ದೇಯಂ ವೈ ಮಯಾ ಭವೇತ್ ।
ತೃಪ್ತ್ಯರ್ಥಂ ಭವತೀನಾಂ ಯನ್ಮಯಾ ದೇಯಂ ವಿಶೇಷತಃ ॥ ೧೨೨ ॥

---

೧೧೯. ಶಿವದೂತಿಯು ಹೇಳಿದಳು :—ಎಲೈ ದೇವನೇ ! ಇವರಿಗೆ ಮೂರು ಲೋಕದಲ್ಲಿಯೂ ದುರ್ಲಭವಾದ ಮನೋಹರವಾದ ಎಣ್ಣೆ, ಬೆಲ್ಲಗಳಿಂದ ಚೆನ್ನಾಗಿ ಮಾಡಿರುವ ಮತ್ತೊಬ್ಬರೂ ತಿಂದು ಶೇಷವಾಗದ ಅನ್ನವನ್ನು ಕೊಡು.

೧೨೦. ಪುಲಸ್ತ್ಯನು ಹೇಳಿದನು- ಹೀಗೆನ್ನಲು ಆಗ ದೇವದೇವನಾದ ಮಹಾದೇವನು ಪಾರ್ವತಿಯ ಹತ್ತಿರ ಧರ್ಮದಿಂದ ಕೂಡಿದ ಈ ಮಾತನ್ನು ಹೇಳಿದನು.

೧೨೧. ಶಿವನು ಹೇಳಿದನು- ನಾನು ಅನೇಕ ಬಗೆಯಾದ ಅನ್ನಗಳನ್ನು ಮಾಡಿದ್ದೆನು. ಅದೆಲ್ಲವೂ ಕೂಡ ವ್ಯಯವಾಗಿ ಹೋಯಿತು. ಈಗ ಸ್ವಲ್ಪವೂ ಉಳಿದಿಲ್ಲ

೧೨೨. ನೀವೆಲ್ಲರೂ ಈಗ ಇಲ್ಲಿಗೆ ಬಂದಿರುವಾಗ ನಾನು ನಿಮಗೆ ಏನನ್ನು ತಾನೇ ಕೊಡಲಿ ? ಏನು ಮಾಡಲಿ ? ನಿಮ್ಮ ತೃಪ್ತಿಗೋಸ್ಕರ ನಾನು ಏನನ್ನಾದರೂ ಕೊಡಬೇಕು. ಅಲ್ಲವೇ ?

ಆಸ್ವಾದಿತಂ ನ ಚಾನ್ಯೈಸ್ತು ಭಕ್ಷ್ಯಾರ್ಥೇ ಚ ದದಾಮ್ಯಹಂ ।
ಅಧೋಭಾಗೇ ಚ ಮೇ ನಾಭೇಃ ವರ್ತುಲೌ ಫಲಸನ್ನಿಭೌ ॥ ೧೨೩ ॥

ಭಕ್ಷಯಧ್ವಂ ಹಿ ಸಹಿತಾ ಲಂಬೌ ಮೇ ವೃಷಣಾವಿಮೌ ।
ಅನೇನ ಚಾಪಿ ಭೋಜ್ಯೇನ ಪರಾ ತೃಪ್ತಿರ್ಭವಿಷ್ಯತಿ ॥ ೧೨೪ ॥

॥ ಪುಲಸ್ತ್ಯ ಉವಾಚ ॥

ಮಹಾಪ್ರಸಾದಮುದಿತಾ ದೇವ್ಯಃ ಕೃತ್ವಾ ಸ್ತುತಿಂ ಶುಭಾಂ ।
ಪ್ರಣಿಪತ್ಯ ಸ್ಥಿತಾಸ್ಸರ್ವಾ ಇದಂ ವಚನಮಬ್ರವೀತ್ ॥ ೧೨೫ ॥

॥ ರುದ್ರ ಉವಾಚ ॥

ಕರಿಷ್ಯನ್ತಿ ಶುಭಾಚಾರಾನ್ವಿನಾ ಹಾಸ್ಯೇನ ಯೇ ನರಾಃ ।
ತೇಷಾಂ ಧನಂ ಪಶುಃ ಪುತ್ರಾ ದಾರಾಶ್ಚೈವ ಗೃಹಾದಿಕಂ ॥ ೧೨೬ ॥

ಭವಿಷ್ಯತಿ ಮಯಾ ದತ್ತಂ ಯಚ್ಚಾನ್ಯನ್ಮನಸೇಪ್ಸಿತಂ ।
ಹಾಸ್ಯೇನ ದೀರ್ಘದಶನಾ ದರಿದ್ರಾಶ್ಚಾಪಿ ನಿಂದಿತಾಃ ॥ ೧೨೭ ॥

---

೧೨೩–೧೨೪. ಆದ್ದರಿಂದ ಮಿಕ್ಕವರು ರುಚಿ ನೋಡದ ತಿಂಡಿಯನ್ನು ತಿನ್ನುವುದಕ್ಕೆ ನಿಮಗೆ ಕೊಡುತ್ತೇನೆ. ಹೊಕ್ಕುಳಿನ ಈ ಕೆಳಗಡೆ ದುಂಡಾಗಿ ಹಣ್ಣುಗಳಂತೆ ಅಲ್ಲಾಡುತ್ತಿರುವ ನನ್ನ ಈ ತರಡುಗಳನ್ನು ಎಲ್ಲರೂ ಸೇರಿ ತಿನ್ನಿರಿ. ಈ ತಿಂಡಿಯಿಂದ ಬಹುವಾದ ತೃಪ್ತಿಯಾಗುತ್ತದೆ.

೧೨೫. ಪುಲಸ್ತ್ಯನು ಹೇಳಿದನು- ಈ ಮಹಾಪ್ರಸಾದದಿಂದ ಸಂತುಷ್ಟರಾಗಿ ಚೆನ್ನಾಗಿ ಹೊಗಳಿ ನಮಸ್ಕರಿಸಿ ನಿಂತಿರಲು ರುದ್ರನು ಅವರನ್ನು ಕುರಿತು ಇಂತೆಂದನು.

೧೨೬–೧೨೭. ರುದ್ರನು ಹೇಳಿದನು- ಹಾಸ್ಯ ಮಾಡದೆ, ನಗದೆ ಯಾರು ಒಳ್ಳೆಯ ಕೆಲಸಗಳನ್ನು ಮಾಡುತ್ತಾರೆಯೋ ಅವರಿಗೆ ಹಣ, ಪಶು, ಮಕ್ಕಳು, ಹೆಂಡಿರು, ಮನೆ ಮುಂತಾದುವು ಇನ್ನೂ ಏನು ಇಷ್ಟವೋ ಅವೆಲ್ಲವನ್ನೂ ನಾನು ಕೊಡುತ್ತೇನೆ. ನಗುತ್ತಾ ಯಾರು ತಮ್ಮ ಹಲ್ಲೆಲ್ಲವನ್ನೂ ತೋರಿಸುತ್ತಾರೆಯೋ ಅವರು ದರಿದ್ರರೂ ನಿಂದಿತರೂ ಆಗುತ್ತಾರೆ.

ತಸ್ಮಾನ್ನ ನಿಂದಾಹಾಸ್ಯಂ ಚ ಕರ್ತವ್ಯಂ ತು ವಿಜಾನತಾ ।
ಭವತ್ಯೋ ಮಾತರಃ ಖ್ಯಾತಾಹ್ಯಸ್ಮಿಂಲ್ಲೋಕೇ ಭವಿಷ್ಯಥ ॥ ೧೨೮ ॥

ಉಪಹಾರೇ ನರಾ ಯೇ ತು ಕಾರಯಿಷ್ಯಂತಿ ಕೌಮುದೀಂ ।
ಚಣಕಾನ್ಪೂರಕಾಶ್ಚೈವ ವೃಷಣೈಸ್ಸಹ ಪೂಪಕಾನ್ ॥ ೧೨೯ ॥

ಅಪುತ್ರೋ ಲಭತೇ ಪುತ್ರಂ ಧನಾರ್ಥೀ ಲಭತೇ ಧನಂ ।
ರೂಪವಾನ್ಸುಭಗೋ ಭೋಗೀ ಸರ್ವಶಾಸ್ತ್ರವಿಶಾರದಃ ॥ ೧೩೦ ॥

ಹಂಸಯುಕ್ತೇನ ಯಾನೇನ ಬ್ರಹ್ಮಲೋಕೇ ಮಹೀಯತೇ ॥ ೧೩೧ ॥

ಶಿವದೂತಿ ಮಯಾಪ್ಯೇವಂ ತಾಸಾಂ ದತ್ತಂ ತು ಭಕ್ಷಣಂ ।
ತ್ರಪಾಕರಂ ಕಿಂ ಭವತ್ಯಾ ಉಕ್ತೋಽಹಂ ತನ್ನಿಶಾಮಯ ॥ ೧೩೨ ॥

ಜಯಸ್ವ ದೇವಿ ಚಾಮುಂಡೇ ಜಯ ಭೂತಾಪಹಾರಿಣಿ ।
ಜಯ ಸರ್ವಗತೇ ದೇವಿ ಕಾಳರಾತ್ರಿ ನಮೋಽಸ್ತುತೇ ॥ ೧೩೩ ॥

---

೧೨೮. ಆದ್ದರಿಂದ ತಿಳಿದವರು ನಿಂದೆಯನ್ನಾಗಲೀ ಹಾಸ್ಯವನ್ನಾಗಲೀ ಮಾಡ ಬಾರದು. ನೀವೆಲ್ಲರೂ ಮಾತೃಗಳು ಎಂದು ಹೆಸರುಗೊಂಡು ಈ ಲೋಕದಲ್ಲಿರಿ.

೧೨೯-೧೩೧. ಬೆಳದಿಂಗಳಲ್ಲಿ ಉಸಲಿ (ಗುಗ್ಗರಿ) ಪೂರಿ, ಒಬ್ಬಟ್ಟುಗಳನ್ನು ವೃಷಣಗಳೊಡನೆ ಮಾಡಿ ಉಪಹಾರವನ್ನು ಮಾಡಿ ಬಂಧುಗಳೊಡನೆಯೂ, ಸ್ವಜನ ರೊಡನೆಯೂ ತಿಂದರೆ ಅವರಿಗೆ ವಂಶ ಕ್ಷಯಿಸುವುದಿಲ್ಲ. ಹಾಗೆ ಮಾಡಿದವನು ಮಕ್ಕ ಳಿಲ್ಲದಿದ್ದರೆ ಮಕ್ಕಳನ್ನು ಹೊಂದುತ್ತಾನೆ. ಧನಾರ್ಥಿಯಾದವನು ಧನವನ್ನು ಹೊಂದು ತ್ತಾನೆ. ರೂಪವಂತನೂ, ಚೆನ್ನಾಗಿರುವವನೂ, ಭೋಗಿಯೂ, ಸರ್ವಶಾಸ್ತ್ರಗಳನ್ನೂ ಬಲ್ಲವನೂ ಆಗಿ ಹಂಸದಿಂದ ಕೂಡಿರುವ ಯಾನದಿಂದ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

೧೩೨. ಎಲೈ ಶಿವದೂತಿಯೇ ! ಈರೀತಿ ಇವರಿಗೆ ಊಟವನ್ನು ಕೊಟ್ಟಿದ್ದೇನೆ. ಇದು ನಿನಗೇನು ನಾಚಿಕೆಯಾಗುವುದೇ ? ನಾನು ಹೇಳುವುದನ್ನು ಕೇಳು.

೧೩೩-೧೩೪. ಚಾಮುಂಡಿಯೇ ನಿನಗೆ ಜಯವಾಗಲಿ. ಭೂತಗಳನ್ನು ಅಪ ಹರಿಸುವವಳೇ ಜಯವಾಗಲಿ. ಎಲ್ಲ ಕಡೆಯಲ್ಲೂ ಇರುವ ದೇವಿಯೇ ನಿನಗೆ ಜಯ

ವಿಶ್ವಮೂರ್ತೇ ಶುಭೇ ಶುದ್ಧೇ ವಿರೂಪಾಕ್ಷಿ ತ್ರಿಲೋಚನೇ ।
ಭೀಮರೂಪೇ ಶಿವೇ ವಿದ್ಯೇ ಮಹಾಮಾಯೇ ಮಹೋದಯೇ ॥ ೧೩೪ ॥

ಮನೋಜಯೇ ಜಯೇ ಜಂಭೇ ಭೀಮಾಕ್ಷಿ ಕ್ಷುಭಿತಕ್ಷಯೇ ।
ಮಹಾಮಾರಿ ವಿಚಿತ್ರಾಂಗಿ ಗೇಯೇ ನೃತ್ಯಪ್ರಿಯೇ ಶುಭೇ ॥ ೧೩೫ ॥

ವಿಕರಾಳಿ ಮಹಾಕಾಳಿ ಕಾಳಿಕೇ ಪಾಪಹಾರಿಣಿ ।
ಪಾಶಹಸ್ತೇ ದಂಡಹಸ್ತೇ ಭೀಮರೂಪೇ ಭಯಾನಕೇ ॥ ೧೩೬ ॥

ಚಾಮುಂಡೇ ಜ್ವಲಮಾನಾಸ್ಯೇ ತೀಕ್ಷ್ಣದಂಷ್ಟ್ರೇ ಮಹಾಬಲೇ ।
ಸರ್ವಯಾನಸ್ಥಿತೇ ದೇವಿ ಪ್ರೇತಾಸನಗತೇ ಶಿವೇ ॥ ೧೩೭ ॥

ಭೀಮಾಕ್ಷಿ ಭೀಷಣೇ ದೇವಿ ಸರ್ವಭೂತಭಯಂಕರಿ ।
ಕರಾಳಿ ವಿಕರಾಳೀ ಚ ಮಹಾಕಾಳಿ ಕರಾಳಿನಿ ॥ ೧೩೮ ॥

ಕಾಳಿ ಕರಾಳವಕ್ತ್ರಾನ್ತೇ ಕಾಳರಾತ್ರಿ ನಮೋಽಸ್ತು ತೇ ।
ಸರ್ವಶಸ್ತ್ರಭೃತೇ ದೇವಿ ಸರ್ವದೇವನಮಸ್ಕೃತೇ ॥ ೧೩೯ ॥

---

ವಾಗಲಿ. ಕಾಳರಾತ್ರಿಯೇ ನಿನಗೆ ನಮಸ್ಕಾರವು. ವಿಶ್ವಮೂರ್ತಿಯೇ, ಶುಭೆಯೇ, ಶುದ್ಧಳೇ, ವಿರೂಪಾಕ್ಷಿಯೇ, ತ್ರಿಲೋಚನಳೇ, ಭೀಮರೂಪೆಯೇ ಶಿವೆಯೇ. ಮಹಾಮಾಯೆಯೇ, ಮಹೋದಯಳೇ ನಿನಗೆ ಜಯವಾಗಲಿ.

೧೩೫-೧೩೯. ಮನೋಜಯಳೇ, ಜಯೆಯೆ, ಜಂಭೆಯೆ, ಭೀಮಾಕ್ಷಿಯೆ, ಕ್ಷುಭಿತಕ್ಷಯಳೇ, ಮಹಾಮಾರಿಯೆ, ವಿಚಿತ್ರಾಂಗಿಯೆ, ಗೇಯನೃತ್ಯಪ್ರಿಯಳೇ. ಶುಭಳೇ, ವಿಕರಾಳೆಯೆ, ಮಹಾಕಾಳಿಯೆ, ಕಾಳಿಕೆಯೆ, ಪಾಪಹಾರಿಣಿ, ಪಾಶಹಸ್ತೇ, ದಂಡಹಸ್ತೇ, ಭೀಮರೂಪೆ, ಭಯಾನಕಳೆ, ಚಾಮುಂಡಿಯೆ, ಜ್ವಲಮಾನಾಸ್ಯಳೆ, ತೀಕ್ಷ್ಣದಂಷ್ಟ್ರೆಯೆ. ಮಹಾಬಲಳೆ, ಸರ್ವಯಾನದಲ್ಲಿರುವವಳೆ, ಪ್ರೇತವನ್ನು ಆಸನದಲ್ಲಿ ಉಳ್ಳವಳೇ, ಭೀಮಾಕ್ಷಿಯೇ, ಭೀಷಣೆಯೆ, ಸರ್ವಭೂತಭಯಂಕರಿಯೇ, ಕರಾಳಿಯೆ, ಮಹಾಕಾಳಿಯೇ, ಕರಾಳಿನಿಯೆ, ಕಾಳಿಯೆ, ಕರಾಳವಾದ ಮುಖವುಳ್ಳವಳೇ, ಕಾಳರಾತ್ರಿಯೇ ನಿನಗೆ ನಮಸ್ಕಾರವು. ಸರ್ವ ಶಸ್ತ್ರಗಳನ್ನೂ ಧರಿಸಿರುವ ದೇವಿಯೇ, ಸರ್ವದೇವತೆಗಳಿಂದಲೂ ನಮಸ್ಕರಿಸಲ್ಪಟ್ಟವಳೇ ನಿನಗೆ ನಮಸ್ಕಾರವು.

ಏವಂ ಸ್ತುತಾ ಶಿವದೂತೀ ರುದ್ರೇಣ ಪರಮೇಷ್ಠಿನಾ ।
ತುತೋಷ ಪರಮಾ ದೇವೀ ವಾಕ್ಯಂಚೇದಮುವಾಚ ಹ ॥ ೧೪೦ ॥

॥ ಶಿವದೂತ್ಯುವಾಚ ॥

ವರಂ ವೃಣೀಷ್ವ ದೇವೇಶ ಯತ್ತೇ ಮನಸಿ ವರ್ತತೇ ॥ ೧೪೧ ॥

॥ ರುದ್ರ ಉವಾಚ ॥

ಸ್ತೋತ್ರೇಣಾನೇನ ಯೇ ದೇವಿ ಸ್ತೋಷ್ಯಂತಿ ತ್ವಾಂ ವರಾನನೇ ।
ತೇಷಾಂ ತ್ವಂ ವರದಾ ದೇವಿ ಭವ ಸರ್ವಗತಾ ಸತೀ ॥ ೧೪೨ ॥

ಇಮಂ ಪರ್ವತಮಾರುಹ್ಯ ಯಃ ಪೂಜಯತಿ ಭಕ್ತಿತಃ ।
ಸ ಪುತ್ರಪೌತ್ರಪಶುಮಾನ್ಸಮೃದ್ಧಿಮುಪಗಚ್ಛತು ॥ ೧೪೩ ॥

ಯಶ್ಚೇಯಂ ಶೃಣುಯಾದ್ಭಕ್ತ್ಯಾ ತವ ದೇವಿ ಸಮುದ್ಭವಂ ।
ಸರ್ವಪಾಪವಿನಿರ್ಮುಕ್ತಃ ಪರಂ ನಿರ್ವಾಣಮೃಚ್ಛತು ॥ ೧೪೪ ॥

ಭ್ರಷ್ಟರಾಜ್ಯೋ ಯದಾ ರಾಜಾ ನವಮ್ಯಾಂ ನಿಯತಶ್ಶುಚಿಃ ।
ಅಷ್ಟಮ್ಯಾಂ ಚ ಚತುರ್ದಶ್ಯಾಮುಪವಾಸೀ ನರೋತ್ತಮಃ ॥ ೧೪೫ ॥

---

೧೪೦. ರುದ್ರನು ಈರೀತಿ ಶಿವ ದೂತಿಯನ್ನು ಸ್ತುತಿಸಲು ಆಕೆಯು ಸಂತೋಷಗೊಂಡು ಇಂತೆಂದಳು.

೧೪೧. ಶಿವದೂತಿಯು ಹೇಳಿದಳು– ಎಲೈ ದೇವೇಶನೇ ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೋ ಎಂದಳು.

೧೪೨. ರುದ್ರನು ಹೇಳಿದನು—ಎಲೈ ದೇವಿಯೇ ! ಯಾರು ನಿನ್ನನ್ನು ಈ ಸ್ತೋತ್ರದಿಂದ ಸ್ತುತಿಸುತ್ತಾರೆಯೋ, ಅವರಿಗೆ ನೀನು ಎಲ್ಲಾ ಕಡೆಯಲ್ಲೂ ಇದ್ದುಕೊಂಡು ವರವನ್ನು ಕೊಡುವವಳಾಗು.

೧೪೩. ಈ ಪರ್ವತವನ್ನು ಹತ್ತಿ ಯಾರು ಭಕ್ತಿಯಿಂದ ಪೂಜಿಸುತ್ತಾರೆಯೋ ಅವರಿಗೆ ಮಕ್ಕಳು, ಮೊಮ್ಮಕ್ಕಳು, ಹಸುಗಳು ಎಲ್ಲವೂ ವೃದ್ಧಿಯನ್ನು ಹೊಂದಲಿ.

೧೪೪-೧೪೭. ಈ ಸ್ತೋತ್ರವನ್ನು ಭಕ್ತಿಯಿಂದ ಕೇಳಿದವನು ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಮೋಕ್ಷವನ್ನು ಹೊಂದುತ್ತಾನೆ. ರಾಜ್ಯವನ್ನು

ಸಂವತ್ಸರೇಣ ಲಭತೇ ರಾಜ್ಯಂ ನಿಷ್ಕಂಟಕಂ ಪುನಃ ।
ಏಷಾ ಜ್ಞಾನಾತ್ಮಿಕಾ ಶಕ್ತಿರ್ವೇದವೇದಾಂಗಗಾಮಿನೀ ॥ ೧೪೬ ॥

ಏಷೈವ ರಾಜಸೀ ಶಕ್ತಿರ್ವೈಷ್ಣವೀ ಪರಿಕೀರ್ತಿತಾ ।
ಏಷಾ ರೌದ್ರೀ ತು ಯಾ ಶಕ್ತಿಃ ಶಿವದೂತೀತಿ ಕಥ್ಯತೇ ॥ ೧೪೭ ॥

ಯ ಏವಂ ಶೃಣುಯಾನ್ನಿತ್ಯಂ ಭಕ್ತ್ಯಾ ಪರಮಯಾ ನೃಪ ।
ಸರ್ವಪಾಪವಿನಿರ್ಮುಕ್ತೋ ಪರಂ ನಿರ್ವಾಣಮಾಪ್ನುಯಾತ್ ॥ ೧೪೮ ॥

ಯಶ್ಚೈತತ್ಪಠತೇ ಭಕ್ತ್ಯಾ ಸ್ನಾತ್ವಾ ವೈ ಪುಷ್ಕರೇ ಜಲೇ ।
ಸರ್ವಮೇತತ್ಫಲಂ ಪ್ರಾಪ್ಯ ಬ್ರಹ್ಮಲೋಕೇ ಮಹೀಯತೇ ॥ ೧೪೯ ॥

ಯತ್ರೈತಲ್ಲಿಖಿತಂ ಗೇಹೇ ಸದಾ ತಿಷ್ಠತಿ ಪಾರ್ಥಿವ ।
ನ ತತ್ರಾಗ್ನಿಭಯಂ ಘೋರಂ ಸರ್ಪಚೋರಾದಿಸಂಭವಂ ॥ ೧೫೦ ॥

ಯಶ್ಚೇದಂ ಪೂಜಯೆದ್ಭಕ್ತ್ಯಾ ಪುಸ್ತಕೇಽಪಿ ಸ್ಥಿತಂ ಬುಧಃ ।
ತೇನ ಚೇಷ್ಟಂ ಭವೇತ್ಸರ್ವಂ ತ್ರೈಲೋಕ್ಯಂ ಸ ಚರಾಚರಂ ॥ ೧೫೧ ॥

---

ಕಳೆದುಕೊಂಡ ರಾಜನು ನವಮಿ, ಅಷ್ಟಮೀ ಅಥವಾ ಚತುರ್ದಶಿಗಳಲ್ಲಿ ಉಪವಾಸ ವಿದ್ದು ಶುಚಿಯಾಗಿ ಪೂಜಿಸಿ ಈ ಸ್ತೋತ್ರವನ್ನು ಪಠಿಸಿದರೆ ಒಂದು ವರ್ಷದೊಳಗೆ ರಾಜ್ಯವನ್ನು ಹೊಂದುತ್ತಾನೆ. ವೇದವೇದಾಂಗಗಳಲ್ಲಿ ಉತ್ತಮವಾಗಿ ಇದೇ ಜ್ಞಾನಾತ್ಮಕ ವಾದ ಶಕ್ತಿಯೆಂದು ಹೇಳಲ್ಪಟ್ಟಿದೆ. ಇದೇನೇ ರಾಜಸೀ ಶಕ್ತಿಯೆಂಬುದಾಗಿಯೂ, ವೈಷ್ಣವೀ ಶಕ್ತಿಯೆಂಬುದಾಗಿಯೂ, ಹೇಳಲ್ಪಟ್ಟಿದೆ ಇದೇನೇ ರುದ್ರನ ಸಂಬಂಧ ವಾದ ಶಕ್ತಿ ಎಂದೂ, ಶಿವದೂತೀ ಎಂದೂ, ಹೇಳಲ್ಪಟ್ಟಿದೆ.

೧೪೮. ಉತ್ತಮವಾದ ಭಕ್ತಿಯಿಂದ ಯಾವನು ಇದನ್ನು ಕೇಳುತ್ತಾನೆಯೋ ಅವನು ಪಾಪಗಳೆಲ್ಲವನ್ನೂ ಕಳೆದುಕೊಂಡು ಸ್ವರ್ಗವನ್ನು ಹೊಂದುತ್ತಾನೆ

೧೪೯. ಪುಷ್ಕರಜಲದಲ್ಲಿ ಸ್ನಾನಮಾಡಿ ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸಿ ದವನು ಈ ಫಲವನ್ನೆಲ್ಲಾ ಹೊಂದಿ ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.

೧೫೦-೧೫೧. ಇದನ್ನು ಬರೆದು ಮನೆಯಲ್ಲಿಟ್ಟಿದ್ದರೆ ಬೆಂಕಿ, ಸರ್ಪ, ಕಳ್ಳರ ಭಯವಿರುವುದಿಲ್ಲ. ಪುಸ್ತಕದಲ್ಲಿ ಬರೆದಿಟ್ಟು ಯಾರು ಇದನ್ನು ಪೂಜಿಸುವರೋ ಅವರು ಚರಾಚರದಿಂದ ಕೂಡಿದ ಮೂರುಲೋಕವನ್ನೂ ತೃಪ್ತಿಪಡಿಸಿದಂತಾಗುತ್ತದೆ.

ಜಾಯಂತೇ ಬಹವಃ ಪುತ್ರಾ ಧನಧಾನ್ಯಂ ವರಾಸ್ತ್ರಿಯಃ ।
ರತ್ನಾನ್ಯಶ್ವಾ ಗಜಾ ಭೃತ್ಯಾಸ್ತೇಷಾಮಾಶು ಭವಂತಿ ಚ ।
ಯತ್ರೇದಂ ಲಿಖ್ಯತೇಗೇಹೇ ತಸ್ಯೇದಂ ಜಾಯತೇ ಧ್ರುವಂ ॥ ೧೫೨ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಸೃಷ್ಟಿ ಖಂಡೇ ಉಮಾಮಹೇಶ್ವರ ಸಂವಾದೇ ಶಿವದೂತೀಚರಿತಂ ನಾಮ ಷಡ್ವಿಂಶೋಧ್ಯಾಯಃ

---

೧೫೨. ಅವನಿಗೆ ಬಹು ಜನ ಮಕ್ಕಳಾಗುತ್ತಾರೆ. ಧನ, ಧಾನ್ಯ, ಉತ್ತಮ ಸ್ತ್ರೀಯರು, ರತ್ನಗಳು, ಕುದುರೆಗಳು, ಆನೆಗಳು, ಆಳುಗಳು ಬೇಗ ಅವರಿಗೆ ಹೆಚ್ಚುತ್ತಾರೆ. ಯಾವನು ಈ ಸ್ತೋತ್ರವನ್ನು ಮನೆಯಲ್ಲಿ ಬರೆಯುವನೋ ಅವನ ಮನೆಯಲ್ಲಿ ಇವು ಆಗುತ್ತವೆ. ಇದು ನಿಶ್ಚಯವು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದ ಉಮಾಮಹೇಶ್ವರ ಸಂವಾದದಲ್ಲಿ ಶಿವದೂತಿ ಚರಿತ್ರೆಯೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

—x—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಸಪ್ತವಿಂಶೋಽಧ್ಯಾಯಃ ॥



॥ ಭೀಷ್ಮ ಉವಾಚ ॥

**ಕೇನ ಕರ್ಮವಿಪಾಕೇನ ಪ್ರೇತತ್ವಮುಪಜಾಯತೇ ।**
**ಕೇನ ಚಾತ್ರ ಪ್ರಮುಚ್ಯೇತ ತನ್ಮೇ ಶಂಸಿತುಮರ್ಹಸಿ** ॥ ೧ ॥

॥ ಪುಲಸ್ತ್ಯ ಉವಾಚ ॥

**ಅಹಂ ತೇ ಸಂಪ್ರವಕ್ಷ್ಯಾಮಿ ಸರ್ವಮೇತದಶೇಷತಃ ।**
**ಯಚ್ಛ್ರುತ್ವಾ ನ ಪುನರ್ಮೋಹಂ ಯಾಸ್ಯತೇ ನೃಪಸತ್ತಮ** ॥ ೨ ॥

**ಯೇನ ವೈ ಜಾಯತೇ ಪ್ರೇತೋ ಯೇನ ಚಾತ್ರ ಪ್ರಮುಚ್ಯತೇ ।**
**ಪ್ರಾಪ್ನೋತಿ ನರಕಂ ಘೋರಂ ದುಸ್ತರಂ ತ್ರಿದಶೈರಪಿ** ॥ ೩ ॥

---

## ಇಪ್ಪತ್ತೇಳನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು– ಯಾವ ಪಾಪಶೇಷದಿಂದ ಪ್ರೇತತ್ವವು ಬರುತ್ತದೆ ? ಏನುಮಾಡಿದರೆ ಹೋಗುತ್ತದೆ ? ಅದನ್ನು ಹೇಳು.

೨. ಪುಲಸ್ತ್ಯನು ಹೇಳಿದನು- ಇದೆಲ್ಲವನ್ನೂ ನಾನು ನಿನಗೆ ಪೂರ್ತಿಯಾಗಿ ಹೇಳುತ್ತೇನೆ. ಇದನ್ನು ಕೇಳುವುದರಿಂದ ಮನುಷ್ಯನು ಮತ್ತೆ ಮೋಹವನ್ನು ಹೊಂದುವುದಿಲ್ಲ.

೩. ಆ ಪ್ರೇತವು ನರಕವನ್ನು ಹೊಂದಿ ಮುಕ್ತನಾಗುವಿಕೆಯನ್ನೂ ಅವನು ಪ್ರೇತತ್ವವನ್ನು ಹೊಂದುವಿಕೆಯನ್ನೂ ಹೇಳುತ್ತೇನೆ. ಈ ಪ್ರೇತತ್ವವು ದೇವತೆಗಳಿಗೂ ತಪ್ಪಿದುದಲ್ಲ.

ಸತಾಂ ಸಂಭಾಷಣೇ ಚೈವ ಪುಣ್ಯತೀರ್ಥಾನುಕೀರ್ತನೇ ।
ಮಾನವಾಸ್ತು ಪ್ರಮುಚ್ಯಂತೆ ಆಪನ್ನಾಃ ಪ್ರೇತಯೋನಿಷು ॥ ೪ ॥

ಶ್ರೂಯತೇ ಹಿ ಪುರಾ ಭೀಷ್ಮ ಬ್ರಾಹ್ಮಣಸ್ಸಂಶಿತವ್ರತಃ ।
ಪೃಥುಸ್ಸರ್ವತ್ರ ವಿಖ್ಯಾತಃ ಸಂತೋಷೇ ಚ ಸದಾ ಸ್ಥಿತಃ ॥ ೫ ॥

ಸ್ವಾಧ್ಯಾಯಯುಕ್ತೋ ಹೋಮೇನ ನಿತ್ಯಯುಕ್ತಶ್ಚ ಯೋಗವಿತ್ ।
ಜಪಯಜ್ಞವಿಧಾನೇನ ಯುಕ್ತಃ ಕಾಲಂ ಕ್ಷಿಪೇತ್ತು ಸಃ ॥ ೬ ॥

ಯುಕ್ತಶ್ಶಮದಮಾಭ್ಯಾಂ ಚ ಕ್ಷಾನ್ತ್ಯಾ ಯುಕ್ತಶ್ಚ ತತ್ವವಿತ್ ।
ಅಹಿಂಸಾಹಿತಚಿತ್ತಶ್ಚ ನಿತ್ಯಯುಕ್ತಸ್ಸ್ವಕರ್ಮವಿತ್ ॥ ೭ ॥

ಬ್ರಹ್ಮಚರ್ಯಸಮಾಯುಕ್ತಸ್ತಪೋಯುಕ್ತಸ್ತು ಸಂಸ್ಥಿತಃ ।
ಯುಕ್ತಸ್ಸ ಪಿತೃಕಾರ್ಯೇಷು ಯುಕ್ತೋ ವೈದಿಕಕರ್ಮಸು ॥ ೮ ॥

---

೪. ಪ್ರೇತಯೋನಿಯನ್ನು ಹೊಂದಿದವರು ಸತ್ಪುರುಷರೊಡನೆ ಮಾತನಾಡುವುದರಿಂದಲೂ, ಪುಣ್ಯತೀರ್ಥಗಳ ಹೆಸರನ್ನು ಹೇಳುವುದರಿಂದಲೂ ಮುಕ್ತರಾಗುತ್ತಾರೆ.

೫. ಎಲೈ ಭೀಷ್ಮನೇ ! ಒಂದು ಕಥೆಯು ಪ್ರಸಿದ್ಧವಾಗಿದೆ. ಅದೇನೆಂದರೆ ಪೂರ್ವದಲ್ಲಿ ನಿಯಮಿಷ್ಠನಾದ ಪೃಥುವೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಪ್ರಸಿದ್ಧನಾದವನು. ಯಾವಾಗಲೂ ಸಂತೋಷದಲ್ಲೇ ಇರುವವನು.

೬. ವೇದಾಧ್ಯಯನ ಮಾಡುತ್ತಿದ್ದನು. ನಿತ್ಯವಿಧಿಯನ್ನು ಬಿಡದಿದ್ದವನು. ಯೋಗಿಯಾಗಿದ್ದನು ಜಪಯಜ್ಞದವಿಧಿಯಿಂದ ಕೂಡಿ ಯಾವಾಗಲೂ ಕಾಲ ಕಳೆಯುತ್ತಿದ್ದನು.

೭. ಶಮದಮೆಗಳುಳ್ಳವನು. ಕ್ಷಮಾಶೀಲನು. ತತ್ವವನ್ನು ಬಲ್ಲವನು. ಹಿಂಸೆಯಿಂದ ದೂರನಾಗಿದ್ದನು. ತನ್ನ ಕರ್ಮಗಳನ್ನು ನಿತ್ಯವೂ ಬಿಡದೆ ಮಾಡುತ್ತಾ ಇದ್ದನು.

೮. ಬ್ರಹ್ಮಚರ್ಯದಿಂದ ಕೂಡಿದ್ದನು. ತಪಸ್ವಿಯು, ಪಿತೃಕಾರ್ಯಗಳನ್ನು ಬಿಡದೆ ಮಾಡುತ್ತಿದ್ದನು. ವೇದೋಕ್ತವಾದ ಕರ್ಮಗಳನ್ನು ಬಿಡುತ್ತಿರಲಿಲ್ಲ.

ಪರಲೋಕಭಯೋ ಯುಕ್ತೋ ಯುಕ್ತಸ್ಸತ್ಯವಚಃ ಪ್ರತಿ ।
ಯುಕ್ತೋ ಮಧುರವಾಕ್ಯೇಷು ಯುಕ್ತಶ್ಚಾತಿಥಿಪೂಜನೇ ॥ ೯ ॥

ಇತಿ ಯೋಗಸಮಾಯುಕ್ತಃ ಸರ್ವದ್ವಂದ್ವವಿಸರ್ಜನೇ ।
ಸ್ವಕರ್ಮವಿಧಿಸಂಯುಕ್ತೋ ಯುಕ್ತಿಸ್ಸ್ವಾಧ್ಯಾಯಕರ್ಮಸು ॥ ೧೦ ॥

ಏವಂ ಕರ್ಮಾಣಿ ಕುರ್ವನ್ಸಃ ಸಂಸಾರವಿಜಿಗೀಷಯಾ ।
ಬಹೂನ್ಯಬ್ದಾನ್ಯತೀತಾನಿ ಬ್ರಾಹ್ಮಣಸ್ಯ ವನೇ ಸತಃ ॥ ೧೧ ॥

ತಸ್ಯ ಬುದ್ಧಿರಿಯಂ ಜಾತಾ ತೀರ್ಥಾಭಿಗಮನಂ ಪ್ರತಿ ।
ಪುಣ್ಯೈಸ್ತೀರ್ಥಜಲೈರೇತತ್ಪುಣ್ಯಂ ಕುರ್ಯಾಂ ಕಳೇಬರಂ ॥ ೧೨ ॥

ಪ್ರಯತಃ ಪುಷ್ಕರೇ ಸ್ನಾತ್ವಾ ಭಾಸ್ಕರಸ್ಯೋದಯಂ ಪ್ರತಿ ।
ಕೃತಜಾಪ್ಯನಮಸ್ಕಾರೋಪ್ಯಧ್ವಾನಂ ಪ್ರತಿಪದ್ಯತೇ ॥ ೧೩ ।

---

೯. ಪರಲೋಕಕ್ಕೆ ಹೆದರುತ್ತಿದ್ದನು. ಸತ್ಯವನ್ನೇ ಆಡುತ್ತಿದ್ದನು. ಮಧುರವಾದ ಮಾತನ್ನೇ ಆಡುತ್ತಿರುವನು. ಅತಿಥಿಗಳನ್ನು ಪೂಜಿಸುತ್ತಿದ್ದನು.

೧೦. ಯೋಗಿಯು ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸುವನು. ತನ್ನ ಕರ್ಮದ ವಿಧಿಯನ್ನು ಸ್ವಲ್ಪವೂ ಬಿಡದಿರುವನು. ಅಧ್ಯಯನವನ್ನು ಬಿಟ್ಟವನೇ ಅಲ್ಲ.

೧೧. ಈ ರೀತಿ ಕಾಡಿನಲ್ಲಿಯೇ ಇದ್ದುಕೊಂಡು ಸಂಸಾರವನ್ನು ಜಯಿಸಬೇಕೆಂಬ ಬುದ್ಧಿಯಿಂದ ಕರ್ಮಗಳನ್ನು ಮಾಡುತ್ತಿದ್ದನು. ಇವನಿಗೆ ಹೀಗೆಯೇ ಬಹು ದಿನಗಳು ಕಳೆದುವು.

೧೨. ಪುಣ್ಯತೀರ್ಥಗಳ ನೀರಿನಿಂದ ಈ ದೇಹವನ್ನು ಪುಣ್ಯವುಳ್ಳದ್ದನ್ನಾಗಿ ಮಾಡಿಕೊಳ್ಳಬೇಕು. ಎಂದು ಯೋಚಿಸಿ ತೀರ್ಥಯಾತ್ರೆಯಲ್ಲಿ ಬುದ್ಧಿಯನ್ನಿಟ್ಟನು.

೧೩. ಸೂರ್ಯೋದಯದ ವೇಳೆಯಲ್ಲಿಯೇ ಆ ಪುಷ್ಕರದಲ್ಲಿ ಸ್ನಾನಮಾಡಿ ಸಂಧ್ಯಾವಂದನೆ, ಜಪ, ಸೂರ್ಯ ನಮಸ್ಕಾರಗಳನ್ನೂ ಮಾಡಿಕೊಂಡು ದಾರಿಯಲ್ಲಿ ಹೊರಟನು.

ಅಗ್ರತಃ ಪಂಚ ಪುರುಷಾನಪಶ್ಯದತಿಭೀಷಣಾನ್ ।
ಅರಣ್ಯೇ ಕಂಟಕೇ ದೇಶೇ ನಿರ್ಜಲೇ ವೃಕ್ಷವರ್ಜಿತೇ ॥ ೧೪ ॥

ತಾನ್ದೃಷ್ಟ್ವಾ ವಿಕೃತಾಕಾರಾನ್ಸುಘೋರಾನ್ಪಾಪದರ್ಶನಾನ್ ।
ಈಷತ್ಸಂತ್ರಸ್ತಹೃದಯೋ ವ್ಯತಿಷ್ಠನ್ನಿಶ್ಚಲಸ್ತದಾ ॥ ೧೫ ॥

ಅವಲಂಬ್ಯ ತತೋ ಧೈರ್ಯಂ ಭಯಾದುದ್ವಿಗ್ನಮಾನಸಃ ।
ಪಪ್ರಚ್ಛ ಮಧುರಾಭಾಷೀ ಕೇ ಯೂಯಂ ವಿಕೃತಾನನಾಃ ॥ ೧೬ ॥

ಕಿಂ ವಾ ಕೇನ ಕೃತಂ ಕರ್ಮ ಯೇನ ಪ್ರಾಪ್ತಾಶ್ಚ ವೈಕೃತಂ ।
ಕಥಮೇವಂವಿಧಾಸ್ಸರ್ವೇ ಪ್ರಸ್ಥಿತಾ ವಾಥ ಚಾಧ್ವನಿ ॥ ೧೭ ॥

॥ ಪ್ರೇತಾ ಊಚುಃ ॥

ಕ್ಷುತ್ಪಿಪಾಸಾರ್ದಿತಾ ನಿತ್ಯಂ ಮಹಾದುಃಖಸಮಾವೃತಾಃ ।
ಹೃತಬೋಧಾ ವಯಂ ಸರ್ವೇ ನಷ್ಟಸಂಜ್ಞಾ ವಿಚೇತಸಃ ॥ ೧೮ ॥

---

೧೪. ಮುಳ್ಳುಗಿಡಗಳುಳ್ಳ ಕಾಡಾಗಿರುವ ನೀರು ನೆರಳಿಲ್ಲದಿರುವ ಆ ಅರಣ್ಯ ದಲ್ಲಿ ಅತಿ ಭಯಂಕರರಾದ ಐದು ಜನ ಪುರುಷರನ್ನು ಎದುರಿಗೆ ನೋಡಿದನು.

೧೫. ಆ ವಿಕಾರವುಳ್ಳ ಘೋರರಾದ ಮನುಷ್ಯರನ್ನು ನೋಡಿ ಸ್ವಲ್ಪ ಹೆದರಿ ಅಲುಗದೆ ನಿಂತುಕೊಂಡನು.

೧೬. ಭಯದಿಂದ ಹೆದರಿದ್ದರೂ ಸ್ವಲ್ಪ ಧೈರ್ಯವನ್ನು ಹೊಂದಿ ಒಳ್ಳೆಯ ಮಾತಿನಿಂದ ವಿಕಾರವಾದ ಮುಖವುಳ್ಳ ನೀವಾರು ? ಎಂದು ಕೇಳಿದನು.

೧೭. ಇದೇನು ? ಯಾರು ಹೀಗೆ ಮಾಡಿದವರು ? ಯಾಕೆ ಈ ವಿಕಾರ ವನ್ನು ಹೊಂದಿದಿರಿ ? ಎಲ್ಲರೂ ಏಕೆ ಹೀಗಾಗಿದ್ದೀರಿ ? ಒಟ್ಟಿಗೆ ಹೀಗೆ ದಾರಿಯಲ್ಲಿ ಹೊರಡಲು ಕಾರಣವೇನು ?

೧೮. ಪ್ರೇತರು ಹೇಳಿದರು- ನಾವು ಯಾವಾಗಲೂ ಹಸಿವು ಬಾಯಾರಿಕೆ ಗಳಿಂದ ಕೂಡಿದ್ದೇವೆ. ಮಹಾ ದುಃಖವು ನಮ್ಮನ್ನು ಬಾಧಿಸುತ್ತಿದೆ. ನಮಗೆ ಬುದ್ಧಿಯೇ ನಷ್ಟವಾಗಿದೆ. ಜ್ಞಾನವೇ ಇಲ್ಲ. ಮನಸ್ಸು ಸ್ತಿಮಿತದಲ್ಲಿಯೇ ಇಲ್ಲ.

ನ ಜಾನೀಮೋ ದಿಶಃ ಕ್ವಾಪಿ ವಿದಿಶಶ್ಚಾಪಿ ಕಾಶ್ಚನ ।
ನಾನ್ತರಿಕ್ಷಂ ಮಹೀಂ ಚಾಪಿ ನ ಜಾನೀಮೋ ದಿವಂ ತಥಾ ॥ ೧೯ ॥

ಯದೇತದ್ದುಃಖಮಾಖ್ಯಾತಮೇತದೇವ ಸುಖಂ ಭವೇತ್ ।
ಪ್ರಭಾತಮಿವ ಸಂಭಾತಿ ಭಾಸ್ಕರೋದಯದರ್ಶನಾತ್ ॥ ೨೦ ॥

ಅಹಂ ಪರ್ಯುಷಿತೋ ನಾಮ ಸೂಚೀಮುಖಸ್ತಥಾಪರಃ ।
ಶೀಘ್ರಗೋ ರೋಹಕಶ್ಚೈವ ಪಂಚಮೋ ಲೇಖಕಸ್ತಥಾ ॥ ೨೧ ॥

॥ ಬ್ರಾಹ್ಮಣ ಉವಾಚ ॥

ಪ್ರೇತಾನಾಂ ಕರ್ಮಜಾತಾನಾಂ ನಾಮಾನಿ ಭವತಃ ಕೃತಃ ।
ಕಿಂತತ್ಕಾರಣಮುದ್ದಿಶ್ಯ ಯೇನ ಯೂಯಂ ಸನಾಮಕಾಃ ॥ ೨೨ ॥

॥ ಪ್ರೇತಾ ಊಚುಃ ॥

ಅಹಂ ಸ್ವಾದು ತದಾ ಭುಂಜೇ ದದ್ಯಾಂ ಪರ್ಯುಷಿತಂ ದ್ವಿಜೇ ।
ಏತತ್ಕಾರಣಮುದಿಶ್ಯ ನಾಮ ಪರ್ಯುಷಿತೋ ಮಮ ॥ ೨೩ ॥

---

೧೯. ನಮಗೆ ದಿಕ್ಕುಗಳು, ವಿದಿಕ್ಕುಗಳು ಅಂತರಿಕ್ಷ, ಭೂಮಿ, ಮೇಲು ಭಾಗ ಕೆಳಭಾಗಗಳೊಂದೂ ಗೊತ್ತೇ ಇಲ್ಲ.

೨೦. ಈ ದುಃಖವನ್ನು ನಾವು ಹೇಳಿಕೊಂಡುದರಿಂದಲೇ ಇದೇ ನಮಗೆ ಸುಖವಾಗಿ ಕಾಣುತ್ತಿದೆ. ಸೂರ್ಯೋದಯವು ಕಾಣುತ್ತಿರುವುದರಿಂದ ಬೆಳಗಿನ ಹೊತ್ತಿನಂತೆ ಕಾಣುತ್ತಿದೆ.

೨೧. ನಾನು ಪರ್ಯುಷಿತನು. ಈತನು ಸೂಚೀಮುಖನು. ಇವನು ಶೀಘ್ರಗನು. ಅವನು ರೋಹಕನು. ಐದನೆಯವನು. ಲೇಖಕನು. ಈ ರೀತಿ ನಮ್ಮ ಹೆಸರುಗಳು.

೨೨. ಬ್ರಾಹ್ಮಣನು ಹೇಳಿದನು- ಪ್ರೇತರ ಕರ್ಮದಿಂದ ಹುಟ್ಟಿದ ಹೆಸರುಗಳೇ ನಿಮಗಿವೆ. ಯಾವ ಕಾರಣದಿಂದ ನಿಮಗೆ ಆ ಹೆಸರು ಬಂದಿತು ?

೨೩. ಪ್ರೇತಗಳು ಹೇಳಿದುವು- ನಾನು ಒಳ್ಳೆಯ ರುಚಿಯಾದ ಅನ್ನವನ್ನು ಊಟಮಾಡುತ್ತಿದ್ದೆನು. ಬ್ರಾಹ್ಮಣರಿಗೆ ಹಳಸಿದುದನ್ನು ದಾನಮಾಡುತ್ತಿದ್ದೆನು. ಈ ಕಾರಣದಿಂದ ನನಗೆ ಪರ್ಯುಷಿತನೆಂದು ಹೆಸರಾಯಿತು.

ಸೂಚಿತಾಬಹವೋನೇನ ವಿಪ್ರಾ ಅನ್ನಾದಿಕಾಂಕ್ಷಿಣಃ ।
ಏತತ್ಕಾರಣಮುದ್ದಿಶ್ಯ ಸೂಚೀಮುಖಾಭಿತೋ ಮತಃ ॥ ೨೪ ॥

ಶೀಘ್ರಂ ಗತೋಽಸ್ಮಿ ವಿಪ್ರೇಣ ಯಾಚಿತಃ ಕ್ಷುಧಿತೇನ ವೈ ।
ಏತತ್ಕಾರಣಮುದ್ದಿಶ್ಯ ಶೀಘ್ರಗೋ ದ್ವಿಜಸತ್ತಮ ॥ ೨೫ ॥

ಗೃಹೋಪರಿ ಸದಾ ಸ್ವಾದು ಭುಂಜೇ ದ್ವಿಜಭಯೇನ ತು ।
ಉದ್ವಿಗ್ನಮಾನಸಸ್ತತ್ರ ತೇನ ವೈ ರೋಹಕಸ್ಮೃತಃ ॥ ೨೬ ॥

ಮೌನೇನಾಪಿ ಸ್ಥಿತೋ ನಿತ್ಯಂ ಯಾಚಿತೋ ವಿಲಿಖನ್ಮಹೀಂ ।
ಅಸ್ಮಾಕಮಪಿ ಪಾಪಿಷ್ಠೋ ಲೇಖಕೋ ನಾಮ ಏಷ ವೈ ॥ ೨೭ ॥

ಕೃಚ್ಛ್ರೇಣ ಲೇಖಕೋ ಯಾತಿ ರೋಹಕಸ್ತು ಅವಾಕ್ಶಿರಾಃ ।
ಶೀಘ್ರಗಃ ಪಂಗುತಾಂ ಪ್ರಾಪ್ತಾಃ ಸೂಚೀ ಸೂಚಿಮುಖೋಽಭವತ್ ॥ ೨೮ ॥

---

೨೪. ಇವನಿಂದ ಬಹುಜನ ಅನ್ನಾದಿಗಳನ್ನು ಕೇಳಿದ ಬ್ರಾಹ್ಮಣರು ಸೂಜಿಯಿಂದ ಚುಚ್ಚಲ್ಪಟ್ಟರು. ಆ ಕಾರಣದಿಂದ ಈತನು ಸೂಚೀಮುಖನಾದನು.

೨೫. ಹಸಿವುಗೊಂಡ ಬ್ರಾಹ್ಮಣನು ಬಂದು ಯಾಚಿಸಲು ಅನ್ನ ಹಾಕದೆ ಶೀಘ್ರವಾಗಿ ಹೊರಟುಹೋದುದರಿಂದ ನನಗೆ ಶೀಘ್ರಗನೆಂದು ಹೆಸರಾಯಿತು.

೨೬. ಯಾಚಕ ಬ್ರಾಹ್ಮಣರ ಹೆದರಿಕೆಯಿಂದ ಮನೆಯ ಮೇಲೆ ಮಹಡಿಯಲ್ಲಿ ಕುಳಿತುಕೊಂಡು ರುಚಿಯಾದ ಅನ್ನವನ್ನು ತಿನ್ನುತ್ತಿದ್ದೆನು. ಆದ್ದರಿಂದ ನಾನು ರೋಹಕನಾದೆ.

೨೭. ಈತನನ್ನು ಯಾಚಿಸಿದರೆ ಮೌನದಿಂದಿರುತ್ತ ಭೂಮಿಯನ್ನು ಕೆರೆಯುತ್ತ ಇದ್ದುದರಿಂದ ಈತನಿಗೆ ಲೇಖಕನೆಂದು ಹೆಸರಾಯಿತು.

೨೮. ಲೇಖಕನು ಬಹು ಕಷ್ಟದಿಂದ ಹೋಗುತ್ತಾನೆ. ರೋಹಕನು ತಲೆಯನ್ನು ತಗ್ಗಿಸಿಕೊಂಡು ನಡೆಯುತ್ತಾನೆ. ಶೀಘ್ರಗನು ಕುಂಟನಾದನು. ಸೂಚೀಮುಖನು ಮುಖದಲ್ಲಿ ಸೂಜಿಯನ್ನು ಹೊಂದಿದನು.

ಪರ್ಯುಷಿತೋ ಲಂಬಗ್ರೀವೋ ಲಂಬೋದರ ಉದಾಹೃತಃ ।
ಬೃಹದ್ವೃಷಣಲಂಬೋಷ್ಠಃ ಪಾಪಾದಸ್ಮಾದಜಾಯತ ॥ ೨೯ ॥

ಏತತ್ತೇ ಸರ್ವಮಾಖ್ಯಾತಮಾತ್ಮವೃತ್ತಾಂತಸಂಭವಂ ।
ಪೃಚ್ಛಸ್ವ ಯದಿ ತೇ ಶ್ರದ್ಧಾ ಪೃಷ್ಟಾಶ್ಚ ಕಥಯಾಮಹೇ ॥ ೩೦ ॥

॥ ಬ್ರಾಹ್ಮಣ ಉವಾಚ ॥

ಯೇ ಜೀವಾ ಭುವಿ ತಿಷ್ಠಂತಿ ಸರ್ವೇಸ್ಯಾಹಾರಮೂಲಕಾಃ ।
ಯುಷ್ಮಾಕಮಪಿ ಚಾಹಾರಂ ಶ್ರೋತುಮಿಚ್ಛಾಮಿ ತತ್ವತಃ ॥ ೩೧ ॥

॥ ಪ್ರೇತಾ ಊಚುಃ ॥

ಶೃಣುಷ್ವಾಹಾರಮಸ್ಮಾಕಂ ಸರ್ವಸತ್ವವಿಗರ್ಹಿತಂ ।
ಯಂ ಶ್ರುತ್ವಾ ನಿಂದಸೇ ಬ್ರಹ್ಮನ್ಭೂಯೋ ಭೂಯಶ್ಚ ನಿತ್ಯಶಃ ॥ ೩೨ ॥

ಶ್ಲೇಷ್ಮಮೂತ್ರಪುರೀಷೇಣ ಯೋಷಿದಂಗಮಲೇನ ಚ ।
ಗೃಹಾಣಿ ತ್ಯಕ್ತಶೌಚಾನಿ ಪ್ರೇತಾ ಭುಜಂತಿ ತತ್ರ ವೈ ॥ ೩೩ ॥

---

೨೯. ಪರ್ಯುಷಿತನು ಉದ್ದವಾದ ಕತ್ತುಳ್ಳವನೂ, ದೊಡ್ಡ ಹೊಟ್ಟೆಯುಳ್ಳವನೂ, ದೊಡ್ಡ ತರುಡುಳ್ಳವನೂ, ಜೋಲಾಡುವ ತುಟಿಗಳುಳ್ಳವನೂ, ಆಗಿ ಈ ಪಾಪದಿಂದ ಹುಟ್ಟಿದನು.

೩೦. ನಮ್ಮ ಕಥೆಗಳೆಲ್ಲವನ್ನೂ ಹೇಳಿದ್ದೇವೆ. ಇಷ್ಟವಿದ್ದರೆ ಮತ್ತೇನನ್ನಾದರೂ ಕೇಳು. ಹೇಳುತ್ತೇವೆ.

೩೧. ಬ್ರಾಹ್ಮಣನು ಹೇಳಿದನು- ಭೂಮಿಯಲ್ಲಿರುವ ಪ್ರಾಣಿಗಳೆಲ್ಲವೂ ಆಹಾರಮೂಲಕವಾದುವು. ಆದ್ದರಿಂದ ನಿಮ್ಮ ಆಹಾರವೇನೆಂಬುದನ್ನು ಕೇಳುತ್ತೇನೆ.

೩೨. ಪ್ರೇತಗಳು ಹೇಳಿದುವು- ನಮ್ಮ ಆಹಾರವನ್ನು ಕೇಳು. ಅದು ಎಲ್ಲಾ ಪ್ರಾಣಿಗಳಿಗೂ ಬೇಡವಾದುದು. ಇದನ್ನು ಕೇಳಿದರೆ ನಮ್ಮನ್ನು ಪದೇ ಪದೇ ನಿಂದಿಸುತ್ತೀಯೆ.

೩೩. ಶ್ಲೇಷ್ಮ, ಮೂತ್ರ, ಪಾಯಿಖಾನೆ, ಹೆಂಗಸರ ಮುಟ್ಟು ಇವನ್ನು ಪ್ರೇತಗಳು ತಿನ್ನುತ್ತಾ ಬಿಟ್ಟ ಮತ್ತು ಶುಚಿಯಾಗಿರದ ಮನೆಗಳಲ್ಲಿ ವಾಸಿಸುತ್ತವೆ.

ಸ್ತ್ರೀದಗ್ಧಾನಿ ಪ್ರಕೀರ್ಣಾನಿ ಪ್ರಕೀರ್ಣೋಪಸ್ಕರಾಣಿ ಚ ।
ಮಲೇನಾಪಿ ಜುಗುಪ್ಸಾನಿ ಪ್ರೇತಾ ಭುಂಜಂತಿ ತತ್ರ ವೈ ॥ ೩೪ ॥

ಚಿತ್ತಲಜ್ಜಾವಿಹೀನಾನಿ ಪತಿತೈಸ್ಸೇವಿತಾನಿ ಚ ।
ದಸ್ಯುಧರ್ಮೇ ಚ ನಿರತಾಃ ಪ್ರೇತಾ ಭುಂಜಂತಿ ತತ್ರ ವೈ ॥ ೩೫ ॥

ಬಲಿಮಂತ್ರವಿಹೀನಾನಿ ಹೋಮಹೀನಾನಿ ಯಾನಿ ಚ ।
ವ್ರತೈಶ್ಚೈವ ವಿಹೀನಾನಿ ಪ್ರೇತಾ ಭುಂಜಂತಿ ತತ್ರ ವೈ ॥ ೩೬ ॥

ಗುರವೋ ನೈವ ಪೂಜ್ಯಂತೇ ಸ್ತ್ರೀಜಿತಾನಿ ಗೃಹಾಣಿ ಚ ।
ಕ್ರೋಧಲೋಭಗೃಹೀತಾನಿ ಪ್ರೇತಾ ಭುಂಜಂತಿ ತತ್ರ ವೈ ॥ ೩೭ ॥

ತ್ರಪಾ ಮೇ ಜಾಯತೇ ತಾತ ಕಥ್ಯಮಾನೇ ಸ್ವಭೋಜನೇ ।
ಅಸ್ಮಾತ್ಪರತರಂ ಚಾನ್ಯತ್ಪ್ರವಕ್ತುಂ ನೈವ ಶಕ್ಯತೇ ॥ ೩೮ ॥

ನಿಸ್ತೀರ್ಣಾಃ ಪ್ರೇತಭಾವೇನ ಪೃಚ್ಛಾಮಸ್ತ್ವಾಂ ದೃಢವ್ರತ ।
ಯಥಾ ನ ಭವತಿ ಪ್ರೇತಸ್ತನ್ಮೇ ವದ ತಪೋಧನ ॥ ೩೯ ॥

---

೩೪. ಹೆಂಗಸರು ತಿಂದು ಮಿಕ್ಕಿದ್ದು, ಎಸೆದಿರುವುದು, ಅತ್ತಿತ್ತ ಎಸೆದ ಚೆಲ್ಲಿದ ಪದಾರ್ಥಗಳು, ಅಮೇಧ್ಯಕ್ಕಿಂತಲೂ ಅಸಹ್ಯಕರಗಳಾದ ಪದಾರ್ಥಗಳನ್ನು ತಿನ್ನುತ್ತೇವೆ.

೩೫. ಮನಸ್ಸಿಗೆ ಬೇಡದ ಲಜ್ಜಾಕರಗಳಾದ ಪತಿತರು ಅನುಭವಿಸಿದುವನ್ನು ಕಳ್ಳತನದಿಂದ ಪ್ರೇತಗಳು ತಿನ್ನುತ್ತವೆ

೩೬. ಬಲಿಹಾಕುವ, ಮಂತ್ರವಿಲ್ಲದ, ಹೋಮಮಾಡದ ವ್ರತಕ್ಕೆ ಉಪಯೋಗಿಸದ ಪದಾರ್ಥಗಳನ್ನು ಪ್ರೇತಗಳು ತಿನ್ನುತ್ತವೆ.

೩೭. ಎಲ್ಲಿ ಗುರುಗಳನ್ನು ಪೂಜಿಸುವುದಿಲ್ಲವೋ, ಯಾರ ಮನೆಯಲ್ಲಿ ಹೆಂಗಸು ಹೇಳಿದಂತೆ ಗಂಡಸರು ಕೇಳಿಕೊಂಡಿದ್ದಾರೆಯೋ ಕೋಪ ಲೋಭಗಳು ಎಲ್ಲಿ ಹೆಚ್ಚಾಗಿವೆಯೋ ಅಲ್ಲಿ ಪ್ರೇತಗಳು ತಿನ್ನುತ್ತವೆ.

೩೮. ಅಪ್ಪ ! ನಮ್ಮ ಭೋಜನವನ್ನು ಹೇಳಿಕೊಳ್ಳುತ್ತಿದ್ದರೆ ಲಜ್ಜೆಯುಂಟಾಗುತ್ತದೆ. ಇದಕ್ಕಿಂತ ಹೆಚ್ಚಾಗಿ ಹೇಳಲು ಸಾಧ್ಯವಿಲ್ಲವು.

೩೯. ಎಲೈ ವ್ರತಶಾಲಿಯೇ ! ನಾವು ಪ್ರೇತಭಾವವುಂಟಾಗದಿರುವ ರೀತಿಯನ್ನು ಸ್ವಲ್ಪ ನಮಗೆ ಹೇಳು.

॥ ಬ್ರಾಹ್ಮಣ ಉವಾಚ ॥

ಏಕರಾತ್ರತ್ರಿರಾತ್ರೇಣ ಕೃಚ್ಛ್ರಚಾಂದ್ರಾಯಣಾದಿಭಿಃ ।
ವ್ರತೈರನ್ಯೈಃ ಕೃತೈರ್ನಿತ್ಯಂ ನ ಪ್ರೇತೋ ಜಾಯತೇ ನರಃ ॥ ೪೦ ॥

ತ್ರೀನಗ್ನೀನ್ಪಂಚ ಚೈಕಂ ವಾ ಅಹನ್ಯಹನಿ ಸೇವತೇ ।
ಸರ್ವಭೂತದಯಾಪನ್ನೋ ನ ಪ್ರೇತೋ ಜಾಯತೇ ನರಃ ॥ ೪೧ ॥

ತುಲ್ಯೋ ಮಾನಾಪಮಾನೇ ಚ ತುಲ್ಯಃ ಕಾಂಚನಲೋಷ್ಟಯೋಃ ।
ತುಲ್ಯಶ್ಶತ್ರೌ ಚ ಮಿತ್ರೇ ಚ ನ ಪ್ರೇತೋ ಜಾಯತೇ ನರಃ ॥ ೪೨ ॥

ದೇವತಾತಿಥಿಪೂಜಾಸು ಗುರುಪೂಜಾಸು ನಿತ್ಯಶಃ ।
ರತೋ ವೈ ಪಿತೃಪೂಜಾಸು ನ ಪ್ರೇತೋ ಜಾಯತೇ ನರಃ ॥ ೪೩ ॥

ಶುಕ್ಲಾಂಗಾರಕಸಂಯುಕ್ತಾ ಚತುರ್ಥೀ ಜಾಯತೇ ಯದಾ ।
ಶ್ರದ್ಧಯಾ ಶ್ರಾದ್ಧಕೃನ್ಮರ್ತ್ಯೋ ನ ಪ್ರೇತೋ ಜಾಯತೇ ನರಃ ॥ ೪೪ ॥

---

೪೦. ಬ್ರಾಹ್ಮಣನು ಹೇಳಿದನು- ಒಂದು ರಾತ್ರಿಯ ಎರಡು ರಾತ್ರಿಯ ಉಪವಾಸಗಳು, ಕೃಛ್ರಚಾಂದ್ರಾಯಣಗಳು ಇವೇ ಮುಂತಾದ ವ್ರತಗಳನ್ನು ಮಾಡುತ್ತಿದ್ದರೆ ಪ್ರೇತನಾಗುವುದಿಲ್ಲ.

೪೧. ಮೂರಾಗಲಿ, ಐದಾಗಲಿ, ಇಲ್ಲವೇ ಒಂದಾಗಲಿ, ಅಗ್ನಿಯನ್ನು ನಿತ್ಯವೂ ಸೇವಿಸುತ್ತಿದ್ದು ಎಲ್ಲಾ ಪ್ರಾಣಿಗಳಲ್ಲಿಯೂ ದಯೆಯಿದ್ದರೆ ಆತನು ಪ್ರೇತನಾಗುವುದಿಲ್ಲ

೪೨. ಮಾನಾವಮಾನಗಳು ಸಮವಾಗಿ, ಮಣ್ಣು ಹೊನ್ನು ಸಮವಾಗಿ ಶತ್ರುಮಿತ್ರರು ಸಮವಾಗಿ ಯಾರಿಗೆ ಇರುವುದೋ ಅವರು ಪ್ರೇತರಾಗುವುದಿಲ್ಲ.

೪೩. ದೇವತೆಗಳು, ಅತಿಥಿಗಳು, ಗುರುಗಳು, ಪಿತೃಗಳು, ಇವರ ಪೂಜೆಯಲ್ಲಿ ಆಸಕ್ತನಾದವನು ಪ್ರೇತನಾಗುವುದಿಲ್ಲ.

೪೪. ಶುಕ್ಲಪಕ್ಷದ ಚತುರ್ಥಿಯು ಮಂಗಳವಾರ ಬಂದರೆ ಆದಿನ ಶ್ರದ್ಧೆಯಿಂದ ಶ್ರಾದ್ಧಮಾಡಿದವನು ಪ್ರೇತನಾಗುವುದಿಲ್ಲ.

ಜಿತಕ್ರೋಧೋ ನ ಮಾತ್ಸರ್ಯೋ ತೃಷ್ಣಾಸಂಗನಿವರ್ಜಿತಃ ।
ಕ್ಷಮಾವಾನ್ದಾನಶೀಲಶ್ಚ ನ ಪ್ರೇತೋ ಜಾಯತೇ ನರಃ ॥ ೪೫ ॥

ಗೋಬ್ರಾಹ್ಮಣಾಂಶ್ಚ ತೀರ್ಥಾನಿ ಪರ್ವತಾಂಶ್ಚ ನದೀಸ್ತಥಾ ।
ದೇವಾಂಶ್ಚೈವ ತು ಯೋ ವನ್ದ್ಯೈನ್ನ ಪ್ರೇತೋ ಜಾಯತೇ ನರಃ ॥ ೪೬ ॥

॥ ಪ್ರೇತಾ ಊಚುಃ ॥

ಶ್ರುತಾಶ್ಚ ವಿವಿಧಾ ಧರ್ಮಾಃ ಪ್ರೋಚ್ಯಾನೋ ದುಃಖಿತಾ ಮುನೇ ।
ಯೇನ ವೈ ಜಾಯತೇ ಪ್ರೇತಸ್ತನ್ನೋ ವದ ಮಹಾಮುನೇ ॥ ೪೭ ॥

॥ ಬ್ರಾಹ್ಮಣ ಉವಾಚ ॥

ಶೂದ್ರಾನ್ನೇನ ತು ಭುಕ್ತೇನ ಬ್ರಾಹ್ಮಣಸ್ತು ವಿಶೇಷತಃ ।
ಮ್ರಿಯತೇ ಹ್ಯುದರಸ್ಥೇನ ಸ ವೈ ಪ್ರೇತೋ ಭವೇನ್ನರಃ ॥ ೪೮ ॥

ಧರ್ಮಾನಾಶ್ರಮಿಣಾಂ ತ್ಯಕ್ತ್ವಾ ಮದ್ಯಪಸ್ತ್ರೀನಿಷೇವಣಂ ।
ವೃಥಾ ಮಾಂಸರತೋ ನಿತ್ಯಂ ಸ ವೈ ಪ್ರೇತೋ ಭವೇನ್ನರಃ ॥ ೪೯ ॥

---

೪೫. ಕ್ರೋಧ ಮತ್ಸರಗಳಿಲ್ಲದ, ಆಶೆ ಸ್ನೇಹಗಳಿಲ್ಲದ ಕ್ಷಮಾವಂತನೂ, ದಾನಶೀಲನೂ ಆದವನು ಪ್ರೇತನಾಗುವುದಿಲ್ಲ.

೪೬. ಗೋವು, ಬ್ರಾಹ್ಮಣರು, ತೀರ್ಥಗಳು. ಪರ್ವತಗಳು, ನದಿಗಳು, ದೇವತೆಗಳು ಇವರನ್ನು ಸ್ಮರಿಸುವವನು ನಮಸ್ಕರಿಸುವವನು ಪ್ರೇತನಾಗುವುದಿಲ್ಲ.

೪೭. ಪ್ರೇತಗಳು ಹೇಳಿದುವು- ಎಲೈ ಋಷಿಯೇ ನಾನಾ ವಿಧವಾದ ಧರ್ಮಗಳನ್ನು ಹೇಳಿದ್ದೀಯೆ. ಕೇಳಿದೆವು ಪ್ರೇತನಾಗುವುದಕ್ಕೆ ಕಾರಣವೇನು ? ಅದನ್ನು ನನಗೆ ಹೇಳು.

೪೮. ಬ್ರಾಹ್ಮನು ಹೇಳಿದನು- ಶೂದ್ರಾನ್ನವನ್ನು ತಿಂದು ಅದರಲ್ಲಿಯೂ ಬ್ರಾಹ್ಮಣನು ಅತಿಶಯವಾಗಿ ಆ ಅನ್ನವು ಹೊಟ್ಟೆಯಲ್ಲಿರುವಾಗ ಸತ್ತರೆ ಅವನು ಪ್ರೇತನಾಗುತ್ತಾನೆ.

೪೯. ತಮ್ಮ ತಮ್ಮ ಆಶ್ರಮದ ಧರ್ಮವನ್ನು ಬಿಟ್ಟು ಮದ್ಯ ಕುಡಿಯುತ್ತಾ ಸ್ತ್ರೀಲೋಲನಾಗಿದ್ದರೂ ಮತ್ತೊಂದು ಪ್ರಯೋಜನಕ್ಕಿಲ್ಲದೆ ತನಗೋಸ್ಕರ ಮಾಂಸವನ್ನು ಅಟ್ಟು ತಿನ್ನುವುದಾದರೂ ಆತನು ಪ್ರೇತನಾಗುತ್ತಾನೆ.

ಅಯಾಜ್ಯಯಾಜನಾಚ್ಚೈವ ಯಾಜ್ಯಾನಾಂ ಚ ವಿಸರ್ಜನಾತ್ ।
ರಕ್ಷೋ ವೈ ಶೂದ್ರಸೇವಾಸು ಸ ಪ್ರೇತೋ ಜಾಯತೇ ನರಃ ॥ ೫೦ ॥

ನ್ಯಾಸಾಪಹರ್ತಾ ಮಿತ್ರಸ್ಯ ಶೂದ್ರಪಾಕರತಸ್ಸದಾ ।
ವಿಸ್ರಂಭಘಾತೀ ಕೂಟಸ್ಥಃ ಸ ವೈ ಪ್ರೇತೋ ಭವೇನ್ನರಃ ॥ ೫೧ ॥

ಬ್ರಹ್ಮಹಾ ಗೋಘ್ನಕಸ್ಸ್ತೇನಃ ಸುರಾಪೋ ಗುರುತಲ್ಪಗಃ ।
ಭೂಮಿಕನ್ಯಾಪಹಾರೀ ಚ ಸ ವೈ ಪ್ರೇತೋ ಭವೇನ್ನರಃ ॥ ೫೨ ॥

ಸಾಮಾನ್ಯಾಂ ದಕ್ಷಿಣಾಂ ಲಬ್ಧ್ವಾ ಗೃಹ್ಣೀತೇ ಏಕ ಏವ ತು ।
ನಾಸ್ತಿಕ್ಯಭಾವೇ ನಿರತಃ ಸ ವೈ ಪ್ರೇತೋಽಭಿಜಾಯತೇ ॥ ೫೩ ॥

ಏವಂ ಬ್ರುವತಿ ವಿಪ್ರೇಂದ್ರ ಆಕಾಶೇ ದುಂದುಭಿಸ್ಸ್ವನಃ ।
ಪುಷ್ಪವೃಷ್ಟಿಃ ಪಪಾತೋರ್ವ್ಯಾಂ ದೇವೈರ್ಮುಕ್ತಾ ಸಹಸ್ರಶಃ ॥ ೫೪ ॥

---

೫೦. ಯಾಗ ಮಾಡದವರಿಗೆ ಯಾಗ ಮಾಡಿಸುವುದು, ತಾನು ಯಾಗ ಮಾಡಿಸುತ್ತಿದ್ದವರನ್ನು ಬಿಡುವುದು, ಶೂದ್ರ ಸೇವೆಯಲ್ಲಿ ಆಸಕ್ತನಾಗಿರುವುದು, ಇವುಗಳಿಂದ ಪ್ರೇತತ್ವವು ಬರುತ್ತದೆ.

೫೧. ಮಿತ್ರನು ಕಾಪಾಡಲು ಇಟ್ಟಿದ್ದನ್ನು ಕದಿಯುವವನು. ಶೂದ್ರನ ಅನ್ನವನ್ನು ಯಾವಾಗಲೂ ತಿನ್ನುವವನು, ನಂಬಿಕೆಗೆ ದ್ರೋಹಮಾಡುವವನು, ಸುಳ್ಳು ಸಾಕ್ಷಿ ಹೇಳುವವನು, ಇವರು ಪ್ರೇತಗಳಾಗುತ್ತಾರೆ

೫೨. ಬ್ರಾಹ್ಮಣನನ್ನು ಕೊಂದವನು, ಗೋವನ್ನು ಕೊಂದವನು, ಕಳ್ಳ, ಹೆಂಡಕುಡುಕ, ಗುರುವಿನ ಹೆಂಡತಿಯನ್ನು ರಮಿಸುವವನು, ಭೂಮಿಯನ್ನು ಅಪಹರಿಸುವವನು, ಕನ್ಯೆಯನ್ನು ಅಪಹರಿಸುವವನು, ಇಂತಹವರು ಪ್ರೇತರಾಗುತ್ತಾರೆ.

೫೩. ಅನೇಕ ಜನರಿಗೆ ಸೇರಬೇಕಾದ ದಕ್ಷಿಣೆಯನ್ನು ಒಬ್ಬನೇ ತೆಗೆದುಕೊಳ್ಳುವವನು, ನಾಸ್ತಿಕನಾಗಿರುವವನು ಪ್ರೇತರಾಗುತ್ತಾರೆ.

೫೪. ಆ ಬ್ರಾಹ್ಮಣನು ಹೀಗೆ ಹೇಳುತ್ತಿರಲು ಆಕಾಶದಲ್ಲಿ ದುಂದುಭಿಧ್ವನಿಯು ಮೊಳಗಿತು. ಪುಷ್ಪವೃಷ್ಟಿಯೂ ಆಗಿ ಕೆಳಗೆ ಬಿದ್ದಿತು.

ಪ್ರೇತಾನಾಂ ತು ವಿಮಾನಾನಿ ಆಗತಾನಿ ಸಮನ್ತತಃ ।
ತಸ್ಯ ವಿಪ್ರಸ್ಯ ಸಂಭಾಷಾತ್ಪುಣ್ಯಸಂಕೀರ್ತನೇನ ಚ ॥ ೫೫ ॥

ತಸ್ಮಾತ್ಸರ್ವಪ್ರಯತ್ನೇನ ಸತಾಂ ಸಂಭಾಷಣಂ ಕುರು ।
ಯದಿ ತೇ ಶ್ರೇಯಸಾ ಕಾರ್ಯಂ ಗಂಗಾಸುತ ಅತಂದ್ರಿತಃ ॥ ೫೬ ॥

ತಿಲಕಂ ಸರ್ವ ಧರ್ಮಸ್ಯ ಪಂಚಪ್ರೇತಾಮಿಮಾಂ ಕಥಾಂ ।
ಪಠನ್ನರೋ ಲಕ್ಷಮೇಕಂ ನ ಪ್ರೇತಕುಲಜೋ ಭವೇತ್ ॥ ೫೭ ॥

ಶೃಣೋತಿ ವಾಪ್ಯಭೀಕ್ಷ್ಣಂ ವಾ ಶ್ರದ್ಧಯಾ ಪರಯಾನ್ವಿತಃ ।
ಭಕ್ತ್ಯಾ ಸಮನ್ವಿತೋ ಸಾಪಿ ನ ಪ್ರೇತೋ ಜಾಯತೇ ನರಃ ॥ ೫೮ ॥

॥ ಭೀಷ್ಮ ಉವಾಚ ॥

ಅಂತರಿಕ್ಷೇ ಕಿಮರ್ಥಂ ತು ಪುಷ್ಕರಂ ಪರಿಕೀರ್ತ್ಯತೇ ।
ಮುನಿಭಿರ್ಧರ್ಮಶೀಲೈಶ್ಚ ಲಭ್ಯತೇ ತತ್ಕಥಂ ತ್ವಿಹ ॥ ೫೯ ॥

ಯೇನ ತಲ್ಲಭ್ಯತೇ ಬ್ರಹ್ಮನ್ಲಬ್ಧಂ ಚೈವ ಫಲಪ್ರದಂ ।
ತನ್ಮೇಽವದ್ಯಂ ಸಮಾಚಕ್ಷ್ವ ಕೌತುಕಾದಿಹ ಪೃಚ್ಛತಃ ॥ ೬೦ ॥

---

೫೫. ಈ ಪ್ರೇತಗಳಿಗೆ ವಿಮಾನಗಳು ಎಲ್ಲಾ ಕಡೆಯಿಂದಲೂ ಬಂದುವು. ಈ ಬ್ರಾಹ್ಮಣನೊಡನೆ ಮಾತಾಡಿ ಪುಣ್ಯವನ್ನು ಕೇಳಿದುದರಿಂದ ಇಷ್ಟಾಯಿತು.

೫೬. ಎಲೈ ಭೀಷ್ಮನೇ! ನೀನು ಶ್ರೇಯಸ್ಸನ್ನು ಹೊಂದಬೇಕಾಗಿದ್ದರೆ ಬೇಸರ ಪಡದೆ ಪ್ರಯತ್ನಪಟ್ಟು ಸತ್ಪುರುಷರೊಡನೆ ಮಾತನಾಡು

೫೭ ಸರ್ವ ಧರ್ಮಗಳಿಗೂ ತಿಲಕವಾದ ಈ ಪಂಚ ಪ್ರೇತಗಳ ಕಥೆಯನ್ನು ಒಂದು ಲಕ್ಷಬಾರಿ ಓದಿದರೆ ಪ್ರೇತನಾಗುವುದಿಲ್ಲ. ಒಳ್ಳೆಯ ವಂಶದಲ್ಲಿ ಹುಟ್ಟುತ್ತಾನೆ.

೫೮. ಅತ್ಯಂತ ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ಅನೇಕಬಾರಿ ಕೇಳಿದವನೂ ಪ್ರೇತನಾಗುವುದಿಲ್ಲ.

೫೯. ಭೀಷ್ಮನು ಹೇಳಿದನು- ಪುಷ್ಕರವು ಅಂತರಿಕ್ಷದಲ್ಲಿ ಬರಲು ಕಾರಣ ವೇನು? ಧರ್ಮಶೀಲರಾದ ಮುನಿಗಳು ಅದನ್ನು ಹೊಂದುವುದು ಹೇಗೆ?

೬೦. ಅದು ಸಿಕ್ಕುವುದು ಹೇಗೆ? ಸಿಕ್ಕಿದರೂ ಫಲವನ್ನು ಹೇಗೆ ಕೊಡುತ್ತದೆ? ಆದರದಿಂದ ಕೇಳುತ್ತಿರುವ ನನಗೆ ಅದನ್ನು ತಿಳಿಸು.

॥ ಪುಲಸ್ತ್ಯ ಉವಾಚ ॥

ಋಷಿಕೋಟಿಸ್ಸಮಾಯಾತಾ ದಕ್ಷಿಣಾಪಥವಾಸಿನಾಂ ।
ಸ್ನಾನಾರ್ಥಂ ಪುಷ್ಕರೇರಾಜನ್ಪುಷ್ಕರಂ ಚ ವಿಯದ್ಗತಂ ॥ ೬೧ ॥

ಗತ್ವಾ ತೇ ಮುನಯಸ್ಸರ್ವೇ ಪ್ರಾಣಾಯಾಮ ಪರಾಯಣಾಃ ।
ಧ್ಯಾಯಮಾನಾಃ ಪರಂ ಬ್ರಹ್ಮ ಸ್ಥಿತಾ ದ್ವಾದಶವತ್ಸರಾನ್ ॥ ೬೨ ॥

ಬ್ರಹ್ಮಾ ಮಹರ್ಷಯಸ್ತತ್ರ ದೇವಾಸ್ಸೇಂದ್ರಾಶ್ಚ ಸರ್ವಶಃ ।
ಋಷಯೋಽನ್ತರ್ಹಿತಾಃ ಪ್ರೋಚುಃ ನಿಯಮಾಂಸ್ತೇ ಸುದುಷ್ಕರಾನ್ ॥ ೬೩ ॥

ಆಕಾರಣಂ ಪುಷ್ಕರಸ್ಯ ಮಂತ್ರೇಣ ಕ್ರಿಯತಾಂ ದ್ವಿಜಾಃ ।
ಆಪೋಹಿಷ್ಠೇತಿ ತಿಸೃಭಿ ಋಗ್ಭಿಸ್ಸಾನ್ನಿಧ್ಯಮೇಷ್ಯತಿ ॥ ೬೪ ॥

ಅಘಮರ್ಷಣ ಜಪ್ತೇನ ಭವೇದ್ವೈ ಫಲದಾಯಕಂ ।
ವಿಪ್ರವಾಕ್ಯಾವಸಾನೇ ತು ಸರ್ವೈಸ್ತೈಸ್ತು ತಥಾಕೃತಂ ॥ ೬೫ ॥

ಕೃತೇನ ಪುಣ್ಯತಾಂ ಪ್ರಾಪ್ತಾ ಯೇ ನಿದೇಶಾಚ್ಚ ತೇ ದ್ವಿಜಾಃ ।
ಗರ್ಹಿತಾ ಧರ್ಮಶಾಸ್ತ್ರೇಷು ತೇ ವಿಪ್ರಾ ದಕ್ಷಿಣೋತ್ತರಾಃ ॥ ೬೬ ॥

---

೬೧. ಪುಲಸ್ತ್ಯನು ಹೇಳಿದನು- ಎಲೈ ಭೀಷ್ಮನೇ ದಕ್ಷಿಣ ದಿಕ್ಕಿನಿಂದ ಋಷಿಗಳು ಸ್ನಾನಕ್ಕೋಸ್ಕರ ಬರಲು ಪುಷ್ಕರವು ಅಂತರಿಕ್ಷಕ್ಕೆ ಹೋಯಿತು.

೬೨. ಪ್ರಾಣಾಯಾಮ ಪರಾಯಣರಾದ ಈ ಋಷಿಗಳೆಲ್ಲರೂ, ಅಲ್ಲಿಗೆ ಹೋಗಿ ಪರಬ್ರಹ್ಮನನ್ನು ಧ್ಯಾನಮಾಡುತ್ತಾ ಹನ್ನೆರಡು ವರ್ಷಗಳವರೆಗೂ ಇದ್ದರು.

೬೩. ಬ್ರಹ್ಮನೂ ಮಹರ್ಷಿಗಳೂ ಇಂದ್ರನೇ ಮುಂತಾದ ದೇವತೆಗಳೂ ಮರೆಯಾಗಿ ಅಲ್ಲಿದ್ದುಕೊಂಡು ಅಲ್ಲಿಯ ನಿಯಮಗಳನ್ನು ಹೇಳತೊಡಗಿದರು.

೬೪. ಎಲೈ ಬ್ರಾಹ್ಮಣರಿರಾ! ಮಂತ್ರದಿಂದ ಪುಷ್ಕರವನ್ನು ಆಕರ್ಷಿಸಿರಿ. ಆಪೋಹಿಷ್ಠವೆಂಬ ಮೂರು ಋಕ್ಕುಗಳಿಂದ ಅದು ಸನ್ನಿಹಿತವಾಗುತ್ತದೆ.

೬೫. ಅಘಮರ್ಷಣ ಸೂಕ್ತವನ್ನು ಜಪಿಸುವುದರಿಂದ ಅದು ಫಲದಾಯಕವಾಗುತ್ತದೆ. ಎನ್ನಲು ಒಡನೆಯೇ ಅವರೆಲ್ಲರೂ ಹಾಗೆ ಮಾಡಿದರು.

೬೬. ಹಾಗೆ ಮಾಡುವುದರಿಂದ ಆ ಬ್ರಾಹ್ಮಣರೆಲ್ಲರೂ ಪುಣ್ಯವನ್ನು ಹೊಂದುತ್ತಾರೆ. ದಕ್ಷಿಣದಿಂದ ಉತ್ತರಕ್ಕೆ ಬರುವಿಕೆಯು ಧರ್ಮಶಾಸ್ತ್ರದಲ್ಲಿ ನಿಷಿದ್ಧವು-

ಯೇ ಚಾನ್ಯೇ ಪಾರ್ವತೀಯಾಶ್ಚ ಶ್ರಾದ್ಧೇ ನಾರ್ಹಂತಿ ಕೇಚನ ।
ಏತಸ್ಮಾತ್ಕಾರಣಾದ್ರಾಜನ್ನಿಯತ್ಯೇವ ಸ್ಥಿತಂ ಚ ತತ್ ॥ ೬೭ ॥

ಕಾರ್ತಿಕ್ಯಾಂ ಪುಷ್ಕರೇಸ್ನಾನಾತ್ಪೂತತಾಮಭಿಗಚ್ಛತಿ ।
ಬ್ರಹ್ಮಣಾ ಸಹಿತಂ ರಾಜನ್ಸರ್ವೇಷಾಂ ಪುಣ್ಯದಾಯಕಂ ॥ ೬೮ ॥

ತತ್ರಾಗತಾಸ್ತು ಯೇ ವರ್ಣಾಃ ಸರ್ವೇ ತೇ ಪುಣ್ಯವರ್ಧನಾಃ ।
ದ್ವಿಜೈಸ್ತುಲ್ಯಾ ನ ಸಂದೇಹೋ ವಿನಾ ಮಂತ್ರೇಣ ತೇ ನೃಪ ॥ ೬೯ ॥

ಆಗ್ನೇಯಂ ಚ ಯದಾ ಋಕ್ಷಂ ಕಾರ್ತಿಕ್ಯಾಂ ಭವತಿ ಕ್ವಚಿತ್
ಮಹತೀ ಸಾ ತಿಥಿರ್ಜ್ಞೇಯಾ ಸ್ನಾನದಾನೇಪಿ ಚೋತ್ತಮಾ ॥ ೭೦ ॥

ಯದಾ ಯಾಮ್ಯಂ ತು ಭವತಿ ಋಕ್ಷಂ ತಸ್ಯಾಂ ತಿಥೌ ಕ್ವಚಿತ್ ।
ತಿಥಿಸ್ಸಾಪಿ ಮಹಾಪುಣ್ಯಾ ಮುನಿಭಿಃ ಪರಿಕೀರ್ತಿತಾ ॥ ೭೧ ॥

ಪ್ರಜಾಪತ್ಯಂ ಯದಾ ಋಕ್ಷಂ ತಿಥೌ ತಸ್ಯಾಂ ನರಾಧಿಪ ।
ಸಾ ಮಹಾ ಕಾರ್ತಿಕೀ ಪ್ರೋಕ್ತಾ ದೇವಾನಾಮಪಿ ದುರ್ಲಭಾ ॥ ೭೨ ॥

---

೬೭. ಕೆಲವು ಪರ್ವತವಾಸಿಗಳಾದ ಬ್ರಾಹ್ಮಣರೆಲ್ಲರೂ ಶ್ರಾದ್ಧದಲ್ಲಿ ಯೋಗ್ಯರಲ್ಲ. ಈ ಕಾರಣದಿಂದ ಅಂತರಿಕ್ಷಕ್ಕೆ ಹೋಯಿತು.

೬೮. ಕಾರ್ತಿಕದಲ್ಲಿ ಪುಷ್ಕರದಲ್ಲಿ ಸ್ನಾನಮಾಡುವುದರಿಂದ ಪವಿತ್ರರಾಗುತ್ತಾರೆ ಆಗ ಬ್ರಹ್ಮನೊಡನೆ ಇದಿರುವುದರಿಂದ ಎಲ್ಲರಿಗೂ ಪುಣ್ಯದಾಯಕವು.

೬೯. ಆಗ ಅಲ್ಲಿಗೆ ಬಂದವರೆಲ್ಲರೂ ಪುಣ್ಯಭಾಗಿಗಳಾಗುತ್ತಾರೆ. ಅವರು ಮಂತ್ರವನ್ನು ಹೇಳದಿದ್ದರೂ ದ್ವಿಜರಿಗೆ ಸಮಾನರು. ಸಂದೇಹವೇ ಇಲ್ಲ

೭೦. ಕಾರ್ತಿಕಮಾಸದಲ್ಲಿ ಕೃತ್ತಿಕಾ ನಕ್ಷತ್ರವು ಬಂದ ಚತುರ್ಥಿಯ ದಿನವು ದೊಡ್ಡ ತಿಥಿಯು ಎಂದು ತಿಳಿಯಬೇಕು. ಅದು ಸ್ನಾನ ದಾನಗಳಲ್ಲಿ ಉತ್ತಮವು.

೭೧. ಆ ಕಾರ್ತಿಕ ಚತುರ್ಥಿಯ ದಿನ ಭರಣೀ ನಕ್ಷತ್ರವು ಬಂದರೆ ಅದು ಮಹಾ ಪುಣ್ಯಪ್ರದವಾದುದೆಂದು ಋಷಿಗಳು ಹೇಳಿದ್ದಾರೆ.

೭೨. ರೋಹಿಣಿ ನಕ್ಷತ್ರವೂ ಆ ಚತುರ್ಥಿಯೂ ಒಂದೇ ದಿನ ಬಂದರೆ ಅದು ಮಹಾಕಾರ್ತಿಕವು. ದೇವತೆಗಳಿಗೂ ದುರ್ಲಭವು.

ಮಂದೇವಾರ್ತೌ ಗುರೌ ಚಾಪಿ ವಾರೇಷ್ವೇತೇಷು ವೈ ತ್ರಿಷು ।
ತ್ರೀಣ್ಯೇತಾನಿ ಚ ಶುಕ್ಲಾಣಿ ಸ್ವಯಂ ಪ್ರೋಕ್ತಾನಿ ಬ್ರಹ್ಮಣಾ ॥ ೭೩ ॥

ಅತ್ರಾಶ್ವಮೇಧಿಕಂ ಪುಣ್ಯಂ ಸ್ನಾತಸ್ಯ ಭವತಿ ಧ್ರುವಂ ।
ದಾನಮಕ್ಷಯತಾಂ ಯಾತಿ ಪಿತೄಣಾಂ ತರ್ಪಣಂ ತಥಾ ॥ ೭೪ ॥

ವಿಶಾಖಾಸು ಯದಾ ಭಾನುಃ ಕೃತ್ತಿಕಾಸು ಚ ಚಂದ್ರಮಾಃ ।
ಸಂಯೋಗಃ ಪದ್ಮಕೋ ನಾಮ ಪುಷ್ಕರೇ ಸ್ವತಿದುರ್ಲಭಃ ॥ ೭೫ ॥

ಅಂತರಿಕ್ಷಾದವಾತೀರ್ಣೇ ತೀರ್ಥೇ ಪೈತಾಮಹೇ ಶುಭೇ ।
ಸ್ನಾನಂ ಯೇತ್ರ ಪ್ರಕುರ್ವಂತಿ ತೇಷಾಂ ಲೋಕಾ ಮಹೋದಯಾಃ ॥ ೭೬ ॥

ನ ಸ್ಪೃಹಾಂ ತೇಽನ್ಯಪುಣ್ಯಸ್ಯ ಕೃತಸ್ಯಾಪ್ಯಕೃತಸ್ಯ ಚ ।
ಕರಿಷ್ಯಂತಿ ಮಹಾರಾಜ ಸತ್ಯಮೇತದುದಾಹೃತಂ ॥ ೭೭ ॥

ತೀರ್ಥಾನಾಂ ಪ್ರವರಂ ತೀರ್ಥಂ ಪೃಥಿವ್ಯಾಮಿಹ ಪಠ್ಯತೇ ।
ನಾಸ್ಮಾತ್ಪರಂ ಪುಣ್ಯತೀರ್ಥಂ ಲೋಕೇಸ್ಮಿನ್ನೃಪ ಪಠ್ಯತೇ ॥ ೭೮ ॥

---

೭೩. ಕಾರ್ತಿಕದ ಶನಿವಾರ ಕೃತ್ತಿಕಾ ನಕ್ಷತ್ರವೂ, ಭಾನುವಾರ ಭರಣಿ ನಕ್ಷತ್ರವೂ, ಗುರುವಾರ ರೋಹಿಣೀ ನಕ್ಷತ್ರವೂ, ಬಹು ಉತ್ತಮವಾದುದೆಂದು ಬ್ರಹ್ಮನು ತಾನೇ ಹೇಳಿದ್ದಾನೆ.

೭೪. ಆಗ ಸ್ನಾನಮಾಡಿದವನಿಗೆ ಅಶ್ವಮೇಧಯಾಗದ ಪುಣ್ಯವು ಬರುತ್ತದೆ ನಿಶ್ಚಯವು. ದಾನವೂ ಪಿತೃತರ್ಪಣವೂ, ಅಕ್ಷಯಕರಗಳು

೭೫. ಭಾನುವಾರ ವಿಶಾಖಾನಕ್ಷತ್ರವೂ, ಸೋಮವಾರ ಕೃತ್ತಿಕಾ ನಕ್ಷತ್ರವೂ, ಬಂದರೆ ಪದ್ಮಕವೆಂಬು ಯೋಗವು. ಇದು ಪುಷ್ಕರದಲ್ಲಿ ದುರ್ಲಭವು.

೭೬. ಅಂತರಿಕ್ಷದಿಂದಿಳಿದ ಈ ಪುಷ್ಕರವೆಂಬ ಪಿತಾಮಹ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಉತ್ತಮ ಲೋಕಗಳು ಸಿಕ್ಕುತ್ತವೆ.

೭೭. ಅವರು ಬೇರೆ ಪುಣ್ಯಮಾಡಲಿ ಮಾಡದಿರಲಿ ಅದರ ಅಪೇಕ್ಷೆಯೇ ಅವರಿಗೆ ಇರುವುದಿಲ್ಲ. ಇದು ಸತ್ಯವು ಹೇಳಿದ್ದೇನೆ.

೭೮. ಇದು ಭೂಮಿಯಲ್ಲಿರುವ ತೀರ್ಥಗಳಲ್ಲೆಲ್ಲಾ ಉತ್ತಮವಾದುದು. ಈ ಲೋಕದಲ್ಲಿ ಇದಕ್ಕಿಂತಲೂ ಉತ್ತಮವಾದ ತೀರ್ಥವು ಇನ್ನು ಬೇರೆಯಿಲ್ಲ.

ಕಾರ್ತಿಕ್ಯಾಂ ತು ವಿಶೇಷೇಣ ಪುಣ್ಯಂ ಪಾಪಹರಂ ಪರಂ ।
ಉದುಂಬರವನಾತ್ತಸ್ಮಾದಾಗತಾ ಚ ಸರಸ್ವತೀ ॥ ೭೯ ॥

ತಥಾ ತತ್ಪೂರಿತಂ ತೀರ್ಥಂ ಪುಷ್ಕರಂ ಮುನಿಸೇವಿತಂ ।
ದಕ್ಷಿಣೇ ಶಿಖರಂ ಭಾತಿ ಪರ್ವತಸ್ಯಾವಿದೂರತಃ ॥ ೮೦ ॥

ಶಿಲಾಂಜನಚಯಪ್ರಖ್ಯಂ ವರ್ಣತೋ ನೀಲಶಾದ್ವಲಂ ।
ಭಾತಿ ತಚ್ಛಿಖರಂ ತಸ್ಯ ಸ್ವಸ್ಥಿತಂ ಪುಷ್ಕರಂ ತಥಾ ॥ ೮೧ ॥

ಪ್ರಾವೃಟ್ಕಾಲೇ ದೃಷತ್ಪೂರ್ಣಂ ಘನವೃಂದಮಿವೋನ್ನತಂ ।
ಕದಂಬಪುಷ್ಪಗಂಧಾಢ್ಯಂ ಕುಟಜಾರ್ಜುನಭೂಷಿತಂ ॥ ೮೨ ॥

ರಥಮಾರ್ಗಮಿವಾರೋಢುಂ ರವೇಸ್ತಚ್ಛಿಖರಂ ಸ್ಥಿತಂ ।
ವೃತ್ತೈಸ್ಸಪುಲಕೈಸ್ಸ್ನಿಗ್ಧೈಸ್ಸ್ತ್ರೀಣಾಮಿವ ಪಯೋಧರೈಃ ॥ ೮೩ ॥

ಶ್ರೀಫಲೈಶ್ಶಿಖರಂ ಭಾತಿ ಸಮನ್ತಾತುಮನೋಹರೈಃ ।
ಗುಂಜದ್ಭಿಷ್ಷಟ್ಪದಕುಲೈಸ್ಸಮಂತಾದುಪಶೋಭಿತಂ ॥ ೮೪ ॥

---

೭೯-೮೧. ಕಾರ್ತಿಕದಲ್ಲಿ ಇದು ಮಹಾ ಪುಣ್ಯವು. ಪಾಪಹರವು. ಅಲ್ಲಿರುವ ಉದುಂಬರ (ಅತ್ತಿ) ಕಾಡಿನಿಂದ ಸರಸ್ವತಿಯು ಬಂದು ಅದನ್ನು ತುಂಬುತ್ತದೆ. ಅದು ಮುನಿಸೇವಿತವಾದುದು. ಆ ಪುಷ್ಕರ ಪರ್ವತದ ದಕ್ಷಿಣಕ್ಕೆ ಸ್ವಲ್ಪದೂರದಲ್ಲಿ ಕಣ್ಣು ಕಪ್ಪುಗಳಿಗೆ (ಕಾಡಿಗೆ) ಸಮವಾದ ಕಪ್ಪಗಿರುವ ಅದರ ಶಿಖರವು ಕಾಣುತ್ತದೆ

೮೨. ಹಿಮಕಾಲದಲ್ಲಿ ಹಿಮದ ಕಲ್ಲಿಂದ ತುಂಬಿರುತ್ತದೆ ಅದನ್ನು ನೋಡಿದರೆ ಮೇಘಗಳು ಮೇಲಕ್ಕೆದ್ದಿರುವಂತಿರುತ್ತದೆ. ಕದಂಬ, ಗಿರಿಮಲ್ಲಿಗೆ, ಮತ್ತಿ ಹೂಗಳಿಂದ ತುಂಬಿರುತ್ತದೆ. ಸೂರ್ಯನು ರಥದ ಮೇಲಕ್ಕೆ ಹತ್ತುವ ದಾರಿಯೋ ಎಂಬಂತೆ ಆ ಶಿಖರವು ಕಾಣುತ್ತದೆ.

೮೩. ದುಂಡಗಿರುವ ರೋಮಾಂಚಗಳು ಬಂದಿರುವ ಮನೋಹರವಾಗಿರುವ ಸ್ತ್ರೀಯರ ಸ್ತನಗಳಂತೆ ಅಲ್ಲಿರುವ ಬಿಲ್ವಪತ್ರೆಯ ಹಣ್ಣುಗಳಿಂದ ಆ ಶಿಖರವು ಎಲ್ಲಕಡೆ ಯಲ್ಲಿಯೂ ಪ್ರಕಾಶಿಸುತ್ತದೆ.

೮೪-೮೫. ಝೇಂಕಾರ ಮಾಡುವ ದುಂಬಿಗಳ ಗುಂಪಿನಿಂದಲೂ, ನವಿಲುಗಳ ಕೇಕಾರವದಿಂದಲೂ, ಕೋಗಿಲೆಗಳ ಧ್ವನಿಯಿಂದಲೂ, ರಮ್ಯವಾಗಿರುವ ಆ ಶಿಖರದಿಂದ ಸರಸ್ವತಿಯು ಹುಟ್ಟಿರುವುದು.

ಕೋಕಿಲಾರಾವರುಚಿರಂ ಶಿಖಿ ಕೇಕಾರವಾಕುಲಂ ।
ಶೃಂಗೇ ಮನೋರಮೇ ತಸ್ಮಿನ್ನುದ್ಗತಾ ಸಾ ಸುಮಧ್ಯಮಾ　　॥ ೮೫ ॥

ಪುಣ್ಯಾ ಪುಣ್ಯಜಲೋಪೇತಾ ನದೀಯಂ ಬ್ರಹ್ಮಣಸ್ಸುತಾ ।
ವಂಶಸ್ತಂಭಾಸು ವಿಪುಲಾ ಪ್ರವೃತ್ತಾ ಚೋತ್ತರಾಮುಖೀ　　॥ ೮೬ ॥

ಗತ್ವಾ ತತೋ ನಾತಿದೂರಂ ಪುನರ್ವ್ಯಾತ್ಯಪರಾಙ್ಮುಖೀ ।
ತತಃ ಪ್ರಭೃತಿ ಸಾ ದೇವೀ ಪ್ರಸನ್ನಾ ಪ್ರಕಟಾ ಸ್ಥಿತಾ　　॥ ೮೭ ॥

ಅಂತರ್ಧಾನಂ ಪರಿತ್ಯಜ್ಯ ಪ್ರಾಣಿನಾಮನುಕಂಪಯಾ ।
ಕನಕಾ ಸುಪ್ರಭಾ ಚೈವ ನಂದಾ ಪ್ರಾಚೀ ಸರಸ್ವತೀ　　॥ ೮೮ ॥

ಪಂಚ ಸ್ರೋತಾಃ ಪುಷ್ಕರೇ ತು ಬ್ರಹ್ಮಣಾ ಪರಿಭಾಷಿತಾ ।
ತಸ್ಯಾಸ್ತಟೇ ತು ರಮ್ಯಾಣಿ ತೀರ್ಥಾನ್ಯಾಯತನಾನಿ　　॥ ೮೯ ॥

ಸಂಸೇವಿತಾನಿ ಮುನಿಭಿಃ ಸಿದ್ಧೈಶ್ಚಾಪಿ ಸಮಂತತಃ ।
ತೇಷು ಸರ್ವೇಷು ಭರಿತಾ ಧರ್ಮಹೇತುಸ್ಸರಸ್ವತೀ　　॥ ೯೦ ॥

---

೮೬. ಪುಣ್ಯಸ್ವರೂಪಳು, ಪುಣ್ಯಜಲವುಳ್ಳವಳು, ಇಂತಹ ಬ್ರಹ್ಮನ ಮಗಳಾದ ಸರಸ್ವತಿಯು ಬಿದಿರಿನ ವನಗಳಿಂದ ಕೂಡಿ ಉತ್ತರಮುಖವಾಗಿ ಹರಿಯುತ್ತದೆ.

೮೭. ಅಲ್ಲಿಂದ ಸ್ವಲ್ಪದೂರಹೋಗಿ ಮತ್ತೆ ಹಿಂತಿರುಗುತ್ತದೆ. ಅಲ್ಲಿಂದ ಅದು ಕಾಣಿಸುತ್ತ ಪ್ರಸನ್ನವಾಗಿದೆ.

೮೮-೮೯. ಮರೆಯಾಗಿರುವಿಕೆಯನ್ನು ಬಿಟ್ಟು ಪ್ರಾಣಿಗಳಲ್ಲಿ ದಯೆಯಿಂದ ಕೂಡಿದೆ. ಕನಕೆ, ಸುಪ್ರಭೆ, ನಂದೆ, ಪ್ರಾಚೀ, ಸರಸ್ವತಿ ಎಂಬುದಾಗಿ ಪುಷ್ಕರದಲ್ಲಿ ಐದು ನದಿಗಳು ಸೇರಿವೆಯೆಂದು ಬ್ರಹ್ಮನೇ ಹೇಳಿರುವನು.

೯೦. ಆ ನದಿಯ ದಡದಲ್ಲಿ ಮನೋಹರವಾದ ತೀರ್ಥಗಳೂ, ದೇವಸ್ಥಾನಗಳೂ ಇವೆ. ಇವು ಮುನಿಗಳಿಂದಲೂ ಸಿದ್ಧರಿಂದಲೂ ಸೇವಿಸಲ್ಪಡುತ್ತಿವೆ. ಅವುಗಳಲ್ಲೆಲ್ಲಾ ಸರಸ್ವತಿಯೇ ಧರ್ಮಹೇತುವು.

ಸ್ನಾನಪಾನಾತ್ಪ್ರದಾನಾದ್ವಾ ಹಿರಣ್ಯಾದೇರ್ಮಹಾನದೀ ।
ಹಾಟಕಕ್ಷಿತಿಗೌರೀಣಾಂ ತತ್ತೀರ್ಥೇಷು ಮಹೋದಯಂ
ನಾಸಂ ದತ್ತಂ ನರೈಸ್ನಾತೈರ್ಜನಯತ್ಯಕ್ಷಯಂ ಫಲಂ ॥ ೯೧ ॥

ಧಾನ್ಯಪ್ರದಾನಂ ಪ್ರವರಂ ವದಂತಿ
ವಸ್ತ್ರಸ್ಯ ದಾನಂ ಚ ತಥಾ ಮುನೀಂದ್ರಾಃ ।
ಯೈಸ್ತೇಷು ತೀರ್ಥೇಷು ನರೈಃ ಪ್ರದತ್ತಂ
ತದ್ಧರ್ಮಹೇತುಃ ಪ್ರವರಂ ಪ್ರದಿಷ್ಟಂ ॥ ೯೨ ॥

ಪ್ರಾಯೋಪವೇಶಂ ಪ್ರಯತಃ ಪ್ರಯತ್ನಾ
ದ್ಯಸ್ತೇಷು ಕುರ್ಯಾತ್ಪ್ರಮದಾ ಪುಮಾನ್ವಾ ।
ತೀರ್ಥೇಷು ಸಾಯುಜ್ಯಮವಾಪ್ಯ ಚೇತ್ಥಂ
ಭುಂಕ್ತೇ ಫಲಂ ಬ್ರಹ್ಮಪುರೇ ಯಥೇಷ್ಟಂ ॥ ೯೩ ॥

ತಸ್ಯೋಪಕಂಠೇ ಮ್ರಿಯತೇ ಹಿ ಯೈಸ್ತು
ಕರ್ಮಕ್ಷಯಾತ್ಸ್ಥಾವರಜಂಗಮೈಶ್ಚ ।
ತೇ ಚಾಪಿ ಸರ್ವೇ ಸಕಲಂ ಪ್ರಸಹ್ಯ
ಲಭಂತಿ ಯಜ್ಞಸ್ಯ ಫಲಂ ಪ್ರಧಾನಂ ॥ ೯೪ ॥

---

೯೧. ಸ್ನಾನ ಮಾಡುವುದು, ನೀರುಕುಡಿಯುವುದು, ಚಿನ್ನ ಮುಂತಾದುವನ್ನು ದಾನಮಾಡುವುದು ಮತ್ತು ಭೂಮಿಗೋವುಗಳನ್ನು ದಾನಮಾಡುವುದು. ಆ ತೀರ್ಥದಲ್ಲಿ ಬಹುಫಲಪ್ರದವು, ಅಲ್ಲಿ ಸ್ನಾನಮಾಡಿ ದಾನಮಾಡಿದರೆ ಅಕ್ಷಯ ಫಲವು ಬರುವುದು.

೯೨. ಇಲ್ಲಿ ಮಾಡಿದ ಧಾನ್ಯದಾನ ವಸ್ತ್ರದಾನಗಳು ಬಹು ಉತ್ತಮವೆಂದು ಹೇಳಲ್ಪಟ್ಟಿದೆ. ಆ ತೀರ್ಥದಲ್ಲಿ ಕೊಟ್ಟಿದ್ದೆಲ್ಲವೂ ಬಹುಧರ್ಮಕರಗಳೆಂದು ಮುನಿಗಳು ಹೇಳುತ್ತಾರೆ.

೯೩. ಅಲ್ಲಿ ಗಂಡಸಾಗಲಿ ಹೆಂಗಸಾಗಲಿ ಪ್ರಾಯೋಪವೇಶವನ್ನು ಮಾಡಿದರೆ ಆ ತೀರ್ಥದಲ್ಲಿ ಸಾಯುಜ್ಯವನ್ನು ಹೊಂದಿ ಬ್ರಹ್ಮಪುರದಲ್ಲಿ ಬೇಕಾದ ಫಲಗಳನ್ನು ಅನುಭವಿಸುತ್ತಾರೆ

೯೪. ಆ ನದಿಯ ದಡದಲ್ಲಿ ಸತ್ತ ಸ್ಥಾವರವೇ ಆಗಲಿ ಜಂಗಮವೇ ಆಗಲಿ ಕರ್ಮವನ್ನು ನಾಶಮಾಡಿಕೊಂಡು ಅವರೆಲ್ಲರೂ ಬಲಾತ್ಕಾರದಿಂದ ಯಜ್ಞಫಲವನ್ನು ಹೊಂದುತ್ತಾರೆ.

ತತಸ್ತು ಸಾಧರ್ಮಫಲಾರಣೀ ಚ
ಜನ್ಮಾದಿದುಃಖಾರ್ದಿತ ಮಾನಸಾನಾಂ ।
ಸರ್ವಾತ್ಮನಾ ರುಚಿರಫಲಾ ಸರಸ್ವತೀ
ದೇವ್ಯಾ ಪ್ರಯತ್ನಾತ್ಪುರುಷೈರ್ಮಹಾನದೀ ॥ ೯೫ ॥

ತತ್ರ ಯೇ ಸಲಿಲಂ ಪೂತಂ ಪಿಬಂತಿ ಸತತಂ ನರಾಃ ।
ನ ತೇ ಮನುಷ್ಯಾ ದೇವಾಸ್ತೇ ಜಗತ್ಯಾಮಿಹ ಸಂಸ್ಥಿತಾಃ ॥ ೯೬ ॥

ಯಜ್ಞೈರ್ದಾನೈಸ್ತಪೋಭಿಶ್ಚ ಯತ್ಫಲಂ ಪ್ರಾಪ್ಯತೇ ದ್ವಿಜೈಃ ।
ತದತ್ರ ಸ್ನಾನಮಾತ್ರೇಣ ಶೂದ್ರೈರಪಿ ಶುಭಾನ್ವಿತೈಃ ॥ ೯೭ ॥

ದರ್ಶನಾತ್ಪುಷ್ಕರಸ್ಯಾಪಿ ಮಹಾಪಾತಕಿನೋಽಪಿ ಯೇ ।
ತೇಽಪಿ ತತ್ಪಾಪನಿರ್ಮುಕ್ತಾಃ ಸ್ವರ್ಗಂ ಯಾಂತಿ ತನುಕ್ಷಯೇ ॥ ೯೮ ॥

ತತ್ರೋಪವಾಸಾದ್ಯಜ್ಞಸ್ಯ ಪೌಂಡರೀಕಸ್ಯ ಯತ್ಫಲಂ ।
ತದಾಪ್ನೋತಿ ನರಃ ಕ್ಷಿಪ್ರಮಲ್ಪಾಯಾಸೇನ ಪುಷ್ಕರೇ ॥ ೯೯ ॥

---

೯೫. ಜನನ ಮರಣವೇ ಮುಂತಾದ ದುಃಖಗಳಿಂದ ಕೂಡಿದವರಿಗೆ ಈ ನದಿಯು ಧರ್ಮಫಲಕ್ಕೆ ಹುಟ್ಟುವ ಜಾಗವು, ಆದ್ದರಿಂದ ಈ ಮಹಾ ನದಿಯನ್ನು ಹೇಗಾದರೂ ಮಾಡಿ ಸೇವಿಸಬೇಕು.

೯೬. ಅದರಲ್ಲಿ ಪವಿತ್ರವಾದ ನೀರನ್ನು ಯಾರು ಕುಡಿಯುತ್ತಾರೆಯೋ ಅವರು ಮನುಷ್ಯರಲ್ಲ. ಭೂಮಿಯಲ್ಲಿರುವ ದೇವತೆಗಳು ಎಂದು ತಿಳಿ.

೯೭. ಯಾಗ ದಾನ, ತಪಸ್ಸುಗಳಿಂದ ಬ್ರಾಹ್ಮಣರು ಹೊಂದುವ ಫಲವನ್ನು ಶುಭಾಚಾರಿಗಳಾದ ಶೂದ್ರರೂ ಇಲ್ಲಿ ಸ್ನಾನ ಮಾಡಿದ ಮಾತ್ರದಿಂದ ಹೊಂದುತ್ತಾರೆ.

೯೮. ಪುಷ್ಕರದ ದರ್ಶನದಿಂದ ಮಹಾ ಪಾತಕಿಗಳೂ ಕೂಡ ಆ ಪಾಪವನ್ನು ಕಳೆದುಕೊಂಡು ಸತ್ತಮೇಲೆ ಸ್ವರ್ಗವನ್ನು ಸೇರುತ್ತಾರೆ.

೯೯. ಅಲ್ಲಿ ಉಪವಾಸ ಮಾಡುವುದರಿಂದ ಸ್ವಲ್ಪ ಕಷ್ಟದಿಂದಲೇ ಮಹತ್ಫಲವಾದ ಪುಂಡರೀಕ ಯಜ್ಞದ ಫಲವನ್ನು ಹೊಂದುತ್ತಾರೆ.

ಮಾಸೇಮಾಸೇ ತಿಲಾನ್ಯಸ್ತು ಪ್ರಯಚ್ಛತಿ ಚ ಸ ದ್ವಿಜೇ ।
ಯಥಾಶಕ್ತಿ ಚ ಭಕ್ತ್ಯಾ ಚ ಸ ವಿಷ್ಣುಭವನೇ ವಸೇತ್ ॥ ೧೦೦ ॥

ತತ್ರೋಪವಾಸಂ ಸ್ನಾನಂ ಚ ಪಂಚಗವ್ಯಾಶನಂ ತಥಾ ।
ಯಃ ಕರೋತಿ ನರಸ್ಸೋಽಪಿ ದೇಹಾನ್ತೇ ಸ್ವರ್ಗಮಾಪ್ನುಯಾತ್ ॥ ೧೦೧ ॥

ವಸಂತಿ ತತ್ಸಮೀಪಸ್ಥಾ ಯೇಽಪಿ ತಸ್ಕರಜಾತಯಃ ।
ತೇಽಪಿ ತಸ್ಯಾನುಭಾವೇನ ಸ್ವರ್ಗಂ ಯಾಂತಿ ನ ಸಂಶಯಃ ॥ ೧೦೨ ॥

ಯೇ ಪ್ರಸಶ್ಯುದ್ಧವೃತ್ತಿಸ್ಥಾಸ್ತ್ರಿರಾತ್ರೋಪೋಷಿತಾ ನರಾಃ ।
ಪ್ರಯಚ್ಛಂತಿ ದ್ವಿಜೇಷ್ವರ್ಥಂ ಬಹ್ಮಶಕ್ತಿಸಮನ್ವಿತಾಃ ॥ ೧೦೩ ॥

ತೇ ಮೃತಾ ಯಾನಮಾರೂಢಾಃ ಪದ್ಮಾಸನಚತುರ್ಭುಜಾಃ ।
ಬ್ರಹ್ಮಣಾ ಸಹ ಸಾಯುಜ್ಯಂ ಪ್ರಾಪ್ನುವಂತ್ಯಪುನರ್ಭವಂ ॥ ೧೦೪ ॥

ಗಂಗೋದ್ಭೇದಂ ಯತ್ರ ಗಂಗಾ ಸಂಪ್ರಾಪ್ತಾ ಸರಿತಾಂ ವರಾ ।
ಸರಸ್ವತೀಂ ದ್ರಷ್ಟುಕಾಮಾ ಪುನಸ್ತತ್ರ ಸಮಾಗತಾ ॥ ೧೦೫ ॥

---

೧೦೦. ತಿಂಗಳು ತಿಂಗಳಿಗೆ ಯಾವನು ಬ್ರಾಹ್ಮಣನಿಗೆ ಅಲ್ಲಿ ಎಳ್ಳನ್ನು ಶಕ್ತಿಗನುಗುಣವಾಗಿ ಕೊಡುತ್ತಾನೆಯೋ ಅವನಿಗೆ ವೈಕುಂಠ ಪ್ರಾಪ್ತಿಯಾಗುತ್ತದೆ.

೧೦೧. ಅಲ್ಲಿ ಉಪವಾಸಮಾಡಿ ಸ್ನಾನಮಾಡಿ ಪಂಚಗವ್ಯವನ್ನು ಕುಡಿದರೆ ಸತ್ತಮೇಲೆ ಸ್ವರ್ಗವನ್ನು ಹೊಂದುತ್ತಾನೆ.

೧೦೨. ಅದರ ಹತ್ತಿರ ವಾಸಮಾಡುವ ಕಳ್ಳರೂ ಕೂಡ ಅದರ ಮಹಿಮೆಯಿಂದ ಸ್ವರ್ಗವನ್ನು ಹೊಂದುತ್ತಾರೆ, ಸಂಶಯವಿಲ್ಲ.

೧೦೩-೧೦೪. ಶುದ್ಧ ವೃತ್ತಿಯಲ್ಲಿದ್ದು ಅಲ್ಲಿ ಮೂರು ರಾತ್ರಿ ಉಪವಾಸಮಾಡಿದವರಿಗೆ ಹೇಳತಕ್ಕದ್ದೇನಿದೆ ? ಅವರು ಹಾಗೆ ಉಪವಾಸವಿದ್ದು ಬ್ರಾಹ್ಮಣರಿಗೆ ಭಕ್ತಿಯಿಂದ ದಕ್ಷಿಣೆಯನ್ನು ಕೊಟ್ಟರೆ ಮೃತರಾದ ಮೇಲೆ ಯಾನದಲ್ಲಿ ಕುಳಿತು ನಾಲ್ಕು ಭುಜವನ್ನು ಹೊಂದಿ ಪುನರಾವೃತ್ತಿಯಿಲ್ಲದ ಬ್ರಹ್ಮಲೋಕವನ್ನು ಹೊಂದುತ್ತಾರೆ.

೧೦೫. ಅಲ್ಲಿ ಗಂಗೋದ್ಭೇದವೆಂಬುದೊಂದು ಸ್ಥಾನವಿರುವುದು. ಅಲ್ಲಿ ಶ್ರೇಷ್ಠಳಾದ ಗಂಗೆಯು ಬಂದಿರುವಳು. ಅಲ್ಲಿಗೆ ಆ ಗಂಗೆಯು ಸರಸ್ವತಿಯನ್ನು ನೋಡಲು ಬಂದಳು.

ತತ್ರ ಗತ್ವಾ ಪಯಃಪೂತಂ ಸುರಸಿದ್ಧನಿಷೇವಿತಂ ।
ಸಾರಸ್ವತಂ ಚ ವಿಮಲಂ ವಿದ್ಯಾಧರಗಣಾರ್ಚಿತಂ ॥ ೧೦೬ ॥

ಪೀತಮೇಕಾಂಜಲಿಮಿತಂ ಯೇನಾಪ್ತಂ ತೇನ ತತ್ಪರಂ ।
ಅವಲೋಕ್ಯ ದಿಶಂ ಪೂರ್ವಾಂ ಹಾ ಗಂಗೇತಿ ಸಖಿ ತ್ವಯಾ ॥ ೧೦೭ ॥

ಏಕಾಕಿನೀ ವಿಯುಕ್ತಾಸ್ಮಿ ಕ್ವ ಯಾಸ್ಯೇಹಮಬಾಂಧವಾ ।
ತಾಂ ವಿಜ್ಞಾಯ ತತೋ ಗಂಗಾ ರುದತೀ ಶೋಕಕರ್ಶಿತಾ ॥ ೧೦೮ ॥

ಪೂರ್ವದೇಶಾತ್ಸಮಾಯಾತಾ ದ್ರಷ್ಟುಂ ತಾಂ ದೀನಮಾನಸಾಂ ।
ದೃಷ್ಟ್ವಾ ಚ ತಾಂ ಮಹಾಭಾಗಾಂ ಪರಿಷ್ವಜ್ಯ ಚ ಪೀಡಿತಾಂ ॥ ೧೦೯ ॥

ನೇತ್ರೇ ಪ್ರಮೃಜ್ಯ ಚೈತಸ್ಯಾಃ ಪ್ರಾಹ ಗಂಗಾ ವಚಶ್ಶುಭಂ ॥ ೧೧೦ ॥

॥ ಗಂಗೋವಾಚ ॥

ಮಾರೋದೀಸ್ತ್ವಂ ಮಹಾಭಾಗೇ ದುಷ್ಕರಂ ತೇ ಕೃತಂ ಸಖಿ ।
ದೇವಕಾರ್ಯಂ ಯದನ್ಯೇನ ಕರ್ತುಂ ಶಕ್ಯಂ ನ ಕರ್ಹಿಚಿತ್ ॥ ೧೧೧ ॥

---

೧೦೬. ಅಲ್ಲಿಗೆ ಹೋಗಿ ಆ ಸುರಸಿದ್ಧಸೇವಿತವೂ ಪೂತವೂ, ಆದ ಸರಸ್ವತಿಯ ನೀರನ್ನು ಒಂದು ಬೊಗಸೆಯಷ್ಟನ್ನು ಕುಡಿದರೆ ಅವನು ಪರಮಪದವನ್ನು ಹೊಂದುತ್ತಾನೆ.

೧೦೭–೧೧೦. ಈ ಸರಸ್ವತಿಯು ಪೂರ್ವಕ್ಕೆ ತಿರುಗಿನೋಡಿ ಹಾ ಗಂಗೆಯೇ ! ಸಖಿ ! ನೀನು ನನ್ನನ್ನು ಒಬ್ಬಳನ್ನಾಗಿಯೇ ಬಿಟ್ಟುಬಿಟ್ಟೆ ? ನಾನು ದುಃಖದಿಂದ ಎಲ್ಲಿ ಹೋಗಲಿ? ಬಂಧುಗಳೇ ಇಲ್ಲವಲ್ಲ. ಎಂದು ಕೂಗಲು ಅದನ್ನು ತಿಳಿದು ಗಂಗೆಯು ಬಡವಾಗಿ ಪೂರ್ವದೇಶದಿಂದ ದುಃಖಿಸುತ್ತ ಆಕೆಯನ್ನು ನೋಡಲು ಬಂದಳು. ಬಂದು ಆಕೆಯನ್ನು ನೋಡಿ ದುಃಖಿಸುತ್ತಿದ್ದ ಆಕೆಯನ್ನು ಆಲಿಂಗಿಸಿಕೊಂಡು ಕಣ್ಣುಗಳನ್ನು ಒರಸಿ ಒಳ್ಳೆಯ ಮಾತನ್ನಾಡಿದಳು.

೧೧೧. ಗಂಗೆಯು ಹೇಳಿದಳು– ಮಹಾಮಹಿಮಳೆ ! ಅಳಬೇಡ, ನೀನು ಬಹು ಮಹತ್ತಾದ ಇತರರ ಕೈಲಾಗದ ಕೆಲಸವನ್ನು ಮಾಡಿದ್ದೀಯೆ. ಇತರರ ಕೈಲಿ ಮಾಡಲಾಗದ ದೇವತಾಕಾರ್ಯವನ್ನು ಮಾಡಿದ್ದೀಯೆ.

ಏತಸ಼್ಾತ್ತ್ರೇ ಮಹಾಭಾಗೇ ದ್ರ್ರಷ್ಟುಂ ದೇವಾಸ್ಸಮಾಗತಾಃ ।
ಏಷಾಂ ಚ ಕ್ರಿಯತಾಂ ಪೂಜಾ ವಾಙ್ಮನಃಕಾಯಕರ್ಮಣಾ ॥ ೧೧೨ ॥

॥ ಪುಲಸ್ತ್ಯ ಉವಾಚ ॥

ಸಾತತ್ತ್ವತಸ್ಸುರೇಂದ್ರಾಣಾಂ ಕೃತ್ವಾ ಪೂಜಾವಿಧಿಂ ಕ್ರಮಾತ್ ।
ಕ್ರಮೇಣ ಪದ್ಮಜಾ ಪಶ್ಚಾತ್ಸಂಗತಾ ತು ಸಖೀಜನಂ ॥ ೧೧೩ ॥

ಜ್ಯೇಷ್ಠಮಧ್ಯಮಯೋರ್ಮಧ್ಯೇ ಸಂಗಮೋ ಲೋಕವಿಶ್ರುತಃ ।
ಪಶ್ಚಾನ್ಮುಖೀ ಬ್ರಹ್ಮಸುತಾ ಜಾಹ್ನವೀ ತು ಉದಙ್ಮುಖೀ ॥ ೧೧೪ ॥

ತತಸ್ತೇ ವಿಬುಧಾಸ್ಸರ್ವೇ ಪುಷ್ಕರೇ ತು ಸಮಾಗತಾಃ ।
ವಿದಿತ್ವಾ ದುಷ್ಕರಂ ಕರ್ಮ ತಸ್ಯಾಸ್ತುತಿಮಕಾರಯನ್ ॥ ೧೧೫ ॥

॥ ದೇವಾ ಊಚುಃ ॥

ತ್ವಂ ಧೃತಿಸ್ತ್ವಂ ಮತಿರ್ಲಕ್ಷ್ಮೀಃ ತ್ವಂ ವಿದ್ಯಾ ತ್ವಂ ಗತಿಃ ಪರಾ ।
ತ್ವಂ ಶ್ರದ್ಧಾ ತ್ವಂ ಪರಾ ನಿಷ್ಠಾ ಬುದ್ಧಿರ್ಮೇಧಾ ಧೃತಿಃ ಕ್ಷಮಾ ॥ ೧೧೬ ॥

---

೧೧೨. ಆದ್ದರಿಂದಲೇ ನಿನ್ನನ್ನು ನೋಡಲು ದೇವತೆಗಳೆಲ್ಲರೂ ಬಂದಿರುವರು. ವಾಙ್ಮನಃ ಕಾಯಗಳಿಂದ ಅವರಿಗೆ ಪೂಜೆಯನ್ನು ಮಾಡು.

೧೧೩. ಪುಲಸ್ತ್ಯನು ಹೇಳಿದನು– ಆಗ ಆ ದೇವತೆಗಳಿಗೆ ಸರಿಯಾಗಿ ಪೂಜೆಯನ್ನು ಮಾಡಿ ಸರಸ್ವತಿಯು ಸಖೀಜನಗಳನ್ನು ನೋಡಲು ಹೊರಟಳು.

೧೧೪. ಜ್ಯೇಷ್ಠಪುಷ್ಕರಣಿ ಮಧ್ಯಮಪುಷ್ಕರಿಣಿಗಳ ಮಧ್ಯದಲ್ಲಿ ಸಂಗಮವು ಪ್ರಸಿದ್ಧವಾಗಿದೆ. ಅನಂತರ ಸರಸ್ವತಿಯು ಪಶ್ಚಿಮಕ್ಕೂ ಗಂಗೆಯು ಉತ್ತರಕ್ಕೂ ಹೊರಟರು.

೧೧೫. ಆ ಮೇಲೆ ಪುಷ್ಕರಕ್ಕೆ ಬಂದಿದ್ದ ಆ ದೇವತೆಗಳೆಲ್ಲರೂ ಈ ಅಸಾಧ್ಯವಾದ ಕೆಲಸವನ್ನು ನೋಡಿ ಆಕೆಯನ್ನು ಸ್ತುತಿಸಿದರು.

೧೧೬–೧೧೯. ದೇವತೆಗಳು ಹೇಳಿದರು–ನೀನೇ ಧೃತಿಯು, ನೀನೇ ಮತಿಯು, ನೀನೇ ಲಕ್ಷ್ಮಿಯು, ನೀನೇ ವಿದ್ಯೆಯು, ನೀನೇ ಉತ್ತಮಗತಿಯು, ನೀನೇ ಶ್ರದ್ಧೆಯು, ನೀನೇ ನಿಷ್ಠೆಯು, ನೀನೇ ಮೇಧೆಯು, ನೀನೇ ಧೃತಿಕ್ಷಮೆಗಳು, ನೀನೇ ಸಿದ್ಧಿಯು,

ತ್ವಂ ಸಿದ್ಧಿಸ್ತ್ವಂ ಸ್ವಧಾ ಸ್ವಾಹಾ ತ್ವಂ ಪವಿತ್ರಂ ಮತಂ ಮಹತ್ ।
ಸಂಧ್ಯಾ ರಾತ್ರಿಃ ಪ್ರಭಾ ಭೂತಿರ್ಮೇಧಾ ಶ್ರದ್ಧಾ ಸರಸ್ವತೀ ॥ ೧೧೭ ॥

ಯಜ್ಞವಿದ್ಯಾ ಮಹಾವಿದ್ಯಾ ಗುಹ್ಯವಿದ್ಯಾ ಚ ಶೋಭನಾ ।
ಆನ್ವೀಕ್ಷಕೀ ತ್ರಯೀವಿದ್ಯಾ ದಂಡನೀತಿಶ್ಚ ಕಥ್ಯತೇ ॥ ೧೧೮ ॥

ನಮೋಽಸ್ತು ತೇ ಪುಣ್ಯಜಲೇ ನಮಸ್ಸಾಗರಗಾಮಿನಿ ।
ನಮಸ್ತೇ ಪಾಪನಿರ್ಮೋಕೇ ನಮೋ ದೇವಿ ವರಾಂಗನೇ ॥ ೧೧೯ ॥

॥ ಪುಲಸ್ತ್ಯ ಉವಾಚ ॥

ಏವಂ ಸ್ತುತಾ ಹಿ ಸಾ ದೇವೀ ದಿವ್ಯಾ ಸ್ವಾರ್ಥಪರಾಯಣೈಃ ।
ಏವಂ ಸಾ ಪ್ರಾಙ್ಮುಖೀ ಯತ್ರ ಸ್ಥಿತಾ ದೇವೀ ಸರಸ್ವತೀ ॥ ೧೨೦ ॥

ಸರ್ವತೀರ್ಥವರಾ ದೇವೀ ಸರ್ವಾಮರಸಮನ್ವಿತಾ ।
ಪ್ರಾಚೀನ್ಯೈಷಾ ಬುಧೈರ್ಜ್ಞೇಯಾ ಬ್ರಹ್ಮಣೋ ವಚನಂ ತಥಾ ॥ ೧೨೧ ॥

---

ಮಹಾವಿದ್ಯೆ, ಗುಹ್ಯವಿದ್ಯೆ, ಆನ್ವೀಕ್ಷಕೀ, ಋಗ್ಯಜುಸ್ಸಾಮವೇದಗಳು, ದಂಡವಿದ್ಯೆ, ನೀತಿವಿದ್ಯೆ, ಇವೂ ನೀನೇ ಆಗಿದ್ದೀಯೆ. ಪುಣ್ಯ ಜಲವುಳ್ಳವಳೇ ನಿನಗೆ ನಮಸ್ಕಾರವು. ನೀನೇ ಸ್ವಧಾಸ್ವಾಹಾಗಳು, ನೀನೇ ಉತ್ತಮವಾದ ಪವಿತ್ರಪದಾರ್ಥವು ಸಂಧ್ಯೆ, ರಾತ್ರಿ ಪ್ರಭೆ, ಭೂತಿ, ಮೇಧೆ, ಶ್ರದ್ಧೆ, ಸರಸ್ವತಿ, ಎಲ್ಲವೂ ನೀನೇ ಆಗಿದ್ದೀಯೆ, ಯಜ್ಞ ವಿದ್ಯೆ, ಮಹಾವಿದ್ಯೆ, ಗುಹ್ಯವಿದ್ಯೆ, ನೀತಿವಿದ್ಯೆ, ಇವೂ ನೀನೇ ಆಗಿದ್ದೀಯೆ. ಪುಣ್ಯ ಜಲವುಳ್ಳವಳೇ ನಿನಗೆ ನಮಸ್ಕಾರವು ಸಾಗರವನ್ನು ಹೊಂದುವವಳೆ ನಿನಗೆ ನಮಸ್ಕಾರವು ಪಾಪವನ್ನು ಹಾಳುಮಾಡುವವಳೇ ನಿನಗೆ ನಮಸ್ಕಾರವು. ವರಾಂಗನೆಯಾದ ಸರಸ್ವತಿಯೇ ನಿನಗೆ ನಮಸ್ಕಾರವು.

೧೨೦. ಪುಲಸ್ತ್ಯನು ಹೇಳಿದನು- ಪೂರ್ವ ದಿಕ್ಕಿಗೆ ಸರಸ್ವತಿಯು ಹರಿಯುತ್ತಿರುವ ಸ್ಥಳದಲ್ಲಿ ದೇವತೆಗಳು ಅವಳಲ್ಲಿರುವ ಗುಣಗಳಿಂದ ಈ ರೀತಿ ಸ್ತೋತ್ರ ಮಾಡಿದರು.

೧೨೧. ಈ ಸರಸ್ವತಿಯು ಎಲ್ಲಾ ತೀರ್ಥಗಳಲ್ಲಿಯೂ ಶ್ರೇಷ್ಠಳು. ಎಲ್ಲಾ ದೇವತೆಗಳಿಂದಲೂ ಕೂಡಿದ್ದಾಳೆ. ಅನಂತರ ಇವಳು ಪಶ್ಚಿಮಕ್ಕೆ ತಿರುಗಿದ್ದಾಳೆಂದು ತಿಳಿಯಿರಿ. ಬ್ರಹ್ಮನು ಹಾಗೆ ಹೇಳಿರುವನು.

ತತ್ರ ಶುದ್ಧಾವಟಂ ನಾಮ ತೀರ್ಥಂ ಪೈತಾಮಹಂ ಸ್ಮೃತಂ ।
ದರ್ಶನೇನಾಪಿ ತೇ ತಸ್ಯ ಮಹಾಪಾತಕಿನೋಽಪಿ ಯೇ ॥ ೧೨೨ ॥

ಭೋಗಿಭೋಗಾನ್ಸಮಶ್ನಂತಿ ವಿಶುದ್ಧಾ ಬ್ರಹ್ಮಣೋಂತಿಕೇ ।
ಪ್ರಾಯೋಪವೇಶಂ ಯೇ ತತ್ರ ಪ್ರಕುರ್ವಂತಿ ನರೋತ್ತಮಾಃ ॥ ೧೨೩ ॥

ತೇ ಮೃತಾ ಹಂಸಯಾನೇನ ಶಿವಂ ಯಾಂತ್ಯಕುತೋಭಯಾಃ ।
ತತ್ರಾಲ್ಪಮಪಿ ಯದ್ದತ್ತಂ ದಾನಂ ಬ್ರಹ್ಮವಿದಾತ್ಮನಾಂ ॥ ೧೨೪ ॥

ಜನ್ಮಾಂತರಶತಂ ತೇಷಾಂ ಯಚ್ಛಂತೇ ಭಾವಿತಾತ್ಮನಾಂ ।
ಖಂಡಸ್ಫಟಿಕಸಂಸ್ಕಾರಂ ತತ್ರ ಕುರ್ವಂತಿ ಯೇ ನರಾಃ ॥ ೧೨೫ ॥

ತೇ ಬ್ರಹ್ಮಲೋಕಮಾಸಾದ್ಯ ಮೋದಂತೇ ಸುಖಿನಸ್ಸದಾ ।
ತತ್ರ ಪೂಜಾ ಜಪೋ ಹೋಮಃ ಕೃತೋ ಭವತಿ ದೇಹಿನಾಂ ॥ ೧೨೬ ॥

ಅನಂತಫಲದಂ ಸರ್ವಂ ಬ್ರಹ್ಮಭಕ್ತಿರತಾತ್ಮನಾಂ ।
ತತ್ರ ದೀಪಪ್ರದಾನೇನ ಜ್ಞಾನಚಕ್ಷುರತೀಂದ್ರಿಯಃ ॥ ೧೨೭ ॥

ಪ್ರಾಪ್ನೋತಿ ಧೂಪದಾನೇನ ಸ್ಥಾನಂ ಬ್ರಹ್ಮನಿಷೇವಿತಂ ।
ಅಥ ಕಿಂ ಬಹುನೋಕ್ತೇನ ಸಂಗಮೋ ಯತ್ತು ದೀಯತೇ ॥ ೧೨೮ ॥

---

೧೨೨-೧೨೮. ಅಲ್ಲಿ ಶುದ್ಧಾವಟವೆಂಬ ಪಿತಾಮಹ ತೀರ್ಥವಿದೆ. ಅದನ್ನು ನೋಡುವುದರಿಂದ ಮಹಾ ಪಾತಕಿಗಳೂ ಕೂಡ ಶುದ್ಧರಾಗಿ ಬ್ರಹ್ಮನ ಬಳಿಯಲ್ಲಿ ಸುಖಗಳನ್ನು ಅನುಭವಿಸುತ್ತಾರೆ. ಅಲ್ಲಿ ಯಾರು ಪ್ರಾಯೋಪವೇಶವನ್ನು ಮಾಡುತ್ತಾರೆಯೋ ಅವರು ಸತ್ತಮೇಲೆ ಭಯವಿಲ್ಲದೆ ಹಂಸಯಾನದಿಂದ ಉತ್ತಮವಾದ ಬ್ರಹ್ಮಲೋಕವನ್ನು ಹೊಂದುತ್ತಾರೆ. ಅಲ್ಲಿ ಸ್ವಲ್ಪವನ್ನಾದರೂ ದಾನಮಾಡಿದರೆ ಅದು ದಾತೃವಿಗೆ ನೂರು ಜನ್ಮಗಳವರೆಗೂ ಫಲವನ್ನು ಕೊಡುತ್ತದೆ. ಅಲ್ಲಿ ಖಂಡ ಸ್ಫಟಿಕಸಂಸ್ಕಾರವನ್ನು ಮಾಡಿದರೆ ಅವರು ಬ್ರಹ್ಮಲೋಕವನ್ನು ಹೊಂದಿ ಸುಖಿಗಳಾಗಿ ವಾಸಮಾಡುತ್ತಾರೆ. ಅಲ್ಲಿ ಮಾಡುವ ಜಪ ಹೋಮ ಇವುಗಳನ್ನು ಬ್ರಹ್ಮನಲ್ಲಿ ಭಕ್ತಿಯಿಂದ ಮಾಡಿದರೆ ಬಹು ಫಲವನ್ನು ಕೊಡುತ್ತದೆ. ಅಲ್ಲಿ ದೀಪದಾನಮಾಡಿದರೆ ಜ್ಞಾನಿಯಾಗುವನು. ಊಹೆಯ ಶಕ್ತಿ ಬರುವುದು. ಧೂಪವನ್ನು ದಾನಮಾಡಿದರೆ

ತದನಂತಫಲಂ ಪ್ರೋಕ್ತಂ ಜೀವತೋ ವಾ ಮೃತಸ್ಯ ಚ ।
ಸ್ನಾನಾಜ್ಜಪಾತ್ತಥಾಹೋಮಾದನಂತಫಲಸಾಧಕಂ ॥ ೧೨೯ ॥

ರಾಮೇಣಾಗತ್ಯ ವೈ ತತ್ರ ಪಿಂಡಂ ದಶರಥಸ್ಯ ತು ।
ದತ್ತಂ ಶ್ರಾದ್ಧಂ ತತ್ರ ತೇನ ಮಾರ್ಕಂಡೇಯೇನ ದರ್ಶಿತಂ ॥ ೧೩೦ ॥

ತತ್ರ ವಾಪೀ ಚತುಷ್ಕೋಣಾ ತತ್ರ ಪಿಂಡಪ್ರದಾ ನರಾಃ ।
ಹಂಸಯುಕ್ತೇನ ಯಾನೇನ ಯಾನ್ತಿ ಸರ್ವೇ ತ್ರಿವಿಷ್ಟಪಂ ॥ ೧೩೧ ॥

ತಸ್ಮಾದುಪರಿ ವೈ ಬ್ರಹ್ಮಾ ಪಿತೃಮೇಧಂ ಚಕಾರ ಹ ।
ಯಜ್ಞಂ ಯಜ್ಞವಿದಾಂ ಶ್ರೇಷ್ಠಃ ಸಮಾಪ್ತವರದಕ್ಷಿಣಂ ॥ ೧೩೨ ॥

ವಸವಃ ಪಿತರೋ ಜ್ಞೇಯಾ ರುದ್ರಾಶ್ಚೈವ ಪಿತಾಮಹಾಃ ।
ಆದಿತ್ಯಾಶ್ಚ ತತಸ್ತೇಷಾಂ ವಿಹಿತಾಃ ಪ್ರಪಿತಾಮಹಾಃ ॥ ೧೩೩ ॥

---

ಬ್ರಹ್ಮನ ಸ್ಥಾನವು ಸಿಕ್ಕುತ್ತದೆ. ಬಹಳ ಹೇಳಿದುದರಿಂದೇನು ? ಅಲ್ಲಿ ಸ್ನಾನ, ಜಪ ಹೋಮಗಳನ್ನು ಮಾಡಿದರೆ ಸತ್ತವನಿಗಾಗಲಿ ಇರುವವನಿಗಾಗಲಿ ಒಹು ಫಲವನ್ನು ಕೊಡುತ್ತದೆ.

೧೩೦-೧೩೧. ರಾಮನು ಅಲ್ಲಿಗೆ ಬಂದಾಗ ಮಾರ್ಕಂಡೇಯನ ಮಾತಿನಂತೆ ಶ್ರಾದ್ಧಮಾಡಿ ದಶರಥನಿಗೆ ಪಿಂಡವನ್ನು ಹಾಕಿದನು. ಅಲ್ಲಿ ನಾಲ್ಕು ಮೂಲೆಗಳುಳ್ಳ ಒಂದು ಭಾವಿ ಇದೆ. ಅಲ್ಲಿ ಪಿಂಡವನ್ನು ಹಾಕಿದರೆ ಅವರು ಹಂಸಯಾನದಿಂದ ಸ್ವರ್ಗವನ್ನು ಸೇರುತ್ತಾರೆ.

೧೩೨. ಅದರ ಹತ್ತಿರ ಬ್ರಹ್ಮನು ಪಿತೃಮೇಧವನ್ನು (ಸತ್ತವರಿಗೆ ಮಾಡುವ ಕರ್ಮ) ಮಾಡಿದನು. ಯಜ್ಞದ ವಿಷಯವನ್ನು ಬಲ್ಲ ಆತನು ಸಾಕಾದಷ್ಟು ದಕ್ಷಿಣೆ ಯನ್ನಿಟ್ಟಿದ್ದನು

೧೩೩. ವಸುಗಳೇ ಪಿತೃಗಳು, ರುದ್ರರೇ ಪಿತಾಮಹರು, ಆದಿತ್ಯರೇ ಪ್ರಪಿತಾ ಮಹರು, ಈ ರೀತಿ ಕಲ್ಪಿಸಿದನು.

ತ್ರಿವಿಧಾ ಅಪಿ ಆಹೂಯ ಪುನರುಕ್ತ್ವಾ ವಿರಂಚಿನಾ ।
ಭವದ್ಭಿಃ ಪಿಂಡದಾನಾದ್ಯಂ ಗ್ರಾಹ್ಯಮತ್ರಸ್ಥಿತೈಸ್ಸದಾ ॥ ೧೩೪ ॥

ಯತ್ಕೃತಂ ಪಿತೃಕಾರ್ಯಂ ಚ ತದನಂತಫಲಂ ಭವೇತ್ ।
ತೃಪ್ತ್ಯರ್ಥಂ ಪಿತರಸ್ತೇಷಾಂ ತುಷ್ಟಾಶ್ಚೈವ ಪಿತಾಮಹಾಃ ॥ ೧೩೫ ॥

ಲಭಂತೇ ತರ್ಪಣಾತ್ತೃಪ್ತಿಂ ಪಿಂಡದಾನಾತ್ತ್ರಿವಿಷ್ಟಪಂ ।
ತಸ್ಮಾತ್ಸರ್ವಂ ಪರಿತ್ಯಜ್ಯ ಪ್ರಾಚೀನೇ ಪಿಂಡದೋ ಭವ ॥ ೧೩೬ ॥

ಗತ್ವಾ ಪುತ್ರಃ ಪ್ರಯತ್ನೇನ ಪಿತೄನ್ಸರ್ವಾನ್ಪ್ರತರ್ಪಯೇತ್ ।
ಪ್ರಾಚೀನೇಶ್ವರದೇವಸ್ಯ ಪುರೋಭೂತಂ ಪ್ರತಿಷ್ಠಿತಂ ॥ ೧೩೭ ॥

ಆದಿತೀರ್ಥಂ ತದಿತ್ಯುಕ್ತಂ ದರ್ಶನಾದಪಿ ಮುಕ್ತಿದಂ ।
ಸ್ಪೃಷ್ಟ್ವಾ ತು ಸಲಿಲಂ ತತ್ರ ಮುಚ್ಯತೇ ಜನ್ಮಬಂಧನಾತ್ ॥ ೧೩೮ ॥

---

೧೩೪. ಬ್ರಹ್ಮನು ಆ ಮೂರು ಗುಂಪಿನವರನ್ನೂ ಕರೆದು ನೀವು ಇಲ್ಲಿದ್ದು ಕೊಂಡು ಪಿಂಡದಾನವನ್ನು ತೆಗೆದುಕೊಳ್ಳಬೇಕು. ಎಂದನು.

೧೩೫. ಅಲ್ಲಿ ಮಾಡಿದ ಪಿತೃಕಾರ್ಯಗಳು ಅನಂತಫಲವನ್ನು ಕೊಡುತ್ತವೆ. ಅವರ ಪಿತೃಗಳು ಪಿತಾಮಹರು ಬಹು ತೃಪ್ತಿಹೊಂದುತ್ತಾರೆ. ತರ್ಪಣ ಮಾಡಿದು ದರಿಂದ ತೃಪ್ತಿಯನ್ನೂ ಪಿಂಡಹಾಕುವುದರಿಂದ ಸ್ವರ್ಗವನ್ನೂ ಹೊಂದುತ್ತಾರೆ.

೧೩೬. ಆದ್ದರಿಂದ ಆ ಪಶ್ಚಿಮದಿಕ್ಕಿನ ಸ್ಥಳಕ್ಕೆ ಪ್ರಯತ್ನಪಟ್ಟು ಹೋಗಿ ಪಿಂಡ ವನ್ನು ಕೊಡು. ಮಗನಾದವನು ಪ್ರಯತ್ನದಿಂದ ಅಲ್ಲಿಗೆ ಹೋಗಿ ತರ್ಪಣವನ್ನೂ ಪಿಂಡಗಳನ್ನೂ ಕೊಡಬೇಕು.

೧೩೭-೧೩೮. ಪ್ರಾಚೀನೇಶ್ವರನ ಮುಂದೆ ಈ ಆದಿತೀರ್ಥವು ಪ್ರತಿಷ್ಠಿತವಾಗಿದೆ. ಅದನ್ನು ನೋಡುವುದರಿಂದಲೇ ಮುಕ್ತಿಯನ್ನು ಕೊಡುತ್ತದೆ. ಆ ನೀರನ್ನು ಮುಟ್ಟಿ ದರಿಂತೂ ಪುನರ್ಜನ್ಮವೇ ಇರುವುದಿಲ್ಲ.

ಅವಗಾಹನಾದ್ಬ್ರಹ್ಮಣೋಽಸೌ ಭವತ್ಯನುಚರಸ್ಸದಾ ।
ಆದಿತೀರ್ಥೇ ನರಸ್ಸ್ನಾತ್ವಾ ಯಃ ಪ್ರದದ್ಯಾತ್ಸಮಾಧಿನಾ　　॥ ೧೩೯ ॥

ಅನ್ನಮಲ್ಪಮಪಿ ಪ್ರಾಯಃ ಪ್ರಾಯಶಃ ಸ್ವರ್ಗಮಾಪ್ನುಯಾತ್ ।
ಯಸ್ತತ್ರ ಬ್ರಹ್ಮಭಕ್ತಾನಾಂ ಸ್ನಾತ್ವಾ ದದ್ಯಾನ್ನರಸ್ಸುಧೀಃ　　॥ ೧೪೦ ॥

ಕೃಶರೇಣಾಪಿ ಹೇಮ್ನಾ ಚ ಸ ಸ್ವರ್ಗೇ ಮೋದತೇ ಸುಖೀ ।
ಪ್ರಾಚೀ ಸರಸ್ವತೀ ಯತ್ರ ನರೈಃ ಕಿಂ ಮೃಗ್ಯತೇ ಪರಂ　　॥ ೧೪೧ ॥

ತತ್ಸ್ನಾನಾತ್ಫಲಸಂಭೂತ್ಯೈ ತಪೋ ಜಪಾದಿ ಲಕ್ಷಣಂ ।
ಯೇ ಪಿಬಂತಿ ನರಾಃ ಪುಣ್ಯಾಃ ಪ್ರಾಚೀಂ ದೇವೀಂ ಸರಸ್ವತೀಂ　　॥ ೧೪೨ ॥

ನ ತೇ ನರಾಸ್ಸುರಾ ಜ್ಞೇಯಾ ಮಾರ್ಕಂಡೇಯರ್ಷಿರಬ್ರವೀತ್ ।
ಸರಸ್ವತೀಂ ನದೀಂ ಪ್ರಾಪ್ಯ ನ ಸ್ನಾನೇ ನಿಯಮಃ ಕ್ವಚಿತ್　　॥ ೧೪೩ ॥

---

೧೩೯. ಆ ತೀರ್ಥದಲ್ಲಿ ಇಳಿದು ಸ್ನಾನಮಾಡಿದರೆ ಅವನು ಬ್ರಹ್ಮನಿಗೆ ಸೇವಕನಾಗಿ ಆಗುತ್ತಾನೆ. ಆದಿತೀರ್ಥದಲ್ಲಿ ಸ್ನಾನಮಾಡಿ ಒಳ್ಳೆಯ ಮನಸ್ಸಿನಿಂದ ಸ್ವಲ್ಪವನ್ನು ದಾನಮಾಡಿದರೂ ಅವನು ಸ್ವರ್ಗವನ್ನು ಹೊಂದುತ್ತಾನೆ.

೧೪೦. ಅಲ್ಲಿ ಸ್ನಾನಮಾಡಿ ಬ್ರಹ್ಮಭಕ್ತರಿಗೆ ಸ್ವಲ್ಪ ಚಿನ್ನವನ್ನು ದಾನಮಾಡಿದರೂ ಸುಖವಾಗಿ ಸ್ವರ್ಗದಲ್ಲಿರುತ್ತಾನೆ

೧೪೧. ಸರಸ್ವತಿಯು ಪೂರ್ವದಿಕ್ಕಿನಲ್ಲಿ ಹರಿಯುವಲ್ಲಿ ಸ್ನಾನಮಾಡಿದರೆ ಏನನ್ನೂ ಯೋಚಿಸಬೇಕಾದುದಿಲ್ಲ. ಅಲ್ಲಿ ಸ್ನಾನಮಾಡಿ ಜಪತಪಗಳನ್ನು ಮಾಡಿದರೆ ಬಹು ಫಲವುಂಟು.

೧೪೨. ಪೂರ್ವದಿಕ್ಕಿನಲ್ಲಿ ಸರಸ್ವತಿಯ ನೀರನ್ನು ಕುಡಿದರೆ ಅವರು ಮನುಷ್ಯರಲ್ಲ ದೇವತೆಗಳಾಗುವರೆಂದು ಮಾರ್ಕಂಡೇಯನು ಹೇಳಿರುವನು.

೧೪೩. ಸರಸ್ವತಿಯ ನದಿಯ ಬಳಿಗೆ ಹೋದರೆ ಊಟಮಾಡಿರಲಿ, ಇಲ್ಲದಿರಲಿ. ರಾತ್ರಿಯಾಗಲಿ, ಹಗಲಾಗಲಿ, ಅರ್ಧರಾತ್ರಿಯಾಗಲಿ, ಆಗ ಸ್ನಾನಮಾಡಬಹುದು. ನಿಯಮವೇನೂ ಅಲ್ಲಿಲ್ಲ.

ಭುಕ್ತೇ ವಾ ಯದಿ ವಾಭುಕ್ತೇ ದಿವಾ ವಾ ಯದಿ ವಾ ನಿಶಿ ।
ತತ್ತೀರ್ಥಂ ಸರ್ವತೀರ್ಥಾನಾಂ ಪ್ರಾಚೀನಂ ಪ್ರವರಂ ಸ್ಮೃತಂ ॥ ೧೪೪ ॥

ಪಾಪಘ್ನಂ ಪುಣ್ಯಜನನಂ ಪ್ರಾಣಿನಾಂ ಪರಿಕೀರ್ತಿತಂ ।
ಯೇ ಪುನರ್ಭಾವಿತಾತ್ಮಾನೋ ತತ್ರ ಸ್ನಾತ್ವಾ ಜನಾರ್ದನಂ ॥ ೧೪೫ ॥

ಪೂಜಯಂತಿ ಯಥಾಶಕ್ತಿ ತೇ ಪ್ರಯಾನ್ತಿ ತ್ರಿವಿಷ್ಟಪಂ ।
ದೇವಾನಾಂ ಪ್ರವರೋ ವಿಷ್ಣುಸ್ತೇನ ಯತ್ರ ಸರಸ್ವತೀ ॥ ೧೪೬ ॥

ಸೇವಿತಾ ತತ್ಪರಂ ತೀರ್ಥಂ ಕ್ಷಿತೌ ಬ್ರಹ್ಮಸುತೋಽಬ್ರವೀತ್ ।
ತತಸ್ತಸ್ಮಾನ್ಮಹಾತೀರ್ಥಂ ಮನ್ಯಮಾನಾ ಮಹೋದಯಂ ॥ ೧೪೭ ॥

ಮಂದಾಕಿನೀಮುದೀಕ್ಷನ್ತೀ ಸ್ಥಿತಾ ತತ್ರ ಸರಸ್ವತೀ ।
ತತ್ತೀರ್ಥಂ ಸರ್ವತೀರ್ಥಾನಾಂ ಪರಂ ಸ್ವಾಯಂಭುವೋಽಬ್ರವೀತ್ ॥ ೧೪೮ ॥

ಮಂದಾಕಿನ್ಯಾ ಸಮಂ ಯತ್ರ ಪ್ರಾಪ್ಯ ಪುಣ್ಯಸಮಾಗಮಂ ।
ತತ್ರ ಸಾ ಸಂಸ್ಥಿತಾ ದೈವೈಃ ಸ್ತುತಾ ದೇವೀ ಸರಸ್ವತೀ ॥ ೧೪೯ ॥

---

೧೪೪. ಆ ತೀರ್ಥವು ಎಲ್ಲಾ ತೀರ್ಥಗಳಿಗಿಂತಲೂ ಪ್ರಾಚೀನವು. ಮತ್ತು ಶ್ರೇಷ್ಠವೆಂದು ತಿಳಿ. ಪಾಪವನ್ನು ನಾಶಮಾಡಿ ಪುಣ್ಯವನ್ನು ಪ್ರಾಣಿಗಳಿಗೆ ಕೊಡುತ್ತದೆ. ಎಂದು ಹೇಳಲ್ಪಟ್ಟಿದೆ.

೧೪೫. ಯಾರು ಜಿತೇಂದ್ರಿಯರಾಗಿ ಅಲ್ಲಿ ಸ್ನಾನಮಾಡಿ ಶಕ್ತ್ಯನುಸಾರ ವಿಷ್ಣುವನ್ನು ಪೂಜಿಸುವರೋ ಅವರು ಸ್ವರ್ಗವನ್ನು ಹೊಂದುತ್ತಾರೆ.

೧೪೬. ದೇವತೆಗಳಿಗೆ ಶ್ರೇಷ್ಠನಾದವನು ವಿಷ್ಣುವು. ಅವನಿರುವಲ್ಲಿ ಸರಸ್ವತಿಯನ್ನು ಸೇವಿಸಬೇಕು. ಅದು ಉತ್ತಮತೀರ್ಥವೆಂದು ವಶಿಷ್ಠನು ಹೇಳಿದ್ದಾನೆ.

೧೪೭-೧೪೮. ಅಲ್ಲಿ ಮಂದಾಕಿನಿಯನ್ನು ಸರಸ್ವತಿಯು ನೋಡುತ್ತಿರುವುದರಿಂದ ಅದನ್ನು ಎಲ್ಲರೂ ಮಹಾತೀರ್ಥವೆಂದು ಹೇಳುತ್ತಾರೆ. ಅದು ಎಲ್ಲಾ ತೀರ್ಥಗಳಿಗಿಂತಲೂ ಉತ್ತಮವೆಂದು ಸ್ವಾಯಂಭುವಮನುವು ಹೇಳಿದ್ದಾನೆ.

೧೪೯-೧೫೨. ಆ ಸರಸ್ವತಿಯು ಮಂದಾಕಿನಿಯೊಡನೆ ಸೇರಿತು. ಆಗ ದೇವತೆಗಳು ಅದನ್ನು ಹೊಗಳಿದರು. ಆಗ ಬ್ರಹ್ಮನು ಶಾನ್ತಿಯಿಲ್ಲದ ಮನಸ್ಸುಳ್ಳ ಆಕ

ತಾಮಾಲೋಕ್ಯ ತಥಾ ದೀನಾಂ ದೀನಾಸ್ಯಾಂ ದೀನಮಾನಸಾಂ ।
ಸಖೀಂ ತದಾ ಸೃಜದ್ಬ್ರಹ್ಮಾ ರೂಪಿಣೀಂ ವಿಮಲೇಕ್ಷಣಾಂ ॥ ೧೫೦ ॥

ರೋಹಿಣೀಂ ಹರಿರಸ್ರಾಕ್ಷ್ಯಶು ಜಜ್ಞೇ ಕಮಲಲೋಚನಾಂ ।
ವಜ್ರಿಣೀಮಪಿ ದೇವೇಶೋ ವಜ್ರಪಾಣಿರ್ವಿಸೃಷ್ಟವಾನ್ ॥ ೧೫೧ ॥

ನ್ಯಂಕುಂ ನಗರುಚಿರ್ದೇವೋ ನೀಲಕಂಠೋ ವೃಷಧ್ವಜಃ ।
ಸಖೀಂ ಸಂಜನಯಾಮಾಸ ಸರಸ್ವತ್ಯಾಸ್ತ್ರಿಲೋಚನಃ ॥ ೧೫೨ ॥

ನಿವೇದ್ಯಮಾನಾ ಸಾ ರಾಜನ್ಸಖೀಭ್ಯಸ್ಸುರಸುಂದರೀ ।
ಪ್ರಹೃಷ್ಟಾ ಯಾತುಮಾರಬ್ಧಾ ದೇವಾದೇಶಾನ್ಮಹಾನದೀ ॥ ೧೫೩ ॥

ತತಸ್ಸಾ ಸಖಿಭಿಸ್ಸಾರ್ಧಂ ಪ್ರಾಚೀನಾ ಗಂತುಮುದ್ಯತಾ ।
ಸರಸ್ವತೀ ಸಮಸ್ತಾನಾಂ ತಾಸಾಂ ಶ್ರೇಷ್ಠತಮಾ ಸ್ಮೃತಾ ॥ ೧೫೪ ॥

ಪ್ರಾಚೀ ಸರಸ್ವತೀತೋಯಂ ಯೇ ಪಿಬಂತಿ ಮೃಗಾ ಭುವಿ ।
ತೇಽಪಿ ಸ್ವರ್ಗಂ ಗಮಿಷ್ಯಂತಿ ಯಜ್ಞೈರ್ದ್ವಿಜವರಾ ಯಥಾ ॥ ೧೫೫ ॥

---

ಯನ್ನು ನೋಡಿ ರೂಪವುಳ್ಳ ಆ ಗಂಗೆಯು ಅಲ್ಲಿಗೆ ಸಖಿಯಾಗಿ ಬರುವಂತೆ ಮಾಡಿದನು. ಹರಿಯು ರೋಹಿಣಿಯನ್ನೂ ವಜ್ರಪಾಣಿಯಾದ ಇಂದ್ರನು ವಜ್ರಿಣಿನದಿಯನ್ನೂ ತ್ರಿಲೋಚನನಾದ ಈಶ್ವರನು ನ್ಯಂಕುವೆಂಬ ನದಿಯನ್ನೂ ಆವಳಿಗೆ ಸಖಿಯನ್ನಾಗಿ ಸೃಷ್ಟಿಸಿದರು.

೧೫೩. ನದಿಗಳೆಲ್ಲರೂ ನಿನ್ನ ಸಖಿಯರೆಂದು ಅವರು ಹೇಳಲು ಆಕೆಯು ಸಂತೋಷಗೊಂಡು ಬ್ರಹ್ಮನ ಅಪ್ಪಣೆಯಿಂದ ಮುಂದೆ ಹೊರಟಳು.

೧೫೪. ಆ ಮೇಲೆ ಸರಸ್ವತಿಯು ಸಂತೋಷಗೊಂಡು ಪೂರ್ವದಿಕ್ಕಿಗೆ ಹೊರಟಳು. ಆ ನದಿಗಳಲ್ಲೆಲ್ಲಾ ಸರಸ್ವತಿಯೇ ಶ್ರೇಷ್ಠವಾದುದು.

೧೫೫. ಪೂರ್ವದಿಕ್ಕಿನ ಸರಸ್ವತಿಯ ನೀರನ್ನು ಕುಡಿದ ಮೃಗಗಳೂ ಕೂಡ ಯಜ್ಞದಿಂದ ಬ್ರಾಹ್ಮಣರು ಸ್ವರ್ಗವನ್ನು ಹೊಂದುವಂತೆ ಸ್ವರ್ಗವನ್ನು ಹೊಂದುತ್ತವೆ.

ಚಿಂತಾಮಣಿರಿವ ಹ್ಯೇಷಾ ಪ್ರಾಚೀ ಜ್ಞೇಯಾ ಸರಸ್ವತೀ ।
ತಥಾ ಕಾಮಫಲಸ್ಯಾಲಂ ಹೇತುಭೂತಾ ಮಹಾನದೀ ॥ ೧೫೬ ॥

ದಕ್ಷಿಣಾಂ ದಿಶಮಾಲೋಕ್ಯ ಪುನಃ ಪಶ್ಚಾನ್ಮುಖೀ ಗತಾ ।
ಉಕ್ತಾ ತಥಾ ತಯಾ ಗಂಗಾ ದಿಶಂ ಪ್ರಾಚೀಂ ವ್ರಜಸ್ವ ಹ
ನ ತೇಹಂ ವಿಸ್ಮರಣೀಯಾ ವ್ರಜ ದೇವಿ ಯಥಾಗತಂ ॥ ೧೫೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪುಷ್ಕರಮಾಹಾತ್ಮ್ಯೇ
ತೀರ್ಥಾವತಾರೋ ನಾಮ ಸಪ್ತವಿಂಶೋಽಧ್ಯಾಯಃ

---

೧೫೬. ಪೂರ್ವದಿಕ್ಕಿನ ಈ ಸರಸ್ವತಿಯು ಚಿಂತಾಮಣಿಯೆಂದು ತಿಳಿ. ಅದರಂತೆ ಇಷ್ಟವಾದ ಫಲಗಳನ್ನು ಕೊಡಲು ಈ ಮಹಾನದಿಯು ಕಾರಣವಾದುದು.

೧೫೭. ಅನಂತರ ಸರಸ್ವತಿಯು ದಕ್ಷಿಣಕ್ಕೆ ತಿರುಗಿ ಆ ಮೇಲೆ ಪಶ್ಚಿಮಕ್ಕೆ ಹೋಗಿದೆ. ಆಗ ಗಂಗೆಯನ್ನು ಕುರಿತು ನೀನು ಪೂರ್ವದಿಕ್ಕಿಗೆ ಬಂದಂತೆಯೇ ಹೋಗು. ನನ್ನನ್ನು ಮಾತ್ರ ಮರೆಯಬೇಡ. ಎಂದಳು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದ ಪುಷ್ಕರಮಹಿಮೆಯಲ್ಲಿ
ತೀರ್ಥಾವತಾರವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಅಷ್ಟವಿಂಶೋಽಧ್ಯಾಯಃ ॥



॥ ಭೀಷ್ಮ ಉವಾಚ ॥

**ಮಾರ್ಕಂಡೇಯೇನ ವೈ ರಾಮಃ ಕಥಮತ್ರ ಪ್ರಬೋಧಿತಃ ।**
**ಕಥಂ ಸಮಾಗಮೋ ಭೂತಃ ಕಸ್ಮಿನ್ಕಾಲೇ ಕದಾ ಮುನೇ ॥ ೧ ॥**

**ಮಾರ್ಕಂಡೇಯಃ ಕಸ್ಯ ಸುತಃ ಕಥಂ ಜಾತೋ ಮಹಾತಪಾಃ ।**
**ನಾಮ್ನೋಽಸ್ಯ ನಿಗಮಂ ಬ್ರೂಹಿ ಯಥಾಭೂತಂ ಮಹಾಮುನೇ ॥ ೨ ॥**

॥ ಪುಲಸ್ತ್ಯ ಉವಾಚ ॥

**ಅಥ ತೇ ಸಂಪ್ರವಕ್ಷ್ಯಾಮಿ ಮಾರ್ಕಂಡೇಯೋತ್ಪತ್ತಿಮುತ್ತಮಾಂ ।**
**ಪುರಾ ಕಲ್ಪೇ ಮುನಿಃ ಪೂರ್ವಂ ಮೃಕಂಡುರ್ನಾಮ ವಿಶ್ರುತಃ ॥ ೩ ॥**

---

### ಇಪ್ಪತ್ತೆಂಟನೆಯ ಅಧ್ಯಾಯವು

೧-೨. ಭೀಷ್ಮನು ಹೇಳಿದನು—ಮಾರ್ಕಂಡೇಯನು ರಾಮನನ್ನು ಹೇಗೆ ಜ್ಞಾನಿಯನ್ನಾಗಿ ಮಾಡಿದನು? ಇಬ್ಬರೂ ಸೇರಿದುದು ಹೇಗೆ? ಯಾವಾಗ? ಮಾರ್ಕಂಡೇಯನು ಯಾರ ಮಗನು? ಹೇಗೆ ಹುಟ್ಟಿದನು? ಇವನ ಹೆಸರಿಗೆ ಮೂಲವನ್ನು ಹೇಳು.

೩-೪. ಪುಲಸ್ತ್ಯನು ಹೇಳಿದನು—ಇನ್ನು ಮೇಲೆ ನಿನಗೆ ಉತ್ತಮವಾದ ಮಾರ್ಕಂಡೇಯನ ಚರಿತ್ರೆಯನ್ನು ಹೇಳುತ್ತೇನೆ. ಕೇಳು. ಹಿಂದಿನ ಕಲ್ಪದಲ್ಲಿ ಮೃಕಂಡು ಎಂಬ ಋಷಿಯೊಬ್ಬನು ಪ್ರಸಿದ್ಧನಾಗಿದ್ದನು. ಅವನು ಭೃಗುಪಿತ

ಭೃಗೋಃ ಪುತ್ರೋ ಮಹಾಭಾಗಃ ಸಭಾರ್ಯಸ್ತಪ್ತವಾಂಸ್ತಪಃ ।
ತಸ್ಯ ಪುತ್ರಸ್ತದಾ ಜಾತೋ ವಸತಸ್ತು ವನಾಂತರೇ ॥ ೪ ॥

ಸ ಪಂಚವಾರ್ಷಿಕೋ ಜಾತೋ ಬಾಲ ಏವ ಗುಣಾಧಿಕಃ ।
ಜ್ಞಾನಿನಾ ಸ ತದಾ ದೃಷ್ಟೋ ಭ್ರಮನ್ಬಾಲಸ್ತದಂಗಣೇ ॥ ೫ ॥

ಸ್ಥಿತ್ವಾ ಸ ಸುಚಿರಂ ಕಾಲಂ ತಜ್ಜೀವನಮಬುದ್ಧ್ಯತ ।
ತಸ್ಯ ಪಿತ್ರಾ ಸ ವೈ ಪೃಷ್ಟಃ ಕಿಯದಾಯುಸ್ಸುತಸ್ಯ ಮೇ ॥ ೬ ॥

ಸಂಖ್ಯಯಾಚಕ್ಷ್ವ ವರ್ಷಾಣಿ ತಾನ್ಯಸ್ಯಾಭ್ಯಧಿಕಾನಿ ಚ ।
ಮೃಕಂಡುನೈವಮುಕ್ತಸ್ತು ಸ ಜ್ಞಾನೀ ವಾಕ್ಯಮಬ್ರವೀತ್ ॥ ೭ ॥

॥ ಸಿದ್ಧ ಉವಾಚ ॥

ಷಣ್ಮಾಸಮಾಯುಃ ಪುತ್ರಸ್ಯ ಧಾತ್ರಾ ಸೃಷ್ಟಂ ಮುನೀಶ್ವರ ।
ನೈವ ಶೋಕಸ್ತ್ವಯಾ ಕಾರ್ಯಃ ಸತ್ಯಮೇತದುದಾಹೃತಂ ॥ ೮ ॥

---

ಮಗನು. ಒಂದು ಸಾರಿ ಹೆಂಡತಿಯೊಡನೆ ತಪಸ್ಸನ್ನು ಮಾಡಿದನು. ಕಾಡಿನಲ್ಲಿ ವಾಸಮಾಡುತ್ತಿರುವಾಗಲೇ ಅವನಿಗೊಬ್ಬನು ಮಗನಾದನು.

೫. ಅವನಿಗೆ ಐದು ವರ್ಷಗಳು ತುಂಬಿದವು. ಹುಡುಗನಾಗಿದ್ದರೂ ಗುಣಿಯಾಗಿದ್ದನು. ಹೀಗೆ ಇರುತ್ತಿರುವಲ್ಲಿ ಒಬ್ಬ ಜ್ಞಾನಿಯು ಅವರ ಮನೆಗೆ ಬಂದನು. ಅಂಗಳದಲ್ಲಿ ಓಡಿಯಾಡುತ್ತಿರುವ ಈ ಹುಡುಗನು ಆತನ ಕಣ್ಣಿಗೆ ಬಿದ್ದನು.

೬. ಬಹಳ ಹೊತ್ತು ಆ ಜ್ಞಾನಿಯು ಯೋಚಿಸಿ ಅವನ ಜೀವನವನ್ನು ತಿಳಿದುಕೊಂಡನು. ಆಗ ಅವನ ತಂದೆಯು ನನ್ನ ಮಗನ ಆಯುಸ್ಸೆಷ್ಟೆಂದನು.

೭. ಇವನಿಗಿರುವ ಆಯುಸ್ಸನ್ನು ಸಂಖ್ಯೆಗಳಿಂದ ನನಗೆ ತಿಳಿಸು ಎಂದನು. ಮೃಕಂಡುವು ಹೀಗೆ ಹೇಳಲು ಆ ಜ್ಞಾನಿಯು ಇಂತೆಂದನು.

೮. ಸಿದ್ಧನು ಹೇಳಿದನು—ಈ ಮಗುವಿಗೆ ಇನ್ನು ಆರು ತಿಂಗಳ ಆಯುಸ್ಸನ್ನು ದೇವರು ಕೊಟ್ಟಿದ್ದಾನೆ. ನಾನು ನಿಶ್ಚಯವನ್ನು ಹೇಳಿದ್ದೇನೆ. ನೀನು ದುಃಖಿಸಬೇಡ

॥ ಪುಲಸ್ತ್ಯ ಉವಾಚ ॥

ಸ ತಚ್ಛ್ರುತ್ವಾ ವಚೋ ಭೀಷ್ಮ ಜ್ಞಾನಿನಾ ಯದುದಾಹೃತಂ।
ಅಥೋಪನಯನಂ ಚಕ್ರೇ ಬಾಲಕಸ್ಯ ಪಿತಾ ತದಾ ॥ ೯ ॥

ಆಹ ಚೈನಂ ಪಿತಾ ಪುತ್ರಮೃಷಿಂ ತ್ವಮಭಿವಾದಯ ।
ಏವಮುಕ್ತಸ್ಸ ವೈ ಪಿತ್ರಾ ಸಂಹೃಷ್ಟಶ್ಚಾಭಿವಾದನಂ ॥ ೧೦ ॥

ನ ವರ್ಣಾವರ್ಣತಾಂ ವೇತ್ತಿ ಸಂಹೃಷ್ಟಶ್ಚಾಭಿವಾದನೇ ।
ಪಂಚಮಾಸಾಸ್ತ್ವತಿಕ್ರಾಂತಾ ದಿವಸಾಃ ಪಂಚವಿಂಶತಿಃ ॥ ೧೧ ॥

ಮಾರ್ಗೇಣಾಥಸಮಾಯಾತಾಸ್ತೇನ ಸಪ್ತರ್ಷಯೋಮಲಾಃ ।
ಬಾಲೇನ ತೇನ ತೇ ದೃಷ್ಟಾ ಸರ್ವೇ ಚಾಪ್ಯಭಿವಂದಿತಾಃ ॥ ೧೨ ॥

ಆಯುಷ್ಮಾನ್ಭವ ತೈರುಕ್ತಃ ಸ ಬಾಲೋ ದಂಡಮೇಖಲೀ ।
ಉಕ್ತ್ವೈವಂ ತೇ ಪುನರ್ಬಾಲಮಪಶ್ಯನ್ಕ್ಷೀಣಜೀವಿತಂ ॥ ೧೩ ॥

---

೯. ಪುಲಸ್ತ್ಯನು ಹೇಳಿದನು—ಮೃಕಂಡುವು ಆ ಸಿದ್ಧನ ಮಾತನ್ನು ಕೇಳಿ ಆ ಹುಡುಗನಿಗೆ ಉಪನಯನವನ್ನು ಮಾಡಿದನು.

೧೦. ಆಗ ತಂದೆಯು ಮಗನನ್ನು ಕುರಿತು ನೀನು ಋಷಿಗಳಿಗೆ ನಮಸ್ಕರಿಸು. ಎಂದನು. ತಂದೆಯ ಮಾತಿನಂತೆ ವರ್ಣ (ಜಾತಿ) ಗಳ ವ್ಯತ್ಯಾಸವನ್ನು ನೋಡದೆ ಎಲ್ಲರಿಗೂ ನಮಸ್ಕರಿಸುತ್ತಾ ಬಂದನು.

೧೧-೧೨. ಹೀಗೆ ನಮಸ್ಕರಿಸುತ್ತಿರಲು ಐದು ತಿಂಗಳು ಇಪ್ಪತ್ತೈದು ದಿವಸ ಗಳು ಕಳೆದುವು. ಹೀಗಿರಲು ಆ ದಾರಿಯಿಂದ ಶುದ್ಧರಾದ ಸಪ್ತರ್ಷಿಗಳು ಬರಲು ಈ ಮಗುವು ಸಂತೋಷದಿಂದ ಅವರಿಗೆ ನಮಸ್ಕರಿಸಿದನು.

೧೩. ದಂಡಮೌಂಜಿಗಳನ್ನು ಧರಿಸಿದ ಆ ಮಗುವನ್ನು ಅವರೆಲ್ಲರೂ ಆಯು ಷ್ಮಂತನಾಗೆಂದು ಹರಸಿದರು. ಹೀಗೆ ಹೇಳಿದನಂತರ ಅವರೆಲ್ಲರೂ ಆ ಹುಡುಗನನ್ನು ಆಯುಸ್ಸು ಕಳೆದಿರುವವನನ್ನಾಗಿ ತಿಳಿದರು.

ದಿನಾನಿ ಪಂಚ ತಸ್ಯಾಯುರ್ಜ್ಞಾತ್ವಾ ಭೀತಾಶ್ಚ ತೇ ನೃಪ ।
ತಂ ಗೃಹೀತ್ವಾ ಬಾಲಕಂ ಚ ಗತಾಸ್ತೇ ಬ್ರಹ್ಮಣೋಽಂತಿಕಂ ॥ ೧೪ ॥

ಪ್ರತಿಮುಚ್ಯ ಚ ತಂ ಬಾಲಂ ಪ್ರಣಿಪೇತುಃ ಪಿತಾಮಹಂ ।
ಅಯಮಾವೇಥಿತಸ್ತೈಸ್ತು ತೇನ ಬ್ರಹ್ಮಾಭಿವಾದಿತಃ ॥ ೧೫ ॥

ಚಿರಾಯುರ್ಬ್ರಹ್ಮಣಾ ಕಾಲಃ ಪ್ರೋಕ್ತಸ್ಸ ಋಷಿಸನ್ನಿಧೌ ।
ತತಸ್ತೇ ಮುನಯಃ ಪ್ರೀತಾಶ್ಶ್ರುತ್ವಾ ವಾಕ್ಯಂ ಪಿತಾಮಹಾತ್ ॥
ಪಿತಾಮಹೋ ಋಷೀನ್ದೃಷ್ಟ್ವಾ ಪ್ರೋವಾಚ ವಿಸ್ಮಯಾನ್ವಿತಃ ॥ ೧೬ ॥

॥ ಬ್ರಹ್ಮೋವಾಚ ॥

ಕಾರ್ಯೇಣ ಯೇನ ಚಾಯಾತಾಃ ಕೋಽಯಂ ಬಾಲೋ ನಿವೇದ್ಯತಾಂ ॥ ೧೭ ॥

॥ ಪುಲಸ್ತ್ಯ ಉವಾಚ ॥

ತತಸ್ತೇ ಋಷಯೋ ರಾಜನ್ಸರ್ವೇ ತಸ್ಮೈ ನ್ಯವೇದಯನ್ ॥ ೧೮ ॥

---

೧೪. ಆಗ ಅವರು ಅವನಿಗೆ ಐದು ದಿವಸದ ಆಯುಸ್ಸಿರುವುದನ್ನು ತಿಳಿದು ಹೆದರಿದರು. ಆ ಮಗುವನ್ನು ಕರೆದುಕೊಂಡು ಬ್ರಹ್ಮನ ಬಳಿಗೆ ಹೋದರು.

೧೫. ಆ ಹುಡುಗನನ್ನು ಅಲ್ಲಿ ಬಿಟ್ಟು ಬ್ರಹ್ಮನಿಗೆ ತಾವು ನಮಸ್ಕರಿಸಿದರು. ಅನಂತರ ಈ ಹುಡುಗನಿಗೆ ಹೇಳಿ ಬ್ರಹ್ಮನಿಗೆ ನಮಸ್ಕಾರವನ್ನೂ ಮಾಡಿಸಿದರು.

೧೬. ಆಗ ಆ ಬ್ರಹ್ಮನು ಋಷಿಗಳೆದುರಿಗೆ ಚಿರಾಯುವಾಗೆಂದು ಹರಸಿದನು. ಬ್ರಹ್ಮನ ಈ ಮಾತನ್ನು ಕೇಳಿ ಎಲ್ಲರೂ ಸಂತೋಷಗೊಂಡರು. ಆಗ ಬ್ರಹ್ಮನು ಆಶ್ಚರ್ಯದಿಂದ ಆ ಋಷಿಗಳನ್ನು ಕುರಿತು ಇಂತೆಂದನು.

೧೭. ಬ್ರಹ್ಮನು ಹೇಳಿದನು — ನೀವು ಏತಕ್ಕೆ ಬಂದಿರಿ ? ಈ ಹುಡುಗನಾರು ? ಎಂಬುದನ್ನು ತಿಳಿಸಿ ಎಂದನು.

೧೮. ಪುಲಸ್ತ್ಯನು ಹೇಳಿದನು — ಆಗ ಆ ಋಷಿಗಳು ಎಲ್ಲವನ್ನೂ ಬ್ರಹ್ಮನಿಗೆ ತಿಳಿಸಿದರು.

॥ ಋಷಯ ಊಚುಃ ॥

ಪುತ್ರೋ ಮೃಕಂಡೋಃ ಕ್ಷೀಣಾಯುಃ ಸಾಯುಷಂ ಕುರು ಬಾಲಕಂ ।
ಅಲ್ಪಾಯುಷಸ್ಸುತಸ್ಯಾಸ್ಯ ಬಧ್ವೇಮಾಂ ಚಾಪಿ ಮೇಖಲಾಂ ॥ ೧೯ ॥

ಯಜ್ಞೋಪವೀತಂ ದಂಡಂ ಚ ದತ್ವಾ ತೇನ ಪ್ರಬೋಧಿತಃ ।
ಯಂಕಂಚಿತ್ಪಶ್ಯಸೇ ಬಾಲ ಭ್ರಮಂತಂ ಭೂತಳೇ ಜನಂ ॥ ೨೦ ॥

ತಸ್ಯಾಭಿವಾದನಂ ಕಾರ್ಯಮೇವಮಾಹ ಪಿತಾ ವಚಃ ।
ಅಭಿವಾದನಶೀಲೋಽಯಂ ಕ್ಷಿತೌ ದೃಷ್ಟಃ ಪರಿಭ್ರಮನ್ ॥ ೨೧ ॥

ತೀರ್ಥಯಾತ್ರಾಪ್ರಸಂಗೇನ ದೈವಯೋಗಾತ್ಪಿತಾಮಹ ।
ಚಿರಾಯುರ್ಭವ ಪುತ್ರೇತಿ ಪ್ರೋಕ್ತೋಽಸೌ ತತ್ರ ಬಾಲಕಃ
ಕಥಂ ನಾಸ್ಯತಿನೋ ದೇವ ಭವಾನೋ ಭವತಾ ಸಹ ॥ ೨೨ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತಸ್ತದಾ ತೈಸ್ತು ಬ್ರಹ್ಮಾ ಲೋಕಪಿತಾಮಹಃ ।
ಋತವಾಕ್ಯಾದಿಯಂ ಭೂಮಿಃ ಸಂಸ್ಥಿತಾ ಸರ್ವತೋಽಭಯಾ ॥ ೨೩ ॥

---

೧೯–೨೨. ಋಷಿಗಳು ಹೇಳಿದರು- ಈತನು ಮೃಕಂಡುವಿನ ಮಗನು. ಕಡಿಮೆಯಾದ ಆಯುಸ್ಸುಳ್ಳವನು ಆ ಮೃಕಂಡುವು ಅಲ್ಪಾಯುಷ್ಯನಾದ ಈ ಮಗುವಿಗೆ ಈ ಮೇಖಲೆಯನ್ನು ಕಟ್ಟಿ ಯಜ್ಞೋಪವೀತವನ್ನು ಹಾಕಿ ದಂಡವನ್ನು ಕೊಟ್ಟು ಮುಂಜಿಮಾಡಿ ಅಪ್ಪ ಮಗೂ ! ಈ ಭೂಮಿಯಲ್ಲಿ ಯಾವನನ್ನು ಕಂಡರೂ ಅಭಿವಾದನೆಯನ್ನು ಮಾಡು. ಎಂದು ಹೇಳಿಕೊಟ್ಟಿರುವನು. ಹೀಗೆ ಇವನು ಎಲ್ಲರಿಗೂ ನಮಸ್ಕಾರಮಾಡುತ್ತಿದ್ದನು. ಒಂದು ದಿನ ತೀರ್ಥಯಾತ್ರೆಯ ಲೋಭದಿಂದ ಸುತ್ತುತ್ತಿರಲು ಇವನನ್ನು ಕಂಡೆವು ಈತನು ಅಭಿವಾದನೆಮಾಡಿದನು. ನಾವು ಚಿರಾಯುವಾಗಿ ಆಗೆಂದು ಆಶೀರ್ವದಿಸಿದೆವು. ಆದರಿಂದ ನಿನ್ನ ಬಳಿಗೆ ಕರತಂದೆವು. ಅವನಿಂದ ನಮಸ್ಕೃತವಾದ ನೀನೂ ಅದೇ ರೀತಿ ಆಶೀರ್ವದಿಸಿದೆ. ಈಗ ನೀನೂ ನಾವೂ ಕೂಡ ಈ ಸುಳ್ಳಿನಿಂದ ಪಾರಾಗಬೇಕು. ಹೇಗಾಗೋಣ ? ಎಂದರು.

೨೩. ಪುಲಸ್ತ್ಯನು ಹೇಳಿದನು- ಬ್ರಹ್ಮನನ್ನು ಕುರಿತು ಇವರೆಲ್ಲರೂ ಹೀಗೆ ಹೇಳಿದರು. ಸತ್ಯವಾಕ್ಯದಿಂದಲ್ಲವೇ ಈ ಭೂಮಿಯು ಭಯಪಡದೆ ಸರಿಯಾಗಿರತಕ್ಕದ್ದು.

॥ ಬ್ರಹ್ಮೋವಾಚ ॥

ಮತ್ಸಮಶ್ಚಾಯುಷಾ ಬಾಲೋ ಮಾರ್ಕಂಡೇಯೋ ಭವಿಷ್ಯತಿ ।
ಋಷೀಣಾಂ ಚಾಪಿ ಮುಖ್ಯಶ್ಚ ಮತ್ಸಹಾಯೋ ಭವಿಷ್ಯತಿ ॥
ಕಲ್ಪಸ್ಯಾದೌ ತಥಾ ಚಾನ್ತೇ ವೃತೋ ಮುನಿಭಿರುತ್ತಮೈಃ ॥ ೨೪ ॥

॥ ಪುಲಸ್ತ್ಯ ಉವಾಚ ॥

ಏವಂ ತೇ ಮುನಯೋ ಬಾಲಂ ಬ್ರಹ್ಮಲೋಕಾತ್ಪಿತಾಮಹಂ ।
ಸಂಸಾಧ್ಯ ಪ್ರೇಷಯಾಮಾಸುರ್ಭೂಯೋಽಪ್ಯೇತಂ ಧರಾತಲಂ ॥ ೨೫ ॥

ತೀರ್ಥಯಾತ್ರಾಂ ಗತಾ ವಿಪ್ರಾ ಮಾರ್ಕಂಡೇಯೋ ನಿಜಂ ಗೃಹಂ ।
ಜಗಾಮ ತೈರ್ಗತೈರ್ವಿಪ್ರೈಃ ಪಿತರಂ ಸ್ವಮಥಾಬ್ರವೀತ್ ॥ ೨೬ ॥

॥ ಮಾರ್ಕಂಡೇಯ ಉವಾಚ ॥

ಬ್ರಹ್ಮಲೋಕಮಹಂ ನೀತೋ ಮುನಿಭಿರ್ಬ್ರಹ್ಮವಾದಿಭಿಃ ।
ದೀರ್ಘಾಯುಶ್ಚ ಕೃತಶ್ಚಾಸ್ಮಿ ವರಾನ್ದತ್ವಾ ವಿಸರ್ಜಿತಃ ॥ ೨೭ ॥

---

೨೪. ಬ್ರಹ್ಮನು ಹೇಳಿದನು– ಈ ಮಾರ್ಕಂಡೇಯನು ನನ್ನ ಸಮವಾದ ಆಯುಸ್ಸನ್ನು ಹೊಂದುತ್ತಾನೆ. ಋಷಿಗಳಿಗೆ ಮುಖ್ಯನಾಗುತ್ತಾನೆ. ನನಗೆ ಸಹಾಯಕನಾಗುತ್ತಾನೆ. ಕಲ್ಪದ ಮೊದಲಿನಲ್ಲೂ ಕೊನೆಯಲ್ಲೂ ಕೂಡ ಋಷಿಗಳು ಇವನನ್ನು ಒಪ್ಪಿಕೊಳ್ಳುತ್ತಾರೆ. ಇವನು ಜೀವಂತನಾಗಿಯೇ ಇರುತ್ತಾನೆ.

೨೫. ಪುಲಸ್ತ್ಯನು ಹೇಳಿದನು - ಈ ರೀತಿ ಆಸಪ್ತರ್ಷಿಗಳು ಆ ಮಗುವಿಗೆ ಬ್ರಹ್ಮನಿಂದ ಆಯುಸ್ಸನ್ನು ಸಾಧಿಸಿಕೊಟ್ಟು ಮತ್ತೆ ಅವನನ್ನು ಈ ಭೂಲೋಕಕ್ಕೆ ಕಳುಹಿಸಿಕೊಟ್ಟರು.

೨೬. ಆ ಋಷಿಗಳು ತೀರ್ಥಯಾತ್ರೆಗೆ ಹೋದರು. ಮಾರ್ಕಂಡೇಯನು ತನ್ನ ಮನೆಗೆ ಹೋದನು. ಆ ಋಷಿಗಳು ಹೊರಟುಹೋದನಂತರ ಈ ಮಗುವು ತಂದೆಯನ್ನು ಕುರಿತು ಇಂತೆಂದನು.

೨೭. ಮಾರ್ಕಂಡೇಯನು ಹೇಳಿದನು ಆ ಬ್ರಹ್ಮವಾದಿಗಳಾದ ಋಷಿಗಳು ನನ್ನನ್ನು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋದರು. ಅಲ್ಲಿ ಬ್ರಹ್ಮನು ನನಗೆ ದೀರ್ಘಾಯುಸ್ಸನ್ನು ಕೊಟ್ಟು ವರಗಳನ್ನು ಕೊಟ್ಟು ಕಳುಹಿಸಿದನು.

ಏತದನ್ಯಚ್ಚ ಮೇ ದತ್ತಂ ಗತಂ ಚಿಂತಾಕರಂ ತವ ।
ಕಲ್ಪಸ್ಯಾದೌ ತಥಾ ಚಾನ್ತೇ ಭವಿಷ್ಯೇ ಸಮನಂತರಂ ॥ ೨೮ ॥

ಲೋಕಕರ್ತುರ್ಬ್ರಹ್ಮಣೋಹಂ ಪ್ರಸಾದಾತ್ತಸ್ಯ ವೈ ಮುನೇ ।
ಪುಷ್ಕರಂ ವೈ ಗಮಿಷ್ಯಾಮಿ ಬ್ರಹ್ಮಲೋಕಸಮಂ ಹಿ ತತ್ ॥ ೨೯ ॥

ತತ್ರಾಹಂ ದೇವದೇವೇಶಮುಪಾಸಿಷ್ಯೇ ಪಿತಾಮಹಂ ।
ಸರ್ವಕಾಮಾವಾಪ್ತಿಕರಂ ಸರ್ವಾರಾತಿನಿಬರ್ಹಣಂ ॥ ೩೦ ॥

ಸರ್ವಸೌಖ್ಯಪ್ರದಂ ದೇವಮಿಂದ್ರಾದೀನಾಂ ಪರಾಯಣಂ ।
ಬ್ರಹ್ಮಾಣಂ ತೋಷಯಿಷ್ಯಾಮಿ ಸರ್ವಲೋಕಪಿತಾಮಹಂ ॥ ೩೧ ॥

॥ ಪುಲಸ್ತ್ಯ ಉವಾಚ ॥

ಮಾರ್ಕಂಡೇಯವಚಶ್ಶ್ರುತ್ವಾ ಮೃಕಂಡುರ್ಮುನಿಸತ್ತಮಃ
ಜಗಾಮ ಪರಮಂ ಹರ್ಷಂ ಕ್ಷಣಮೇಕಂ ಸಮುಚ್ಛ್ವಸನ್ ॥
ಧೈರ್ಯಂ ಸುಮನಸಾಸ್ಥಾಯ ಇದಂ ವಚನಮಬ್ರವೀತ್ ॥ ೩೨ ॥

---

೨೮-೨೯. ಈ ವರವೂ ಇನ್ನೂ ಅನೇಕ ವರಗಳೂ ಕೊಡಲ್ಪಟ್ಟವು. ನಿನಗೆ ದುಃಖವನ್ನುಂಟುಮಾಡುವ ವಿಷಯವು ಹೋಯಿತು. ಕಲ್ಪದ ಆದಿ, ಅವರ ಮಧ್ಯ ಗಳಲ್ಲಿಯೂ ಕೂಡ ಲೋಕಸ್ರಷ್ಟೃವಾದ ಬ್ರಹ್ಮನ ಅನುಗ್ರಹದಿಂದ ಬದುಕಿರುತ್ತೇನೆ. ಈಗ ನಾನು ಬ್ರಹ್ಮಲೋಕಕ್ಕೆ ಸಮವಾದ ಪುಷ್ಕರಕ್ಕೆ ಹೋಗುತ್ತೇನೆ.

೩೦-೩೧. ಸರ್ವಕಾಮಗಳನ್ನು ಕೊಡುವ ಸರ್ವ ಶತ್ರುಗಳನ್ನು ನಾಶಮಾಡುವ ಸರ್ವ ಸೌಖ್ಯಗಳನ್ನು ಕೊಡುವ ಇಂದ್ರಾದಿಗಳಿಗೂ ರಕ್ಷಕನಾದ ದೇವದೇವನಾದ ಬ್ರಹ್ಮನನ್ನು ಆ ಪುಷ್ಕರದಲ್ಲಿ ಉಪಾಸನೆಮಾಡಿಕೊಂಡು ಸಂತೋಷಪಡಿಸುತ್ತೇನೆ

೩೨. ಪುಲಸ್ತ್ಯನು ಹೇಳಿದನು- ಮೃಕಂಡವು ಮಗನ ಈ ಮಾತನ್ನು ಕೇಳಿ ಬಹಳವಾಗಿ ಸಂತೋಷಪಟ್ಟರೂ ಅಗಲುವಿಕೆಯಿಂದ ಕ್ಷಣಕಾಲ ನಿಟ್ಟುಸಿರುಬಿಡುತ್ತಾ ಅನಂತರ ಧೈರ್ಯವನ್ನು ಹೊಂದಿ ಇಂತೆಂದನು.

॥ ಮೃಕಂಡುರುವಾಚ ॥

ಅದ್ಯಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ ।
ಸರ್ವಸ್ಯ ಜಗತಾಂ ಸ್ರಷ್ಟಾ ಯೇನ ದೃಷ್ಟಃ ಪಿತಾಮಹಃ ॥ ೩೩ ॥

ತ್ವಯಾ ದಾಯಾದವಾನಸ್ಮಿ ಪುತ್ರೇಣ ವಂಶಧಾರಿಣಾ ।
ತ್ವಂ ಪಶ್ಯ ಗಚ್ಛ ದೇವೇಶಂ ಪುಷ್ಕರಸ್ಥಂ ಪಿತಾಮಹಂ ॥ ೩೪ ॥

ದೃಷ್ಟೇ ತಸ್ಮಿಞ್ಜಗನ್ನಾಥೇ ನ ಜರಾ ಮೃತ್ಯುರೇವ ಚ ।
ನೃಣಾಂ ಭವತಿ ಸೌಖ್ಯಾನಿ ತಪೈಶ್ವರ್ಯಂ ತಥಾಽಕ್ಷಯಂ ॥ ೩೫ ॥

ತ್ರೀಣಿ ಶೃಂಗಾಣಿ ಶುಭ್ರಾಣಿ ತ್ರೀಣಿ ಪ್ರಸ್ರವಣಾನಿ ಚ ।
ಪುಷ್ಕರಾಣಿ ತಥಾ ತ್ರೀಣಿ ನ ವಿದ್ಮಸ್ತತ್ರ ಕಾರಣಂ ॥ ೩೬ ॥

ಕನೀಯಾಂಸಂ ಮಧ್ಯಮಂ ಚ ತೃತೀಯಂ ಜ್ಯೇಷ್ಠಪುಷ್ಕರಂ ।
ಶೃಂಗಶಬ್ದಾಭಿಧಾನಾನಿ ಶುಭ ಪ್ರಸ್ರವಣಾನಿ ಚ ॥ ೩೭ ॥

---

೩೩. ಮೃಕಂಡುವು ಹೇಳಿದನು– ಈಗ ನನ್ನ ಜನ್ಮವು ಸಫಲವಾಯಿತು ಏಕೆಂದರೆ ಸರ್ವ ಜಗತ್ತಿಗೂ ಕರ್ತೃವಾದ ಪಿತಾಮಹನನ್ನು ನೀನು ನೋಡಿ ಬಂದೆಯಲ್ಲ !

೩೪. ವಂಶಧಾರಿಯಾದ ಮಗನಾದ ನಿನ್ನಿಂದ ನಾನು ಪುತ್ರವಂತನಾಗಿದ್ದಾನೆ. ನೀನು ಹೋಗು. ಪುಷ್ಕರದಲ್ಲಿ ಆ ಪಿತಾಮಹನನ್ನು ನೋಡು.

೩೫. ಆ ಜಗನ್ನಾಥನನ್ನು ನೋಡಿದ ಮೇಲೆ ಮುಪ್ಪು ಮರಣಗಳಿಲ್ಲ ಮತ್ತು ಜನರಿಗೆ ಸೌಖ್ಯವುಂಟಾಗಿ ತಪಸ್ಸೂ ಐಶ್ವರ್ಯವೂ ಅಕ್ಷಯವಾಗಿ ಉಂಟಾಗುತ್ತವೆ.

೩೬. ಮೂರು ಶೃಂಗಗಳೂ, ಮೂರು ನದಿಗಳೂ, ಮೂರು ಪುಷ್ಕರಗಳೂ, ಪವಿತ್ರಗಳು. ಅದರ ವಿಷಯದಲ್ಲಿ ಕಾರಣವು ಗೊತ್ತಾಗುವುದಿಲ್ಲ.

೩೭. ಚಿಕ್ಕದು, ಮಧ್ಯಸ್ಥಿತಿಯದು, ದೊಡ್ಡದು ಈ ಪುಷ್ಕರದಲ್ಲಿ ಶೃಂಗವೆಂದು ಕರೆಯುತ್ತಾರೆ. ಶುಭವಾದ ಅದರಲ್ಲಿ ಹರಿಯುವ ನದಿಗಳನ್ನೂ ಹೇಳಿದ್ದೇನೆ.

ಬ್ರಹ್ಮಾವಿಷ್ಣುಸ್ತಥಾ ರುದ್ರೋ ನಿತ್ಯಂ ಸನ್ನಿಹಿತಾಸ್ತ್ರಯಃ ।
ಪುಷ್ಕರೇಷು ಮಹಾರಾಜ ನಾತಃ ಪುಣ್ಯತಮಂ ಭುವಿ ॥ ೩೮ ॥

ವಿರಜಂ ಕಮಲಂ ತೋಯಂ ತ್ರಿಷು ಲೋಕೇಷು ವಿಶ್ರುತಂ ।
ಬ್ರಹ್ಮಲೋಕಸ್ಯ ಪಂಥಾನಂ ಧನ್ಯಾಃ ಪಶ್ಯಂತಿ ಪುಷ್ಕರಂ ॥ ೩೯ ॥

ಯೇತು ವರ್ಷಶತಂ ಸಾಗ್ರಮಗ್ನಿಹೋತ್ರಮುಪಾಸತೇ ।
ಕಾರ್ತಿಕೀಂ ವಾ ವಸೇದೇಕಾಂ ಪುಷ್ಕರೇ ಸಮಮೇವ ಚ ॥ ೪೦ ॥

ಕರ್ತುಂ ಮಯಾ ನ ಶಕಿತಂ ಕರ್ಮಣಾ ನೈವ ಸಾಧಿತಂ ।
ತದಯತ್ನಾತ್ತ್ವಯಾ ತಾತ ಮೃತ್ಯುಸ್ಸರ್ವಹರೋ ಜಿತಃ ॥ ೪೧ ॥

ತತ್ರ ದೃಷ್ಟಸ್ಸದೇವೇಶೋ ಬ್ರಹ್ಮಾ ಲೋಕಪಿತಾಮಹಃ ।
ನಾನ್ಯೋ ಮರ್ತ್ಯಸ್ತ್ವಯಾ ತುಲ್ಯೋ ಭವಿತಾ ಜಗತೀತಲೇ ॥ ೪೨ ॥

---

೩೮. ಪುಷ್ಕರದಲ್ಲಿ ಬ್ರಹ್ಮ, ವಿಷ್ಣು, ರುದ್ರರು ಯಾವಾಗಲೂ ಇರುತ್ತಾರೆ. ಆದ್ದರಿಂದ ಇದಕ್ಕಿಂತ ಪುಣ್ಯವಾದುದು ಭೂಮಿಯಲ್ಲಿಯೇ ಇಲ್ಲ.

೩೯. ರಜಸ್ಸಿಲ್ಲದ ಕಮಲವುಳ್ಳ ಮೂರು ಲೋಕದಲ್ಲಿಯೂ, ಪ್ರಸಿದ್ಧವಾದ ಬ್ರಹ್ಮಲೋಕಕ್ಕೆ ದಾರಿಯಾದ ಪುಷ್ಕರವನ್ನು ಧನ್ಯರು ನೋಡುತ್ತಾರೆ.

೪೦. ಯಾರು ನೂರು ವರ್ಷಗಳವರೆಗೂ, ಅಗ್ನಿಹೋತ್ರವನ್ನು ಮಾಡುವರೋ ಅದೂ, ಪುಷ್ಕರದಲ್ಲಿ ಕಾರ್ತಿಕಮಾಸದಲ್ಲಿ ಒಂದು ದಿವಸ ವಾಸಿಸುವುದೂ ಎರಡೂ ಸಮವು.

೪೧. ನಾನು ಮಾಡುವುದಕ್ಕೆ ಪ್ರಯತ್ನಪಡಲೇ ಇಲ್ಲ. ಕೆಲಸದಿಂದಲಂತೂ ಸಾಧಿಸಲೇ ಇಲ್ಲ. ಈರೀತಿ ಪ್ರಯತ್ನವಿಲ್ಲದೇನೇ ನೀನು ಸರ್ವರನ್ನೂ ಕೊಂಡೊಯ್ಯುವ ಮೃತ್ಯುವನ್ನು ಜಯಿಸಿದೆ.

೪೨. ಲೋಕಪಿತಾಮಹನಾದ ಬ್ರಹ್ಮನನ್ನು ನೀನು ಅಲ್ಲಿ ನೋಡಿದುದರಿಂದ ಈ ಭೂಮಿಯಲ್ಲಿ ನಿನಗೆ ಸಮವಾದ ಮನುಷ್ಯನೇ ಇಲ್ಲ.

ಅಹಂ ವೈ ತೋಷಿತೋ ಯೇನ ಪಂಚವಾರ್ಷಿಕಜನ್ಮನಾ ।
ವರೇಣ ತ್ವಂ ಮದೀಯೇನ ಉಪಮಾಂ ಚಿರಜೀವಿನಾಂ ॥ ೪೩ ॥

ಗಮಿಷ್ಯಸಿ ನ ಸಂದೇಹಸ್ತಥಾಶೀರ್ವಚನಂ ಮಮ ।
ಏವಂ ವದಂತಿ ತೇ ಸರ್ವೇ ವ್ರಜ ಲೋಕಾನ್ಯಥೇಪ್ಸಿತಾನ್ ॥ ೪೪ ॥

॥ ಪುಲಸ್ತ್ಯ ಉವಾಚ ॥

ಏವಂ ಲಬ್ಧಪ್ರಸಾದೇನ ಮೃಕಂಡುತನಯೇನ ಚ ।
ಆಶ್ರಮಸ್ಥಾಪಿತಸ್ತೇನ ಮಾರ್ಕಂಡಾಶ್ರಮ ಇತ್ಯುತ ॥ ೪೫ ॥

ತತ್ರಸ್ನಾತ್ವಾ ಶುಚಿರ್ಭೂತ್ವಾ ವಾಜಪೇಯಫಲಂ ಲಭೇತ್ ।
ಸರ್ವಪಾಪವಿಶುದ್ಧಾತ್ಮಾ ಚಿರಾಯುರ್ಜಾಯತೇ ನರಃ ॥ ೪೬ ॥

ತಥಾऽನ್ಯಂ ಸಂಪ್ರವಕ್ಷ್ಯಾಮಿ ಇತಿಹಾಸಂ ಪುರಾತನಂ ।
ಯಥಾ ರಾಮೇಣ ವೈ ತೀರ್ಥಂ ಪುಷ್ಕರಂ ತು ವಿನಿರ್ಮಿತಂ ॥ ೪೭ ॥

---

೪೩-೪೪. ನೀನು ಐದು ವರ್ಷದ ಮಗುವಾಗಿದ್ದರೂ ನನ್ನನ್ನು ಸಂತೋಷ ಪಡಿಸಿದ್ದೀಯೆ. ನೀನು ಜನಗಳ ಜೀವಿತವನ್ನು ಉಪಮೆಯನ್ನು ಹೊಂದಿರು. ಎಂದು ನಾನೂ ವರವನ್ನು ಕೊಡುತ್ತೇನೆ ಎಂದು ಆಶೀರ್ವದಿಸಿದನು. ಹೀಗೆ ಅವ ರೆಲ್ಲರೂ ಹೇಳಲಿ. ಇಷ್ಟ ಬಂದ ಲೋಕಗಳನ್ನು ಹೊಂದು ಹೋಗು.

೪೫. ಪುಲಸ್ತ್ಯನು ಹೇಳಿದನು– ಹೀಗೆ ಹೇಳಲ್ಪಟ್ಟ ಆ ಮಾರ್ಕಂಡೇಯನು ಅಲ್ಲಿ ತಾನೂ ಒಂದು ಆಶ್ರಮವನ್ನು ಕಟ್ಟಿಕೊಂಡಿರುವನು.

೪೬. ಅಲ್ಲಿ ಶುಚಿಯಾಗಿ ಸ್ನಾನಮಾಡಿದವನು ವಾಜಪೇಯಯಾಗದ ಫಲ ವನ್ನು ಹೊಂದುತ್ತಾನೆ. ಮತ್ತು ಸರ್ವಪಾಪಗಳನ್ನು ಕಳೆದುಕೊಂಡು ಚಿರಾಯು ವಾಗುತ್ತಾನೆ.

೪೭. ಇನ್ನು ಒಂದು ಪೂರ್ವದ ಕಥೆಯನ್ನು ಹೇಳುತ್ತೇನೆ ಕೇಳು. ಪೂರ್ವ ದಲ್ಲಿ ಶ್ರೀರಾಮನು ಈ ಪುಷ್ಕರವನ್ನು ಹೇಗೆ ಮಾಡಿದನು ? ಎಂದು.

ಚಿತ್ರಕೂಟಾತ್ಪುರಾ ರಾಮೋ ಮೈಥಿಲ್ಯಾಲಕ್ಷ್ಮಣೇನ ಚ।
ಅತ್ರೇರಾಶ್ರಮಮಾಗಮ್ಯ ಪಪ್ರಚ್ಛ ಮುನಿಸತ್ತಮಂ ॥ ೪೮ ॥

॥ ಶ್ರೀರಾಮ ಉವಾಚ ॥

ಕಾನಿ ತೀರ್ಥಾನಿ ಪುಣ್ಯಾನಿ ಕಿಂವಾ ಕ್ಷೇತ್ರಂ ಮಹಾಮುನೇ ।
ಯತ್ರ ಗತ್ವಾ ನರೋ ಯೋಗಿನ್ವಿಯೋಗಂ ಸಹ ಬಂಧುಭಿಃ । ॥ ೪೯ ॥

ನೈವಪ್ರಾಪ್ನೋತಿ ಭಗವಂಸ್ತನ್ಮಮಾಚಕ್ಷ್ವ ಸುವ್ರತ ।
ಅನೇನ ವನವಾಸೇನ ರಾಜ್ಞಸ್ತು ಮರಣೇನ ಚ ॥
ಭರತಸ್ಯ ವಿಯೋಗೇನ ಪರಿತಪ್ಯೇ ಹ್ಯಹಂ ತ್ರಿಭಿಃ ॥ ೫೦ ॥

॥ ಪುಲಸ್ತ್ಯ ಉವಾಚ ॥

ತದ್ವಾಕ್ಯಂ ರಾಘವೇಣೋಕ್ತಂ ಶ್ರುತ್ವಾ ವಿಪ್ರರ್ಷಭಸ್ತದಾ ।
ಧ್ಯಾತ್ವಾ ಸ ಸುಚಿರಂ ಕಾಲಮಿದಂ ವಚನಮಬ್ರವೀತ್ ॥ ೫೧ ॥

॥ ಅತ್ರಿರುವಾಚ ॥

ಸಾಧು ಪೃಷ್ಟಂ ತ್ವಯಾ ವತ್ಸ ರಘೂಣಾಂ ವಂಶವರ್ಧನ ।
ಮಮ ಪಿತ್ರಾ ಕೃತಂ ತೀರ್ಥಂ ಪುಷ್ಕರಂ ನಾಮ ವಿಶ್ರುತಂ ॥ ೫೨ ॥

---

೪೮. ರಾಮನು ಚಿತ್ರಕೂಟದಿಂದ ಅತ್ರಿಯ ಆಶ್ರಮಕ್ಕೆ ಸೀತಾಲಕ್ಷ್ಮಣರೊಡನೆ ಬಂದನು. ಆ ಋಷಿಯಾದ ಅತ್ರಿಯನ್ನು ಕೇಳಿದನು,

೪೯-೫೦. ಶ್ರೀರಾಮನು ಹೇಳಿದನು— ಎಲೈ ಋಷಿಯೇ! ಇಲ್ಲಿರುವ ತೀರ್ಥಗಳಾವುವು ? ಕ್ಷೇತ್ರಗಳಾವುವು ? ಯಾವ ತೀರ್ಥ ಅಥವಾ ಕ್ಷೇತ್ರಕ್ಕೆ ಹೋದರೆ ಮನುಷ್ಯನು ಬಂಧುಗಳೊಡನೆ ವಿಯೋಗವನ್ನು ಹೊಂದುವುದಿಲ್ಲ? ಈ ವನವಾಸದಿಂದಲೂ ರಾಜನಾದ ದಶರಥನ ಸಾವಿನಿಂದಲೂ, ಭರತನ ವಿಯೋಗದಿಂದಲೂ ಈ ಮೂರರಿಂದ ನಾನು ಬಹುವಾಗಿ ನೋಯುತ್ತಿದ್ದೇನೆ.

೫೧. ಪುಲಸ್ತ್ಯನು ಹೇಳಿದನು- ರಾಮನು ಹೇಳಿದ ಈ ಮಾತನ್ನು ಆ ಋಷಿಯು ಕೇಳಿ ಬಹು ಹೊತ್ತು ಯೋಚಿಸಿ ಇಂತೆಂದನು.

೫೨. ಅತ್ರಿಯು ಹೇಳಿದನು- ಎಲೈ ರಾಮನೇ! ನೀನು ಕೇಳಿದುದು ಸರಿ. ನನ್ನ ತಂದೆಯು ತೀರ್ಥವೊಂದನ್ನು ಮಾಡಿದ್ದಾನೆ. ಅದರ ಹೆಸರು ಪುಷ್ಕರವೆಂದು.

ಪರ್ವತೌ ತೌ ಚ ವಿಖ್ಯಾತೌ ಮರ್ಯಾದಾಯಜ್ಞಪರ್ವತೌ ।
ಕುಂಡತ್ರಯಂ ತಯೋರ್ಮಧ್ಯೇ ಜ್ಯೇಷ್ಠಮಧ್ಯಕನಿಷ್ಠಕಂ ॥ ೫೩ ॥

ತೇಷು ಗತ್ವಾ ದಶರಥಂ ಪಿಂಡದಾನೇನ ತರ್ಪಯ ।
ಸುರಾಸುರೇಷು ವೈ ಶ್ರೇಷ್ಠೋಬ್ರಹ್ಮಾಲೋಕಪಿತಾಮಹಃ ॥ ೫೪ ॥

ದೃಷ್ಟೇ ತಸ್ಮಿನ್ನಗನ್ನಾಥೇ ಸಂಸಾರಸ್ಥಿತಿಕಾರಕೇ ।
ತತ್ರ ವ್ರಜಯಂತಿ ಯೇ ವಿಪ್ರಾ ರಾಜಾನಶ್ಶ್ರದ್ಧಯಾನ್ವಿತಾಃ ॥ ೫೫ ॥

ಪ್ರಾಪ್ನುವಂತಿ ಪರಂ ಸ್ಥಾನಂ ಯತ್ರ ದೇವಃ ಪಿತಾಮಹಃ ।
ತೀರ್ಥಾನಾಂ ಪ್ರವರಂ ತೀರ್ಥಂ ಕ್ಷೇತ್ರಾಣಾಮಪಿ ಚೋತ್ತಮಂ ॥ ೫೬ ॥

ಅವಿಯೋಗಾ ಚತುರಸ್ರಾ ವಾಪೀ ರಘುಕುಲೋದ್ಭವ ।
ತಥಾ ಸೌಭಾಗ್ಯಕೂಪೋಽನ್ಯಃ ಸ ಜಲೋ ರಘುನಂದನ ॥ ೫೭ ॥

ತೇಷು ಪಿಂಡಪ್ರದಾನೇನ ಪಿತರೋ ಮೋಕ್ಷಗಾಮಿನಃ ।
ಆ ಭೂತಸಂಪ್ಲವಂ ಕಾಲಮೇತದಾಹ ಪಿತಾಮಹಃ ॥
ತತ್ರ ರಾಘವ ಗಚ್ಛಸ್ವ ಭೂಯೋ ಪ್ಯಾಗಮನಂ ಕೃಥಾಃ ॥ ೫೮ ॥

---

೫೩-೫೬. ಅಲ್ಲಿ ಮರ್ಯಾದಪರ್ವತ, ಯಜ್ಞ ಪರ್ವತವೆಂಬ ಎರಡು ಪರ್ವತಗಳು ಪ್ರಸಿದ್ಧವಾಗಿವೆ. ಮತ್ತು ಅವುಗಳ ಮಧ್ಯದಲ್ಲಿ ಜ್ಯೇಷ್ಠ, ಮಧ್ಯಮ, ಕನಿಷ್ಟವೆಂಬುದಾಗಿ ಮೂರು ಕುಂಡಗಳಿವೆ. ಅಲ್ಲಿಗೆ ಹೋಗಿ ದಶರಥನಿಗೆ ಪಿಂಡವನ್ನು ಕೊಟ್ಟು ತರ್ಪಣವನ್ನು ಬಿಡು. ಲೋಕಪಿತಾಮಹನಾದ ಬ್ರಹ್ಮನು ಸುರಾಸುರರಲ್ಲಿ ಶ್ರೇಷ್ಠನು. ಸಂಸಾರ ಸ್ಥಿತಿಯನ್ನುಂಟುಮಾಡುವ ಆ ಸ್ವಾಮಿಯು ಮಾಡಿರುವ ಆ ಸ್ಥಳಕ್ಕೆ ಹೋದ ಬ್ರಾಹ್ಮಣರಾಗಲಿ, ಕ್ಷತ್ರಿಯರಾಗಲಿ, ಶ್ರದ್ಧೆಯಿಂದ ಕೂಡಿದ್ದರೆ ಪಿತಾಮಹನಿರುವ ಬ್ರಹ್ಮಲೋಕವನ್ನು ಹೊಂದುತ್ತಾರೆ. ಇದು ತೀರ್ಥಗಳಲ್ಲೆಲ್ಲಾ ಉತ್ತಮತೀರ್ಥವು. ಕ್ಷೇತ್ರಗಳಲ್ಲೆಲ್ಲಾ ಉತ್ತಮ ಕ್ಷೇತ್ರವು.

೫೭. ಅವುಗಳಲ್ಲೊಂದು ಅವಿಯೋಗವೆಂದೂ, ಮತ್ತೊಂದು ಚತುರಶ್ರವೆಂದೂ, ಮಗದೊಂದು ಸೌಭಾಗ್ಯಕೂಪವೆಂದೂ ಹೆಸರನ್ನು ಹೊಂದಿವೆ. ಬೇಕಾದಷ್ಟು ನೀರಿದೆ

೫೮. ಅಲ್ಲಿ ಪಿಂಡವನ್ನು ಕೊಟ್ಟರೆ ಪಿತೃಗಳು ಮೋಕ್ಷವನ್ನು ಹೊಂದುತ್ತಾರೆ. ಆ ಮೋಕ್ಷದಲ್ಲಿ ಪ್ರಳಯಕಾಲವರೆಗೂ ಇರುತ್ತಾರೆ. ಎಂದು ಬ್ರಹ್ಮನು ಹೇಳಿರುವನು. ಎಲೈ ರಾಘವನೇ! ನೀನು ಅಲ್ಲಿಗೆ ಹೋಗು. ಮತ್ತೆ ಇಲ್ಲಿಗೆ ಬಾ.

॥ ಪುಲಸ್ತ್ಯ ಉವಾಚ ॥

ತಥೇತಿ ಚೋಕ್ತ್ವಾ ರಾಮೋಽಪಿ ಗಮನಾಯ ಮನೋ ದಧೇ ।
ಋಕ್ಷವನ್ತಮತಿಕ್ರಮ್ಯ ನಗರಂ ವೈದಿಶಂ ತಥಾ ॥ ೫೯ ॥

ಚರ್ಮಣ್ವತೀಂ ಸಮುತ್ತೀರ್ಯ ಪ್ರಾಪ್ತೋಽಸೌ ಯಜ್ಞಪರ್ವತಂ ।
ತಮತಿಕ್ರಮ್ಯ ವೇಗೇನ ಮಧ್ಯಮೋ ಪುಷ್ಕರೇ ಸ್ಥಿತಃ ॥ ೬೦ ॥

ಪಿತೄನ್ಸಂತರ್ಪಯಾಮಾಸ ಅದ್ಭಿರ್ದೇವಾಂಸ್ತು ಸರ್ವಶಃ ।
ಸ್ನಾನಾವಸಾನೇ ರಾಮೇಣ ಮಾರ್ಕಂಡೋ ಮುನಿಪುಂಗವಃ ॥ ೬೧ ॥

ಆಗಚ್ಛನ್ ಶಿಷ್ಯಸಂಯುಕ್ತೋ ದೃಷ್ಟಸ್ತತ್ರೈವ ಧೀಮತಾ ।
ಗತ್ವಾ ವೈ ಸಮ್ಮುಖಂ ತಸ್ಯ ಪ್ರಣಿಪತ್ಯ ಚ ಸಾದರಂ ॥ ೬೨ ॥

ಪೃಷ್ಟೋ ವಿಯೋಗಜಃ ಕೂಪಃ ಕತಮಸ್ಯಾಂ ದಿಶಿ ಪ್ರಭೋ ।
ಸುತೋ ದಶರಥಸ್ಯಾಹಂ ರಾಮೋ ನಾಮ ಜನೈಸ್ಸ್ಮೃತಃ ॥ ೬೩ ॥

---

೫೯-೬೦. ಪುಲಸ್ತ್ಯನು ಹೇಳಿದನು—ರಾಮನು ಹಾಗೇ ಆಗಲೆಂದು ಮನಸ್ಸು ಮಾಡಿ ಹೊರಟು ಋಕ್ಷವನ್ತ ಪರ್ವತವನ್ನು ದಾಟಿ ವೈದಿಶವೆಂಬ ನಗರವನ್ನೂ ದಾಟಿ ಚರ್ಮಣ್ವತಿ ನದಿಯಿಂದ ಆಚೆಗೆ ಹೋಗಿ ಯಜ್ಞಪರ್ವತಕ್ಕೆ ಹೋದನು. ಅನಂತರ ಅದನ್ನು ದಾಟಿ ಪುಷ್ಕರಕ್ಕೆ ಹೋದನು.

೬೧. ಅಲ್ಲಿ ರಾಮನು ಪಿತೃಗಳಿಗೂ, ದೇವತೆಗಳಿಗೂ, ತರ್ಪಣವನ್ನು ಕೊಟ್ಟನು. ಸ್ನಾನವಾದ ಮೇಲೆ ಮಾರ್ಕಂಡೇಯನು ಶಿಷ್ಯರೊಡನೆ ಬರುತ್ತಿರುವು ದನ್ನು ನೋಡಿದನು.

೬೨-೬೩. ಒಡನೆಯೇ ಅವನ ಎದುರಿಗೆ ಹೋಗಿ ಅಕ್ಕರೆಯಿಂದ ನಮಸ್ಕರಿಸಿ ಎಲೈ ಸ್ವಾಮಿಯೇ! ನಾನು ದಶರಥನ ಮಗನು. ನನ್ನ ಹೆಸರು ರಾಮನೆನ್ನುತ್ತಾರೆ. ಆವಿಯೋಗಜಕೂಪವು ಯಾವ ದಿಕ್ಕಿನಲ್ಲಿದೆ? ಸೌಭಾಗ್ಯವಾಪಿಯೂ ಎಲ್ಲಿದೆ! ಅವನ್ನು ನೋಡಲು ಅತ್ರಿಋಷಿಯ ಅಪ್ಪಣೆಯಮೇರೆ ನಾನು ಇಲ್ಲಿಗೆ ಬಂದಿದ್ದೇನೆ.

ಸೌಭಾಗ್ಯವಾಪೀಂ ತಾಂ ದ್ರಷ್ಟುಮಹಂ ಪ್ರಾಪ್ತೋತ್ರಿಶಾಸನಾತ್ ।
ತತ್ಸ್ಥಾನಂ ಭಗವನ್ವಿಪ್ರ ಅಧುನಾ ಪ್ರಬ್ರವೀಹಿ ಮೇ ॥ ೬೪ ॥

ಏವಮುಕ್ತಸ್ತು ರಾಮೇಣ ಮಾರ್ಕಂಡಃ ಪ್ರತ್ಯುವಾಚ ಹ ॥ ೬೫ ॥

॥ ಮಾರ್ಕಂಡೇಯ ಉವಾಚ ॥

ಸಾಧು ರಾಘವ ಭದ್ರಂ ತೇ ಸುಕೃತಂ ಭವತಾ ಕೃತಂ ।
ತೀರ್ಥಯಾತ್ರಾಪ್ರಸಂಗೇನ ಯತ್ಪ್ರಾಪ್ತೋಸೀಹ ಸಾಂಪ್ರತಂ ॥ ೬೬ ॥

ಪದ್ಭ್ಯಾಂ ಗಚ್ಛಸ್ವ ಪಶ್ಯತ್ವಂ ವಾಪೀಂ ತ್ವಮವಿಯೋಗಜಾಂ ।
ಅವಿಯೋಗಶ್ಚ ಸರ್ವಸ್ಯ ಸರ್ವೇಣಾಸ್ಯ ಪ್ರಜಾಯತೇ ।
ಐಹಿಕೇನಾಮುಷ್ಮಿಕೇಣ ಜೀವತಾ ಚ ಮೃತೇನ ವಾ ॥ ೬೭ ॥

॥ ಪುಲಸ್ತ್ಯ ಉವಾಚ ॥

ಏತದ್ವಾಕ್ಯಂ ಮುನೀಂದ್ರಸ್ಯ ಶ್ರುತ್ವಾ ಲಕ್ಷ್ಮಣಪೂರ್ವಜಃ ।
ಸಸ್ಮಾರ ರಾಮೋ ರಾಜಾನಂ ತದಾ ದಶರಥಂ ನೃಪಂ ॥ ೬೮ ॥

ಭರತಂ ಸಹಶತ್ರುಘ್ನಂ ಮಾತೄರನ್ಯಾಂಶ್ಚ ನಾಗರಾನ್ ।
ಏವಂ ಚಿಂತಯತಸ್ತಸ್ಯ ಸಂಧ್ಯಾಕಾಲೋ ವ್ಯಜಾಯತ ॥ ೬೯ ॥

---

೬೪-೬೫. ಆ ಜಾಗವನ್ನು ನನಗೆ ಈಗ ಹೇಳು ಎಂದೆನಲು ಆದಕ್ಕೆ ಮಾರ್ಕಂಡೇಯನು ಇಂತೆಂದನು.

೬೬. ಮಾರ್ಕಂಡೇಯನು ಹೇಳಿದನು-- ಎಲೈ ರಾಮನೇ! ನಿನಗೆ ಮಂಗಳವಾಗಲಿ ನೀನು ಒಳ್ಳೆಯ ಕೆಲಸವನ್ನು ಮಾಡಿದೆ. ತೀರ್ಥಯಾತ್ರೆಯ ಉದ್ದೇಶದಿಂದ ಇಲ್ಲಿಗೆ ಬಂದುದು ಒಳ್ಳೆಯದಾಯಿತು.

೬೭. ಕಾಲುನಡಗೆಯಲ್ಲಿ ಹೋಗು. ಅಲ್ಲಿ ಆ ಅವಿಯೋಗಜವಾಪಿ ಇದೆ. ಅಲ್ಲಿ ಸ್ನಾನಮಾಡಿದರೆ ಎಲ್ಲರ ಸಂಗಡಲೂ ಸೇರಿರುತ್ತಾನೆ. ಜೀವಂತನಾಗಿರುವಾಗಲೂ ಸತ್ತಮೇಲೂ ಕೂಡ ಇಹಪರಗಳೆರಡರಲ್ಲೂ ವಿಯೋಗವನ್ನು ಹೊಂದುವುದಿಲ್ಲ.

೬೮-೬೯. ಪುಲಸ್ತ್ಯನು ಹೇಳಿದನು—ರಾಮನು ಋಷಿಯ ಆ ಮಾತನ್ನು ಕೇಳಿ, ದಶರಥ, ಭರತ, ಶತ್ರುಘ್ನ, ತಾಯಿಯರು, ಇವರನ್ನೆಲ್ಲಾ ಜ್ಞಾಪಿಸಿಕೊಂಡನು. ಇವರನ್ನು ಜ್ಞಾಪಿಸಿಕೊಳ್ಳುತ್ತಿರುವಾಗ ಸಾಯಂಕಾಲವಾಯಿತು.

ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಮುನಿಭಿಸ್ಸಹ ರಾಘವಃ ।
ಸುಷ್ವಾಪ ತಾಂ ನಿಶಾಂ ತತ್ರ ಭ್ರಾತೃರ್ಭ್ಯಾಸಮನ್ವಿತಃ ॥ ೭೦ ॥

ನಿಭಾವರ್ಯವಸಾನೇ ತು ಸ್ವಪ್ನಾಂತೇ ರಘುನಂದನಃ ।
ಸಹ ಪಿತ್ರಾ ತಥಾ ಚಾನ್ಯೈರುಪಾಧ್ಯಾಯಾನ್ವಿತಃ ಕೀ ॥ ೭೧ ॥

ವಿವಾಹಮಂಗಳೇ ವೃತ್ತೇ ಬಹುಭಿರ್ಬಾಂಧವೈಸ್ಸಹ ।
ಸಮಾಸೀನಸ್ಸಭಾರ್ಯೋ ಸಾ ವೃಷಿಭಿಃ ಪರಿವಾರಿತಃ ॥ ೭೨ ॥

ಲಕ್ಷ್ಮಣೇನಾಪ್ಯೇವಮೇವ ದೃಷ್ಟೋ ವೈ ಸೀತಯಾ ತಥಾ ।
ಪ್ರಭಾತೇ ತು ಮುನೀನಾಂ ತು ಸರ್ವಮೇವ ನ್ಯವೇದಯತ್ ॥ ೭೩ ॥

ಋಷಿಭಿಶ್ಚ ತಥೇತ್ಯುಕ್ತಃ ಸತ್ಯಮೇತದ್ರಘೂತ್ತಮ ।
ಮೃತಸ್ಯ ದರ್ಶನೇ ಶ್ರಾದ್ಧಂ ಕಾರ್ಯಮಾವಶ್ಯಕಂ ಸ್ಮೃತಂ ॥ ೭೪ ॥

ವೃದ್ಧಿಕಾಮಾಸ್ತು ಪಿತರಸ್ತಥಾ ಚೈವಾನ್ನಕಾಂಕ್ಷಿಣಃ ।
ದದಂತಿ ದರ್ಶನಂ ಸ್ವಪ್ನೇ ಭಕ್ತಿಯುಕ್ತಸ್ಯ ರಾಘವ ॥ ೭೫ ॥

---

೭೦ ಸಂಧ್ಯಾಕಾಲದ ಸಂಧ್ಯಾವಂದನೆಯನ್ನು ಮಾಡಿ ಮುನಿಗಳೊಡನೆಯೂ ಸೀತಾಲಕ್ಷ್ಮಣರೊಡನೆಯೂ, ಅಲ್ಲಿದ್ದು ಮಲಗಿ ರಾತ್ರಿಯನ್ನು ಕಳೆದನು.

೭೧-೭೨. ಬೆಳಗಿನ ಜಾವದಲ್ಲಿ ಆ ರಾಮನು ತಂದೆಯಿಂದಲೂ, ಉಪಾಧ್ಯಾಯರಿಂದಲೂ, ಋತ್ವಿಕ್ಕರಿಂದಲೂ, ಸೇರಿಕೊಂಡು ಮದುವೆಯ ಮಂಗಳವು ನಡೆದ ಹಾಗೂ, ಅದರಲ್ಲಿ ಬಾಂಧವರೊಡನೆ ತಾನು ಹೆಂಡತಿಯೊಡನೆ ಇದ್ದಂತೆಯೂ, ಸುತ್ತಲೂ ಋಷಿಗಳೂ, ಕುಳಿತಿದ್ದಂತೆಯೂ, ಸ್ವಪ್ನವನ್ನು ಕಂಡನು.

೭೩-೭೪. ಲಕ್ಷ್ಮಣನೂ, ಸೀತೆಯೂ ಕೂಡ ಇದೇ ರೀತಿಯಾದ ಸ್ವಪ್ನವನ್ನು ಕಂಡರು ಬೆಳಗ್ಗೆ ಎದ್ದು ಋಷಿಗಳಿಗೆ ಎಲ್ಲವನ್ನೂ ಹೇಳಿದನು. ಋಷಿಗಳು ಅದು ಹಾಗೆಯೇ ಸರಿ, ಸತ್ತವರನ್ನು ಸ್ವಪ್ನದಲ್ಲಿ ಕಂಡರೆ ಖಂಡಿತ ಶ್ರಾದ್ಧವನ್ನು ಮಾಡಬೇಕು ಎಂದು ಶಾಸ್ತ್ರದಲ್ಲಿ ಹೇಳಿದೆ.

೭೫. ವೃದ್ಧಿಯನ್ನು ಅಪೇಕ್ಷಿಸುವ ಪಿತೃಗಳು, ಅನ್ನವನ್ನು ಅಪೇಕ್ಷಿಸಿ ಭಕ್ತಿಯುಕ್ತನಾದವನಿಗೆ ಸ್ವಪ್ನದಲ್ಲಿ ದರ್ಶನವನ್ನು ಕೊಡುತ್ತಾರೆ.

ವಿಯೋಗಶ್ಚೈವ ತೇ ಮಾತ್ರಾ ಪಿತ್ರಾ ಚ ಭರತೇನ ಚ ।
ಚತುರ್ದಶಾನಾಂ ವರ್ಷಾಣಾಂ ಭವಿತಾ ರಾಘವ ಧ್ರುವಂ ॥ ೭೬ ॥

ಕುರು ಶ್ರಾದ್ಧಂ ತಥಾ ವೀರ ರಾಜ್ಞೋ ದಶರಥಸ್ಯ ತು ।
ಅಮೀ ಚ ಋಷಯಸ್ಸರ್ವೇ ತವ ಭಕ್ತಾಃ ಕೃತಕ್ಷಣಾಃ ॥ ೭೭ ॥

ಅಹಂ ಚ ಜಮದಗ್ನಿಶ್ಚ ಭರದ್ವಾಜಶ್ಚ ಲೋಮಶಃ ।
ದೇವರಾತಶ್ಶಮೀಕಶ್ಚ ಷಡೇತೇ ಚ ದ್ವಿಜೋತ್ತಮಾಃ ॥ ೭೮ ॥

ಶ್ರಾದ್ಧೇ ಚ ತೇ ಮಹಾಬಾಹೋ ಸಂಭಾರಾಂಸ್ತ್ವಮುಪಾಹರ ।
ಮುಖ್ಯಂ ಚೇಂಗುದಿಪಿಣ್ಯಾಕಂ ಬದರಾಮಲಕೈಸ್ಸಹ ॥ ೭೯ ॥

ಶ್ರೀಫಲಾನಿ ಚ ಪಕ್ವಾನಿ ಮೂಲಂ ಚೋಚ್ಚಾವಚಂ ಬಹು ।
ಮಾರ್ಗೇಣೈವಾಥ ಮಾಂಸೇನ ಧಾನ್ಯೇನ ವಿವಿಧೇನ ಚ ॥ ೮೦ ॥

ತೃಪ್ತಿಂ ಪ್ರಯಚ್ಛ ವಿಪ್ರಾಣಾಂ ಶ್ರಾದ್ಧದಾನೇನ ಸುವ್ರತ ।
ಪುಷ್ಕರಾರಣ್ಯಮಾಸಾದ್ಯ ನಿಯತೋ ನಿಯತಾಶನಃ ॥ ೮೧ ॥

---

೭೬. ನಿನಗೆ ತಾಯಿ ಭರತ ಇವರೊಡನೆ ಹದಿನಾಲ್ಕು ವರ್ಷಗಳು ವಿಯೋಗವಾಗುತ್ತದೆ. ಇದು ಖಂಡಿತ.

೭೭-೭೮. ಎಲೈ ವೀರನೇ! ದಶರಥನಿಗೆ ಶ್ರಾದ್ಧವನ್ನು ಮಾಡು. ಈ ಋಷಿಗಳೆಲ್ಲರೂ ನಿನಗೆ ಭಕ್ತರು. ಒಪ್ಪಿಗೆಯುಳ್ಳವರು. ನಾನು ಜಮದಗ್ನಿ, ಭರದ್ವಾಜ, ಲೋಮಶ, ದೇವರಾತ, ಶಮೀಕ, ಈ ಆರು ಜನರೂ ಸಿದ್ಧರಾಗಿದ್ದೇವೆ.

೭೯-೮೦. ಎಲೈ ಮಹಾಬಾಹುವೇ, ಶ್ರಾದ್ಧಕ್ಕೆ ಬೇಕಾದ ಪದಾರ್ಥಗಳೆಲ್ಲವನ್ನೂ ಸಿದ್ಧಪಡಿಸು. ಇಂಗಳದ ಹಿಂಡಿಯು ಮುಖ್ಯವಾದುದು. ಯಗಚಿ, ನೆಲ್ಲಿಗಳೂ ಕೂಡ ಅಷ್ಟೇ ಮುಖ್ಯವಾದುವು. ಕಳಿತಿರುವ ಬಿಲ್ವಪತ್ರೆ ಹಣ್ಣುಗಳನ್ನು ತೆಗೆದುಕೊಂಡು ಬಾ. ಅನೇಕ ಬಗೆಯಾದ ಗೆಡ್ಡೆಗೆಣಸುಗಳನ್ನು ತೆಗೆದುಕೊಂಡು ಬಾ. ಜಿಂಕೆಯ ಮಾಂಸವನ್ನು ತೆಗೆದುಕೊಂಡು ಬಾ. ನಾನಾಬಗೆಯಾದ ಧಾನ್ಯಗಳನ್ನು ಸಂಪಾದಿಸು. ಇವುಗಳಿಂದ ಶ್ರಾದ್ಧಮಾಡಿ ಬ್ರಾಹ್ಮಣರಿಗೆ ತೃಪ್ತಿಪಡಿಸು.

೮೧. ಪುಷ್ಕರಾರಣ್ಯಕ್ಕೆ ಬಂದು ನಿಯಮದಿಂದ ಯಾವನು ಪಿತೃಗಳನ್ನು ತೃಪ್ತಿಪಡಿಸುತ್ತಾನೆಯೋ ಅವನಿಗೆ ಅಶ್ವಮೇಧ ಫಲ ಬರುತ್ತದೆ. ಎಲೈ ರಾಮನೇ! ನಾವು ಸ್ನಾನಕ್ಕೋಸ್ಕರವಾಗಿ ಜ್ಯೇಷ್ಠಪುಷ್ಕರಕ್ಕೆ ಹೋಗುತ್ತೇವೆ.

ಪಿತ್ರ್ಯಾಂಸ್ತರ್ಪಯತೇ ಯಸ್ತು ಸೋಽಶ್ವಮೇಧಮವಾಪ್ನುಯಾತ್ ।
ಸ್ನಾನಾರ್ಥೇ ಚ ವಯಂ ರಾಮ ಗಚ್ಛಾಮೋ ಜ್ಯೇಷ್ಠಪುಷ್ಕರಂ ॥ ೮೨ ॥

ಇತ್ಯುಕ್ತ್ವಾ ತೇ ಗತಾಸ್ಸರ್ವೇ ಋಷಯೋ ರಾಘವಂ ನೃಪ ।
ಲಕ್ಷ್ಮಣಂ ಚಾಬ್ರವೀದ್ರಾಮೋ ಮೇಧ್ಯಮಾಹರ ಮೇಽಮೃಗಂ ॥ ೮೩ ॥

ಸುಲಕ್ಷಣಂ ಚ ಶಶಕಂ ಕೃಷ್ಣಶಾಕಂ ತಥಾ ಮಧು ।
ಜಂಬೀರಾಣಿ ಚ ಮುಖ್ಯಾನಿ ಪನಸಾನುತ್ತಮಾನಿ ಚ ॥ ೮೪ ॥

ಪಾರದಾನಿ ಚ ಬಿಲ್ವಾನಿ ಮಧುರಾಣಿ ಪರಂತಪ ।
ಶಾಲೂಕಾಣಿ ಕಶೇರೂಣ್ ಪೀತವರ್ಣಾಂ ಚ ಕಾರವಾಂ ॥ ೮೫ ॥

ಕರೀರಾಣಿ ಚ ಮುಖ್ಯಾನಿ ಶೃಂಗಾಟಾಶ್ಯರ್ಕರೋಪಮಾಃ ।
ಪಕ್ವಾನಿ ಚ ಕಪಿತ್ಥಾನಿ ಫಲಾನ್ಯನ್ಯಾನಿ ಯಾನಿ ಚ ॥ ೮೬ ॥

ತಾನ್ಯಾಹರಸ್ವ ವೈ ಶ್ರಾದ್ಧೇ ಕ್ಷಿಪ್ರಮೇವಾಶು ಲಕ್ಷ್ಮಣ ।
ತಥಾ ತತ್ಕೃತವಾನ್ಸರ್ವಂ ರಾಮಾದೇಶಾಚ್ಚ ರಾಘವಃ ॥ ೮೭ ॥

ಬದರೀಂಗುದಶಾಕಾನಿ ಮೂಲಾನಿ ವಿವಿಧಾನಿ ಚ ॥
ತತ್ರಾಹೃತ್ಯ ಚ ರಾಮೇಣ ಕೂಟಾಕಾರಃ ಕೃತೋ ಮಹಾನ್ ॥ ೮೮ ॥

---

೮೨-೮೬. ಹೀಗೆಂದು ಹೇಳಿ ಆ ಋಷಿಗಳು ಸ್ನಾನಕ್ಕೆ ಹೊರಟುಹೋದರು. ಆಗ ರಾಮನು ಲಕ್ಷ್ಮಣನನ್ನು ಕರೆದು ಎಲೈ ಲಕ್ಷ್ಮಣನೇ! ಯೋಗ್ಯವಾದ ಒಂದು ಜಿಂಕೆಯನ್ನು ತೆಗೆದುಕೊಂಡು ಬಾ. ಲಕ್ಷಣವಾಗಿರುವ ಮೊಲವನ್ನೂ, ಮೆಣಸು, ಜೇನು, ಚೆನ್ನಾಗಿರುವ ನಿಂಬೇಹಣ್ಣುಗಳನ್ನೂ ಉತ್ತಮವಾದ ಹಲಸಿನಹಣ್ಣನ್ನೂ ತೆಗೆದುಕೊಂಡು ಬಾ. ತಾನಾಗಿಯೇ ಬಿದ್ದಿರುವ ರುಚಿಯಾದ ಬಿಲ್ವಪತ್ರೆ ಹಣ್ಣು ಗಳನ್ನು ತೆಗೆದುಕೊಂಡು ಬಾ. ನೈದಿಲೆ ಗೆಡ್ಡೆ, ಬೇಲದಕಾಯಿ, ಸಬ್ಬಸಿಗೆ, ಬಿದಿರು ಕಡಲೆ, ಬೇಲದಹಣ್ಣು, ಇನ್ನು ಯಾವಯಾವುವು ಒಳ್ಳೆಯದಿವೆಯೋ ಅವೆಲ್ಲವನ್ನೂ ತೆಗೆದುಕೊಂಡು ಬಾ

೮೭-೮೮. ಲಕ್ಷ್ಮಣನು ರಾಮನ ಅಪ್ಪಣೆಯಂತೆ ಎಲ್ಲವನ್ನೂ ತಂದನು. ಬೋರೆಹಣ್ಣು, ಇಂಗಳದ ಹಣ್ಣು, ನಾನಾಬಗೆಯಾದ ಗೆಡ್ಡೆಗಳನ್ನೂ ತಂದು ರಾಮನು ರಾಶಿರಾಶಿಯಾಗಿ ಹಾಕಿದನು.

ಪರಿಪಕ್ವಂ ತು ಜಾನಕ್ಯಾ ಸಿದ್ಧಂ ರಾಮೇ ನಿವೇದಿತಂ ।
ಸ್ನಾತ್ವಾ ರಾಮೋ ಯೋಗವಾಪ್ಯಾಂ ಮುನೀಂ ಸ್ತ್ರಾನಸ್ವಪಾಲಯತ್ ॥ ೮೯ ॥

ಮಧ್ಯಾಹ್ನಾಚ್ಚಲಿತೇ ಸೂರ್ಯೇ ಕಾಲೇ ಕುತುಪಕೇ ತಥಾ ।
ಆಯಾತಾ ಋಷಯಸ್ಸರ್ವೇ ಯೇ ರಾಮೇಣಾನುಮಂತ್ರಿತಾಃ ॥ ೯೦ ॥

ತಾನಾಗತಾನ್ಮುನೀನ್ದೃಷ್ಟ್ವಾ ವೈದೇಹೀ ಜನಕಾತ್ಮಜಾ ।
ಅಪಾಸರ್ಪತ್ತತೋ ದೂರೇ ವಿಪಾಪಾ ಮಧ್ಯತಸ್ಸ್ಥಿತಾ ॥ ೯೧ ॥

ಗುಲ್ಮೈರಾಚ್ಛಾದ್ಯ ಚಾತ್ಮಾನಂ ನಿಗೂಢಾ ಸಾ ಸ್ಥಿತಾ ತದಾ ।
ಅಪಕ್ರಾನ್ತಾಂ ತದಾ ಸೀತಾಂ ಜ್ಞಾತ್ವಾ ರಾಘವನಂದನಃ ॥ ೯೨ ॥

ವಿಮರ್ಶಿತ್ವಾ ಚಿರಂ ಕಾಲಂ ಕಿಮರ್ಥಮೇಷಾ ಸತ್ವರಾ ।
ಅನ್ಯತ್ರ ಚ ಗತಾ ಸಾ ತು ಮನ್ಯೇ ತಾಂ ಚ ತ್ರಪಾನ್ವಿತಾಂ ॥ ೯೩ ॥

ಕಿಂತಾವನ್ಭೋಜಯೇ ವಿಪ್ರಾನ್ಸೀತಾಮನ್ವೇಷಯಾಮಿ ಕಿಂ ।
ಕಾರಣಂ ನೇಹ ಜಾನಾಮಿ ಶ್ರಾದ್ಧಕಾಲೇ ಹ್ಯುಪಸ್ಥಿತೇ ॥ ೯೪ ॥

---

೮೯. ಜಾನಕಿಯು ಇವನ್ನೆಲ್ಲಾ ಬೇಯಿಸಿ ಅಡಿಗೆ ಮಾಡಿದಳು. ಅಡಿಗೆ ಯಾಯಿತೆಂದು ರಾಮನಿಗೆ ಹೇಳಿದಳು. ರಾಮನು ಆ ಯೋಗವಾಪಿಯಲ್ಲಿ ಸ್ನಾನ ಮಾಡಿಕೊಂಡು ಆ ಋಷಿಗಳನ್ನೇ ಎದುರುನೋಡುತ್ತಿದ್ದನು.

೯೦. ಮಧ್ಯಾಹ್ನದಿಂದ ಸೂರ್ಯನು ಮುಂದೆ ಹೋಗಲು ಕುತುಪಕಾಲವು ಬರಲು ರಾಮನು ನಿಮಂತ್ರಣಕ್ಕೆ ಹೇಳಿದ್ದ ಆ ಋಷಿಗಳೆಲ್ಲರೂ ಬಂದರು.

೯೧. ಆ ಋಷಿಗಳು ಬಂದುದನ್ನು ನೋಡಿ ವೈದೇಹಿಯು ಅಲ್ಲಿಂದ ಹೊರಟು ಹೋಗಿ ಪೊದರುಗಳನ್ನು ಮರೆಮಾಡಿಗೊಂಡು ಅವುಗಳ ಮಧ್ಯದಲ್ಲಿದ್ದಳು.

೯೨-೯೩. ರಾಮನು ಸೀತೆಯು ಹೊರಟುಹೋದುದನ್ನು ನೋಡಿ ಇವಳೇಕೆ ಜಾಗ್ರತೆಯಾಗಿ ಹೊರಟುಹೋದಳೆಂದು ಬಹುಕಾಲ ಯೋಚಿಸಿ ಬಹುಶಃ ಲಜ್ಜೆಯಿಂದ ಬೇರೆಕಡೆಗೆ ಹೋಗಿರಬಹುದೆಂಬುದಾಗಿ ನಿಶ್ಚಯಿಸಿಕೊಂಡನು.

೯೪. ಈಗೇನು ಬ್ರಾಹ್ಮಣರಿಗೆ ಊಟಮಾಡಿಸಲೆ? ಇಲ್ಲವೇ ಸೀತೆಯನ್ನು ಹುಡುಕಲೇ? ಇದಕ್ಕೆ ಕಾರಣವನ್ನು ತಿಳಿಯಲಿಲ್ಲವಲ್ಲ! ಎಂದುಕೊಳ್ಳುತ್ತಾ ಶ್ರಾದ್ಧ ಕಾಲವು ಬರಲು ಸ್ಮೃತಿಯಲ್ಲಿ ಹೇಳಿರುವಂತೆ ಕ್ರಮವಾಗಿ ಬ್ರಾಹ್ಮಣರನ್ನು ಭೋಜನ ಮಾಡಿಸಿದನು.

ರಾಮೇಣ ಭೋಜಿತಾ ವಿಪ್ರಾಃ ಸ್ಮೃತ್ಯುಕ್ತೇನ ಯಥಾವಿಧಿ ।
ವೈದಿಕೀ ಚ ಕೃತಾ ಸರ್ವಾ ಕ್ರಿಯಾ ಯಾ ಮಾನವೀ ಸ್ಮೃತಾ ॥ ೯೫ ॥

ಪುರಾಣೋಕ್ತವಿಧಿಶ್ಚೈವ ವೈಶ್ವದೇವಿಕಪೂರ್ವಕಃ ।
ಭುಕ್ತವತ್ಸು ಚ ವಿಪ್ರೇಷು ದತ್ವಾ ಪಿಂಡಾನ್ಯಥಾಕ್ರಮಂ ॥ ೯೬ ॥

ಪ್ರೇಷಿತಾಶ್ಚ ಯಥಾಶಕ್ತಿ ದತ್ವಾ ತೇಷು ಚ ದಕ್ಷಿಣಾಂ ।
ಗತೇಷು ದ್ವಿಜಮುಖ್ಯೇಷು ಪ್ರಿಯಾಂ ರಾಮೋಽಬ್ರವೀದಿದಂ ॥ ೯೭ ॥

॥ ಶ್ರೀರಾಮ ಉವಾಚ ॥

ಕಿಮರ್ಥಂ ಸುಭ್ರು ನಷ್ಟಾಸಿ ಮುನೀನ್ದೃಷ್ಟ್ವಾ ಇಹಾಗತಾನ್ ।
ತತ್ಸರ್ವಂ ಮಮ ತನ್ವಂಗಿ ಕಾರಣಂ ವದ ಮಾ ಚಿರಂ ॥ ೯೮ ॥

ಭವಿತವ್ಯಂ ಕಾರಣೇನ ನ ತೇ ಗೋಪ್ಯಂ ಪ್ರಿಯಂ ಮಮ ।
ಶಾಪಿತಾಸಿ ಮಮ ಪ್ರಾಣೈರ್ಲಕ್ಷ್ಮಣಸ್ಯ ಶುಚಿಸ್ಮಿತೇ ॥ ೯೯ ॥

---

೯೫. ಮನುಧರ್ಮಶಾಸ್ತ್ರದಲ್ಲಿ ಹೇಳಿರುವಂತೆ ವೈದಿಕಕ್ರಿಯೆಗಳನ್ನೆಲ್ಲಾ ಮಾಡಿದನು. ಪುರಾಣೋಕ್ತವಾಗಿ ವೈಶ್ವದೇವಕ್ರಿಯೆಯನ್ನೂ ಸಹ ಮಾಡಿದನು.

೯೬–೯೭. ಬ್ರಾಹ್ಮಣರು ಊಟಮಾಡಿದ ಮೇಲೆ ಕ್ರಮವಾಗಿ ಪಿಂಡಗಳನ್ನು ಕೊಟ್ಟು ಶಕ್ತ್ಯನುಗುಣವಾಗಿ ದಕ್ಷಿಣೆಯನ್ನೂ ಕೊಟ್ಟನು. ಮತ್ತು ಬ್ರಾಹ್ಮಣರನ್ನು ಕಳುಹಿಸಿದನು. ಬ್ರಾಹ್ಮಣರು ಹೊರಟುಹೋದ ಮೇಲೆ ಸೀತೆಯು ಬಂದುದನ್ನು ಕಂಡು ಇಂತೆಂದನು.

೯೮. ಶ್ರೀರಾಮನು ಹೇಳಿದನು—ಎಲೈ ಸೀತೆಯೇ! ಇಲ್ಲಿಗೆ ಬಂದ ಋಷಿಗಳನ್ನು ನೋಡಿ ಏಕೆ ಮರೆಯಾಗಿ ಹೋದೆ? ಜಾಗ್ರತೆಯಾಗಿ ಅದರ ಕಾರಣವನ್ನು ನನಗೆ ಹೇಳು.

೯೯. ಏನೋ ಕಾರಣವಿರಬೇಕು. ನೀನು ಮುಚ್ಚುವುದು ನನಗೆ ಇಷ್ಟವಿಲ್ಲ ನನ್ನ ಮತ್ತು ಲಕ್ಷ್ಮಣನ ಪ್ರಾಣಗಳಿಂದ ಶಾಪಿತಳಾಗಿದ್ದೀಯೆ (ನನ್ನ ಲಕ್ಷ್ಮಣನ ಆಣೆ) ಹೇಳು.

॥ ಪುಲಸ್ತ್ಯ ಉವಾಚ ॥

ಏವಮುಕ್ತ್ವಾ ತದಾ ಭರ್ತ್ರಾ ತ್ರಪಯಾಧೋಮುಖೀ ಸ್ಥಿತಾ ।
ವಿಮುಂಚಂತೀ ಚಾಶ್ರುಪಾತಂ ರಾಘವಂ ವಾಕ್ಯಮಬ್ರವೀತ್ ॥ ೧೦೦ ॥

॥ ಸೀತೋವಾಚ ॥

ಶೃಣುತ್ವಂ ನಾಥ ಯದ್ದೃಷ್ಟಮಾಶ್ಚರ್ಯಮಿಹ ಯಾದೃಶಂ ।
ಗೃಹೀತನಾಮಾ ರಾಮೋ ಽ ರಾಜೇಂದ್ರಸ್ತ್ವಿಹ ಚಾಗತಃ ॥ ೧೦೧ ॥

ಸರ್ವಾಭರಣಸಂಯುಕ್ತೌ ದ್ವೌ ಚಾನ್ಯೌ ಚ ತಥಾವಿಧೌ ।
ದ್ವಿಜಾನಾಂ ದೇಹಸಂಸಕ್ತಾ ಸ್ತ್ರಯಸ್ತೇ ರಘುನಂದನ ॥ ೧೦೨ ॥

ಪಿತರಸ್ತು ಮಯಾ ದೃಷ್ಟಾ ಬ್ರಾಹ್ಮಣಾಂಗೇಷು ರಾಘವ ।
ದೃಷ್ಟ್ವಾ ತ್ರಪಾನ್ವಿತಾಚಾಹಮುಪಕ್ರಾಂತಾ ತವಾಂತಿಕಾತ್ ॥ ೧೦೩ ॥

ತ್ವಯಾ ವೈ ಭೋಜಿತಾ ವಿಪ್ರಾಃ ಕೃತಂ ಶ್ರಾದ್ಧಂ ಯಥಾವಿಧಿ ।
ವಲ್ಕಲಾಜಿನಸಂವೀತಾ ಕಥಂ ರಾಜ್ಞಃ ಪುರಸ್ಸರಾ ॥ ೧೦೪ ॥

---

೧೦೦. ಪುಲಸ್ತ್ಯನು ಹೇಳಿದನು—ಗಂಡನು ಹೀಗೆ ಹೇಳಲು ಲಜ್ಜೆಯಿಂದ ತಲೆತಗ್ಗಿಸಿಕೊಂಡು ನಿಂತು ಕಣ್ಣೀರನ್ನು ಬಿಡುತ್ತಾ ರಾಘವನನ್ನು ಕುರಿತು ಇಂತೆಂದಳು.

೧೦೧-೧೦೩. ಎಲೈ ನಾಥನೇ! ಇಲ್ಲಿ ನಾನು ನೋಡಿದುದನ್ನೇ ಹೇಳುತ್ತೇನೆ. ಕೇಳು. ಅದು ಆಶ್ಚರ್ಯವಾದುದು. ನೀನು ತಂದೆಯ ಹೆಸರನ್ನು ಹಿಡಿದು ಕೂಗಿ. ತ್ತಲೆ ಆತನು ಬಂದನು. ಸರ್ವಾಭರಣಗಳನ್ನು ತೊಟ್ಟಿರುವ ಕುಂಡಲಗಳನ್ನು ಹಾಕಿ ಕೊಂಡಿರುವ ಮತ್ತಿಬ್ಬರೂ ಬಂದರು. ಅವರು ಮೂವರೂ ಆ ಬ್ರಾಹ್ಮಣರ ದೇಹದಲ್ಲಿ ಅಂಟಿಕೊಂಡಿದ್ದರು. ಈ ರೀತಿ ಪಿತೃಗಳನ್ನು ಬ್ರಾಹ್ಮಣರ ಅವಯವಗಳಲ್ಲಿ ನೋಡಿ ದೆನು. ಅವರನ್ನು ನೋಡುತ್ತಲೂ ನಾಚಿಕೆಯಾಯಿತು. ಆಗ ನಿನ್ನನ್ನಗಲಿ ದೂರ ವಾಗಿ ಹೊರಟುಹೋದೆನು.

೧೦೪-೧೦೫. ನೀನು ಶ್ರಾದ್ಧವನ್ನು ಕ್ರಮವಾಗಿ ಮಾಡಿದೆ. ಬ್ರಾಹ್ಮಣರಿಗೆ ಊಟಮಾಡಿಸಿದೆ. ಎಲೈ ರಾಮನೇ! ನಾರುಬಟ್ಟೆ ಚರ್ಮಗಳನ್ನು ಹೊದ್ದಿರುವ ನಾನು ರಾಜನಾದ ದಶರಥನ ಎದುರಿಗೆ ಹೇಗೆ ನಿಲ್ಲಲಿ? ಎಂದು ಹೊರಟುಹೋದೆನು.

ಭವಾಮಿ ರಿಪುವೀರಘ್ನ ಸತ್ಯಮೇತದುದಾಹೃತಂ ।
ಕೌಶೇಯಾನಿ ಚ ವಸ್ತ್ರಾಣಿ ಕೈಕೇಯೀ ಚಾಪ್ಯಪಾಹರತ್ ॥ ೧೦೫ ॥

ತದಾಪ್ರಭೃತಿ ಚೈವಾಹಂ ಧಿಗ್ರಾಜ್ಞಾಂ ಚಂಚಲಾಃ ಶ್ರಿಯಃ ।
ಜ್ಞಾತ್ವಾಹಂ ನ ವದೇ ಕಿಂಚಿನ್ಮಾ ತೇ ದುಃಖಂ ಭವತ್ವಿತಿ ॥ ೧೦೬ ॥

ನಾಹಂ ಸ್ಮರಾಮಿ ವೈ ಮಾತುರ್ನ ಪಿತುಶ್ಚ ಪರಂತಪ ।
ಕದಾ ಭವಿಷ್ಯತೇ ಚಾಂತಃ ವನವಾಸಸ್ಯ ರಾಘವ ॥ ೧೦೭ ॥

ಏತದ್ದಿವಾನಿಶಂ ನಾಥ ಚಿಂತಯಂತ್ಯಾಃ ಪುನಃಪುನಃ ।
ವ್ರಜಂತಿ ದಿವಸಾ ರಾಮ ತವ ಪಾದೌ ಶಪಾಮ್ಯಹಂ ॥ ೧೦೮ ॥

ಸ್ವಹಸ್ತೇನ ಕಥಂ ರಾಮೋ ಭೋಜನಂ ದಾಸ್ಯತಿ ತ್ವಿದಂ ।
ದಾಸಾನಾಮಪಿ ಯೇದಾಸಾ ನೋಪಭುಂಜಂತಿ ಕರ್ಹಿಚಿತ್ ॥ ೧೦೯ ॥

ತಾದೃಶಂ ತು ಕಥಂ ತಸ್ಮೈ ಹ್ಯನ್ನಂ ದಾತುಂ ವದಸ್ವ ಹ ।
ಯಾಹಂ ರಾಜ್ಞಾಂ ಪುರಾ ದೃಷ್ಟ್ವಾ ಸರ್ವಾಲಂಕಾರಭೂಷಿತಾ ॥ ೧೧೦ ॥

---

ಇದನ್ನು ಸತ್ಯವಾಗಿ ಹೇಳಿದ್ದೇನೆ. ನನ್ನ ರೇಷ್ಮೆಯ ಬಟ್ಟೆಗಳನ್ನು ಕೈಕೆಯಿಯು ಕಿತ್ತುಕೊಂಡಳು.

೧೦೬. ಅದುಮೊದಲುಗೊಂಡು ರಾಜರ ಸಂಪತ್ತಿಗೆ ಧಿಕ್ಕಾರವಿರಲಿ ಅದು ಚಂಚಲವಾದುದು. ಎಂದು ತಿಳಿದು ನಿನಗೆ ದುಃಖವಾಗಬಾರದೆಂಬ ಬುದ್ಧಿಯಿಂದ ಏನನ್ನೂ ಹೇಳಲಿಲ್ಲ ಅಷ್ಟೆ!

೧೦೭-೧೦೮. ನಾನು ತಾಯಿಯನ್ನಾಗಲೀ ತಂದೆಯನ್ನಾಗಲೀ ಸ್ಮರಿಸುತ್ತಿಲ್ಲ. ಈ ವನವಾಸ ಯಾವಾಗ ಕೊನೆಗಾಣುವುದು? ಎಂಬುದೊಂದನ್ನೇ ಹಗಲೂ ರಾತ್ರಿಯೂ ಪದೇಪದೇ ಚಿಂತಿಸುತ್ತಿದ್ದೇನೆ. ತಮ್ಮ ಪಾದಪ್ರಮಾಣವಾಗಿ ಹೇಳುತ್ತೇನೆ.

೧೦೯. ಈ ಭೋಜನವನ್ನು ರಾಮನು ಪಿತೃಗಳಿಗೆ ತನ್ನ ಕೈಯ್ಯಿಂದ ಹೇಗೆ ಕೊಟ್ಟಾನು? ರಾಮನ ಆಳುಗಳ ಆಳುಗಳೂ ಕೂಡ ಈ ತಿಂಡಿಯನ್ನು ಅಪ್ಪಿತಪ್ಪಿ ಯಾದರೂ ತಿನ್ನುವುದಿಲ್ಲವಲ್ಲ. ಇಂತಹದನ್ನು ಅವನಿಗೆ ಹೇಗೆತಾನೇ ಕೊಡಲು ಶಕ್ತಳಾದೇನು? ಹೇಳು.

೧೧೦-೧೧೧. ಯಾವ ನಾನು ಸರ್ವಾಲಂಕಾರಗಳನ್ನು ಹೊಂದಿ ಕೈಯಲ್ಲಿ ಚಾಮರವನ್ನು ಹಿಡಿದು ರಾಜನನ್ನು ಬೀಸುತ್ತ ಸೇವಿಸುತ್ತಿದ್ದೆನೋ ಆ ನಾನು ಈಗ

ನಾಲವ್ಯಜನಹಸ್ತಾ ಚ ವೀಜಯಂತೀ ನರಾಧಿಪಂ ।
ಸಾ ಸ್ವೇದಮಲದಿಗ್ಧಾಂಗೀ ಕಥಂ ಪಶ್ಯಾಮಿ ಭೂಮಿಪಂ ॥ ೧೧೧ ॥

ವ್ಯಕ್ತಂ ತ್ರಿವಿಷ್ಟಪಂ ಗತಃ ತ್ವಯಾ ಪುತ್ರೇಣ ತಾರಿತಃ ।
ದೃಷ್ಟ್ವಾ ಮಾಂ ದುಃಖಿತಾಂ ಬಾಲಾಂ ವನೇಕ್ಲಿಷ್ಟಾಮನಾಗಸಂ ॥ ೧೧೨ ॥

ಶುಚಾ ಸ್ಯಾತ್ಪಾರ್ಥಿವೇಂದ್ರಸ್ಯ ತೇನ ನಷ್ಟಾಸ್ಮಿ ರಾಘವ ।
ಭವಾನ್ಪ್ರಾಣಸಮೋ ನಾಥ ನ ತೇ ಗೋಪ್ಯಂ ಮಮ ತ್ವಿಹ ॥ ೧೧೩ ॥

ಸತ್ಯೇನಾನೇನ ತೇ ನಾಥ ಸ್ಪೃಶಾಮಿ ಚರಣೌ ಚ ತೇ ॥ ೧೧೪ ॥

॥ ಪುಲಸ್ತ್ಯ ಉವಾಚ ॥

ತಚ್ಛ್ರುತ್ವಾ ರಾಘವಃ ಪ್ರೀತಃ ಪ್ರಿಯಾಂ ತಾಂ ಪ್ರಿಯವಾದಿನೀಂ ।
ಅಂಕಮಾನೀಯ ಸುದೃಢಂ ಪರಿಷ್ವಜ್ಯ ಚ ಸಾದರಂ ॥ ೧೧೫ ॥

---

ಬೆವರಿನ ವಾಸನೆಯೂ ಕೊಳೆಯೂ ಕೂಡಿರುವ ಈ ದೇಹವುಳ್ಳವಳಾಗಿ ಮುಖವನ್ನು ಹೇಗೆ ತೋರಿಸಲಿ? ನಾನು ತಾನೇ ಆ ರಾಜನನ್ನು ಹೇಗೆ ನೋಡಲಿ?

೧೧೨. ಮಗನಾದ ನಿನ್ನಿಂದ ಧನ್ಯನಾಗಿ ಆ ರಾಜನು ಸ್ವರ್ಗವನ್ನು ಹೊಂದಿದರೂ, ದುಃಖಗೊಂಡ, ಕಾಡಿನಲ್ಲಿ ಕಷ್ಟಪಡುತ್ತಿರುವ ತಪ್ಪಿಲ್ಲದ ನನ್ನನ್ನು ಆತನು ನೋಡಿದರೆ ದುಃಖಪಡುವನು. ಆದ್ದರಿಂದ ಹೊರಟುಹೋದೆನು.

೧೧೩-೧೧೪. ಎಲೈ ನಾಥನೇ! ನೀನು ಪ್ರಾಣಗಳಿಗೆ ಸಮನಾದ ನಾಥನು. ನಿನಗೆ ಮರೆಮಾಚಬೇಕಾದುದೇನೂ ಇಲ್ಲ. ಸತ್ಯವಾಗಿಯೂ ನಿನ್ನ ಕಾಲುಗಳನ್ನು ಮುಟ್ಟಿ ಹೇಳುತ್ತೇನೆ.

೧೧೫. ಪುಲಸ್ತ್ಯನು ಹೇಳಿದನು ಅದನ್ನು ಕೇಳಿ ರಾಮನು ಸಂತೋಷಪಟ್ಟು ಆ ಪ್ರಿಯೆಯನ್ನು ಪ್ರೀತಿಯಿಂದ ತೊಡೆಯ ಮೇಲೆ ಕೂರಿಸಿಕೊಂಡು ಆಲಿಂಗಿಸಿದನು. ಅನಂತರ ಆ ವೀರರು ಊಟಮಾಡಿದರು. ಆ ಮೇಲೆ ಸೀತೆಯು ತಾನೂ ಊಟಮಾಡಿದಳು.

ಭುಕ್ತ್ವಂ ಭೋಜ್ಯಂ ತಥಾ ವೀರೌ ಪಶ್ಚಾದ್ಭುಕ್ತ್ವಾ ಚ ಜಾನಕೀ ।
ಏವಂ ಸ್ಥಿತೌ ತದಾ ಸಾ ಚ ತಾಂ ರಾತ್ರಿಂ ತತ್ರ ರಾಘವೌ ॥ ೧೧೬ ॥

ಉದಿತೇ ಚ ಸಹಸ್ರಾಂಶೌ ಗಮನಾಯ ಮನೋ ದಧುಃ ।
ಪ್ರತ್ಯಙ್ಮುಖೋ ಗತಃ ಕ್ರೋಶಂ ಜ್ಯೇಷ್ಠಂ ಯಾವಚ್ಚ ಪುಷ್ಕರಂ ॥ ೧೧೭ ॥

ಪೂರ್ವಭಾಗೇ ಪುಷ್ಕರಸ್ಯ ಯಾವತ್ತಿಷ್ಠತಿ ರಾಘವಃ ।
ಶುಶ್ರಾವ ಚ ತತೋ ವಾಚಂ ದೇವದೂತೇನ ಭಾಷಿತಂ ॥ ೧೧೮ ॥

॥ ದೇವದೂತ ಉವಾಚ ॥

ಭೊ ಭೋ ರಾಘವ ಭದ್ರಂ ತೇ ತೀರ್ಥಮೇತತ್ಸುದುರ್ಲಭಂ ।
ಅಸ್ಮಿನ್ಸ್ಥಾನೇ ಸ್ಥಿತೋ ವೀರ ಆತ್ಮನಃ ಪುಣ್ಯತಾಂ ಕುರು ॥ ೧೧೯ ॥

ದೇವಕಾರ್ಯಂ ತ್ವಯಾ ಕಾರ್ಯಂ ಹಂತವ್ಯಾ ದೇವಶತ್ರವಃ ।
ತತೋ ಹೃಷ್ಟಮನಾ ರಾಮೋ ಹ್ಯಬ್ರವೀಲ್ಲಕ್ಷ್ಮಣಂ ವಚಃ ॥ ೧೨೦ ॥

---

೧೧೬. ಈ ರೀತಿಯಾಗಿ ಮಾಡಿ ಆ ರಾತ್ರಿ ರಾಮಲಕ್ಷ್ಮಣ ಸೀತೆಯರು ಅಲ್ಲಿದ್ದರು. ಸೂರ್ಯೋದಯವಾದ ಮೇಲೆ ಮುಂದೆ ಹೊರಡಲು ನಿಶ್ಚಯಿಸಿದರು.

೧೧೭-೧೧೮. ಅನಂತರ ಪಶ್ಚಿಮದ ಕಡೆಗೆ ಜ್ಯೇಷ್ಠಪುಷ್ಕರದ ಕಡೆಗೆ ಒಂದು ಕ್ರೋಶದಷ್ಟು ದೂರ ಹೋದರು. ಆ ಪುಷ್ಕರದ ಪೂರ್ವದಿಕ್ಕಿನಲ್ಲಿ ರಾಮನು ನಿಂತನು. ಆಗ ದೇವದೂತನು ಹೇಳಿದ ಒಂದು ಮಾತು ಅವನಿಗೆ ಕೇಳಿಸಿತು.

೧೧೯-೧೨೦. ಎಲೈ ರಾಘವನೇ! ನಿನಗೆ ಮಂಗಳವಾಗಲಿ. ಈ ತೀರ್ಥವು ಸಿಕ್ಕುವುದು ಕಷ್ಟವು. ಎಲೈ ವೀರನೆ! ನೀನು ಇಲ್ಲಿದ್ದು ನಿನ್ನ ಪುಣ್ಯಕೆಲಸಗಳನ್ನು ಮಾಡಿಕೊ. ನೀನು ದೇವಕಾರ್ಯವನ್ನು ಮಾಡಬೇಕು. ದೇವಶತ್ರುಗಳನ್ನು ನಾಶ ಮಾಡಬೇಕು. ಎನ್ನಲು ಆಗ ರಾಮನು ಸಂತೋಷಪಟ್ಟು ಲಕ್ಷ್ಮಣನನ್ನು ಕುರಿತು ಇಂತೆಂದನು.

॥ ಶ್ರೀರಾಮ ಉವಾಚ ॥

ಅನುಗ್ರಹೀತಾಸ್ಮ್ಯಮಿತ್ರೇ ದೇವದೇವೇನ ಬ್ರಹ್ಮಣಾ ।
ಅತ್ರಾಶ್ರಮಪದಂ ಕೃತ್ವಾ ಮಾಸಮೇಕಂ ತು ಲಕ್ಷ್ಮಣ ॥
ವ್ರತಂ ಚರಿತುಮಿಚ್ಛಾಮಿ ಕಾಯಶೋಧನಮುತ್ತಮಂ ॥ ೧೨೧ ॥

॥ ಪುಲಸ್ತ್ಯ ಉವಾಚ ॥

ತಥೇತಿ ಲಕ್ಷ್ಮಣೇನೋಕ್ತೋ ವ್ರತಂ ಪರಿಸಮಾಪ್ಯ ತು ।
ಪಿಂಡದಾನಾದಿಭಿರ್ದಾನೈಃ ಶ್ರಾದ್ಧೈಶ್ಚೈವ ಪಿತಾಮಹಾನ್ ॥ ೧೨೨ ॥

ತ್ರಿಪುಷ್ಕರೇ ತದಾ ರಾಮೋಽತರ್ಪಯದ್ವಿಧಿವತ್ತದಾ ।
ಕನಕಾ ಸುಪ್ರಭಾ ಚೈವ ನಂದಾ ಪ್ರಾಚೀ ಸರಸ್ವತೀ ॥ ೧೨೩ ॥

ಪಂಚಸ್ರೋತಾಃ ಪುಷ್ಕರೇಷು ಪಿತ್ರ್ಯಾಣಾಂ ಪ್ರೀತಿದಾಯಿನೀ ।
ದೈನಂದಿನೀಮೃಷೀಣಾಂ ತು ಪೂಜ್ಯಂ ತಾಂ ಗಿತೃ ಪೂರ್ವಕಂ ॥ ೧೨೪ ॥

ಪ್ರೀಣಯಿತ್ವಾ ತಥಾ ರಾಮೋ ಲಕ್ಷ್ಮಣಂ ವಾಕ್ಯಮಬ್ರವೀತ್ ॥ ೧೨೫ ॥

---

೧೨೧. ಶ್ರೀರಾಮನು ಹೇಳಿದನು—ಎಲೈ ಲಕ್ಷ್ಮಣನೇ! ದೇವದೇವನಾದ ಬ್ರಹ್ಮನು ನನಗೆ ಅನುಗ್ರಹಿಸಿದನು. ಇಲ್ಲಿ ಆಶ್ರಮವನ್ನು ಕಟ್ಟಿಕೊಂಡು ಒಂದು ತಿಂಗಳ ಕಾಲ ಕಾಯಶೋಧನವ್ರತವನ್ನು ಮಾಡಲು ಬಯಸುತ್ತೇನೆ.

೧೨೨. ಪುಲಸ್ತ್ಯನು ಹೇಳಿದನು—ಹಾಗೇ ಆಗಲೆಂದು ಲಕ್ಷ್ಮಣನು ಹೇಳಲು ವ್ರತವನ್ನು ಹಿಡಿದು ಮುಗಿಸಿ ಪಿಂಡದಾನದಿಂದಲೂ, ಶ್ರಾದ್ಧದಿಂದಲೂ, ಪಿತಾಮಹರನ್ನು ಆ ತ್ರಿಪುಷ್ಕರದಲ್ಲಿ ವಿಧಿವತ್ತಾಗಿ ತೃಪ್ತಿಪಡಿಸಿದನು.

೧೨೩. ಕನಕೆ, ಸುಪ್ರಭೆ, ನಂದೆ, ಪ್ರಾಚಿ, ಸರಸ್ವತಿ ಎಂಬ ಐದು ನದಿಗಳು ಅಲ್ಲಿ ಪಿತೃಗಳಿಗೆ ಮೋಕ್ಷವನ್ನು ಕೊಡುತ್ತವೆ.

೧೨೪-೧೨೫. ನಿತ್ಯವೂ ಮಾಡುವ ಋಷಿ ಪಿತೃತರ್ಪಣಗಳನ್ನು ಮಾಡಿಕೊಂಡು ಲಕ್ಷ್ಮಣನನ್ನು ಕುರಿತು ಇಂತೆಂದನು.

॥ ಶ್ರೀರಾಮ ಉವಾಚ ॥

ಏಹಿ ಲಕ್ಷ್ಮಣ ಶೀಘ್ರಂ ತ್ವ ಪುಷ್ಕರಾಜ್ಜಲಮಾನಯ ।
ಪಾದಪ್ರಕ್ಷಾಳನಂ ಕೃತ್ವಾ ಶಯನಂ ಕುರು ಸತ್ವರಂ ॥ ೧೨೬ ॥

ವಿಭಾವರ್ಯಾಂ ವ್ಯತೀತಾಯಾಂ ಯಾಸ್ಯಾಮೋ ದಕ್ಷಿಣಾಂ ದಿಶಂ ।
ಲಕ್ಷ್ಮಣಸ್ತ್ವ ಬ್ರವೀದ್ರಾಮಂ ಸೀತಾ ಆನಯತಾಂ ಪಯಃ ॥ ೧೨೭ ॥

ನಾಹಂ ರಾಮ ಸರ್ವಕಾಲಂ ದಾಸಭಾವಂ ಕರೋಮಿ ತೇ ।
ಇಯಂ ಚ ಪುಷ್ಟಾ ಸುಭೃಶಂ ಪೀವರೀಂ ಚ ಮಮಾಪ್ಯತ ॥ ೧೨೮ ॥

ಕರಿಷ್ಯಸಿ ಕಿಮನಯಾ ಭಾರ್ಯಯಾ ವದ ಸಾಂಪ್ರತಂ ।
ಕಿಂ ವಾ ಮೃತಸ್ಯ ತೇ ಪ್ರೇತ್ಯ ಇಯಂ ಯಾಸ್ಯತಿ ತೇ ಪ್ರಿಯಾ ॥ ೧೨೯ ॥

ರಕ್ಷಸಿ ಸ್ವಂ ಸದಾಕಾಲಂ ಸುಪುಷ್ಟಾಂ ಚೈವ ಸರ್ವದಾ ।
ಕರೋಷಿ ಕ್ಲೇಶಾವಹನಂ ಸತತಂ ಮಾಂ ರಘೂದ್ವಹ ॥ ೧೩೦ ॥

---

೧೨೬. ಶ್ರೀರಾಮನು ಹೇಳಿದನು—ಲಕ್ಷ್ಮಣ! ಬಾ ಬೇಗ ಪುಷ್ಕರಕ್ಕೆ ಹೋಗಿ ನೀರನ್ನು ತೆಗೆದುಕೊಂಡು ಬಂದು ನನ್ನ ಕಾಲುಗಳನ್ನು ತೊಳೆದು ಜಾಗ್ರತೆಯಾಗಿ ಹಾಸಿಗೆಯನ್ನೇರ್ಪಡಿಸು. ರಾತ್ರಿ ಕಳೆದ ಮೇಲೆ ದಕ್ಷಿಣ ದಿಕ್ಕಿಗೆ ಹೋಗೋಣ.

೧೨೭. ಆಗ ಲಕ್ಷ್ಮಣನು ರಾಮನನ್ನು ಕುರಿತು ಸೀತೆಯೇ ನೀರನ್ನು ತರಲಿ ನಾನು ಸರ್ವಕಾಲದಲ್ಲಿಯೂ ನಿನಗೆ ಆಳಾಗಿರುವುದಿಲ್ಲ.

೧೨೮-೧೩೦. ಈ ಸೀತೆಯು ದಪ್ಪದಪ್ಪವಾಗಿದ್ದಾಳೆ. ನನಗಿಂತಲೂ ಹೆಚ್ಚು ದಪ್ಪವಾಗಿದ್ದಾಳೆ. ಈ ಹೆಂಡತಿಯನ್ನಿಟ್ಟುಕೊಂಡು ಏನು ಮಾಡುತ್ತೀಯೆ? ಹೇಳು. ನೀನು ಸತ್ತಮೇಲೆ ನಿನ್ನ ಜೊತೆಯಲ್ಲಿ ಈಕೆಯು ಬರುತ್ತಾಳೆಯೇ? ಒಂದುಸಾರಿಯಾದರೂ ನೀನೂ ಕಷ್ಟಪಡಬಾರದು. ಮೈಬೆಳಸಿಕೊಂಡಿರುವ ಈ ಸೀತೆಯೂ ಕೆಲಸ ಮಾಡಕೂಡದು. ನಾನು ಮಾತ್ರ ಯಾವಾಗಲೂ ನಿಮಗೆ ದುಡಿದು ತೊಂದರೆಪಡ ಪಡಬೇಕಲ್ಲವೆ?

ಮಯ್ಯಪಿಕ್ಲೇಶಿತೇ ರಾಮ ಪರತ್ರ ಜಾಯತೇ ಕ್ಷತಿಃ ।
ತ್ವತ್ಕೃತೇ ಚ ಸದಾ ಚಾಹಂ ಪಿಪಾಸಾಂ ಕ್ಷುಧಯಾ ಸಹ ॥ ೧೩೧ ॥

ಸುಸಹಾಮಿ ನ ಸಂದೇಹಃ ಪರತ್ರ ಚ ನಿಶಾಮಯ ।
ಮೃತಾನಾಂ ಪೃಷ್ಠತಃ ಕಶ್ಚಿದ್ಗತೋ ನೈವೇಹ ದೃಶ್ಯತೇ ॥ ೧೩೨ ॥

ಭಾರ್ಯಾ ಸುತೋ ಧನಂ ವಾಪಿ ಏವಮಾಹುರ್ಮನೀಷಿಣಃ ।
ಮೃತಶ್ಚ ತೇ ಪಿತಾ ರಾಮ ತ್ಯಕ್ತ್ವಾ ರಾಜ್ಯಮಕಂಟಕಂ ॥ ೧೩೩ ॥

ವಿನಿಕ್ಷಿಪ್ಯ ವನೇ ತ್ವಾಂ ಮಾಂ ಕೈಕೇಯ್ಯಾಃ ಪ್ರಿಯಕಾಮ್ಯಯಾ ।
ಇಹ ಸ್ಥಿತಾ ಸಾ ಕೈಕೇಯೀ ಧನಂ ಸರ್ವೇ ಚ ಬಾಂಧವಾಃ ॥ ೧೩೪ ॥

ಮಹಾರಾಜೋ ದಶರಥ ಏಕ ಏವ ಗತೋ ಗತಿಂ ।
ಮನ್ಯೇಹಂ ತು ತ್ವಯಾ ಸಾರ್ಧಂ ಪ್ರೇತ್ಯ ಯಾಸ್ಯಾಮಿ ವೈ ಧ್ರುವಂ॥ ೧೩೫ ॥

ಕರಿಷ್ಯಸೇ ಕಿಮನಯಾ ವದ ರಾಘವ ಸಾಂಪ್ರತಂ ।
ಶ್ರುತ್ವಾ ಸ ನೋಕ್ತಪೂರ್ವಂ ತು ವಾಕ್ಯಂ ಲಕ್ಷ್ಮಣಭಾಷಿತಂ ॥ ೧೩೬ ॥

---

೧೩೧–೧೩೨. ಎಲೈ ರಾಮನೇ! ನನಗೆ ತೊಂದರೆಕೊಟ್ಟರೆ ನಿನಗೆ ಪರಲೋಕದಲ್ಲಿ ತೊಂದರೆಯುಂಟಾಗುತ್ತದೆ. ನಿನಗೋಸ್ಕರ ನಾನು ಯಾವಾಗಲೂ ಹಸಿವು ಬಾಯಾರಿಕೆಗಳನ್ನೂ ಕೂಡ ಸಹಿಸಿದ್ದೇನೆ. ಅಲ್ಲದೆ ಮತ್ತೂ ಹೇಳುವೆನು ಕೇಳು. ಸತ್ತವರ ಹಿಂದೆ ಹೋದವರನ್ನು ಒಬ್ಬರನ್ನೂ ನೋಡಲಿಲ್ಲ.

೧೩೩–೧೩೫. ಹೆಂಡತಿ ಮಕ್ಕಳು ಹಣ ಒಂದೂ ಕೂಡ ಸತ್ತವನ ಜೊತೆಯಲ್ಲಿ ಹೋಗುವುದಿಲ್ಲವೆಂದು ತಿಳಿದವರು ಹೇಳುತ್ತಾರೆ. ಎಲೈ ರಾಮನೆ! ನಿನ್ನ ತಂದೆಯು ಶತ್ರುಹೀನವಾದ ರಾಜ್ಯವನ್ನು ಬಿಟ್ಟು ಸತ್ತನು. ನಿನ್ನನ್ನೂ, ನನ್ನನ್ನೂ ಕೈಕೇಯಿಗೆ ಸಂತೋಷವಾಗಲೆಂದು ಕಾಡಿಗೆ ಓಡಿಸಿದನು ಹಣ, ಬಂಧು, ಇವುಗಳೊಡನೆ ಕೈಕೇಯಿಯು ಇಲ್ಲೇ ಸುಖವಾಗಿದ್ದಾಳೆ. ಮಹಾರಾಜನೊಬ್ಬನೇ ಪರಲೋಕಕ್ಕೆ ಹೋದನು. ಬಹುಶಃ ನೀನು ಸಾಯುವಾಗ ನನ್ನನ್ನು ನಿನ್ನೊಡನೆ ಕರೆದುಕೊಂಡು ಹೋಗುವಂತೆ ಕಾಣುತ್ತದೆ! ಇವಳನ್ನು ಕಟ್ಟಿಕೊಂಡು ಏನು ಮಾಡುತ್ತೀಯೆ ? ಈಗ ಹೇಳು.

೧೩೬. ಲಕ್ಷ್ಮಣನು ಹಿಂದೆಂದೂ ಈ ರೀತಿ ಹೇಳದ ಮಾತನ್ನು ಇವರಿಬ್ಬರೂ ಕೇಳಿ ಖೇದ ಹೊಂದಿ ಸುಮ್ಮನಿದ್ದರು.

ವಿಮನಾ ರಾಘವಸ್ತಸ್ಥೌ ಸೀತಾ ಚಾಪಿ ವರಾನನಾ ।
ಯದುಕ್ತಂ ಲಕ್ಷ್ಮಣೇನಾಥ ಸೀತಾ ಸರ್ವಂ ಚಕಾರ ಹ ॥ ೧೩೭ ॥

ಸ್ನಾತ್ವಾ ಭುಕ್ತ್ವಾ ಚ ತೌ ವೀರೌ ಪುಷ್ಕರೇ ಪುಷ್ಕರೇಕ್ಷಣೌ ।
ನೀತ್ವಾ ವಿಭಾವರೀಂ ತತ್ರ ಗಮನಾಯ ಮನೋ ದಧುಃ ॥ ೧೩೮ ॥

॥ ಶ್ರೀರಾಮ ಉವಾಚ ॥

ಏಹ್ಯೇತ್ತಿಷ್ಠಸ್ವ ಸೌಮಿತ್ರೇ ವ್ರಜಾಮೋ ದಕ್ಷಿಣಾಂ ದಿಶಂ ॥ ೧೩೯ ॥

॥ ಪುಲಸ್ತ್ಯ ಉವಾಚ ॥

ಸೌಮಿತ್ರಿರಬ್ರವೀದ್ರಾಮಂ ನಾಹಂ ಯಾಸ್ಯೇ ಕಥಂಚನ ।
ವ್ರಜ ತ್ವಮನಯಾ ಸಾರ್ಧಂ ಭಾರ್ಯಾಯಾ ಕಮಲೇಕ್ಷಣ ॥ ೧೪೦ ॥

ಅನ್ಯದ್ವನಂ ಗಮಿಷ್ಯಾಮಿ ನೈವಾಯೋಧ್ಯಾಂ ಚ ರಾಘವ ।
ಅಸ್ಮಿನ್ವನೇ ವಸಿಷ್ಯಾಮಿ ವರ್ಷಾಣಿ ಚ ಚತುರ್ದಶ ॥ ೧೪೧ ॥

ಮಯಾ ವಿನಾ ತ್ವಯೋಧ್ಯಾಯಾಂ ಯದಿ ತ್ವಂ ನಗಮಿಷ್ಯಸಿ ।
ಅನ್ನೈವ ಪಥಾ ಭೂಯ ಆಗನ್ತವ್ಯಂ ತ್ವಯಾ ವಿಭೋ ॥ ೧೪೨ ॥

---

೧೩೭. ಸೀತೆಯು ರಾಮನು ಹೇಳಿದುದನ್ನಲ್ಲದೆ ಲಕ್ಷ್ಮಣನು ಹೇಳಿದುದನ್ನೂ ಮಾಡಿದಳು.

೧೩೮. ಆ ಇಬ್ಬರು ವೀರರೂ ಸ್ನಾನಮಾಡಿ ಆ ರಾತ್ರಿಯನ್ನು ಅಲ್ಲಿ ಕಳೆದು ಮುಂದಕ್ಕೆ ಹೊರಡಲು ಮನಸ್ಸನ್ನು ಮಾಡಿದರು.

೧೩೯. ಶ್ರೀರಾಮನು ಹೇಳಿದನು– ಎಲೈ ಸೌಮಿತ್ರಿಯೇ ಏಳು, ದಕ್ಷಿಣ ದೇಶಕ್ಕೆ (ದಿಕ್ಕಿಗೆ) ಹೋಗೋಣ.

೧೪೦-೧೪೧. ಪುಲಸ್ತ್ಯನು ಹೇಳಿದನು– ಈಗ ಲಕ್ಷ್ಮಣನು ರಾಮನನ್ನು ನಾನು ಏನುಮಾಡಿದರೂ ಎಲ್ಲಿಗೂ ಹೋಗುವುದಿಲ್ಲ. ನೀನು ನಿನ್ನ ಹೆಂಡತಿಯೊಡನೆ ಹೋಗು ನಾನು ಬೇರೆ ವನಕ್ಕೂ ಹೋಗುವುದಿಲ್ಲ ಅಯೋಧ್ಯೆಗೂ ಹೋಗುವುದಿಲ್ಲ. ಈ ವನದಲ್ಲಿಯೇ ಹದಿನಾಲ್ಕುವರ್ಷಗಳವರೆಗೂ ಇರುತ್ತೇನೆ

೧೪೨-೧೪೩. ನಾನು ಬಾರದೆ ನೀನು ಅಯೋಧ್ಯೆಗೆ ಹೋಗುವುದಿಲ್ಲವೆಂದಿದ್ದರೆ ಮತ್ತೆ ಊರಿಗೆ ಹೋಗುವಾಗ ಈ ದಾರಿಯಲ್ಲೇ ಬಾ. ಅಲ್ಲಿಯವರೆಗೂ ಬದುಕಿ

ಯದಿ ಜೀವಾಮಿ ತತ್ಕಾಲಂ ಪುನರ್ಯಾಸ್ಯೇ ಪುರಂ ಪಿತುಃ ।
ತಾಪಸೋ ವಾ ಭವಿಷ್ಯಾಮಿ ಮಯಾ ತ್ವಂ ಕಿಂ ಕರಿಷ್ಯಸಿ ॥ ೧೪೩ ॥

ವ್ರಜ ಸೌಮ್ಯ ಶಿವಃ ಪಂಥಾ ಮಾ ಚ ತೇ ಪರಿಪಂಥಿನಃ ।
ಪಶ್ಯಾಮಿ ತ್ವಾಂ ಪುನಃ ಪ್ರಾಪ್ತಂ ಸಭಾರ್ಯಂ ಕಮಲೇಕ್ಷಣ ॥ ೧೪೪ ॥

ಪಿತೃಪೈತಾಮಹಂ ರಾಜ್ಯಮಯೋಧ್ಯಾಯಾಂ ನರಾಧಿಪ ।
ಶತ್ರುಘ್ನಭರತೌ ಚೋಭೌ ತ್ವದಾಜ್ಞಾಕರಣೇ ಸ್ಥಿತೌ ॥ ೧೪೫ ॥

ಅಹಂ ತೇ ಪ್ರತಿಕೂಲಸ್ತು ವನವಾಸೇ ವಿಶೇಷತಃ ।
ಅನಾರತಂ ದಿವಾ ಚಾಹಂ ರಾತ್ರೌ ಚೈವ ಪರಂತಪ ॥ ೧೪೬ ॥

ಕರ್ಮ ಕರ್ತುಂ ನ ಶಕ್ನೋಮಿ ವ್ರಜ ಸೌಮ್ಯ ಯಥಾಸುಖಂ ।
ಏವಂ ಬ್ರುವಾಣಂ ಸೌಮಿತ್ರಿಮುವಾಚ ರಘುನಂದನಃ ॥ ೧೪೭ ॥

॥ ಶ್ರೀರಾಮ ಉವಾಚ ॥

ಕಥಂ ಪೂರ್ವಮಯೋಧ್ಯಾಯಾ ನಿರ್ಗತೋಽಸಿ ಮಯಾ ಸಹ ।
ವನೇ ವತ್ಸ್ಯಾಮ್ಯಹಂ ರಾಮ ನವವರ್ಷಾಣಿ ಪಂಚ ಚ ॥ ೧೪೮ ॥

---

ದ್ದರೆ ಮತ್ತೆ ಊರಿಗೆ ಬರುತ್ತೇನೆ. ಅಥವಾ ತಪಸ್ವಿಯಾಗಿಯಾದರೂ ಆಗುತ್ತೇನೆ. ನನ್ನನ್ನು ಕಟ್ಟಿಕೊಂಡು ನಿನಗೇನು ?

೧೪೪-೧೪೫. ಅಪ್ಪ ! ನೀನು ಹೋಗು. ನಿನಗೆ ದಾರಿಯಲ್ಲಿ ಒಳ್ಳೆಯದಾಗಲಿ. ನಿನಗೆ ಯಾವ್ರವೂ ವಿರೋಧಿಗಳಾಗಬೇಡ. ನೀನು ಮತ್ತೆ ಇಲ್ಲಿಗೆ ಬಂದರೆ ಆಗ ನಿಮ್ಮ ದಂಪತಿಗಳನ್ನು ಮತ್ತೆ ನೋಡುತ್ತೇನೆ. ಅಯೋಧ್ಯೆಯಲ್ಲಿ ನಿನ್ನ ತಂದೆ ತಾತಂದಿರು ಸಂಪಾದಿಸಿದ ರಾಜ್ಯವಿರುವುದು. ಭರತಶತ್ರುಘ್ನರು ನಿನ್ನ ಆಜ್ಞಾಧಾರಕರಾಗಿದ್ದಾರೆ.

೧೪೬-೧೪೭. ನಾನು ನಿನಗೆ ವಿರೋಧಿ. ವನವಾಸಕಾಲದಲ್ಲಿಯಂತೂ ಬಹು ವಾಗಿ ವಿರೋಧಿಯಾಗಿದ್ದೇನೆ. ಹಗಲೂ ರಾತ್ರಿ ವಿಶ್ರಾಂತಿಯಿಲ್ಲದೆ ನಿನಗೆ ದುಡಿಯು ವುದಕ್ಕೆ ನನಗೆ ಆಗುವುದಿಲ್ಲ ನೀನು ಸುಖವಾಗಿ ಹೋಗು. ಹೀಗೆ ಲಕ್ಷ್ಮಣನು ಹೇಳಲು ರಾಮನು ಇತೆಂದನು.

೧೪೮-೧೪೯. ಶ್ರೀರಾಮನು ಹೇಳಿದನು- ಹಾಗಾದರೆ ನನ್ನ ಸಂಗಡ ಅಯೋ ಧ್ಯೆಯಿಂದೇಕೆ ಬಂದೆ ? ರಾಮ ! ನಾನು ನನ್ನ ಜೊತೆಯಲ್ಲಿ ಹದಿನಾಲ್ಕು ವರ್ಷಗಳ

ನ ತು ತ್ವಯಾ ವಿರಹಿತಃ ಸ್ವರ್ಗೇಽಪಿ ನಿವಸೇ ಕ್ವಚಿತ್ ।
ಯಾ ಗತಿಸ್ತೇ ನರವ್ಯಾಘ್ರ ಮಮ ಸಾಪಿ ಭವಿಷ್ಯತಿ ॥ ೧೪೯ ॥

ಪ್ರಸಾದಃ ಕ್ರಿಯತಾಂ ಮಹ್ಯಂ ನಯ ಮಾಮಪಿ ರಾಘವ ।
ಇದಾನೀಮರ್ಧಮಾರ್ಗೇ ತ್ವಂ ಕಥಂ ಸ್ಥಾಸ್ಯಸಿ ಶತ್ರುಹನ್ ॥ ೧೫೦ ॥

॥ ಪುಲಸ್ತ್ಯ ಉವಾಚ ॥

ಲಕ್ಷ್ಮಣಸ್ತ್ವಬ್ರವೀದ್ರಾಮಂ ನಾಹಂ ಗಂತಾ ವನೇ ಪುನಃ ।
ಲಕ್ಷ್ಮಣಂ ತು ಸ್ಥಿತಂ ಜ್ಞಾತ್ವಾ ರಾಮೋ ವಚನಮಬ್ರವೀತ್ ॥ ೧೫೧ ॥

ಮಾಮನುವ್ರಜ ಸೌಮಿತ್ರೇ ಏಕೋ ಯಾಸ್ಯಾಮಿ ಕಾನನಂ ।
ದ್ವಿತಿಯಾ ಮೇ ತ್ವಿಯಂ ಸೀತಾ ರಾಮೇಣೋಕ್ತಸ್ತು ಲಕ್ಷ್ಮಣಃ ॥ ೧೫೨ ॥

ಅಥಗೃಹ್ಯ ಸಮುತ್ತಸ್ಥೌ ರಾಮವಾಕ್ಯಂ ಸ ಲಕ್ಷ್ಮಣಃ ।
ಮರ್ಯಾದಾಪರ್ವತಂ ಪ್ರಾಪ್ತೌ ಕ್ಷೇತ್ರಸೀಮಾಂ ಪರಂತಪ ॥ ೧೫೩ ॥

---

ವರೆಗೂ ಕಾಡಿನಲ್ಲಿರುತ್ತೇನೆ. ಎಂದು ಬಂದೆಯಲ್ಲ? ಸ್ವರ್ಗದಲ್ಲಿ ಜಾಗ ಸಿಕ್ಕಿದರೂ ನಿನ್ನನ್ನು ಬಿಟ್ಟು ವಾಸಿಸುವುದಿಲ್ಲ? ಎಲೈ ರಾಮನೇ! ನಿನಗೆ ಯಾವ ಗತಿ ಬರುತ್ತದೋ ಅದೇ ಗತಿಯು ನನಗೂ ಬರಲಿ ಎಂದೆಯಲ್ಲ !

೧೫೦, ಎಲೈ ರಾಘವನೇ! ನನ್ನಲ್ಲಿ ಅನಗ್ರಹವಿಡು ನನ್ನನ್ನು ಕರೆದುಕೊಂಡು ದೋಗು ಎಂದು ಹೇಳಿ ಈಗ ನೀನು ಅರ್ಧ ದಾರಿಯಲ್ಲಿ ಹೀಗೇಕೆ ನಿಲ್ಲುತ್ತೀಯೆ ?

೧೫೧. ಪುಲಸ್ತ್ಯನು ಹೇಳಿದನು– ಆಗ ಲಕ್ಷ್ಮಣನು ರಾಮನನ್ನು ಕುರಿತು ನಾನು ಮತ್ತೆ ಕಾಡಿಗೆ ಯಾವ ಕಾಡಿಗೂ ಬರುವನಲ್ಲ ಎಂದೆನಲು ರಾಮನು ಲಕ್ಷ್ಮಣನು ಇಲ್ಲೇ ನಿಲ್ಲುವವನೆಂಬುದನ್ನು ತಿಳಿದು ಇಂತೆಂದನು.

೧೫೨. ಎಲೈ ಲಕ್ಷ್ಮಣನೇ! ನನ್ನ ಜೊತೆಯಲ್ಲಿ ಬಾ. ನಾನೊಬ್ಬನೇ ಕಾಡಿನಲ್ಲಿ ಹೋಗಬೇಕು. ಸಾಲದ್ದಕ್ಕೆ ಈ ಸೀತೆ ಬೇರೆ ನನ್ನ ಜೊತೆಯಲ್ಲಿದ್ದಾಳೆ. ಬಾರಪ್ಪ ಎಂದನು

೧೫೩. ಅನಂತರ ರಾಮನ ಮಾತನ್ನು ಕೇಳಿ ಲಕ್ಷ್ಮಣನು ಹೊರಟನು. ಹೊರಟು ಆ ಕ್ಷೇತ್ರದ ಎಲ್ಲೆಯಾದ ಮರ್ಯಾದಾಪರ್ವತವನ್ನು ಹೊಂದಿದರು.

ಅಜಗಂಧಂ ಚ ದೇವೇಶಂ ದೇವದೇವಂ ಪಿನಾಕಿನಂ ।
ಅಷ್ಟಾಂಗಪ್ರಣಿಪಾತೇನ ನತ್ವಾ ರಾಮಸ್ತ್ರಿಲೋಚನಂ ॥ ೧೫೪ ॥

ತುಷ್ಟಾವ ಪ್ರಣತಸ್ಸ್ಥಿತ್ವಾ ಭಗವಂತಮುಮಾಪತಿಂ ।
ಕೃತಾಂಜಲಿಪುಟೋ ಭೂತ್ವಾ ರೋಮಾಂಚಿತಶರೀರಕಃ ॥ ೧೫೫ ॥

ಸಾತ್ವಿಕಂ ಭಾವಮಾಪನ್ನೋ ವಿನಿರ್ಧೂತರಜಸ್ತಮಾಃ ।
ಲೋಕಾನಾಂ ಕಾರಣಂ ದೇವಂ ಬುಬುಧೇ ವಿಬುಧಾಧಿಪಂ ॥ ೧೫೬ ॥

॥ ಶ್ರೀರಾಮ ಉವಾಚ ॥

ಕೃತ್ಸ್ನಸ್ಯ ಯೋಸ್ಯ ಜಗತಸ್ಸಚರಾಚರಸ್ಯ
ಕರ್ತಾ ಕೃತಸ್ಯ ಚ ತಥಾ ಸುಖದುಃಖಹೇತೋಃ ।
ಸಂಹಾರಹೇತುರಪಿ ಯಃ ಪುನರಂತಕಾಲೇ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೫೭ ॥

ಯಂ ಯೋಗಿನೋ ವಿಗತಮೋಹತಮೋರಜಸ್ಕಾ
ಭಕ್ತ್ಯೈಕತಾನಮನಸೋ ವಿನಿವೃತ್ತಕಾಮಾಃ ।
ಧ್ಯಾಯಂತಿ ನಿಶ್ಚಲಧಿಯೋಽಮಿತದಿವ್ಯಭಾವಂ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೫೮ ॥

---

೧೫೪-೧೫೬. ಅಲ್ಲಿ ದೇವದೇವನೂ, ಪಿನಾಕ ಧನುಸ್ಸನ್ನು ಹೊಂದಿರುವವನೂ ಆದ ಅಜಗಂಧನೆಂಬ ಈಶ್ವರನಿಗೆ ಸಾಷ್ಟಾಂಗ ನಮಸ್ಕಾರಮಾಡಿ ನಮ್ರನಾಗಿ ಸ್ತುತಿಸಿದನು. ಹೀಗೆ ಮಾಡುತ್ತಿರಲು ರಾಮನಿಗೆ ಭಕ್ತಿಭಾವದಿಂದ ಮೈಯೆಲ್ಲವೂ ರೋಮಾಂಚವಾಯಿತು. ಲೋಕಗಳಿಗೆಲ್ಲಾ ಕಾರಣನಾದ ಆ ದೇವದೇವನಾದ ಸ್ವಾಮಿಯನ್ನು ಲಕ್ಷ್ಯವನ್ನಾಗಿಟ್ಟುಕೊಂಡನು ಮತ್ತು ಸ್ತುತಿಸಿದನು.

೧೫೭. ಶ್ರೀರಾಮನು ಹೇಳಿದನು- ಚರಾಚರಾತ್ಮಕವಾದ ಜಗತ್ತನ್ನು ಸೃಷ್ಟಿಸಿದ ಸುಖದುಃಖಗಳಿಗೆ ಕಾರಣನಾದ ಕೊನೆಗಾಲದಲ್ಲಿ ನಾಶಕ್ಕೂ ಕಾರಣನಾದ ರಕ್ಷಕನಾದ ಶಂಕರನನ್ನು ಮರೆಹೋಗುವೆನು.

೧೫೮. ತಮಸ್ಸು, ಮೋಹ, ರಜಸ್ಸುಗಳನ್ನು ಬಿಟ್ಟಿರುವ, ಯೋಗಿಗಳು ಭಕ್ತಿಯಿಂದ ಕೂಡಿ ಆಸೆಯನ್ನು ಬಿಟ್ಟು ನಿಶ್ಚಲ ಮನಸ್ಸಿನಿಂದ ಯಾವ ಉತ್ತಮವಾದ ಪ್ರಭುವನ್ನು ನಮಸ್ಕರಿಸುತ್ತಾರೆಯೋ ಅಂತಹ ಶಂಕರನನ್ನು ಮರೆಹೋಗುತ್ತೇನೆ.

ಯಶ್ಚೇಂದುಖಂಡಮಮಲಂ ವಿಲಸನ್ಮಯೂಖಂ
ಬದ್ಧ್ವಾ ಸದಾ ಪ್ರಿಯತಮಾಂ ಶಿರಸಾ ಬಿಭರ್ತಿ ।
ಯಶ್ಚಾರ್ಧದೇಹಮದದಾದ್ಗಿರಿರಾಜಪುತ್ರ್ಯೈ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೫೯ ॥

ಯೋಽಯಂ ಸಕೃದ್ವಿಮಲಚಾರುವಿಲೋಲತೋಯಾಂ
ಗಂಗಾಂ ಮಹೋರ್ಮಿವಿಷಮಾಂ ಗಗನಾತ್ಪತಂತೀಂ ।
ಮೂರ್ಧ್ನಾದದೇ ಸ್ರಜಮಿವ ಪ್ರತಿಲೋಲಪುಷ್ಪಾಂ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬೦ ॥

ಕೈಲಾಸಶೈಲಶಿಖರಂ ಪ್ರತಿಕಂಪಮಾನಂ
ಕೈಲಾಸಶೃಂಗಸದೃಶೇನ ದಶಾನನೇನ ।
ಯಃ ಪಾದಪದ್ಮಪರಿವಾದನಮಾದಧಾನ
ಸ್ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬೧ ॥

---

೧೫೯. ಕೊಳೆಯಿಲ್ಲದ ಕಾಂತಿಮತ್ತಾದ ಚಂದ್ರನ ಕಲೆಯನ್ನು ತಲೆಯಲ್ಲಿ ಧರಿಸಿರುವ ಅರ್ಧ ದೇಹವನ್ನೇ ಗೌರಿಗೆ ಕೊಟ್ಟಿರುವ ಆ ಶಂಕರನನ್ನು ಶರಣುಹೊಂದುತ್ತೇನೆ.

೧೬೦. ಮನೋಹರವಾಗಿಯೂ, ನಿರ್ಮಲವಾಗಿಯೂ, ಚಂಚಲವಾದ ನೀರುಳ್ಳದ್ದಾಗಿಯೂ, ದೊಡ್ಡ ದೊಡ್ಡ ಅಲೆಗಳಿಂದ ಕೂಡಿಯೂ ಇರುವ ಆಕಾಶದಿಂದ ಕೆಳಕ್ಕೆ ಬೀಳುತ್ತಿರುವ ಗಂಗೆಯನ್ನು ಯಾವ ಸ್ವಾಮಿಯು ಚಂಚಲವಾದ ಹೂವುಳ್ಳ ಮಾಲೆಯಂತೆ ತಲೆಯಲ್ಲಿ ಧರಿಸಿದನೋ ಅಂತಹ ಸ್ವಾಮಿಯನ್ನು ಶರಣು ಹೊಂದುತ್ತೇನೆ.

೧೬೧. ಕೈಲಾಸಪರ್ವತದ ಶಿಖರದಂತೆ ಇರುವ ದಶಾನನನಾದ ರಾವಣನು ಕೈಲಾಸಪರ್ವತದ ಶಿಖರವನ್ನು ಅಲ್ಲಾಡಿಸುತ್ತಿರಲು ಆ ಶಿಖರವನ್ನು ಹಾಗೆಯೇ ತುಳಿದುಕೊಂಡಿದ್ದ ಶಂಕರನನ್ನು ಶರಣು ಹೊಂದುತ್ತೇನೆ.

ಯೇನಾಸಕೃದ್ದಿತಿಸುತಾಃ ಸಮರೇ ನಿರಸ್ತಾ
ವಿದ್ಯಾಧರೋರಗಗಣಾಶ್ಚ ವರೈಸ್ಸಮಗ್ರಾಃ ।
ಸಂಯೋಜಿತಾ ಮುನಿವರಾಃ ಫಲಮೂಲಭಕ್ಷಾ
ಸ್ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬೨ ॥

ದಗ್ಧ್ವಾಧ್ವರಂ ಚ ನಯನೇ ಚ ತಥಾ ಭಗಸ್ಯ
ಪೂಷ್ಣಸ್ತಥಾ ದಶನಪಙ್ಕ್ತಿಮಪಾತಯಚ್ಚ ।
ತಸ್ತಂಭ ಯಃ ಕುಲಿಶಯುಕ್ತಮಹೇಂದ್ರಹಸ್ತಂ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬೩ ॥

ಏನಸ್ಕೃತೋಽಪಿ ವಿಷಯೇಷ್ವಪಿ ಸಕ್ತಭಾವಾ
ಜ್ಞಾನಾನ್ವಯಶ್ರುತಗುಣೈರಪಿ ನೈವ ಯುಕ್ತಾಃ ।
ಯಂ ಸಂಶ್ರಿತಾಃ ಸುಖಭುಜಃ ಪುರುಷಾ ಭವಂತಿ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬೪ ॥

---

೧೬೨. ದೈತ್ಯರೆಲ್ಲರನ್ನೂ ಯುದ್ಧದಲ್ಲಿ ಒಡಿದೋಡಿಸಿ, ವಿದ್ಯಾಧರರು, ಉರಗರು, ಮುನಿಗಳು ಇವರಿಗೆ ವರವನ್ನು ಕೊಟ್ಟ ಸ್ವಾಮಿಯಾದ ಶಂಕರನನ್ನು ಶರಣು ಹೊಂದುತ್ತೇನೆ.

೧೬೩. ಯಾಗವನ್ನು ನಾಶಮಾಡಿ ಭಗನ ಕಣ್ಣುಗಳನ್ನೂ ಪೂಷ್ಣದ ಹಲ್ಲುಗಳನ್ನೂ ನಾಶಮಾಡಿ ಮಹೇಂದ್ರನು ವಜ್ರಾಯುಧವನ್ನು ಎತ್ತಿಕೊಂಡು ಹೊಡೆಯುವುದಕ್ಕೆ ಬರಲು ಆ ಕೈಯನ್ನು ಹಾಗೆಯೇ ನಿಲ್ಲಿಸಿದ ಶಂಕರನನ್ನು ಶರಣು ಹೊಂದುತ್ತೇನೆ.

೧೬೪. ಪಾಪಿಗಳಾದರೂ, ವಿಷಯ ಸುಖದಲ್ಲಿ ಆಸಕ್ತರಾಗಿದ್ದರೂ, ಜ್ಞಾನ ವಂಶ, ಪ್ರಸಿದ್ಧಿ, ಗುಣ, ಇವಿಲ್ಲದಿದ್ದರೂ, ಯಾವ ಸ್ವಾಮಿಯನ್ನಾಶ್ರಯಿಸಿ ಮನುಷ್ಯರು ಸುಖವನ್ನು ಹೊಂದುತ್ತಾರೆಯೋ ಅಂತಹ ಸ್ವಾಮಿಯನ್ನೂ ಶರಣು ಹೊಂದುತ್ತೇನೆ.

ಅತ್ರಿಪ್ರಸೂತಿರವಿಕೋಟಿಸಮಾನತೇಜಾಃ
ಸಂತ್ರಾಸನಂ ವಿಬುಧದಾನವ ಸತ್ತಮಾನಾಂ ।
ಯಃ ಕಾಲಕೂಟಮಪಿಬತ್ಸಮುದೀರ್ಣವೇಗಂ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬೫ ॥

ಬ್ರಹ್ಮೇಂದ್ರರುದ್ರಮರುತಾಂ ಚ ಸಷಣ್ಮುಖಾನಾಂ
ಯೋದಾದ್ವರಾಂಶ್ಚ ಬಹುಶೋ ಭಗವಾನ್ಮಹೇಶಃ ।
ನಂದಿಂ ಚ ಮೃತ್ಯುವದನಾತ್ಪುನರುಜ್ಜಹಾರ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬೬ ॥

ಆರಾಧಿತಸ್ಸುತಪಸಾ ಹಿಮವನ್ನಿಕುಂಜೇ
ಧೂಮವ್ರತೇನ ಮನಸಾಪಿ ಪರೈರಗಮ್ಯಃ ।
ಸಂಜೀವಿನೀಂ ಸಮದದಾದ್ಭೃಗವೇ ಮಹಾತ್ಮಾ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬೭ ॥

---

೧೬೫. ಚಂದ್ರ ಮತ್ತು ಸೂರ್ಯರ ಕೋಟಿಗಳಷ್ಟು ತೇಜಸ್ಸುಳ್ಳ, ದೇವದೇವನಾದ ಯಾವ ಈಶ್ವರನು ದೇವದಾನವರಿಗೆ ಹೆದರಿಕೆಯನ್ನುಂಟುಮಾಡಿದ ಉಗ್ರ ವೇಗವುಳ್ಳ ಕಾಲಕೂಟ ವಿಷವನ್ನು ಕುಡಿದನಷ್ಟೆ! ಅಂತಹ ಸ್ವಾಮಿಯಾದ ಮರೆಹೊಕ್ಕವರನ್ನು ರಕ್ಷಿಸುವ ಶಂಕರನನ್ನು ಶರಣು ಹೊಂದುತ್ತೇನೆ.

೧೬೬. ಬ್ರಹ್ಮ, ಇಂದ್ರ, ರುದ್ರ, ದೇವತೆಗಳು, ಷಣ್ಮುಖ, ಇವರಿಗೆ ಅನೇಕ ವರಗಳನ್ನು ಕೊಟ್ಟು ನಂದಿಯನ್ನು ಮೃತ್ಯುವಿನಿಂದ ಪಾರುಮಾಡಿದ ಶಂಕರನನ್ನು ಶರಣು ಹೊಂದುತ್ತೇನೆ.

೧೬೭. ಇತರರು ಮನಸ್ಸಿನಿಂದಲೂ ಯೋಚಿಸಲಸಾಧ್ಯವಾದ ಧೂಮವ್ರತದ ತಪಸ್ಸಿನಿಂದ ಹಿಮವತ್ಪರ್ವತದ ತಪ್ಪಲಿನಲ್ಲಿ ತಪಸ್ಸು ಮಾಡಿದ ಶುಕ್ರನಿಗೆ ಸಂಜೀವನೀ ಮಂತ್ರವನ್ನೂ ಉಪದೇಶಿಸಿದ ಶಂಕರನನ್ನು ಶರಣು ಹೊಂದುತ್ತೇನೆ.

ನಾನಾವಿಧೈರ್ಗಜಬಿಡಾಲಸಮಾನವಕ್ತ್ರೈ
ರ್ದಕ್ಷಾಧ್ವರಪ್ರಮಥನೈರ್ಬಲಿಭಿರ್ಗಣೌಘೈಃ ।
ಯೋಭ್ಯರ್ಚ್ಯತೇಽಮರಗಣೈಶ್ಚ ಸಲೋಕಪಾಲೈ
ಸ್ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬೮ ॥

ಕ್ರೀಡಾರ್ಥಮೇವ ಭಗವಾನ್ಭುವನಾನಿ ಸಪ್ತ
ನಾನಾನದೀವಿಹಗಪಾದಪಮಂಡಿತಾನಿ ।
ಸಬ್ರಹ್ಮಕಾನಿ ವ್ಯಸೃಜತ್ಸುಕೃತಾಹಿತಾನಿ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೬೯ ॥

ಯಸ್ಯಾಖಿಲಂ ಜಗದಿದಂ ವಶವರ್ತಿ ನಿತ್ಯಂ
ಯಾಷ್ಟಾಭಿರೇವ ತನುಭಿರ್ಭುವನಾನಿ ಭುಂಕ್ತೇ ।
ಯಃ ಕಾರಣಂ ಚ ಮಹತಾಮಪಿ ಕಾರಣಾನಾಂ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೭೦ ॥

---

೧೬೮. ನಾನಾಬಗೆಯಾದ ಆನೆ, ಬೆಕ್ಕುಗಳಂತೆ ಮುಖವುಳ್ಳ ದಕ್ಷನ ಯಾಗವನ್ನು ನಾಶಮಾಡಿದ ಗಣಗಳಿಂದಲೂ, ದೇವತೆಗಳಿಂದಲೂ ಪೂಜಿತನಾದ ಸ್ವಾಮಿಯನ್ನು ಶರಣು ಹೊಂದುತ್ತೇನೆ.

೧೬೯. ತನ್ನ ಆಟಕ್ಕೋಸ್ಕರಲೇ ಏಳು ಲೋಕಗಳನ್ನೂ, ಅವುಗಳಲ್ಲಿ ನದಿ, ಪಕ್ಷಿ, ಮರಗಳು, ಬ್ರಹ್ಮ ಮುಂತಾದುವುಗಳನ್ನೂ ಸೃಷ್ಟಿಸಿ ಅವುಗಳಿಗೆ ಸುಕೃತ ದುಷ್ಕೃತಗಳನ್ನು ಕಲ್ಪಿಸಿದನೋ ಅಂತಹ ಸ್ವಾಮಿಯನ್ನು ಶರಣು ಹೊಂದುತ್ತೇನೆ.

೧೭೦. ಯಾವನಿಗೆ ಈ ಜಗತ್ತೆಲ್ಲವೂ ವಶದಲ್ಲಿವೆಯೋ ಯಾವನು ಎಂಟು ವಿಧವಾದ ದೇಹಗಳಿಂದ ಭುವನಗಳನ್ನು ಅನುಭವಿಸುತ್ತಾನೆಯೋ, ಕಾರಣಗಳಿಗೆಲ್ಲಾ ಯಾವನು ಕಾರಣನೋ ಅಂತಹ ಶಂಕರನನ್ನು ಶರಣು ಹೊಂದುತ್ತೇನೆ.

ಶಂಖೇಂದುಕುಂದಧವಳಂ ವೃಷಭಪ್ರವೀರ
ಮಾರುಹ್ಯ ಯಃ ಕ್ಷಿತಿಧರೇಂದ್ರಸುತಾನುಯಾತಃ ।
ಯಾತ್ಯಂಬರೇ ಹಿಮವಿಭೂತಿವಿಭೂಷಿತಾಂಗ
ಸ್ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೭೧ ॥

ಶಾಂತಂ ಮುನಿಂ ಯಮನಿಯೋಗಪರಾಯಣಂ ತೈ
ರ್ಭೀಮೈರ್ಯಮಸ್ಯ ಪುರುಷೈಃ ಪ್ರತಿನೀಯಮಾನಂ ।
ಭಕ್ತ್ಯಾನತಂ ಸ್ತುತಿಪರಂ ಪ್ರಸಭಂ ರರಕ್ಷ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೭೨ ॥

ಯಃ ಸವ್ಯಪಾಣಿಕಮಲಾಗ್ರನಖೇನದೇವ
ಸ್ತತ್ಪಂಚಮಂ ಪ್ರಸಭಮೇವ ಪುರಸ್ಸುರಾಣಾಂ ॥
ಬ್ರಾಹ್ಮಂ ಶಿರಸ್ತರುಣಪದ್ಮನಿಭಂ ಚಕರ್ತ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೭೩ ॥

---

೧೭೧. ಶಂಖ, ಚಂದ್ರ, ಕುಂದಪುಷ್ಪಗಳಂತೆ ಬೆಳ್ಳಗಿರುವ ಎತ್ತನ್ನು ಹತ್ತಿಕೊಂಡು, ಪಾರ್ವತಿಯನ್ನೂ ಕರೆದುಕೊಂಡು ವಿಭೂತಿಯನ್ನು ಪೂಸಿಕೊಂಡು ಅಂತರಿಕ್ಷದಲ್ಲಿ ಹೋಗುತ್ತಾನೆಯೋ ಅಂತಹ ಶಂಕರನನ್ನು ಶರಣು ಹೊಂದುತ್ತೇನೆ.

೧೭೨. ಯಮನ ಕೈಗೆ ಸಿಕ್ಕಿ ಅವನ ಆಳುಗಳಿಂದ ಒಯ್ಯಲ್ಪಡುತ್ತಿರುವ ಶಾಂತನಾದ ಭಕ್ತಿಯಿಂದ ನಮ್ರನಾದ ಸ್ತುತಿಸುತ್ತಿರುವ ಮಾರ್ಕಂಡೇಯನನ್ನು ರಕ್ಷಿಸಿದ ಶಂಕರನನ್ನು ಶರಣು ಹೊಂದುತ್ತೇನೆ.

೧೭೩. ಯಾವನು ಕಮಲಂತಿರುವ ಎಡಗೈಯಿನ ಬೆರಳುಗಳಿಂದ ಕಮಲದಂತಿರುವ ಬ್ರಹ್ಮನ ತಲೆಯನ್ನು ಕತ್ತರಿಸಿದನೋ ಅಂತಹ ಸ್ವಾಮಿಯಾದ ಮರೆಹೊಕ್ಕವರನ್ನು ಕಾಪಾಡುವ ಶಂಕರನನ್ನು ಶರಣುಹೊಂದುತ್ತೇನೆ.

ಯಸ್ಯ ಪ್ರಣಮ್ಯ ಚರಣೌ ವರದಸ್ಯ ಭಕ್ತ್ಯಾ
ಸ್ತುತ್ವಾ ಚ ವಾಗ್ಭಿರಮಲಾಭಿರತಂತ್ರಿತಾಭಿಃ ॥
ದೀಪ್ತಸ್ತಮಾಂಸಿ ನುದತೇ ಸ್ವಕರೈರ್ವಿವಸ್ವಾ
ಸ್ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥ ೧೭೪ ॥

ಯೇ ತ್ವಾಂ ಸುರೋತ್ತಮಗುರುಂ ಪುರುಷಾ ವಿಮೂಢಾ
ಜಾನಂತಿ ನಾಸ್ಯ ಜಗತಸ್ಸಚರಾಚರಸ್ಯ ।
ಐಶ್ವರ್ಯಮಾನನಿಗಮಾನುಶಯೇನಪಶ್ಚಾ
ತ್ತೇ ಯಾತನಾಂ ತ್ವನುಭವಂತ್ಯವಿಶುದ್ಧಚಿತ್ತಾಃ ॥ ೧೭೫ ॥

॥ ಪುಲಸ್ತ್ಯ ಉವಾಚ ॥

ತಸ್ಯೈವಂ ಸ್ತುವತೋ ನಾಥಾ ಶೂಲಪಾಣಿರ್ವೃಷಧ್ವಜಃ ।
ಉವಾಚ ವಚನಂ ಹೃಷ್ಟೋ ರಾಘವಂ ತುಷ್ಟಮಾನಸಃ ॥ ೧೭೬ ॥

॥ ರುದ್ರ ಉವಾಚ ॥

ರಾಮ ತುಷ್ಟೋಽಸ್ಮಿ ಭದ್ರಂ ತೇ ಜಾತಸ್ತ್ವಂ ವಿಮಲೇ ಕುಲೇ ।
ತ್ವಂ ಚಾಪಿ ಜಗತಾಂ ವಂದ್ಯೋ ಮಾನುಷೋ ದೇವರೂಪಧೃತ್ ॥ ೧೭೭ ॥

---

೧೭೪. ವರವನ್ನು ಕೊಡತಕ್ಕ ಯಾವ ಸ್ವಾಮಿಯ ಪಾದಗಳನ್ನು ನಮಸ್ಕರಿಸಿ ಅನೇಕ ಸ್ತೋತ್ರಗಳಿಂದ ಸ್ತುತಿಸಿ ಪ್ರಕಾಶಮಾನನಾಗಿ ಸೂರ್ಯನು ತನ್ನ ಕಿರಣಗಳಿಂದ ಕತ್ತಲೆಯನ್ನು ಹೋಗಲಾಡಿಸುವನೋ ಅಂತಹ ಶಂಕರನನ್ನು ಶರಣು ಹೊಂದುತ್ತೇನೆ.

೧೭೫. ಸುರೋತ್ತಮನೂ, ಚರಾಚರ ಜಗತ್ಕರ್ತನೂ ಆದ ನಿನ್ನನ್ನು ಯಾರು ಮೂಢರಾಗಿ ತಿಳಿಯುವುದಿಲ್ಲವೋ ಅವರು ಅದಕ್ಕೆ ಕಾರಣವಾದ ಆ ಐಶ್ವರ್ಯವು ಹೋದಮೇಲೆ ದುಃಖಪಡುತ್ತಾ ಯಾತನೆಯನ್ನು ಅನುಭವಿಸುತ್ತಾರೆ.

೧೭೬. ಪುಲಸ್ತ್ಯನು ಹೇಳಿದನು—ಈ ರೀತಿಯಾಗಿ ರಾಮನು ಸ್ತೋತ್ರ ಮಾಡುತ್ತಿರಲು ಶೂಲಪಾಣಿಯೂ, ವೃಷಧ್ವಜನೂ ಆದ ಶಂಭುವು ಸಂತೋಷ ಗೊಂಡು ರಾಮನನ್ನು ಕುರಿತು ಇಂತೆಂದನು.

೧೭೭. ರುದ್ರನು ಹೇಳಿದನು—ಎಲೈ ರಾಮನೇ ! ನಿನಗೆ ನಾನು ಸಂತೋಷ ಗೊಂಡಿದ್ದೇನೆ. ನೀನು ನಿರ್ಮಲವಾದ ಕುಲದಲ್ಲಿ ಹುಟ್ಟಿದ್ದೀಯೆ. ನೀನೂ ಕೂಡ ಜಗತ್ತಿಗೆ ವಂದ್ಯನು. ಮಾನುಷರೂಪವನ್ನು ಹೊಂದಿದ ದೇವತೆಯು.

ತ್ವಯಾ ನಾಥೇನ ವೈ ದೇವಾಃ ಸುಖಿನಶ್ಚಾತ್ವತೀಸ್ಸಮಾಃ ।
ಏಧಿಷ್ಯಂತೇ ಚಿರಂ ಕಾಲಂ ಗತೇ ವರ್ಷೇ ಚತುರ್ದಶೇ ॥ ೧೭೮ ॥

ಅಯೋಧ್ಯಾಯಾಮಾಗತಂ ತ್ವಾಂ ಯೇ ದ್ರಕ್ಷ್ಯಂತಿ ನರಾ ಭುವಿ ।
ಸುಖಿನಸ್ತೇ ಭವಿಷ್ಯಂತಿ ಸ್ವರ್ಗವಾಸಸ್ತಥಾಕ್ಷಯಃ ॥ ೧೭೯ ॥

ದೇವಕಾರ್ಯಂ ಮಹತ್ಕೃತ್ವಾ ಆಗಚ್ಛೇಥಾಃ ಪುನಃ ಪುರೀಂ ।
ರಾಘವಸ್ತು ತದಾ ದೇವಂ ನತ್ವಾ ಶೀಘ್ರಂ ವಿನಿರ್ಗತಃ ॥ ೧೮೦ ॥

ಇಂದ್ರಮಾರ್ಗ ನದೀಂ ಪ್ರಾಪ್ಯ ಜಟಾಜೂಟಂ ನಿಯಮ್ಯಚ ।
ವಿಹಸ್ಯ ಲಕ್ಷ್ಮಣೇತ್ಯುಕ್ತ್ವಾ ಇದಮರ್ಪಯ ಮೇ ಧನುಃ ॥ ೧೮೧ ॥

ರಾಮವಾಕ್ಯಂ ತು ತಚ್ಛ್ರುತ್ವಾ ಸೀತಾಂ ವೈ ಲಕ್ಷ್ಮಣೋಽಬ್ರವೀತ್ ।
ಕಿಮರ್ಥಂ ದೇವಿ ರಾಮೇಣ ತ್ಯಕ್ತೋಽಹಂ ಕಾರಣಂ ವಿನಾ ॥ ೧೮೨ ॥

---

೧೭೮. ನೀನು ಒಡೆಯನಾದುದರಿಂದಲೇ ದೇವತೆಗಳು ಬಹುಕಾಲ ಸುಖವಾಗಿರುವರು. ಹದಿನಾಲ್ಕು ವರ್ಷಗಳು ಕಳೆದ ಮೇಲೆ (ವನವಾಸವು ಕಳೆದ ಮೇಲೆ) ದೇವತೆಗಳು ವೃದ್ಧಿಹೊಂದುತ್ತಾರೆ.

೧೭೯. ನೀನು ಅಯೋಧ್ಯೆಗೆ ಹೋದಮೇಲೆ ನಿನ್ನನ್ನು ಭೂಮಿಯಲ್ಲಿ ನೋಡಿದವರು ಸುಖಿಗಳಾಗುತ್ತಾರೆ ಅವರಿಗೆ ಅಕ್ಷಯವಾದ ಸ್ವರ್ಗವೂ ಸಿಕ್ಕುತ್ತದೆ.

೧೮೦. ಮಹತ್ತಾದ ದೇವಕಾರ್ಯವನ್ನು ಮಾಡಿ ಅನಂತರ ಮತ್ತೆ ಪಟ್ಟಣಕೆ ಹೋಗುತ್ತೀಯೆ ಎಂದನು. ಅನಂತರ ರಾಮನು ಆ ಸ್ವಾಮಿಗೆ ನಮಸ್ಕರಿಸಿ ಜಾಗ್ರತ್ತೆ ಅಲ್ಲಿಂದ ಹೊರಟನು.

೧೮೧. ಇಂದ್ರಮಾರ್ಗವೆಂಬ ನದಿಯನ್ನು ಹೊಂದಿ ಅಲ್ಲಿ ಜಟೆಯನ್ನು ಮೇಲಕ್ಕೆ ಎತ್ತಿ ಕಟ್ಟಿಕೊಂಡು ಲಕ್ಷ್ಮಣನನ್ನು ನೋಡಿ ನಕ್ಕು ಲಕ್ಷ್ಮಣ ಈ ನನ್ನ ಧನುಸ್ಸನ್ನು ಕೊಡು. ಎಂದನು.

೧೮೨. ಲಕ್ಷ್ಮಣನು ರಾಮನ ಮಾತನ್ನು ಕೇಳಿ ಸೀತೆಯನ್ನು ಕುರಿತು ಎಲೌ ದೇವಿಯೇ, ಕಾರಣವಿಲ್ಲದೆ ರಾಮನು ನನ್ನನ್ನು ಏಕೆ ಬಿಟ್ಟುಬಿಟ್ಟನು ಎಂದನು.

ಅಪರಾಧಂ ನ ಜಾನಾಮಿ ಕುಪಿತೋ ಯೇನ ಮೇ ಪ್ರಭುಃ ।
ರಾಮೇಣಾ ಹಂ ಪರಿತ್ಯಕ್ತಃ ಪ್ರಾಣಾಂಸ್ತ್ಯಕ್ಷ್ಯಾಮ್ಯಸಂಶಯಂ ॥ ೧೮೩ ॥

ನೈವ ಮೇ ಜೀವಿತೇನಾರ್ಥೋ ಧಿಙ್ಮಾಂ ವೈ ಕುಲಪಾಂಸನಂ ।
ಆರ್ಯಸ್ಯ ಯೇನ ವೈ ಮನ್ಯುರ್ಜನಿತಃ ಪಾಪಕಾರಿಣಾ ॥ ೧೮೪ ॥

ಕಾನ್ವೈ ಲೋಕಾನ್ಗಮಿಷ್ಯಾಮಿ ಅಪಧ್ಯಾತೋ ಮಹಾತ್ಮನಾ ।
ಉಭೌ ಹಸ್ತೌ ಮುಖೇ ಕೃತ್ವಾ ಸಾಶ್ರುಕಂಠೋಽಬ್ರವೀದಿದಂ ॥ ೧೮೫ ॥

ನಾಪರಾಧ್ಯಾಮಿ ರಾಮಸ್ಯ ಕರ್ಮಣಾ ಮನಸಾ ಗಿರಾ ।
ಸ್ಪೃಷ್ಟ್ವಾ ತೇ ಚರಣೌ ದೇವಿ ಮಮ ನಾನ್ಯಾ ಗತಿರ್ಭವೇತ್ ॥ ೧೮೬ ॥

ತತಸ್ಸೀತಾಬ್ರವೀದ್ರಾಮಂ ತ್ಯಕ್ತಃ ಕಿಮನುಜಸ್ತ್ವಯಾ ।
ವೈಷಮ್ಯಂ ತ್ಯಜ್ಯತಾಂ ಬಾಲೇ ಲಕ್ಷ್ಮಣೇ ಲಕ್ಷ್ಮಿವರ್ಧನೇ ॥ ೧೮೭ ॥

---

೧೮೩. ಏನು ತಪ್ಪು ಮಾಡಿರುವೆನೋ ನನಗೆ ಗೊತ್ತಿಲ್ಲವಲ್ಲ! ನನ್ನ ಪ್ರಭುವು ಕೋಪಗೊಂಡಿರುವನಲ್ಲ! ರಾಮನು ನನ್ನನ್ನು ಬಿಟ್ಟರೆ ನಾನು ಜೀವವನ್ನು ಬಿಟ್ಟುಬಿಡುತ್ತೇನೆ. ಸಂಶಯವಿಲ್ಲ.

೧೮೪. ನನಗೆ ಈ ಪ್ರಾಣಗಳು ಬೇಕಾಗಿಲ್ಲ. ಕುಲಗೇಡಿಯಾದ ನನಗೆ ಧಿಕ್ಕಾರವು. ಪಾಪಕಾರಿಯಾದ ನಾನು ಪೂಜ್ಯನಿಗೆ ಕೋಪಬರುವಂತೆ ಮಾಡಿದೆನಲ್ಲ!

೧೮೫. ರಾಮನು ನನ್ನನ್ನು ತಿರಸ್ಕರಿಸಿದರೆ ನಾನು ಯಾವ ಲೋಕವನ್ನು ಹೊಂದಲಿ? ಎಂದು ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಗದ್ಗದ ಧ್ವನಿಯಿಂದ ಹೇಳಿದನು

೧೮೬. ಮನೋವಾಕ್ಕಾಯಗಳಿಂದ ರಾಮನಿಗೆ ಅಪರಾಧ ಮಾಡಿಲ್ಲ. ನಿನ್ನ ಪಾದಗಳನ್ನು ಮುಟ್ಟಿ ಆಣೆಯಿಡುತ್ತೇನೆ. ಅವನು ನನ್ನನ್ನು ಕೈಬಿಟ್ಟರೆ ಬೇರೆ ಗತಿ ನನಗೆ ಇಲ್ಲವೇ ಇಲ್ಲ

೧೮೭. ಆಗ ಸೀತೆಯು ರಾಮನನ್ನು ಕುರಿತು ನೀನು ಲಕ್ಷ್ಮಣನನ್ನು ಬಿಟ್ಟಿರು ವೆಯೇನು? ಲಕ್ಷ್ಮಿಯನ್ನೂ ಹೆಚ್ಚಿಸುವ ಬಾಲನಾದ ಲಕ್ಷ್ಮಣನಲ್ಲಿ ವೈಷಮ್ಯವನ್ನು ಬಿಡು, ಎಂದಳು.

ರಾಘವಸ್ತ್ವಬ್ರವೀತ್ಸೀತಾಂ ನಾಹಂ ತ್ಯಕ್ಷ್ಯಾಮಿ ಲಕ್ಷ್ಮಣಂ ।
ನ ಕದಾಚಿದಪಿಸ್ವಪ್ನೇ ಲಕ್ಷ್ಮಣಸ್ಯೇದೃಶಂ ಪ್ರಿಯೇ ॥ ೧೮೮ ॥

ಶ್ರುತಪೂರ್ವಂ ಚ ಸುಶ್ರೋಣಿ ಕ್ಷೇತ್ರಸ್ಯಾಸ್ಯ ವಿಚೇಷ್ಟಿತಂ ।
ಅತ್ರ ಕ್ಷೇತ್ರೇ ನ ಸೌಭ್ರಾತ್ರಂ ಸರ್ವೇ ಹಿ ಸ್ವಾರ್ಥತತ್ಪರಾಃ ॥ ೧೮೯ ॥

ಪರಸ್ಪರಂ ನ ಮನ್ಯಂತೇ ಸ್ವಾರ್ಥನಿಷ್ಠೈಕ ಹೇತವಃ ।
ನ ಶೃಣ್ವಂತಿ ಪಿತುಃ ಪುತ್ರಾಃ ಪುತ್ರಾಣಾಂ ಚ ತಥಾ ಪಿತಾ ॥ ೧೯೦ ॥

ನ ಶಿಷ್ಯೋ ಹಿ ಗುರೋರ್ವಾಕ್ಯಂ ಶಿಷ್ಯಸ್ಯಾಪಿ ತಥಾ ಗುರುಃ ।
ಅರ್ಥಾನುಬಂಧಿನೀ ಪ್ರೀತಿರ್ನ ಕಶ್ಚಿತ್ಕಸ್ಯಚಿತ್ಪ್ರಿಯಃ ॥ ೧೯೧ ॥

॥ ಪುಲಸ್ತ್ಯ ಉವಾಚ ॥

ಇತ್ಯೇವಂ ಕಥಯನ್ನೇವ ಪ್ರಾಪ್ತೋ ರೇವಾಂ ಮಹಾನದೀಂ ।
ಚಕ್ರೇಽಭಿಷೇಕಂ ಕಾಕುತ್ಸ್ಥಃ ಸಾನುಜಸ್ಸಹ ಸೀತಯಾ ॥ ೧೯೨ ॥

---

೧೮೮. ಆಗ ರಾಮನು ನಾನು ಲಕ್ಷ್ಮಣನನ್ನು ಬಿಡುವುದಿಲ್ಲ. ಇಂತಹ ಲಕ್ಷ್ಮಣನನ್ನು ಕನಸಿನಲ್ಲಿಯೂ ಬಿಡುವುದಿಲ್ಲ ಎಂದನು.

೧೮೯. ಎಲೈ ಸೀತೆಯೇ! ನಾನು ಹಿಂದೆಯೇ ಕೇಳಿಬಲ್ಲೆ. ಇದು ಈ ಕ್ಷೇತ್ರದ ಮಹಿಮೆ. ಅದರ ಚೇಷ್ಟೆಯೇ ಇದು. ಈ ಕ್ಷೇತ್ರದಲ್ಲಿ ಅಣ್ಣತಮ್ಮಂದಿರ ಭಾವವಿರುವುದಿಲ್ಲ. ಎಲ್ಲರೂ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾರೆ.

೧೯೦. ಸ್ವಾರ್ಥವನ್ನೇ ತುಂಬಿಕೊಳ್ಳುತ್ತಾ ಒಬ್ಬರನ್ನೊಬ್ಬರು ನೋಡುವುದೇ ಇಲ್ಲ. ತಂದೆಯ ಮಾತನ್ನು ಮಕ್ಕಳು ಕೇಳುವುದಿಲ್ಲ. ಮಕ್ಕಳ ಮಾತನ್ನೂ ತಂದೆ ಕೇಳುವುದಿಲ್ಲ.

೧೯೧. ಶಿಷ್ಯನು ಗುರುವಿನ ಮಾತನ್ನಾಗಲೀ ಗುರುವು ಶಿಷ್ಯನ ಮಾತನ್ನಾಗಲಿ ಕೇಳುವುದಿಲ್ಲ. ಇಲ್ಲಿರುವ ಪ್ರೀತಿಯು ಹಣವೊಂದನ್ನೇ ಆಶ್ರಯಿಸಿರುವುದು ಒಬ್ಬರಿಗೆ ಮತ್ತೊಬ್ಬರು ಪ್ರೀತಿಯುಳ್ಳವರೇ ಇಲ್ಲಿಲ್ಲ.

೧೯೨. ಪುಲಸ್ತ್ಯನು ಹೇಳಿದನು—ಹೀಗೆ ಹೇಳುತ್ತಾ ಬರಲು ರೇವಾನದಿಯು ಸಿಕ್ಕಿತು. ಅಲ್ಲಿ ಆ ಮೂರು ಜನರೂ ಸ್ನಾನಮಾಡಿದರು.

ತರ್ಪಯಿತ್ವಾ ಚ ಸಲಿಲೈಃ ಸ್ವಪಿತ್ರ್ಯಾನ್ದೈವತಾನ್ಯಪಿ ।
ನವಂದಾತೇ ಮುಹುಸ್ಸೂರ್ಯಂ ದೇವತಾಶ್ಚ ಸಮಾಹಿತೌ ॥ ೧೯೩ ॥

ಕೃತಾಭಿಷೇಕಸ್ತು ರರಾಜ ರಾಮಃ
ಸೀತಾದ್ವಿತೀಯಸ್ಸಹಲಕ್ಷ್ಮಣೇನ ।
ಕೃತ್ವಾಭಿಷೇಕಂ ಸಹಶೈಲಪುತ್ರ್ಯಾ
ಗುಹೇನ ಸಾರ್ಧಂ ಭಗವಾನಿವೇಶಃ ॥ ೧೯೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಮಾರ್ಕಂಡೇಯಾಶ್ರಮ ವರ್ಣನಂ ನಾಮ ಅಷ್ಟಾವಿಂಶೋಽಧ್ಯಾಯಃ

---

೧೯೩. ದೇವತೆಗಳಿಗೂ, ಪಿತೃಗಳಿಗೂ, ತರ್ಪಣವನ್ನು ಮಾಡಿದರು. ನಿಯಮದಿಂದ ಸೂರ್ಯನನ್ನೂ ದೇವತೆಗಳನ್ನೂ ನಮಸ್ಕರಿಸಿದರು.

೧೯೪. ಸೀತಾಲಕ್ಷ್ಮಣರೊಡನೆ ಸ್ನಾನಮಾಡಿದ ಆ ರಾಮನು ಪಾರ್ವತಿಗುಹರೊಡನೆ ಸ್ನಾನಮಾಡಿದ ಈಶ್ವರನಂತೆ ಪ್ರಕಾಶಿಸಿದನು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಮಾರ್ಕಂಡೇಯಾಶ್ರಮ ವರ್ಣನವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಏಕೋನತ್ರಿಂಶೋऽಧ್ಯಾಯಃ ॥



॥ ಭೀಷ್ಮ ಉವಾಚ ॥

ಕಸ್ಮಿನ್ಕಾಲೇ ಭಗವತಾ ಬ್ರಹ್ಮಣಾ ಲೋಕಕರ್ತೃಣಾ ।
ಯಜ್ಞಿಯೈರ್ವೃಷ್ಟುಮಾರಬ್ಧಂ ತದ್ಭವಾನ್ವಕ್ತುಮರ್ಹತಿ ॥ ೧ ॥

ಕಿನ್ನಾಮಾನ ಋತ್ವಿಜಸ್ತೇ ಬ್ರಹ್ಮಣಾ ಯೇ ಪ್ರಕಲ್ಪಿತಾಃ ।
ಕಾ ಚೈವ ದಕ್ಷಿಣಾ ತೇಷಾಂ ದತ್ತಾ ತೇನ ಮಹಾತ್ಮನಾ ॥ ೨ ॥

ಯಥಾಭೂತಂ ಯಥಾವೃತ್ತಂ ತಥಾ ತ್ವಂ ಮೇ ಪ್ರಕೀರ್ತಯ ।
ಸುಮಹತ್ಕೌತುಕಂ ಜಾತಂ ಯಜ್ಞಂ ಪೈತಾಮಹಂ ಪ್ರತಿ ॥ ೩ ॥

---

### ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು- ಲೋಕಕರ್ತೃವಾದ ಬ್ರಹ್ಮನು ಯಾವಾಗ ಯಜ್ಞದಪದಾರ್ಥಗಳಿಂದ ಯಜ್ಞಮಾಡಲು ಮೊದಲು ಮಾಡಿದನು. ಅದನ್ನು ನನಗೆ ಹೇಳು.

೨ ಅಲ್ಲಿ ಋತ್ವಿಕ್ಕುಗಳನ್ನಾಗಿ ವರಿಸಿದ ಬ್ರಾಹ್ಮಣರ ಹೆಸರೇನು? ಆ ಬ್ರಹ್ಮನು ಅವರಿಗೆ ಏನು ದಕ್ಷಿಣೆಯನ್ನು ಕೊಟ್ಟನು ?

೩. ಹೇಗಾಯಿತು ? ಹೇಗೆ ನಡೆಯಿತು ? ಅದೆಲ್ಲವನ್ನೂ ನನಗೆ ಹೇಳು ? ಪಿತಾಮಹನ ಯಜ್ಞವನ್ನು ಕುರಿತು ನನಗೆ ಬಹಳ ಆಸೆಯಿದೆ.

॥ ಪುಲಸ್ತ್ಯ ಉವಾಚ ॥

ಪೂರ್ವಮೇವ ಮಯಾಖ್ಯಾತಂ ಯದಾ ಸ್ವಾಯಂಭುವೋ ಮನುಃ ।
ಸ್ವಷ್ಟ್ವಾ ಪ್ರಜಾಪತೀನ್ಸರ್ವಾನುಕ್ತ್ವಾ ಸೃಷ್ಟಿಂ ಕುರುಷ್ವ ವೈ ॥ ೪ ॥

ಸ್ವಯಂ ತು ಪುಷ್ಕರಂ ಗತ್ವಾ ಕೃತ್ವಾ ಯಜ್ಞಸ್ಯ ವಿಸ್ತರಂ ।
ಸ ಸಂಭಾರಾನ್ಸಮಾನಾಯ್ಯ ವನ್ಯಾಗಾರೇ ಸ್ಥಿತೋಽಭವತ್ ॥ ೫ ॥

ದೇವಾನ್ಸರ್ವಾಂಸ್ತಥಾ ನಿನ್ಯೇ ಗಂಧರ್ವಾಪ್ಸರಸೋಽಪಿ ಹಿ ।
ಬ್ರಹ್ಮೋದ್ಗಾತಾ ಹೋತಾಧ್ವರ್ಯುಶ್ಚತ್ವಾರೋ ಯಜ್ಞವಾಹಕಾಃ ॥ ೬ ॥

ಏಕೈಕಸ್ಯ ತ್ರಯಶ್ಚಾನ್ಯೇ ಪರಿವಾರಸ್ಸ್ವಯಂ ಕೃತಾಃ ।
ಬ್ರಹ್ಮಣೋ ಬ್ರಾಹ್ಮಣಾಚ್ಛಂಸೀ ಪೋತಾಥಾಗ್ನೀಧ್ರ ಏವ ಚ ॥ ೭ ॥

ಆನ್ವೀಕ್ಷಕೀ ತ್ರಯೀವಿದ್ಯಾ ಬ್ರಾಹ್ಮೀಹ್ಯೇಷಾ ಚತುಷ್ಟಯೀ ।
ಉದ್ಗಾತಾ ಚ ಪ್ರತ್ಯುದ್ಗಾತಾ ಪ್ರತಿಹರ್ತಾ ಸುಬ್ರಹ್ಮಣ್ಯಃ ॥ ೮ ॥

---

೪-೫. ಪುಲಸ್ತ್ಯನು ಹೇಳಿದನು- ಸ್ವಾಯಂಭುವಮನ್ವಂತರದಲ್ಲಿ ಮಾಡಿದನೆಂದು ನಾನು ಮೊದಲೇ ಹೇಳಿದ್ದೇನೆ. ಬ್ರಹ್ಮನು ಪ್ರಜಾಪತಿಗಳನ್ನು ಸೃಷ್ಟಿಸಿ ಅವರಿಗೆ ಪ್ರಜೆಗಳನ್ನು ಸೃಷ್ಟಿಸಿರೆಂದು ಹೇಳಿ ತಾನು ಪುಷ್ಕರಕ್ಕೆ ಬಂದು ಯಜ್ಞದ ಸ್ಥಳವನ್ನೂ ಬೇಕಾದ ಪದಾರ್ಥಗಳನ್ನೂ ಹೊಂದಿಸಿಕೊಂಡು ಅಲ್ಲಿನ ಯಾಗದ ಮನೆಯಲ್ಲಿದ್ದನು.

೬. ಅಲ್ಲಿಗೆ ದೇವತೆಗಳನ್ನೂ, ಅಪ್ಸರರನ್ನೂ, ಗಂಧರ್ವರನ್ನೂ, ಕರೆಸಿದನು. ಮತ್ತು ಬ್ರಹ್ಮ ಉದ್ಗಾತ, ಹೋತ, ಅಧ್ವರು ಎಂಬ ನಾಲ್ವರು ಯಜ್ಞನಿರ್ವಾಹಕರುಗಳನ್ನು ಗೊತ್ತುಮಾಡಿದನು.

೭-೧೧. ಒಬ್ಬರಿಗೊಬ್ಬರಿಗೂ ಮೂರು ಮೂರು ಜನ ಪರಿವಾರಗಳನ್ನು ಗೊತ್ತುಮಾಡಿದನು. ಬ್ರಹ್ಮನಿಗೆ, ಬ್ರಾಹ್ಮಣಾಚ್ಛಂಸಿ, ಪೋತ, ಆಗ್ನೀಧ್ರರೆಂದು ಮೂವರು ಆನ್ವೀಕ್ಷಕೀ ತ್ರಯೀವಿದ್ಯೆ (ಮೂರು ವೇದಗಳು) ಇವು ನಾಲ್ಕು ಬ್ರಹ್ಮನ ಗುಂಪುಗಳು. ಉದ್ಗಾತೃವಿಗೆ, ಪ್ರತ್ಯುದ್ಗಾತ, ಪ್ರತಿಹರ್ತೃ, ಸುಬ್ರಹ್ಮಣ್ಯರೆಂದು ಮೂವರು

ದ್ವಿತೀಯಾ ಚ ಚತುಷ್ಟೈ್ಯೇಷಾ ಉದ್ಗಾತುಶ್ಚ ಪ್ರಕೀರ್ತಿತಾ ।
ಹೋತಾ ಸಮೈತ್ರಾವರುಣಿಸ್ತಥಾಚ್ಛಾವಾಕ ಏವ ಚ ॥ ೯ ॥

ಗ್ರಾವಸ್ತುಚ್ಚ ಚತುರ್ಥೋತ್ರ ತೃತೀಯಾ ಚ ಚತಸ್ರಕಾ ।
ಅಧ್ವರ್ಯುಃ ಪ್ರತಿಪ್ರಸ್ಥಾತಾ ನೇಷ್ಟೋನ್ನೇತಾ ತಥೈವ ಚ ॥ ೧೦ ॥

ಚತುರ್ಥೀ ಚತಸ್ರಕಾ ಪ್ರೋಕ್ತಾ ತಥಾ ಶಂತನುನಂದನ ।
ಏತೇ ವೈ ಷೋಡಶಪ್ರೋಕ್ತಾ ಋತ್ವಿಜೋ ವೇದವಿತ್ತಮೈಃ ॥ ೧೧ ॥

ಶತಾನಿ ತ್ರೀಣಿ ಷಷ್ಟಿಶ್ಚ ಯಜ್ಞಾಸ್ಸೃಷ್ಟಾ ಸ್ವಯಂಭುವಾ ।
ಏತಾಂಶ್ಚೈತೇಷು ಸರ್ವೇಷು ಪ್ರವದಂತಿ ಸದಾ ದ್ವಿಜಾಃ ॥ ೧೨ ॥

ಸದಸ್ಯಂ ಕೇಚಿದಿಚ್ಛಂತಿ ಚಮಸಾಧ್ವರ್ಯವೋ ದಶ ।
ಬ್ರಹ್ಮಾಣಂ ನಾರದಂ ಕೃತ್ವಾ ಬ್ರಾಹ್ಮಣಾಚ್ಛಂಸೀ ಗೌತಮಃ ॥ ೧೩ ॥

ದೇವರಾತಂ ತು ಪೋತಾರಮಾಗ್ನೀಧ್ರಂ ಚೈವ ದೇವಲಂ ।
ಉದ್ಗಾತಾರಮಂಗಿರಸಂ ಪ್ರಸ್ತೋತಾ ಪುಲಹಸ್ತಥಾ ॥ ೧೪ ॥

---

ಇವನಿಗೆ ಎರಡನೆಯ ಸ್ಥಾನವು. ಈ ರೀತಿ ಎರಡನೆಯದು ನಾಲ್ಕು ಜನರ ಗುಂಪಾಯಿತು. ಹೋತೃವಿಗೆ ಮೈತ್ರಾವರುಣಿ, ಅಚ್ಛಾವಾಕ, ಗ್ರಾವಸ್ತುತ್ ಎಂಬುದಾಗಿ ಮೂರು ಜನರು. ಇವರು ನಾಲ್ಕು ಜನರಾದರು. ಈ ನಾಲ್ಕು ಹೋತೃವಿನ ಗುಂಪು. ಅಧ್ವರ್ಯುವಿಗೆ ಪ್ರತಿಪ್ರಸ್ಥಾತಾ, ನೇಷ್ಟ, ಉನ್ನೇತ ಎಂದು ಮೂವರು. ಅವನು ಸೇರಿದರೆ ನಾಲ್ವರು. ಇವರದು ಈ ನಾಲ್ವರ ಗುಂಪು. ಈ ರೀತಿ ವೇದವಿತ್ತುಗಳು ಹದಿನಾರು ಜನರು ಋತ್ವಿಜರೆಂದು ಹೇಳಿದ್ದಾರೆ.

೧೨. ಬ್ರಹ್ಮನು ಮೂನ್ನೂರ ಅರವತ್ತು ಯಜ್ಞಗಳನ್ನು ಸೃಷ್ಟಿಸಿರುವನು ಇವೆಲ್ಲಕ್ಕೂ ಈ ಹದಿನಾರು ಜನರೂ ಇರಬೇಕೆಂದು ಹೇಳುತ್ತಾರೆ.

೧೩–೧೭. ಕೆಲಕೆಲವರು ಸದಸ್ಯರು ಬೇಕೆಂದೆನ್ನುತ್ತಾರೆ. ಚಮಸಾಧ್ವರ್ಯುಗಳು ಹತ್ತು ಜನರು. ಇಷ್ಟು ಜನರು ಯಜ್ಞಕ್ಕೆ ಬೇಕಾದವರು. ಬ್ರಹ್ಮನ ಈ ಯಾಗದಲ್ಲಿ ನಾರದನು ಬ್ರಹ್ಮನು, ಗೌತಮನು ಬ್ರಾಹ್ಮಣಾಚ್ಛಂಸಿ, ದೇವರಾತನು ಪೋತನು. ದೇವಲನು ಅಗ್ನೀಧ್ರನೂ ಆದರು. ಅಂಗೀರಸನು ಉದ್ಗಾತನೂ, ಪುಲಹನು ಪ್ರಸ್ತೋ

ನಾರಾಯಣಃ ಪ್ರತಿಹರ್ತಾ ಸುಬ್ರಹ್ಮಣ್ಯೋತ್ರಿರುಚ್ಯತೇ ।
ತಸ್ಮಿನ್ಯಜ್ಞೇ ಭೃಗುರ್ಹೋತಾ ವಸಿಷ್ಠೋ ಮೈತ್ರ ಏವ ಚ ॥ ೧೫ ॥

ಅಚ್ಛಾವಾಕಃ ಕ್ರತುಃ ಪ್ರೋಕ್ತೋ ಗ್ರಾವಸ್ತು ಚ್ಯವನಸ್ಮೃತಃ।
ಪುಲಸ್ತ್ಯೋಧ್ವರ್ಯುರೇವಾಸೀತ್ಪ್ರತಿಷ್ಠಾತಾ ಚ ವೈ ಶಿಬಿಃ ॥ ೧೬ ॥

ಬೃಹಸ್ಪತಿಸ್ತತ್ರ ನೇಷ್ಟಾ ಉನ್ನೇತಾ ಸಾಂಶಪಾಯನಃ ।
ಧರ್ಮಸ್ಸದಸ್ಯಸ್ತತ್ರಾಸೀತ್ಪುತ್ರಪೌತ್ರಸಹಾಯವಾನ್ ॥ ೧೭ ॥

ಭರದ್ವಾಜಶ್ಶಮೀಕಶ್ಚ ಪುರುಕುತ್ಸೋ ಯುಗಂಧರಃ ।
ಏಣಿಕಸ್ತಾಂಡಿಕಶ್ಚೈವ ಕೋಣಃ ಕುತಪ ಏವ ಚ ॥ ೧೮ ॥

ಗಾರ್ಗ್ಯೋ ವೇದಶಿರಾಶ್ಚೈವ ಚಮಸಾಧ್ವರ್ಯವಃ ಕೃತಾಃ ।
ಕಣ್ವಾದಯಸ್ತಥಾ ಚಾನ್ಯೇ ಮಾರ್ಕಂಡೋಗಸ್ತಿರೇವ ಚ ॥ ೧೯ ॥

ಪುತ್ರಪೌತ್ರಸಮೇತಾಸ್ತೇ ಸಶಿಷ್ಯಾಸ್ಸಹಬಾಂಧವಾಃ ।
ಕರ್ಮಾಣಿ ತತ್ರ ಕುರ್ವಾಣಾ ರಾತ್ರಿಂದಿವಮತಂದ್ರಿತಾಃ ॥ ೨೦ ॥

---

ದ್ಗಾತನೂ, ನಾರಾಯಣನು ಪ್ರತಿಹರ್ತನೂ, ಅತ್ರಿಯು ಸುಬ್ರಹ್ಮಣ್ಯನೂ ಕೂಡ ಆದರು. ಭೃಗವು ಹೋತನೂ, ವಸಿಷ್ಠನು ಮೈತ್ರನೂ, ಕ್ರತುವು ಅಚ್ಛಾವಾಕನೂ, ಚ್ಯವನನು ಗ್ರಾವನೂ, ಪುಲಸ್ತ್ಯನು ಅಧ್ವರ್ಯುವೂ, ಶಿಬಿಯು ಪ್ರತಿಷ್ಠಾಪಕನೂ, ಬೃಹಸ್ಪತಿಯು ನೇಷ್ಟೃವೂ, ಸಾಂಶಪಾಯನನು ಉನ್ನೇತನೂ ಆದರು ಧರ್ಮನು ತನ್ನ ಮಕ್ಕಳು ಮುಮ್ಮಕ್ಕಳೊಂದಿಗೆ ಸದಸ್ಯನಾದನು.

೧೮-೨೦. ಭರದ್ವಾಜ, ಶಮೀಕ, ಪುರುಕುತ್ಸ, ಯುಗಂಧರ, ಏಣಕ, ತಾಂಡಿಕ, ಕೋಣ, ಕುತಪ, ಗಾರ್ಗ್ಯ, ವೇದಶಿರ. ಈ ಹತ್ತು ಜನರೂ ಚಮಸಾಧ್ವರ್ಯುಗಳು. ಕಣ್ವ, ಮಾರ್ಕಂಡೇಯ, ಅಗಸ್ತ್ಯನ ಮಗ ಇವರೂ, ಇವರ ಮಕ್ಕಳೂ ಇವರ ಶಿಷ್ಯರೂ ಬಂಧುಗಳೂ, ರಾತ್ರಿ ಹಗಲು ಬೇಸರಪಡದೆ ಕೆಲಸ ಮಾಡುವವರಾದರು.

ಮನ್ವಂತರೇ ವ್ಯತೀತೇತು ಯಜ್ಞಸ್ಯಾವಭೃತೋಽಭವತ್ ।
ದಕ್ಷಿಣಾ ಬ್ರಹ್ಮಣೇ ದತ್ತಾ ಪ್ರಾಚೀ ಹೋತುಸ್ತು ದಕ್ಷಿಣಾ ॥ ೨೦ ।

ಅಧ್ವರ್ಯವೇ ಪ್ರತೀಚೀ ತು ಉದ್ಗಾತುಶ್ಚೋತ್ತರಾ ತಥಾ ।
ತ್ರೈಲೋಕ್ಯಂ ಸಕಲಂ ಬ್ರಹ್ಮಾ ದದೌ ತೇಷಾಂ ತು ದಕ್ಷಿಣಾಂ ॥ ೨೨ ।

ಧೇನೂನಾಂ ಚ ಶತಂ ಪ್ರಾಜ್ಞೈರ್ದಾತವ್ಯಂ ಯಜ್ಞಸಿದ್ಧಯೇ ।
ಅಷ್ಟೌ ತು ಯಜ್ಞವಾಹೇಭ್ಯಃ ಚತ್ವಾರಿಂಶಾಧಿಕಾಸ್ತಥಾ ॥ ೨೩ ।

ದ್ವಿತೀಯಸ್ಥಾನಿನಾಂ ಚೈವ ಚತುರ್ವಿಂಶಾಃ ಪ್ರಕೀರ್ತಿತಾಃ ।
ಷೋಡಶೈವ ತೃತೀಯಾನಾಂ ದೇಯಾ ವೈ ಧೇನವಶ್ಶುಭಾಃ ॥ ೨೪ ।

ದ್ವಾದಶೈವ ತಥಾ ಚಾನ್ಯಾ ಆಗ್ನೀಧ್ರಾದ್ಯೇಷು ದಾಪಯೇತ್ ।
ಅನಯಾ ಸಂಖ್ಯಯಾ ಚೈವ ಗ್ರಾಮಾನ್ದಾಸಾನಜಾವಿಕಂ ॥ ೨೫ ॥

ದಾತವ್ಯಂ ಷಡ್ರಸಂ ಭೋಜ್ಯಂ ಸ್ನಾನೇ ಚಾವಭೃಥೇ ಕೃತೇ ।
ಯಜಮಾನೇನ ಸರ್ವಸ್ವಂ ದೇಯಂ ಸ್ವಾಯಂಭುವೋಽಬ್ರವೀತ್ ॥ ೨೬ ॥

---

೨೧-೨೨. ಆ ಸ್ವಾಯಂಭುವ ಮನ್ವಂತರವು ಪೂರ್ತಿಯಾಗಿ ಆ ಯಜ್ಞವು ನಡೆದು ಅದು ಕಳೆಯಲು ಆ ಯಜ್ಞವು ಪೂರ್ತಿಯಾಯಿತು. ಬ್ರಹ್ಮನಿಗೆ ಪೂರ್ವದಿಕ್ಕನ್ನೂ, ಹೋತೃವಿಗೆ ದಕ್ಷಿಣ ದಿಕ್ಕನ್ನೂ, ಅಧ್ವರ್ಯುವಿಗೆ ಪಶ್ಚಿಮ ದಿಕ್ಕನ್ನೂ, ಉದ್ಗಾತುವಿಗೆ ಉತ್ತರ ದಿಕ್ಕನ್ನೂ ದಕ್ಷಿಣೆಯಾಗಿ ಕೊಟ್ಟನು. ಮೂರು ಲೋಕವನ್ನೂ ಅವರಿಗೆ ಬ್ರಹ್ಮನು ದಕ್ಷಿಣೆಯನ್ನಾಗಿ ಕೊಟ್ಟನು.

೨೩-೨೫. ಯಜ್ಞ ಸಿದ್ಧಿಸಲು ನೂರು ಗೋವುಗಳನ್ನು ಕೊಡಬೇಕು. ಬ್ರಹ್ಮಸ್ಥಾನದವರಿಗೆ ನಾಲ್ವತ್ತೆಂಟು ಗೋವುಗಳನ್ನೂ ಉದ್ಗಾತೃಗಳಿಗೆ ಇಪ್ಪತ್ತನಾಲ್ಕು ಗೋವುಗಳನ್ನೂ, ಹೋತೃಗಳಿಗೆ ಹದಿನಾರು ಗೋವುಗಳನ್ನೂ, ಅಧ್ವರ್ಯುಸ್ಥಾನದವರಿಗೆ ಹನ್ನೆರಡು ಗೋವುಗಳನ್ನೂ ಕೊಡಬೇಕು. ಈ ಮೇಲಿನ ಸಂಖ್ಯೆಗಳಂತೆಯೇ ಗ್ರಾಮಗಳನ್ನೂ, ದಾಸಿಯರನ್ನೂ, ಆಡು ಕುರಿಗಳನ್ನೂ ಆಯಾ ವರ್ಗದವರಿಗೆ ಕೊಡಬೇಕು.

೨೬. ಅವಭೃತಸ್ನಾನವಾಗುತ್ತಲೂ ಎಲ್ಲರಿಗೂ ಷಡ್ರಸಾನ್ನ ಭೋಜನ ಮಾಡಿಸಬೇಕು. ಅನಂತರ ಯಜಮಾನನು ತನ್ನಲ್ಲಿರುವುದೆಲ್ಲವನ್ನೂ ಕೊಡಬೇಕೆಂದು ಸ್ವಯಂಭುವಮನುವು ಹೇಳಿದ್ದಾನೆ.

ಅಧ್ವರ್ಯೂಣಾಂ ಸದಸ್ಯಾನಾಂ ಸ್ವೇಚ್ಛಯಾ ದಾನಮಿಷ್ಯತೇ ।
ವಿಷ್ಣುಂ ಚಾಹೂಯ ವೈ ಬ್ರಹ್ಮಾ ವಾಕ್ಯಮಾಹ ಮುದಾನ್ವಿತಃ ॥ ೨೭ ॥

॥ ಬ್ರಹ್ಮೋವಾಚ ॥

ಅಭಿಪ್ರಸಾದ್ಯ ಸಾವಿತ್ರೀಂ ತ್ವಮಿಹಾನಯ ಕೇಶವ ।
ತ್ವಯಿ ದೃಷ್ಟೇ ನ ಸಾ ಕೋಪಂ ಕರಿಷ್ಯತಿ ಶುಭಾನನಾ ॥ ೨೮ ॥

ಸ್ನಿಗ್ಧೈಶ್ಶುಭಾನ್ವಿತೈರ್ವಾಕ್ಯೈರ್ಹೇತುಯುಕ್ತೈರ್ವಿಶೇಷತಃ ।
ತ್ವಂ ಸದಾ ಮಧುರಾಭಾಷೀ ಜಿಹ್ವಾ ತೇ ಸ್ರವತೇಽಮೃತಂ ॥ ೨೯ ॥

ಯೋ ನ ಕುರ್ಯಾಚ್ಚ ತೇ ವಾಕ್ಯಂ ತ್ರೈಲೋಕ್ಯೇ ನ ಚ ದೃಶ್ಯತೇ ।
ಗಂಧರ್ವೈಸ್ಸಹಿತೋ ಗತ್ವಾ ಪ್ರಿಯಾಂ ಮಮ ಪ್ರಸಾದಯ । ॥ ೩೦ ॥

ತ್ವಯಾ ಪ್ರಸಾದಿತಾ ಸಾಧ್ವೀ ತುಷ್ಟಾ ಸಾ ಮೇ ಭವಿಷ್ಯತಿ ।
ವಿಲಂಬೋ ನ ತ್ವಯಾ ಕಾರ್ಯೋ ವ್ರಜ ಮಾಧವ ಮಾ ಚಿರಂ ॥ ೩೧ ॥

---

೨೭. ಅಧ್ವರ್ಯುಗಳಿಗೂ, ಸದಸ್ಯರಿಗೂ ದಾನವನ್ನು ಇಷ್ಟ ಬಂದಂತೆ ಕೊಡಬಹುದು: ಬ್ರಹ್ಮನು ವಿಷ್ಣುವನ್ನು ಕರೆದು ಸಂತೋಷದಿಂದ ಇಂತೆಂದದು.

೨೮. ಬ್ರಹ್ಮನು ಹೇಳಿದನು- ಎಲೈ ವಿಷ್ಣುವೇ! ನೀನು ಸಾವಿತ್ರಿಯ ಕೋಪವನ್ನು ಹೋಗಲಾಡಿಸಿ ಇಲ್ಲಿಗೆ ಕರೆದುಕೊಂಡು ಬಾ. ನಿನ್ನನ್ನು ನೋಡಿದರೆ ಆಕೆಯು ಕೋಪಿಸಿಕೊಳ್ಳುವುದಿಲ್ಲ.

೨೯. ಒಳ್ಳೆಯ ಶುಭವಾದ ಮೃದುವಾದ ಕಾರಣಗಳುಳ್ಳ ಮಾತುಗಳಿಂದ ಆಕೆಯನ್ನು ಸಮಾಧಾನಪಡಿಸು. ನೀನು ಮಧುರವಾಗಿ ಮಾತನಾಡತಕ್ಕವನು ನಿನ್ನ ನಾಲಗೆಯು ಅಮೃತವನ್ನು ಸುರಿಸುತ್ತದೆ.

೩೦. ನಿನ್ನ ಮಾತಿನಂತೆ ನಡೆಯದವನನ್ನು ಮೂರು ಲೋಕದಲ್ಲಿಯೂ ಕಾಣೆನು. ಗಂಧರ್ವರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ನನ್ನ ಪ್ರಿಯೆಗೆ ಸಿಟ್ಟು ಬಿಡುವಂತೆ ಮಾಡು.

೩೧. ನೀನು ಅವಳನ್ನು ಸಮಾಧಾನ ಪಡಿಸಿದರೆ ನನ್ನ ವಿಷಯದಲ್ಲಿ ಸಂತೋಷಗೊಳ್ಳುತ್ತಾಳೆ. ತಾವಕಾಶ ಮಾಡಬೇಡ. ಹೊರಡು. ಹೊತ್ತು ಮಾಡಬೇಡ.

ಲಕ್ಷ್ಮೀಸ್ತೇ ಪುರತೋ ಯಾತು ಸಾವಿತ್ರ್ಯಾಸ್ಸದನಂ ಶುಭಾ ।
ತಸ್ಯಾಸ್ತ್ವಂ ಪದವೀಂ ಗಚ್ಛ ಸಾಂತ್ವಯಸ್ವ ಪ್ರಿಯಾಂ ಮಮ ॥ ೩೨ ॥

ನ ಚ ತೇ ವಿಪ್ರಿಯಂ ದೇವಿ ವಿವಿಕ್ತಂ ಕರ್ತುಮಿಚ್ಛತಿ ।
ಮುಖಂ ಪ್ರೇಕ್ಷ್ಯ ಸದಾಕಾಲಂ ವರ್ತತೇ ತವ ಸುಂದರಿ ॥ ೩೩ ॥

ಏವಂವಿಧಾನಿ ವಾಕ್ಯಾನಿ ಮಧುರಾಣಿ ಬಹೂನಿ ಚ ।
ಶ್ರಾವಿತವ್ಯಾ ತ್ವಯಾ ದೇವೀ ಯಥಾ ತುಷ್ಟಾ ಭವೇತ್ಪುನಃ ॥ ೩೪ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತಸ್ತದಾ ವಿಷ್ಣುರ್ಬ್ರಹ್ಮಣಾ ಲೋಕಕರ್ತೃಣಾ ।
ಜಗಾಮ ತ್ವರಿತೋ ಭೂತ್ವಾ ಸಾವಿತ್ರೀ ಯತ್ರ ತಿಷ್ಠತಿ ॥ ೩೫ ॥

ದೂರಾದೇವಾಗಚ್ಛಮಾನಂ ಪತ್ನ್ಯಾ ಸಹ ಚ ಕೇಶವಂ ।
ಉತ್ತಸ್ಥೌ ಸತ್ವರಾ ಭೂತ್ವಾ ವಿಷ್ಣುನಾ ಸಾಭಿವಾದಿತಾ ॥ ೩೬ ॥

---

೩೨. ಸಾವಿತ್ರಿಯ ಮನೆಗೆ ಹೋಗುವಾಗ ಲಕ್ಷ್ಮಿಯು ನಿನ್ನ ಮುಂದೆ ಹೋಗಲಿ. ಅವಳ ಹಿಂದೆ ನೀನು ಹೋಗು. ನನ್ನ ಹೆಂಡತಿಯನ್ನು ಸಮಾಧಾನಗೊಳಿಸು.

೩೩. ಎಲೈ ದೇವಿಯೇ! ನಿನಗೆ ಬೇಕೆಂದು ಪ್ರಿಯವಲ್ಲದ್ದನ್ನು ಮಾಡಲು ಇಚ್ಛಿಸುವುದಿಲ್ಲ. ಎಲ್ಲಾ ಕಾಲದಲ್ಲಿಯೂ ನಿನ್ನ ಮುಖವನ್ನು ನೋಡಿಕೊಂಡೇ ಇರುತ್ತಾನೆ

೩೪. ಈ ರೀತಿಯಾದ ಬಹುವಾದ ಒಳ್ಳೆಯ ಮಾತುಗಳನ್ನು ಆಕೆಗೆ ಅವಳು ಸಮಾಧಾನ ಪಡುವಂತೆ ನೀನು ಹೇಳಿ ಆಕೆಯನ್ನು ಸಮಾಧಾನಪಡಿಸು.

೩೫. ಪುಲಸ್ತ್ಯನು ಹೇಳಿದನು– ಲೋಕಕರ್ತೃವಾದ ಬ್ರಹ್ಮನು ಹೀಗೆ ಹೇಳಲು ಸಾವಿತ್ರಿಯು ಇದ್ದಲ್ಲಿಗೆ ವಿಷ್ಣುವು ಹೋದನು.

೩೬. ದೂರದಿಂದಲೇ ವಿಷ್ಣುವು ಹೆಂಡತಿಯೊಡನೆ ಬರುತ್ತಿರುವುದನ್ನು ನೋಡಿ ಸಾವಿತ್ರಿಯು ಜಾಗ್ರತೆಯಾಗಿ ಮೇಲಕ್ಕೆದ್ದಳು. ವಿಷ್ಣುವು ಆಕೆಗೆ ನಮಸ್ಕರಿಸಿದನು.

॥ ವಿಷ್ಣುರುವಾಚ ॥

ನಮಸ್ತೇ ದೇವದೇವೇಶಿ ಬ್ರಹ್ಮಪತ್ನಿ ನಮೋಽಸ್ತು ತೇ ।
ತ್ವಾಂ ನಮಸ್ಕೃತ್ಯ ಸರ್ವೋ ಹಿ ಜನಃ ಪಾಪಾತ್ಪ್ರಮುಚ್ಯತೇ ॥ ೩೭ ॥

ಪತಿವ್ರತಾ ಮಹಾಭಾಗಾ ಬ್ರಹ್ಮಣಸ್ತ್ವಂ ಹೃದಿ ಸ್ಥಿತಾ ।
ತ್ವಾಂ ಚಿಂತಯನ್ನಹರಹಃ ಪ್ರಸಾದಂ ತೇಽಭಿಕಾಂಕ್ಷತಿ ॥ ೩೮ ॥

ತಸ್ಯೈವಂ ದುಃಖತಪ್ತಸ್ಯ ಪ್ರಸಾದಂ ಕರ್ತುಮರ್ಹಸಿ ।
ಸಖೀಂ ಚೈನಾಂ ಪ್ರಿಯಾಂ ಪೃಚ್ಛ ಲಕ್ಷ್ಮೀಂ ಭೃಗುಸುತಾಂ ಶುಭಾಂ ॥ ೩೯ ॥

ಯದಿ ಚ ಶ್ರದ್ಧಧಾನಾಸಿ ವಾಕ್ಯಾದಸ್ಮಾತ್ಸುಲೋಚನೇ ।
ಏವಮುಕ್ತ್ವಾ ತತಶ್ಶೌರಿಃ ಸಾವಿತ್ರ್ಯಾಶ್ಚರಣೌ ಶುಭೌ ॥ ೪೦ ॥

ಉಭಾಭ್ಯಾಂ ಚೈವಹಸ್ತಾಭ್ಯಾಂ ಕ್ಷಮ ದೇವಿ ನಮೋಽಸ್ತು ತೇ ।
ಜಗದ್ವಂದ್ಯೇ ಜಗನ್ಮಾತಃ ಪ್ರಣಿಪತ್ಯ ಚ ಸಾದರಂ ॥ ೪೧ ॥

---

೩೭. ವಿಷ್ಣುವು ಹೇಳಿದನು- ದೇವದೇವರಿಗೆಲ್ಲ ಒಡೆಯಳೆ! ನಿನಗೆ ನಮಸ್ಕಾರವು. ಬ್ರಹ್ಮ ಪತ್ನಿಯೇ! ನಿನಗೆ ನಮಸ್ಕಾರವು. ಎಲ್ಲರೂ ನಿನ್ನನ್ನು ನಮಸ್ಕರಿಸಿ ಅವರವರ ಪಾಪದಿಂದ ಮುಕ್ತರಾಗುತ್ತಾರೆ.

೩೮. ನೀನು ಪತಿವ್ರತೆಯು. ಮಹಿಮವಂತಳು. ನಿನ್ನನ್ನು ಯಾವಾಗಲೂ ಬ್ರಹ್ಮನು ಚಿಂತಿಸುತ್ತಲೇ ಇರುವನು. ಆ ಬ್ರಹ್ಮನು ದಿನವೂ ನಿನ್ನನ್ನೇ ಚಿಂತಿಸುತ್ತಾ ನಿನ್ನ ಅನುಗ್ರಹವನ್ನೇ ಅಪೇಕ್ಷಿಸುತ್ತಾನೆ.

೩೯. ಅವನು ಹೀಗೆ ಯಾವಾಗಲೂ ದುಃಖದಿಂದ ಬೆಂದುಹೋಗುತ್ತಿದ್ದಾನೆ. ಅವನಿಗೆ ನೀನು ಅನುಗ್ರಹಿಸು. ಅವನ ವಿಷಯವನ್ನು ನಿನ್ನ ಪ್ರಿಯ ಸಖಿಯಾದ ಲಕ್ಷ್ಮಿಯನ್ನು ಕೇಳು.

೪೦-೪೧. ಎಲೈ ಸುಲೋಚನೆಯೇ! ಈ ವಾಕ್ಯದಿಂದ ನೀನು ನಂಬಿಕೆ ಹೊಂದಿದರೆ ಬಾ. ಎಂದು ಆ ವಿಷ್ಣುವು ಸಾವಿತ್ರಿಯ ಎರಡು ಕಾಲುಗಳನ್ನು ಎರಡು ಕೈಗಳಿಂದ ಹಿಡಿದುಕೊಂಡು ದೇವಿ! ಕ್ಷಮಿಸು ನಮಸ್ಕಾರವು ಜಗದ್ವಂದ್ಯಳೆ! ಜಗನ್ಮಾತೆಯೇ! ಕ್ಷಮಿಸು ಎಂದು ವಿಶ್ವಾಸದಿಂದ ನಮಸ್ಕರಿಸಿದನು.

ಸಂಕೋಚ್ಯ ಪಾದೌ ಸಾ ದೇವೀ ಸ್ವಕರೇಣ ಕರೌ ಹರೇಃ ।
ಉವಾಚ ಪ್ರಣತಂ ವಿಷ್ಣುಂ ಸರ್ವಂಕ್ಷಾನ್ತಂ ಮಯಾಚ್ಯುತ ॥ ೪೨ ॥

ಇಯಂ ಲಕ್ಷ್ಮೀಸ್ಸದಾ ವತ್ಸ ಹೃದಯೇ ತೇ ನಿವತ್ಸ್ಯತೇ ।
ವಿನಾ ತ್ವಯಾ ನ ಚಾನ್ಯತ್ರ ರತಿಂ ಯಾಸ್ಯತಿ ಕರ್ಹಿಚಿತ್ ॥ ೪೩ ॥

ಭೃಗೋಃ ಪತ್ನ್ಯಾಂ ಸಮುತ್ಪನ್ನಾ ಪತ್ನೀ ಹ್ಯೇಷಾ ತವ ಸುವ್ರತ ।
ದೇವದಾನವಯತ್ನೇನ ಸಂಭೂತಾ ತೂದಧೌ ಪುನಃ ॥ ೪೪ ॥

ಭಗವಾನ್ಯತ್ರ ತತ್ರೈಷಾ ಅವತಾರಂ ಚ ಕುರ್ವತೀ ।
ದೇವತ್ವೇ ದೇವದೇಹಾ ವೈ ಮಾನುಷತ್ವೇ ಚ ಮಾನುಷೀ ॥ ೪೫ ॥

ತ್ವತ್ಸಹಾಯಾ ನ ಸಂದೇಹೋ ದಂಪತೀವ್ರತಮಾಚಿರಂ ।
ಯನ್ಮಯಾ ಚಾತ್ರ ಕರ್ತವ್ಯಂ ಮಾಂ ವದಸ್ವ ಚ ವೈ ವಿಭೋ ॥ ೪೬ ॥

---

೪೨. ಆಗ ಸಾವಿತ್ರಿಯು ಕಾಲುಗಳನ್ನು ಹಿಂದಕ್ಕೆಳದುಕೊಂಡು ಅವನ ಕೈಗಳನ್ನು ತನ್ನ ಕೈಯಿಂದ ಹಿಡಿದುಕೊಂಡು ಎಲೈ ವಿಷ್ಣುವೇ! ಎಲ್ಲವನ್ನೂ ಕ್ಷಮಿಸಿದ್ದೇನೆ ಎಂದಳು.

೪೩. ಎಲೈ ವತ್ಸನೇ ! ಈ ಲಕ್ಷ್ಮಿಯು ನಿನ್ನ ಹೃದಯದಲ್ಲಿಯೇ ವಾಸವಾಗಿದ್ದಾಳೆ. ನಿನ್ನನ್ನು ಬಿಟ್ಟು ಬೇರೆಲ್ಲಿಯೂ ಸೌಖ್ಯವನ್ನು ಹೊಂದುವ ಹಾಗೆಯೇ ಇಲ್ಲ.

೪೪. ನಿನ್ನ ಹೆಂಡತಿಯು ಭೃಗುವಿನ ಹೆಂಡತಿಯಲ್ಲಿ ಉತ್ಪನ್ನಳಾದಳು. ದೇವತೆಗಳು ದಾನವರು ಇವರ ಯತ್ನದಿಂದ ಮತ್ತೆ ಸಮುದ್ರದಲ್ಲಿ ಉತ್ಪನ್ನಳಾದಳು.

೪೫-೪೬. ನೀನು ಅವತಾರವನ್ನು ಎಲ್ಲಿ ಮಾಡುತ್ತೀಯೋ ಅಲ್ಲೇ ಅವಳೂ ಅವತರಿಸುತ್ತಾಳೆ. ನೀನು ದೇವತೆಯಾಗಿದ್ದರೆ ತಾನೂ ದೇವತೆಗಳ ದೇಹದಲ್ಲಿ ಹುಟ್ಟುತ್ತಾಳೆ. ನೀನು ಮನುಷ್ಯ ದೇಹವನ್ನು ಹೊಂದಿದರೆ ಆಕೆಯೂ ಅಂತೆಯೇ ಮನುಷ್ಯ ದೇಹವನ್ನು ಹೊಂದುತ್ತಾಳೆ. ನಿನಗೆ ಸಹಾಯಕಳಾಗಿದ್ದುಕೊಂಡು ಚಿರಕಾಲದಿಂದ ದಂಪತೀವ್ರತದಲ್ಲಿದ್ದಾಳೆ. ನಾನು ಈಗ ಏನು ಮಾಡಬೇಕೆಂಬುದನ್ನು ನೀನು ಹೇಳು.

॥ ವಿಷ್ಣುರುವಾಚ ॥

ಯಜ್ಞಾವಸಾನಂ ಸಂಜಾತಂ ಪ್ರೇಷಿತೋಽಹಂ ತವಾಂತಿಕಂ ।
ಸಾವಿತ್ರೀಮಾನಯ ಕ್ಷಿಪ್ರಂ ಮಯಾ ಸ್ನಾನಂ ಸಮಾಚರೇತ್ ॥ ೪೭ ॥

ಆಗಚ್ಛ ತ್ವರಿತಾ ದೇವಿ ತತ್ರ ಯಾಹಿ ಮುದಾನ್ವಿತಾ ।
ಪಶ್ಯಸ್ವ ಸ್ವಪತಿಂ ಗತ್ವಾ ದೇವೈಸ್ಸರ್ವೈಸ್ಸಮನ್ವಿತಂ ॥ ೪೮ ॥

॥ ಲಕ್ಷ್ಮೀರುವಾಚ ॥

ಆರ್ಯೇ ಉತ್ತಿಷ್ಠ ಶೀಘ್ರಂ ತ್ವಂ ಯಾಹಿ ಯತ್ರ ಪಿತಾಮಹಃ ।
ವಿನಾ ತ್ವಯಾ ನ ಯಾಸ್ಯಾಮಿ ಸ್ಪೃಷ್ಟ್ವಾ ಪಾದೌ ಮಯಾ ತವ ॥ ೪೯ ॥

ಹಸ್ತೌ ಗೃಹೀತ್ವಾ ಚೋತ್ಥಾಪ್ಯ ದಕ್ಷಿಣೇನೈವ ದಕ್ಷಿಣಂ ।
ಚಿರಾಯಮಾಣಾಂ ಸಾವಿತ್ರೀಂ ಜ್ಞಾತ್ವಾ ದೇವಃ ಪಿತಾಮಹಃ ॥ ೫೦ ॥

ಸಮೀಪಸ್ಥಂ ಮಹಾದೇವಮಿದಂ ವಚನಮಬ್ರವೀತ್ ।
ಗಚ್ಛ ತ್ವಮನಯಾ ಸಾರ್ಧಂ ಪಾರ್ವತ್ಯಾ ಶಶಿಭೂಷಣ ॥ ೫೧ ॥

---

೪೭. ವಿಷ್ಣುವು ಹೇಳಿದನು- ಯಜ್ಞವು ಕೊನೆಗೊಂಡಿತು. ನನ್ನನ್ನು ನಿನ್ನ ಬಳಿಗೆ ಕಳುಹಿಸಿದನು. ಸಾವಿತ್ರಿಯನ್ನು ಕರೆದುಕೊಂಡು ಬಾ. ನನ್ನೊಡನೆ ಸ್ನಾನ ಮಾಡಲಿ. ಎಂದನು.

೪೮. ಎಲೈ ದೇವಿಯೇ! ಬೇಗ ಬಾ. ಸಂತೋಷದಿಂದ ಅಲ್ಲಿಗೆ ಹೋಗು. ಎಲ್ಲಾ ದೇವತೆಗಳಿಂದಲೂ ಕೂಡಿಕೊಂಡಿರುವ ನಿನ್ನ ಪತಿಯನ್ನು ನೋಡು.

೪೯, ಲಕ್ಷ್ಮಿಯು ಹೇಳಿದಳು- ಎಲೈ ಆರ್ಯಳೇ ! ಏಳು. ಬ್ರಹ್ಮನಿರುವಲ್ಲಿಗೆ ಹೋಗೋಣ. ನೀನು ಬರದಿದ್ದರೆ ನಾನು ಹೋಗುವುದಿಲ್ಲ ಇಗೋ ನಿನ್ನ ಕಾಲುಗಳನ್ನು ಹಿಡಿದುಕೊಳ್ಳುತ್ತೇನೆ.

೫೦–೫೨. ಹೀಗೆಂದು ಹೇಳಿ ಬಲಗೈಯಿಂದ ಬಲಗೈ ಹಿಡಿದೆಬ್ಬಿಸಿದಳು. ಸಾವಿತ್ರಿಯು ಸಾವಕಾಶಮಾಡುತ್ತಿರಲು ಅದನ್ನು ತಿಳಿದುಬ್ರಹ್ಮನು ಮಹಾದೇವನನ್ನು ಕುರಿತು

ಗೌರೀ ತ್ವದಗ್ರತೋ ಯಾತು ಪಶ್ಚಾತ್ತ್ವಂ ಗಚ್ಛ ಶಂಕರ ।
ಪ್ರತಿಬೋಧ್ಯ ತ್ವಯಾ ನೇಯಾ ಶೀಘ್ರಮಾಯಾತಿ ತತ್ಕುರು ॥ ೫೨ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತೋ ಗತೋ ರುದ್ರಃ ಪಾರ್ವತೀ ಬ್ರಹ್ಮಣಃ ಪ್ರಿಯಾಂ ।
ತಯಾ ದೃಷ್ಟೌ ದಂಪತೀ ತೌ ಪಾರ್ವತೀಪರಮೇಶ್ವರೌ ॥ ೫೩ ॥

ದೇವೀ ಸಾ ಸಮ್ಮುಖೀ ತಾಭ್ಯಾಮುತ್ಥಿತಾ ಪರಮೇಶ್ವರೀ ।
ದೂರಾದೇವ ತು ರುದ್ರೇಣ ಬ್ರಹ್ಮಾಣೀ ಚಾಭಿವಾದಿತಾ ॥ ೫೪ ॥

॥ ಶಿವ ಉವಾಚ ॥

ಬ್ರಹ್ಮಾ ಪ್ರತೀಕ್ಷತೇ ದೇವಿ ಮಾವಿಲಂಬಸ್ವ ಶೋಭನೇ ।
ಬೃಹತ್ಕೃತ್ಯಂ ತ್ವಯಾ ತತ್ರ ಕರಣೀಯಂ ಪತಿವ್ರತೇ ॥ ೫೫ ॥

ಪೃಚ್ಛಸ್ವೇಮಾಂ ವರಾರೋಹಾಂ ಗೌರೀಂ ಪರ್ವತನಂದಿನೀಂ ।
ಲಕ್ಷ್ಮೀಂ ಚೈತಾಂ ವಿಶಾಲಾಕ್ಷೀಮಿಂದ್ರಾಣೀಂ ವಾ ಶುಭಾನನೇ ॥ ೫೬ ॥

---

ಇಂತೆಂದನು. ಶಶಿಭೂಷಣನೇ ! ಈ ಪಾರ್ವತಿಯನ್ನು ಕರೆದುಕೊಂಡು ಹೋಗು ಪಾರ್ವತಿಯು ನಿನ್ನ ಮುಂದೆ ಹೋಗಲಿ. ಅವಳ ಹಿಂದೆ ನೀನು ಹೋಗು ಅವಳನ್ನು ಸಮಾಧಾನಪಡಿಸಿ ಬೇಗ ಕರೆದುಕೊಂಡು ಬಾ.

೫೩. ಪುಲಸ್ತ್ಯನು ಹೇಳಿದನು– ಹೀಗೆನ್ನಲು ರುದ್ರನು ಸಾವಿತ್ರಿಯ ಬಳಿಗೆ ಹೋದನು. ಆ ಸಾವಿತ್ರಿಯು ಈ ಪಾರ್ವತೀಪರಮೇಶ್ವರರನ್ನು ನೋಡಿದಳು.

೫೪. ಆ ಸಾವಿತ್ರಿಯು ಇವರು ಬರುತ್ತಿರುವುದನ್ನು ದೂರದಿಂದಲೇ ನೋಡಿ ಎದ್ದಳು. ಶಿವನು ದೂರದಿಂದಲೇ ಆಕೆಗೆ ನಮಸ್ಕರಿಸಿದನು.

೫೫. ಶಿವನು ಹೇಳಿದನು-- ಎಲೈ ದೇವಿಯೇ ! ಬ್ರಹ್ಮನು ನಿನ್ನನ್ನು ನಿರೀಕ್ಷಿಸುತ್ತಿದ್ದಾನೆ. ಅಮ್ಮ ! ಸಾವಕಾಶಮಾಡಬೇಡ. ಎಲೈ ಪತಿವ್ರತೆಯೇ ಅಲ್ಲಿ ನೀನು ಮಾಡತಕ್ಕ ಕೆಲಸಗಳು ಬಹಳವಾಗಿವೆ.

೫೬. ಬೇಕಾದರೆ ಪರ್ವತಪುತ್ರಿಯಾದ ಈ ಗೌರಿಯನ್ನು ಕೇಳು. ಈ ಲಕ್ಷ್ಮಿಯನ್ನಾದರೂ ಕೇಳು. ಈ ಶಚೀದೇವಿಯನ್ನು ಬೇಕಾದರೂ ಕೇಳು.

ಯಾಸಾಂ ವಾ ಶ್ರದ್ಧಧಾಸಿ ತ್ವಂ ಪೃಚ್ಛ ದೇವಿ ನಮೋಸ್ತು ತೇ ।
ಆಶೀರ್ವಾದಸ್ತಯಾ ದತ್ತೋ ದೇವದೇವಸ್ಯ ಶೂಲಿನಃ ॥ ೫೭ ॥

॥ ಸಾವಿತ್ರ್ಯುವಾಚ ॥

ಶರೀರಾರ್ಧೇ ಚ ತೇ ಗೌರೀ ಸದಾ ಸ್ಥಾಸ್ಯತಿ ಶಂಕರ ।
ಅನಯಾ ಶೋಭಸೇ ದೇವ ತ್ವಂ ತು ತ್ರೈಲೋಕ್ಯಸುಂದರಃ ॥ ೫೮ ॥

ಸುಖಭಾಗೀ ಜಗತ್ಸರ್ವಂ ತ್ವಯಾ ನಾಥೇನ ಶತ್ರುಹನ್ ।
ಏವಂ ಬ್ರುವತೀ ಸಾವಿತ್ರೀ ಗೃಹೀತಾ ಬ್ರಹ್ಮಣಃ ಪ್ರಿಯಾ ॥ ೫೯ ॥

ಗೌರ್ಯಾ ಚ ವಾಮಹಸ್ತೇ ತು ಲಕ್ಷ್ಮ್ಯಾ ವೈ ದಕ್ಷಿಣೇ ಕರೇ ।
ಅಭಿವಂದ್ಯ ತು ಸಾವಿತ್ರೀಂ ಶಂಕರೋ ವಾಕ್ಯಮಬ್ರವೀತ್ ॥ ೬೦ ॥

॥ ಶಿವ ಉವಾಚ ॥

ಏಹ್ಯಾಗಚ್ಛ ಮಹಾಭಾಗೇ ಯತ್ರ ತಿಷ್ಠತಿ ತೇ ಪತಿಃ ।
ತತ್ರ ಗಚ್ಛ ವರಾರೋಹೇ ಸ್ತ್ರೀಣಾಂ ಭರ್ತಾ ಪರಾಗತಿಃ ॥ ೬೧ ॥

---

೫೭. ಯಾರಲ್ಲಿ ನಂಬಿಕೆಯಿದೆಯೋ ಅವರನ್ನು ಕೇಳು, ಎನ್ನಲು ಆ ಸಾವಿತ್ರಿಯು ಶಿವನಿಗೆ ಆಶೀರ್ವದಿಸಿದಳು.

೫೮. ಸಾವಿತ್ರಿಯು ಹೇಳಿದಳು– ಎಲೈ ಶಂಕರನೇ ! ನಿನ್ನ ಅರ್ಧಶರೀರದಲ್ಲಿಯೇ ಗೌರಿಯು ಇದ್ದಾಳೆ. ಇವಳಿಂದ ಪ್ರಕಾಶಿಸುತ್ತೀಯೆ. ನೀನೂ ಕೂಡ ತ್ರಿಲೋಕಸುಂದರನು.

೫೯-೬೦. ಎಲೈ ಶತ್ರುನಾಶಕನಾದ ಶಂಕರನೇ ! ನೀನು ಒಡೆಯನಾಗಿರುವುದರಿಂದ ಪ್ರಪಂಚವೆಲ್ಲವೂ ಸುಖವನ್ನು ಹೊಂದುತ್ತಿದೆ. ಎನ್ನುತ್ತಿರಲು ಆ ಸಾವಿತ್ರಿಯ ಎಡಗೈಯ್ಯನ್ನು ಗೌರಿಯೂ, ಬಲದ ಕೈಯ್ಯನ್ನು ಲಕ್ಷ್ಮಿಯೂ, ಹಿಡಿದುಕೊಂಡರು. ಆಗ ಶಂಕರನು ಸಾವಿತ್ರಿಯನ್ನು ಹೊಗಳುತ್ತ ಇಂತೆಂದನು.

೬೧. ಶಿವನು ಹೇಳಿದನು– ಎಲೈ ಮಹಾನುಭಾವಳೇ ! ನಿನ್ನ ಗಂಡನಿರುವಲ್ಲಿಗೆ ಹೋಗೋಣ. ಹೆಂಗಸರಿಗೆ ಗಂಡನೇ ಗತಿಯಲ್ಲವೇ ?

ಏಷಾ ಗೌರೀ ಸಮಾಯಾತಾ ಭ್ರಾತೃಭಾರ್ಯಾ ತವಾನಘಾ ।
ಬೃಹದಾಗ್ರಹೇಣ ಸಾ ದೇವೀ ಪ್ರಣಯಾದ್ಗಂತುಮಿಚ್ಛತಿ ॥ ೬೨ ॥

ಲಕ್ಷ್ಮೀಶ್ಚೈಷಾ ಪಾರ್ವತೀ ಚ ಸ್ಥಿತಾ ದೇವಿ ತವಾಗ್ರತಃ ।
ಏತಾಸಾಂ ವಚಸಾಂ ದೇವೀ ಆವಯೋಶ್ಚ ಶುಭಾನನೇ ॥ ೬೩ ॥

ಮಾನಭಂಗಂ ನ ತೇ ಕರ್ತುಂ ಬುದ್ಧ್ಯತೇ ಬ್ರಹ್ಮಣಃ ಪ್ರಿಯೇ ।
ಅಸ್ಮದಭ್ಯರ್ಥನಾದ್ದೇವಿ ನ ವಿಲಂಭಿತುಮರ್ಹಸಿ ॥ ೬೪ ॥

॥ ಗೌರ್ಯುವಾಚ ॥

ಅಹಂ ಚ ತೇ ಪ್ರಿಯಾ ದೇವೀ ಸರ್ವದಾ ವದಸೇ ಸ್ವಯಂ ।
ಲಕ್ಷ್ಮೀಶ್ಚ ತೇ ಕರೇ ಲಗ್ನಾ ದಕ್ಷಿಣೇ ಚ ಮಯಾ ಧೃತಾ ॥ ೬೫ ॥

ಏಹ್ಯಾಗಚ್ಛ ಮಹಾಭಾಗೇ ಯತ್ರ ತಿಷ್ಠತಿ ತೇ ಪತಿಃ ।
ನೀತಾ ಸಾ ತು ತದಾ ತಾಭ್ಯಾಂ ದೇವೀ ಸ್ವಮಧ್ಯತಃ ಕೃತಾ ॥ ೬೬ ॥

ಪುರಸ್ಸರೌ ವಿಷ್ಣುರುದ್ರೌ ಶಕ್ರಾದ್ಯಾಶ್ಚ ತಥಾ ಸುರಾಃ ।
ಗಂಧರ್ವಾಪ್ಸರಸಶ್ಚೈವ ತ್ರೈಲೋಕ್ಯಂ ಸ ಚರಾಚರಂ ॥ ೬೭ ॥

---

೬೨. ಈ ಗೌರಿಯು ಬಂದಿದ್ದಾಳೆ. ನಿನ್ನ ಭ್ರಾತೃವಿನ ಹೆಂಡತಿಯು ಹಠ ಮಾಡಿ ಬಂದಿದ್ದಾಳೆ. ಸಂತೋಷದಿಂದ ಹೊರಡು.

೬೩-೬೪. ನಿನ್ನ ಎದುರಿಗೇನೇ ಈ ಲಕ್ಷ್ಮಿಯೂ, ಪಾರ್ವತಿಯೂ, ಇದ್ದಾರೆ ಇವರ ಮಾತನ್ನೂ ನನ್ನ ಮಾತನ್ನೂ ತಿರಸ್ಕರಿಸಬೇಡ. ನಾನು ಕೇಳಿಕೊಳ್ಳುತ್ತೇನೆ. ಸಾವಕಾಶಮಾಡಬೇಡ.

೬೫. ಗೌರಿಯು ಹೇಳಿದಳು– ಎಲೈ ಸಾವಿತ್ರಿಯೇ ! ನನ್ನನ್ನು ಯಾವಾಗಲೂ ನಿನಗೆ ಪ್ರಿಯಳೆಂದು ಹೇಳಿಕೊಳ್ಳುತ್ತೀಯೆ. ಲಕ್ಷ್ಮಿಯು ಬಲಗೈಯ್ಯನ್ನೂ ನಾನು ಎಡಗೈಯ್ಯನ್ನೂ ಹಿಡಿದುಕೊಂಡಿದ್ದೇವೆ.

೬೬. ಮಹಾಭಾಗೆ! ಬಾ ನಿನ್ನ ಗಂಡನಿರುವಲ್ಲಿಗೆ ಹೋಗೋಣವೆಂದು ಸಾವಿತ್ರಿಯನ್ನು ಮಧ್ಯದಲ್ಲಿ ಬಿಟ್ಟುಕೊಂಡು ಆಚೆ ಈಚೆ ಕೈಗಳನ್ನು ಹಿಡಿದುಕೊಂಡು ಹೊರಟರು. ಸಾವಿತ್ರಿಯು ಮಧ್ಯದಲ್ಲಿದ್ದಳು.

೬೭ ಮುಂದುಗಡೆ ವಿಷ್ಣುರುದ್ರರೂ, ಇಂದ್ರಾದಿ ದೇವತೆಗಳೂ ಹೊರಟರು. ಹಿಂದುಗಡೆ ಗಂಧರ್ವರೂ, ಅಪ್ಸರರೂ, ಚರಾಚರಾತ್ಮಕವಾದ ಮೂರು ಲೋಕವೂ ಹೊರಟಿತು.

ತತ್ರಾಯಾತಾ ಚ ಸಾ ದೇವೀ ಸಾವಿತ್ರೀ ಬ್ರಹ್ಮಣಃ ಪ್ರಿಯಾ ।
ಸಾವಿತ್ರೀಂ ಸಮ್ಮುಖೀಂ ದೃಷ್ಟ್ವಾ ಸರ್ವಲೋಕಪಿತಾಮಹಃ ॥ ೬೮ ॥

ಗಾಯತ್ರ್ಯಾ ಸಹಿತೋ ಬ್ರಹ್ಮಾ ಇದಂ ವಚನಮಬ್ರವೀತ್ ।
ಏಷಾ ದೇವೀ ಕರ್ಮಕರೀ ಅಹಂ ತೇ ವಶಗಸ್ಸ್ಥಿತಃ ॥ ೬೯ ॥

ಮಾಮಾದಿಶ ವರಾರೋಹೇ ಯತ್ತು ಕಾರ್ಯಂ ಮಯಾ ತ್ವಿಹ ।
ಏವ ಮುಕ್ತ್ವಾ ತು ಸಾವಿತ್ರೀ ಸ್ವಯಂ ದೇವೇನ ಬ್ರಹ್ಮಣಾ ॥ ೭೦ ॥

ತ್ರಪಯಾಧೋಮುಖೀ ದೇವೀ ನ ವಕ್ತುಂ ಕಿಂಚಿದಿಚ್ಛತಿ ।
ಪಾದಯೋಃ ಪತಿತಾ ತಸ್ಯಾಃ ಗಾಯತ್ರೀ ಬ್ರಹ್ಮಚೋದಿತಾ ॥ ೭೧ ॥

॥ ಸಾವಿತ್ರ್ಯುವಾಚ ॥

ಕೃತವತ್ಯಪರಾಧಂ ತೇ ಕ್ಷಮ ದೇವಿ ನಮೋಽಸ್ತು ತೇ ।
ಆಲಿಂಗ್ಯ ಸಾದರಂ ಕಂಠೇ ಪರಿಷ್ವಜ್ಯ ಚ ಪೀಡಿತಾಂ ॥ ೭೨ ॥

ಗಾಯತ್ರೀಂ ಸಾಂತ್ವಯಾಮಾಸ ಮಾನ್ಯಶ್ಚೈಷ ಪತಿರ್ಮಮ ।
ಕರ್ತವ್ಯಂ ವಚನಂ ತಸ್ಯ ಸ್ತ್ರೀಣಾಂ ಪ್ರಾಣೇಶ್ವರಃ ಪತಿಃ ॥ ೭೩ ॥

---

೬೮. ಈ ರೀತಿ ಅಲ್ಲಿಗೆ ಬ್ರಹ್ಮಪ್ರಿಯಳಾದ ಸಾವಿತ್ರಿಯು ಬಂದಳು. ಪಿತಾಮಹನಾದ ಬ್ರಹ್ಮನು ಸಾವಿತ್ರಿಯು ಎದುರಿಗೆ ಬರುತ್ತಿರುವುದನ್ನು ನೋಡಿ ಗಾಯತ್ರಿಯೊಡನೆ ಕೂಡಿ ಅವಳಿಗಿಂತೆಂದನು.

೬೯. ಎಲೈ ಸಾವಿತ್ರಿಯೇ ! ಈ ಗಾಯತ್ರಿದೇವಿಯು ನೀನು ಹೇಳಿದ ಕೆಲಸವನ್ನು ಮಾಡುವ ಆಳು. ನಾನು ನೀನು ಹೇಳಿದಂತೆ ಕೇಳುತ್ತೇನೆ. ನಿನ್ನ ಅಧೀನದಲ್ಲಿದ್ದೇನೆ. ನಾನು ಮಾಡಬೇಕಾದ ಕೆಲಸವನ್ನು ಅಪ್ಪಣೆಮಾಡು.

೭೦-೭೧. ಬ್ರಹ್ಮನು ಸಾವಿತ್ರಿಯನ್ನು ಕುರಿತು ಹೀಗೆ ಹೇಳಲು ಆಕೆಯು ಲಜ್ಜೆಯಿಂದ ತಲೆತಗ್ಗಿಸಿಕೊಂಡು ಮಾತನಾಡಲು ಇಚ್ಛಿಸದೆ ಇದ್ದಳು. ಬ್ರಹ್ಮನು ಗಾಯತ್ರಿಯನ್ನು ಸಾವಿತ್ರಿಗೆ ನಮಸ್ಕಾರ ಮಾಡುವಂತೆ ಹೇಳಲು ಅವಳು ಅದರಂತೆಯೇ ಸಾವಿತ್ರಿಗೆ ನಮಸ್ಕರಿಸಿದಳು.

೭೨-೭೩. ಸಾವಿತ್ರಿಯು ಹೇಳಿದಳು– ಸಾವಿತ್ರಿಯು ಗಾಯತ್ರಿಯನ್ನು ಕತ್ತಿನಲ್ಲಿ ಆಲಂಗಿಕೊಂಡು ಎಲೈ ದೇವಿಯೇ ! ನಿನ್ನ ವಿಷಯದಲ್ಲಿ ತಪ್ಪುಮಾಡಿದೆನು ಕ್ಷಮಿಸು. ನಿನಗೆ ನಮಸ್ಕಾರವು ಎಂದು ಹೇಳಿ ಗಾಯತ್ರಿಯನ್ನು ಸಮಾಧಾನಪಡಿಸಿ

ಉಕ್ತಂ ಭಗವತಾ ಪೂರ್ವಂ ಸೃಷ್ಟಿಕಾಲೇ ವಿರಿಂಚಿನಾ ।
ನ ಚ ಸ್ತ್ರೀಣಾಂ ಪೃಥಗ್ಯಜ್ಞೋ ನ ವ್ರತಂ ನಾಪ್ಯುಪೋಷಣಂ ॥ ೭೪ ॥

ಭರ್ತಾ ಯದ್ವದತೇ ವಾಕ್ಯಂ ತತ್ತತ್ಕುರ್ಯಾದಕುತ್ಸಯಾ ।
ಭರ್ತೃನಿಂದಾಂ ಯಾ ಕುರುತೇ ಶ್ವಶ್ರೂನಿಂದಾಂ ತಥೈವ ಚ ॥ ೭೫ ॥

ಪರಿವಾದಂ ಪ್ರಲಾಪಂ ವಾ ನರಕಂ ಸಾ ತು ಗಚ್ಛತಿ ।
ಪತ್ಯೌ ಜೀವತಿ ಯಾ ನಾರೀ ಉಪವಾಸವ್ರತಂ ಚರೇತ್ ॥ ೭೬ ॥

ಆಯುಷ್ಯಂ ಹರತೇ ಭರ್ತುರ್ಮೃತಾ ನರಕಮೃಚ್ಛತಿ ।
ಏವಂ ಜ್ಞಾತ್ವಾ ತ್ವಯಾ ಭದ್ರೇ ನ ಕಾರ್ಯಂ ವಿಪ್ರಿಯಂ ಪತೌ ॥ ೭೭ ॥

ಸ ಚಾಸ್ಯ ದಕ್ಷಿಣಂ ತ್ವಂಗಂ ತ್ವಯಾ ಸ್ಪೃಶ್ಯಂ ಕಥಂಚನ ।
ಸರ್ವಕಾರ್ಯೇತ್ವಹಂಚಾಸ್ಯ ದಕ್ಷಿಣಂ ಪಕ್ಷಮಾಸ್ಥಿತಾ ॥ ೭೮ ॥

ಸವ್ಯಂ ತ್ವಮಾಸ್ಥಿತಾ ಸಾಧ್ವೀ ಪಾರ್ಶ್ವೇ ನಾರದಪುಷ್ಕರೌ ।
ಬ್ರಹ್ಮಸ್ಥಾನಾನಿ ಚಾನ್ಯಾನಿ ಸ್ಥಿತಾನ್ಯಾಯತನಾನಿ ಚ ॥ ೭೯ ॥

---

ವಳು. ಮತ್ತೆ ಎಲ್ಲೆ ಗಾಯತ್ರಿಯೇ! ಈ ನಿನ್ನ ಗಂಡನು ಗೌರವಾರ್ಹನು. ಅವನ ಮಾತನ್ನು ನಡೆಸಬೇಕು. ಸ್ತ್ರೀಯರಿಗೆ ಗಂಡನೇ ಪ್ರಾಣೇಶ್ವರನು.

೭೪-೭೭. ಪೂರ್ವದಲ್ಲಿ ಸೃಷ್ಟಿಕಾಲದಲ್ಲಿ ಪೂಜ್ಯನಾದ ಬ್ರಹ್ಮನೇ ಹೇಳಿದ್ದಾನೆ. ಸ್ತ್ರೀಯರಿಗೆ ಬೇರೆ ಯಜ್ಞವಿಲ್ಲ. ವ್ರತವಿಲ್ಲ ಉಪವಾಸವೂ ಇಲ್ಲ. ಗಂಡನು ಹೇಳುವುದನ್ನು ಬೇಸರ ಪಟ್ಟುಕೊಳ್ಳದೆ ಮಾಡಬೇಕು. ಗಂಡನನ್ನೂ, ಅತ್ತೆಯನ್ನೂ, ನಿಂದಿಸುವವಳು, ತನ್ನನ್ನು ತಾನು ಬೈದುಕೊಳ್ಳುವುದು, ದುಃಖಪಡುವುದು, ಇವುಗಳನ್ನು ಮಾಡುವವಳು ನರಕವನ್ನು ಹೊಂದುತ್ತಾಳೆ. ಗಂಡನು ಬದುಕಿರುವಾಗ ಹೆಂಡತಿಯು ಉಪವಾಸವ್ರತವನ್ನು ಮಾಡಿದರೆ ಆಕೆಯು ಗಂಡನ ಆಯುಷ್ಯವನ್ನು ನಾಶ ಮಾಡುವುದಲ್ಲದೆ ನರಕವನ್ನು ಹೊಂದುತ್ತಾಳೆ. ಎಲೈ ಮಂಗಳೆಯೇ! ಇದನ್ನು ತಿಳಿದು ಗಂಡನ ವಿಷಯದಲ್ಲಿ ವಿರೋಧವನ್ನೆಣಿಸಬೇಡ

೭೮-೭೯. ಈ ಬ್ರಹ್ಮನ ಬಲಪಾರ್ಶ್ವವನ್ನು ನೀನು ಮುಟ್ಟಬೇಡ. ನಾನು ಎಲ್ಲಾ ಕಾರ್ಯಗಳಲ್ಲಿಯೂ ಅಲ್ಲಿರುತ್ತೇನೆ. ನೀನು ಎಡಗಡೆಯಲ್ಲಿರು ಅಲ್ಲದೆ ಈ ಪಾರ್ಶ್ವಗಳಲ್ಲಿ ನಾರದ ಪುಷ್ಕರರೂ ಇದ್ದಾರೆ. ಮಿಕ್ಕವುಗಳು ಬ್ರಹ್ಮನಸ್ಥಾನಗಳು

ಉಭೇ ವೈ ಶೋಭಮಾನೇ ಹಿ ಯಾವತ್ಸೃಷ್ಟಿಃ ಪ್ರಜಾಪತೇಃ ।
ಭವತ್ಯಾ ಚ ಮಯಾ ಚೈವ ಸ್ಥಾತವ್ಯಂ ತು ನ ಸಂಶಯಃ ॥ ೮೦ ॥

ಪುಷ್ಕರೇ ಬ್ರಹ್ಮಣಃ ಪಾರ್ಶ್ವೇ ವಾಮಂ ಪಾರ್ಶ್ವಮುಪಾಶ್ರಿತಾ ।
ಅನೇನ ಚೋಪದೇಶೇನ ಸುಖಂ ತಿಷ್ಠ ಮಯಾನ್ವಿತಾ ॥ ೮೧ ॥

॥ ಗಾಯತ್ರ್ಯುವಾಚ ॥

ಏವಮೇತತ್ಕರಿಷ್ಯಾಮಿ ಭವತ್ಯಾದೇಶಕಾರಿಕಾ ।
ತ್ವದಾಜ್ಞಯಾ ಮಯಾ ಸ್ಥೇಯಂ ತ್ವಂ ಮೇ ಪ್ರಾಣೇಶ್ವರೀ ಸಖೀ ॥ ೮೨ ॥

ಅಹಂ ತೇ ತ್ವನುಜಾ ದೇವೀ ಸದಾ ಮಾಂ ಪಾತುಮರ್ಹಸಿ ।
ದೇವದೇವಸ್ತತೋ ಬ್ರಹ್ಮಾ ಪುಷ್ಕರೇ ವಿಷ್ಣುನಾ ಸಹ ॥ ೮೩ ॥

ಸ್ನಾನಾವಸಾನೇ ದೇವಾನಾಂ ಸರ್ವೇಷಾಂ ಪ್ರದದೌ ವರಾನ್ ।
ದೇವಾನಾಮಧಿಪಂ ಶಕ್ರಂ ಜ್ಯೋತಿಷಾಂ ಚ ದಿವಾಕರಂ ॥ ೮೪ ॥

ನಕ್ಷತ್ರಾಣಾಂ ತಥಾ ಸೋಮಂ ರಸಾನಾಂ ವರುಣಂ ತಥಾ ।
ಪ್ರಜಾಪ್ರತೀನಾಂ ದಕ್ಷಂ ಚ ನದೀನಾಂ ಸಾಗರಂ ತಥಾ ॥ ೮೫ ॥

---

೮೦. ಸೃಷ್ಟಿಯಿರುವವರೆಗೂ ನಾವಿಬ್ಬರೂ ಬ್ರಹ್ಮನ ಬಳಿಯಲ್ಲಿ ಪ್ರಕಾಶಿಸುತ್ತಾ ಇರಬೇಕು. ಸಂಶಯವಿಲ್ಲ

೮೧. ಈ ಪುಷ್ಕರದಲ್ಲೇ ಬ್ರಹ್ಮನ ಪಾರ್ಶ್ವವನ್ನು ಹೊಂದಿದವಳಾಗಿರು. ಈ ಉಪದೇಶವನ್ನು ತಿಳಿದು ಇದರಂತೆ ನಡೆಯುತ್ತಾ ನನ್ನೊಡನೆ ಇರು.

೮೨. ಗಾಯತ್ರಿಯು ಹೇಳಿದಳು– ಹಾಗೆ ಆಗಲಿ. ಮಾಡುತ್ತೇನೆ. ನಿನ್ನ ಅಪ್ಪಣೆಯಂತೆ ನಡೆಯತಕ್ಕವಳು ನಿನ್ನ ಅಪ್ಪಣೆಯಂತೆ ನಾನಿರಬೇಕು. ನೀನೇ ನನಗೆ ಪ್ರಾಣೇಶ್ವರಿಯಾದ ಸಖಿಯು

೮೩. ಎಲೈ ದೇವಿಯೇ! ನಾನು ನಿನಗೆ ತಂಗಿಯು. ನೀನು ನನ್ನನ್ನು ಕಾಪಾಡು, ಎಂದಳು. ದೇವದೇವನಾದ ಬ್ರಹ್ಮನೂ ಕೂಡ ಪುಷ್ಕರದಲ್ಲಿ ವಿಷ್ಣುವಿನೊಡನೆ ಅವಭೃತವಾಗುವಾಗ ಎಲ್ಲರಿಗೂ ವರಗಳನ್ನು ಕೊಟ್ಟನು.

೮೪-೮೮ ಇಂದ್ರನನ್ನು ದೇವತೆಗಳಿಗೂ, ದಿವಾಕರನನ್ನು ಜ್ಯೋತಿಸ್ಸುಗಳಿಗೂ, ಸೋಮನನ್ನು ನಕ್ಷತ್ರಗಳಿಗೂ, ವರುಣನನ್ನು ರಸಗಳಿಗೂ, ದಕ್ಷನನ್ನು ಪ್ರಜಾ

ಕುಬೇರಂ ಚ ಧನಾಧ್ಯಕ್ಷಂ ತಥಾ ಚ ಯಕ್ಷರಕ್ಷಸಾಂ ।
ಭೂತಾನಾಂ ಚೈವ ಸರ್ವೇಷಾಂ ಗಣಾನಾಂ ಚ ಪಿನಾಕಿನಂ　　॥ ೮೬ ॥

ಮಾನವಾನಾಂ ಮನುಂ ಚೈವ ಪಕ್ಷಿಣಾಂ ಗರುಡಂ ತಥಾ ।
ಋಷೀಣಾಂ ಚ ವಸಿಷ್ಠಂ ಚ ಗ್ರಹಾಣಾಂ ಚ ಪ್ರಭಾಕರಂ　　॥ ೮೭ ॥

ಏವಮಾದೀನಿ ವೈ ದತ್ವಾ ದೇವದೇವಃ ಪಿತಾಮಹಃ ।
ವಿಷ್ಣುಂ ಚ ಶಂಕರಂ ಚೈವ ಬ್ರಹ್ಮಾ ಪ್ರೋವಾಚ ಸಾದರಂ　　॥ ೮೮ ॥

॥ ಬ್ರಹ್ಮೋವಾಚ ॥

ಪೃಥಿವ್ಯಾಂ ಸರ್ವತೀರ್ಥೇಷು ಭವಂತೌ ಪೂಜ್ಯಸತ್ತಮೌ ।
ಭವದ್ಭ್ಯಾಂ ಚ ವಿನಾ ತೀರ್ಥಂ ಪುಣ್ಯತಾಮೇತಿ ಕರ್ಹಿಚಿತ್　　॥ ೮೯ ॥

ಲಿಂಗಂ ವಾ ಪ್ರತಿಮಾ ವಾಪಿ ದೃಶ್ಯತೇ ಯತ್ರ ಕುತ್ರಚಿತ್ ।
ತತ್ತೀರ್ಥಂ ಪುಣ್ಯತಾಮೇತಿ ಸರ್ವಮೇವ ಫಲಪ್ರದಂ　　॥ ೯೦ ॥

ಮಾಲ್ಯವಸ್ತ್ರೋಪಹಾರೈಶ್ಚ ಯೇ ಕರಿಷ್ಯಂತಿ ಪೂಜನಂ ।
ಯುಷ್ಮಾಕಂ ಮಾಂ ಪುರಸ್ಕೃತ್ಯ ತೇಷಾಂ ರೋಗಭಯಂ ಕುತಃ　　॥ ೯೧ ॥

---

ಪತಿಗಳಿಗೂ, ಸಾಗರನನ್ನು ನದಿಗಳಿಗೂ, ಕುಬೇರನನ್ನು ಧನ, ಯಕ್ಷರಾಕ್ಷಸರಿಗೂ. ಪಿನಾಕಿಯನ್ನು ಭೂತಗಳಿಗೂ, ಗಣಗಳಿಗೂ, ಮನುವನ್ನು ಮಾನವರಿಗೂ, ಗರುಡನನ್ನು ಪಕ್ಷಿಗಳಿಗೂ, ವಸಿಷ್ಠನನ್ನು ಋಷಿಗಳಿಗೂ, ಪ್ರಭಾಕರನನ್ನು ಗ್ರಹಗಳಿಗೂ, ಅಧಿಪರನ್ನಾಗಿ ಮಾಡಿದನು. ಈ ರೀತಿ ಬ್ರಹ್ಮನು ಎಲ್ಲರಿಗೂ ವರಗಳನ್ನು ಕೊಟ್ಟು ವಿಷ್ಣುವನ್ನೂ ಶಂಕರನನ್ನೂ ಕುರಿತು ಮುಂದೆ ಹೇಳುವಂತೆ ಹೇಳಿದನು.

೮೯. ಬ್ರಹ್ಮನು ಹೇಳಿದನು- ಎಲೈ ಶಿವವಿಷ್ಣುಗಳಿರ! ಭೂಮಿಯಲ್ಲಿರುವ ಎಲ್ಲಾ ತೀರ್ಥಗಳಲ್ಲಿಯೂ ನೀವು ಮುಖ್ಯವಾಗಿ ಪೂಜೆಯನ್ನು ಹೊಂದಿರಿ. ನೀವಿಲ್ಲದಿದ್ದರೆ ಆ ತೀರ್ಥವು ಪುಣ್ಯ ತೀರ್ಥವಲ್ಲ.

೯೦. ತೀರ್ಥಗಳಲ್ಲಿ ಲಿಂಗವಾಗಲಿ ಪ್ರತಿಮೆಯಾಗಲಿ ಕಾಣಬೇಕು. ಆ ತೀರ್ಥವು ಪುಣ್ಯತೀರ್ಥವಾಗುತ್ತದೆ. ಫಲವನ್ನು ಕೊಡುತ್ತದೆ.

೯೧. ಮಾಲೆ, ಹೂ, ಮುಂತಾದುವುಗಳಿಂದ ನನ್ನನ್ನು ಮುಂದುಮಾಡಿಕೊಂಡು ಯಾರು ನಿಮಗೆ ಪೂಜೆಮಾಡುತ್ತಾರೆಯೋ ಅವರಿಗೆ ರೋಗ ಭಯವಿರುವುದಿಲ್ಲ.

ಯೇಷು ರಾಜ್ಯೇಷು ಯುಷ್ಮಾಕಂ ಮತ್ಪೂರ್ವಂ ಪೂಜನಾದಿಕಾಃ ।
ಪ್ರವರ್ತ್ಸ್ಯಂತಿ ಕ್ರಿಯಾಸ್ಸರ್ವಾ ಯತ್ಫಲಂ ತೇಷು ತಚ್ಛೃಣು ॥ ೯೨ ॥

ನಾಧಯೋ ವ್ಯಾಧಯಶ್ಚೈವ ನೋಪಸರ್ಗೋ ನ ಕ್ಷುದ್ಭಯಂ ।
ವಿಪ್ರಯೋಗೋ ನ ವಾಪೀಷ್ಟೈರನಿಷ್ಟೈರ್ನಾಪಿ ಸಂಗತಿಃ ॥ ೯೩ ॥

ನಾಕ್ಷಿರೋಗಶ್ಶಿರೋರ್ತಿರ್ವಾ ನಾಭಿಶೂಲಭಯಂ ನ ಚ ।
ನಾತಿಸಾರಭಯಂ ತತ್ರ ನಾಶ್ಮರೀ ನಾವಿಷೂಚಿಕಾ ॥ ೯೪ ॥

ದೃಷ್ಟಿರ್ನಿಕಾಮವತಸ್ತಸ್ಮಿಸ್ಸಮ್ಯಗ್ಬುದ್ಧಿರನುತ್ತಮಾ ।
ಆರೋಗ್ಯಂ ಸರ್ವತಶ್ಚೈವ ದೀರ್ಘಮಾಯುಃ ಪ್ರವರ್ಧತೇ ॥ ೯೫ ॥

ನಾಕಾಲೇ ಭವಿತಾ ಮೃತ್ಯುರ್ಗಾವೋ ನಾಲ್ಪಪಯೋ ಮುಚಃ ।
ನಾಕಾಲೇ ಫಲಿನೋ ವೃಕ್ಷಾ ನೋತ್ಪಾತಭಯಮಣ್ವಪಿ ॥
ಏತಚ್ಛ್ರುತ್ವಾ ತತೋ ವಿಷ್ಣುಃ ಬ್ರಹ್ಮಾಣಂ ಸ್ತೋತುಮುದ್ಯತಃ ॥ ೯೬ ॥

---

೯೨. ಯಾವ ದೇಶದಲ್ಲಿ ನನ್ನನ್ನು ಮುಂದುಮಾಡಿಕೊಂಡು ನಿಮಗೆ ಪೂಜೆ ಮಾಡುತ್ತಾರೆಯೋ ಅವರಿಗೆ ಉಂಟಾಗುವ ಫಲವನ್ನು ಕೇಳು.

೯೩-೯೪. ಅಲ್ಲಿ ಮನೋವ್ಯಥೆಗಳಿರುವುದಿಲ್ಲ. ರೋಗಗಳಿರುವುದಿಲ್ಲ. ಸಣ್ಣ ಸಣ್ಣ ತೊಂದರೆಗಳಿರುವುದಿಲ್ಲ. ಹಸಿವಿನ ಭಯವಿಲ್ಲ, ಅಗಲುವಿಕೆಯಿಲ್ಲ, ಕೆಟ್ಟವರ ಜೊತೆಯಿಲ್ಲ, ಕಣ್ಣಿನ ರೋಗವಿಲ್ಲ, ತಲೆಬೇನೆಯಿಲ್ಲ, ಶೂಲೆ ಎಂಬ ರೋಗದ ಭಯ ವಿಲ್ಲ, ಅತಿಸಾರವಿಲ್ಲ, ಮೂತ್ರಕೃಚ್ಛ್ರದ ಭಯವಿಲ್ಲ, ಹುಣ್ಣಿನ ಭಯವಿಲ್ಲ.

೯೫. ದೃಷ್ಟಿಯು ಚೆನ್ನಾಗಿರುತ್ತದೆ. ಉತ್ತಮವಾದ ಒಳ್ಳೆ ಬುದ್ಧಿಯಿರುತ್ತದೆ. ಎಲ್ಲಾ ವಿಷಯದಲ್ಲಿಯೂ ಆರೋಗ್ಯವಿರುತ್ತದೆ. ದೀರ್ಘಾಯುಸ್ಸುಂಟಾಗುತ್ತದೆ.

೯೬. ಅಕಾಲಮೃತ್ಯುವುಂಟಾಗುವುದಿಲ್ಲ ಹಸುಗಳು ಹೆಚ್ಚು ಹಾಲನ್ನು ಕೊಡುತ್ತವೆ. ಅಕಾಲದಲ್ಲಿ ಮರಗಳು ಹಣ್ಣು ಬಿಡುವುದಿಲ್ಲ. ಉತ್ಪಾತಭಯವು ಸ್ವಲ್ಪವೂ ಇರುವುದಿಲ್ಲ. ಎಂದನು. ಇದನ್ನು ಕೇಳಿ ವಿಷ್ಣುವು ಬ್ರಹ್ಮನನ್ನು ಸ್ತೋತ್ರ ಮಾಡಲು ಉಪಕ್ರಮಿಸಿದನು.

॥ ವಿಷ್ಣುರುವಾಚ ॥

ನಮೋಸ್ತ್ವನಂತಾಯ ವಿಶುದ್ಧಚೇತಸೇ ।
ಸ್ವರೂಪರೂಪಾಯ ಸಹಸ್ರಬಾಹವೇ ॥
ಸಹಸ್ರರಶ್ಮಿಪ್ರಭವಾಯ ವೇಧಸೇ
ವಿಶುದ್ಧದೇಹಾಯ ವಿಶುದ್ಧಕರ್ಮಣೇ ॥ ೯೭ ॥

ಸಮಸ್ತವಿಶ್ವಾರ್ತಿಹರಾಯ ಶಂಭವೇ
ಸಹಸ್ರಸೂರ್ಯಾನಲತಿಗ್ಮತೇಜಸೇ ।
ಸಮಸ್ತವಿದ್ಯಾಯತನಾಯ ಚಕ್ರಿಣೇ
ಸಮಸ್ತಧೀಸ್ಥಾನವತೇ ಸದಾ ನಮಃ ॥ ೯೮ ॥

ಅನಾದಿ ದೇವಾಚ್ಯುತ ಶೇಷ ಶೇಖರ
ಪ್ರಭೋ ಭವದ್ಭೂತಪತೇ ಮಹೇಶ್ವರ ।
ಮರುತ್ಪತೇ ಸರ್ವಪತೇ ಜಗತ್ಪತೇ
ಭುವಃಪತೇ ಭುವನಪತೇ ಸದಾ ನಮಃ ॥ ೯೯ ॥

---

೯೭-೧೦೧. ವಿಷ್ಣುವು ಹೇಳಿದನು– ಕೊನೆಯಿಲ್ಲದವನಿಗೆ ನಮಸ್ಕಾರವು. ಶುದ್ಧಮನಸ್ಸುಳ್ಳವನಿಗೆ ನಮಸ್ಕಾರವು. ಸ್ವರೂಪದ ರೂಪನಾಗಿರುವ ನಿನಗೆ ನಮಸ್ಕಾರವು. ಸಾವಿರ ತೋಳುಗಳುಳ್ಳ ನಿನಗೆ ನಮಸ್ಕಾರವು. ಸಾವಿರ ರಶ್ಮಿಗಳಿಗೆ ಉತ್ಪತ್ತಿಸ್ಥಾನನಾದ ನಿನಗೆ ನಮಸ್ಕಾರವು. ಶುದ್ಧದೇವನಾದ ಸಮಸ್ತಲೋಕದ ತೊಂದರೆಯನ್ನು ಹಾಳುಮಾಡುವ ನಿನಗೆ ನಮಸ್ಕಾರವು. ಸಾವಿರಸೂರ್ಯ ಬೆಂಕಿಯಂತೆ ಹಚ್ಚಾದ ತೇಜಸ್ಸುಳ್ಳವನೇ ನಿನಗೆ ನಮಸ್ಕಾರವು. ವಿಶುದ್ಧಕರ್ಮವನ್ನು ಮಾಡುವ ನಿನಗೆ ನಮಸ್ಕಾರವು ಸಮಸ್ತ ವಿದ್ಯೆಗೂ ಸ್ಥಾನನಾದ ನಿನಗೆ ನಮಸ್ಕಾರವು ಚಕ್ರವನ್ನುಳ್ಳ ನಿನಗೆ ನಮಸ್ಕಾರವು. ಎಲ್ಲಾ ಬುದ್ಧಿಗಳಿಗೂ ಸ್ಥಾನನಾದ ನಿನಗೆ ಸರ್ವಕಾಲದಲ್ಲಿಯೂ ನಮಸ್ಕಾರವು. ಅನಾದಿ ದೇವನೇ, ಅಚ್ಯುತನೇ, ಶೇಷಶೇಖರನೇ, ಭೂತಪತಿಯೇ, ಮಹೇಶ್ವರನೇ, ನಿನಗೆ ನಮಸ್ಕಾರವು. ಮರುತ್ಪತಿಯೇ, ಸರ್ವಪತಿಯೆ, ಜಗತ್ಪತಿಯೆ, ಭೂಮಿಗೆ ಪತಿಯೆ, ಭುವನಪತಿಯೇ, ನಿನಗೆ ನಮಸ್ಕಾರವು. ಜಲೇಶನೇ, ನಾಗಾ

ಜಲೇಶ ನಾರಾಯಣ ವಿಷ್ಣು ಶಂಕರ
ಕ್ಷಿತೀಶ ವಿಶ್ವೇಶ್ವರ ವಿಶ್ವಲೋಚನ ।
ಶಶಾಂಕಸೂರ್ಯಾಚ್ಯುತವೀರವಿಶ್ವ
ಪ್ರತರ್ಕ್ಯಮೂರ್ತೇಽಮೃತಮೂರ್ತ ಅವ್ಯಯ ॥ ೧೦೦ ॥

ಜ್ವಲದ್ಧುತಾಶಾರ್ಚಿನಿರುದ್ಧಮಂಡಲ
ಪ್ರಪಾಹಿ ನಾರಾಯಣ ವಿಶ್ವತೋಮುಖ ।
ಸಮಸ್ತ ದೇವಾರ್ತಿಹರಾಮೃತಾಽವ್ಯಯ
ಪ್ರಪಾಹಿ ಮಾಂ ಶರಣಗತಂ ತಥಾ ವಿಭೋ ॥ ೧೦೧ ॥

ವಕ್ತ್ರಾಣ್ಯನೇಕಾನಿ ವಿಭೋ ತವಾಹಂ
ಪಶ್ಯಾಮಿ ಶುದ್ಧಸ್ಯ ಗತಿಂ ಪುರಾಣಂ ।
ಬ್ರಹ್ಮಾಣಮೀಶಂ ಜಗತಾಂ ಪ್ರಸೂತಿಂ
ನಮೋಽಸ್ತು ತುಭ್ಯಂ ಪ್ರಪಿತಾಮಹಾಯ ॥ ೧೦೨ ॥

ಸಂಸಾರಚಕ್ರಕ್ರಮಣೈರನೇಕೈಃ
ಕ್ವಚಿದ್ಭವಾನ್ದೇವವರಾದಿದೇವ ।
ಸನ್ಮಾರ್ಗವಿಜ್ಞಾನವಿಶುದ್ಧದೇಹೈ
ರುಪಾಸ್ಯಸೇ ಕಿಂ ಪ್ರಣಮಾಮ್ಯಹಂ ತ್ವಾಂ ॥ ೧೦೩ ॥

---

ಯಣ, ವಿಷ್ಣೋ, ಶಂಕರ, ಕ್ಷಿತೀಶ, ವಿಶ್ವೇಶ್ವರ, ವಿಶ್ವಲೋಚನ, ಚಂದ್ರಸೂರ್ಯ, ಅಚ್ಯುತ ಮುಂತಾದ ವೀರರಿಂದ ಕೂಡಿದ ಪ್ರಪಂಚಕ್ಕೆ ಕಾರಣನೇ ಅಮೃತದಂತಿರುವವನೇ, ಅವ್ಯಯನೇ, ಉರಿಯುತ್ತಿರುವ ಬೆಂಕಿಯಿಂದ ಕೂಡಿರುವ ಮಂಡಲವುಳ್ಳವನೇ ನಾರಾಯಣನೇ ವಿಶ್ವತೋಮುಖನೇ, ಕಾಪಾಡು. ದೇವತೆಗಳ ಕಷ್ಟಪರಿಹಾರಕನೇ, ಅಮೃತನೇ, ಅವ್ಯಯನೇ ! ಶರಣಾಗತನಾದ ನನ್ನನ್ನು ಕಾಪಾಡು.

೧೦೨. ಎಲೈ ವಿಭುವೇ ! ನಿನಗೆ ಬಹು ಮುಖಗಳಿವೆ. ಶುದ್ಧವಾದ ಗತಿಯುಳ್ಳವನು, ಬಹು ಹಳಬನು, ಬ್ರಹ್ಮನು, ಜಗತ್ತಿಗೆಲ್ಲಾ ಈಶ್ವರನು, ಜಗತ್ತಿಗೆಲ್ಲಾ ಉತ್ಪತ್ತಿಸ್ಥಾನನು. ಪಿತಾಮಹನು, ಇಂತಹವನಿಗೆ ನಮಸ್ಕಾರವು.

೧೦೩. ಈ ಸಂಸಾರವು ಹುಟ್ಟುವುದು ಸಾಯುವುದು ಈ ರೂಪವಾದುದು. ಇಂತಹ ಅನೇಕ ಸಂಸಾರಗಳಲ್ಲಿ ತೊಂದರೆಪಟ್ಟವರು ಸತ್ಪುರುಷರ ಮಾರ್ಗವನ್ನು ಹೊಂದಿ ಶುದ್ಧರಾಗುತ್ತಾರೆ. ಅಂತಹವರು ನಿನ್ನನ್ನು ನಮಸ್ಕಾರಮಾಡುವರು. ಅಂತಹ ದೇವದೇವನಾದ ನಿನ್ನನ್ನು ನಮಸ್ಕಾರಮಾಡಲು ನಾನೆಷ್ಟರವನು ?

ಏಕಂ ಭವಂತಂ ಪ್ರಕೃತೇಃ ಪರಸ್ತಾ
ದ್ಯೋವೇತ್ಯಸೌ ಸರ್ವವಿದಾಂ ವರಿಷ್ಠಃ ।
ಗುಣಾನ್ವಿತೇಷು ಪ್ರಸಭಂ ನಿವೇದ್ಯೋ
ವಿಶಾಲಮೂರ್ತಿಸ್ತ್ವಿಹ ಸೂಕ್ಷ್ಮಮೂರ್ತಿಃ ॥ ೧೦೪ ॥

ವಾಕ್ಪಾಣಿಪಾದೈರ್ವಿಗತೇಂದ್ರಿಯೋಽಪಿ
ಪದ್ಮೇ ಭವಾನ್ಭೋ ವಿಗತಿರ್ವಿಕರ್ಮಾ ।
ಸಂಸಾರವಾಂಸ್ತ್ವಂ ನಿಹತೇಂದ್ರಿಯೋಽಪಿ
ಪುನಃ ಕಥಂ ದೇವ ಕರೋಷಿ ಸೃಷ್ಟಿಂ ॥ ೧೦೫ ॥

ಮೂರ್ತಾದಮೂರ್ತಂ ನ ತು ಲಭ್ಯತೇ ಪರಂ
ಪರಂ ವಪುರ್ದೇವ ವಿಶುದ್ಧಭಾವೈಃ ।
ಸಂಸಾರವಿಚ್ಛಿತ್ತಿಕರೈರ್ಯಜದ್ಭಿ
ಸ್ತತೋ ವಿಗೀಯೇತ ಚತುರ್ಮುಖಸ್ತ್ವಂ ॥ ೧೦೬ ॥

ಪರಂ ನ ಜಾನಂತಿ ಯತೋ ವಪುಸ್ತೇ
ದೇವಾದಯಶ್ಚಾದ್ಭುತರೂಪಧಾರಿನ್
ವಿಭೋಽವತಾರೋಗ್ರತುಂ ಪುರಾಣ
ಮಾರಾಧಯೇಯುಃ ಕಮಲಾಸನಸ್ಥಂ ॥ ೧೦೭ ॥

---

೧೦೪. ಪ್ರಕೃತಿಗಿಂತ ಬೇರೆಯಾದವನಾದ, ಅದ್ವಿತೀಯನಾದ, ನಿನ್ನನ್ನು ತಿಳಿದವನೇ ಎಲ್ಲರಲ್ಲಿಯೂ ಶ್ರೇಷ್ಠನು. ನೀನು ವಿಶಾಲಮೂರ್ತಿಯಾದರೂ ಗುಣಗಳಲ್ಲಿ ಸೂಕ್ಷ್ಮರೀತಿಯಿಂದ ಇರುತ್ತೀಯೆ.

೧೦೫. ಮಾತು, ಕೈಕಾಲುಗಳು ಮುಂತಾದ ಇಂದ್ರಿಯಗಳು ನಿನಗಿಲ್ಲದಿದ್ದರೂ ನೀನು ಪದ್ಮದಲ್ಲಿ ಹುಟ್ಟಿದವನು, ನಡೆಯದವನು, ಕರ್ಮವಿಲ್ಲದವನು, ಇಂದ್ರಿಯಗಳಿಲ್ಲದಿದ್ದರೂ ನೀನು ಸಂಸಾರವಂತನು, ಹೀಗಿದ್ದರೂ ನೀನು ಸೃಷ್ಟಿಯನ್ನು ಮಾಡುವೆ.

೧೦೬. ಮೂರ್ತಿಯಾಗಿರುವ ಪದಾರ್ಥದಿಂದ ಮೂರ್ತಿಯಿಲ್ಲದ ಪದಾರ್ಥವು ಹುಟ್ಟುವುದಿಲ್ಲ. ಸಂಸಾರನಾಶಕರಗಳಾದ ಶುದ್ಧಭಾವದಿಂದ ಕೂಡಿದ ಜಗತ್ತು ಚತುರ್ಮುಖನಾದ ನಿನ್ನನ್ನು ಯಾವಾಗಲೂ ಹೊಗಳುತ್ತದೆ.

೧೦೭. ಅದ್ಭುತರೂಪವುಳ್ಳ ಬ್ರಹ್ಮನೇ ! ನಿನ್ನ ದೇಹವನ್ನು ದೇವಾದಿಗಳೂ ಕೂಡ ಸರಿಯಾಗಿ ತಿಳಿಯರು. ಎಲೈ ವಿಭುವೇ ! ಅವತಾರದಿಂದ ಉಗ್ರವಾದ ಶರೀರವುಳ್ಳ ಕಮಲಾಸನನಾದ ನಿನ್ನನ್ನು ಎಲ್ಲರೂ ಆರಾಧಿಸುವರು.

ನ ತೇ ತತ್ತ್ವಂ ವಿಶ್ವಸೃಜೋಽಪಿ ಯೋನಿ
ಮೇಕಾಂತತೋ ವೇತ್ತಿ ವಿಶುದ್ಧಭಾಯಃ ।
ಪರಂ ತ್ವಹಂ ವೇದ್ಮಿ ಕಥಂ ಪುರಾಣಂ
ಭವಂತಮಾದ್ಯಂ ತಪಸಾ ವಿಶುದ್ಧಂ ॥ ೧೦೮ ॥

ಪದ್ಮಾಸನೋ ವೈ ಜನಕಃ ಪ್ರಸಿದ್ಧಃ
ಏವಂ ಪ್ರಸೂತಿಹ್ಯಸಕೃತ್ಪುರಾಣೇ ।
ಸಂಚಿಂತ್ಯತೇ ನಾಥ ವಿಭುಂ ಭವಂತಂ
ಜಾನಾತಿ ನೈವಂ ತಪಸಾ ವಿಹೀನಾಃ ॥ ೧೦೯ ॥

ಅಸ್ಮಾದೃಶೈಶ್ಚ ಪ್ರವರೈರಬೋಧ್ಯಂ
ತ್ವಾಂ ದೇವ ಮೂರ್ಖಾಃ ಸ್ವಮತಿಂ ವಿಭಜ್ಯ ।
ಪ್ರಬೋದ್ಧುಮಿಚ್ಛನ್ತಿ ನ ತೇಷು ಬುದ್ಧಿ-
ರುದಾರಕೀರ್ತಿಷ್ವಪಿ ದೇವಹೀನಾಃ ॥ ೧೧೦ ॥

ಜನ್ಮಾಂತರೈರ್ವೇದವಿವೇಕಬುದ್ಧಿ
ರ್ಭವೇದ್ಯಥಾ ವಾ ಯದಿ ವಾ ಪ್ರಕಾಶಃ ।
ತಲ್ಲಾಭುಲುಬ್ಧಸ್ಯ ತು ಮಾನುಷತ್ವಂ
ನ ದೇವಗಂಧರ್ವಪತಿಃ ಶಿವಸ್ಸ್ಯಾತ್ ॥ ೧೧೧ ॥

---

೧೦೮. ಹಾಗೆ ಶುದ್ಧಭಾವವುಳ್ಳವನೂ ಕೂಡ ಪ್ರಪಂಚಕ್ಕೆ ಉತ್ಪತ್ತಿಕಾರಕನಾದ ನಿನ್ನ ತತ್ವವನ್ನು ಸರಿಯಾಗಿ ತಿಳಿಯನು, ತಪಸ್ಸಿನಿಂದ ಶುದ್ಧನಾದ ಆದಿಭೂತನಾದ, ಹಳಬನಾದ ನಿನ್ನನ್ನು ನಾನು ಹೇಗೆ ತಾನೆ ತಿಳಿಯಲಿ ?

೧೦೯. ಪ್ರಸಿದ್ಧನಾದ ಪದ್ಮಾಸನನು ಜಗತ್ತಿಗೆ ಸೃಷ್ಟಿಕರ್ತನು ಎಂದು ಪುರಾಣದಲ್ಲಿ ಹೇಳಿದೆ ಎಂದು ನಿನ್ನನ್ನೇ ಚಿಂತಿಸುತ್ತಾರೆ. ತಪಸ್ಸಿನಿಂದ ಹೀನನಾದವನು ನಿನ್ನನ್ನು ತಿಳಿಯಲಾರನು.

೧೧೦. ಎಲೈ ದೇವನೇ ! ಶ್ರೇಷ್ಠರಾದ ನಮ್ಮಂತಹವರಿಂದಲೇ ತಿಳಿಯಲು ಆಗದಿರತಕ್ಕ ನಿನ್ನನ್ನು ಮೂರ್ಖರು ತಮ್ಮ ಬುದ್ಧಿಯನ್ನು ಬೇರೆ ಬೇರೆ ಮಾರ್ಗದಲ್ಲಿ ತಿರುಗಿಸಿ ತಿಳಿಯಲು ಇಚ್ಛಿಸುತ್ತಾರೆ. ಅವರು ಉದಾರರೂ, ಕೀರ್ತಿಶಾಲಿಗಳೂ ಆದಾಗ್ಯೂ ಬುದ್ಧಿಯಿಲ್ಲದವರು ಹೀನರು.

೧೧೧. ಅನೇಕ ಜನ್ಮಗಳನ್ನು ಹೊಂದಿದರೂ ವೇದದಲ್ಲಿ ವಿವೇಕವಾದ ಬುದ್ಧಿಯು ಸ್ವಲ್ಪ ಪ್ರಕಾಶವಾದೀತೋ ಏನೋ ? ಅದು ಬಂದುದರಿಂದ ಮನುಷ್ಯನಾಗುವದು ಒಂದೇ ಅಲ್ಲ. ದೇವ ಗಂಧರ್ವರ ಪತಿಯಾದ ಶಿವನೇ ಆಗುವನು.

ನ ವಿಷ್ಣುರೂಪೋ ಭಗವಾನ್ಸುಸೂಕ್ಷ್ಮಃ ।
ಸ್ಥೂಲೋಽಸಿ ದೇವಃ ಕೃತಕೃತ್ಯತಾಯಾಃ ॥
ಸ್ಥೂಲೋಽಪಿ ಸೂಕ್ಷ್ಮಃ ಸುಲಭೋಽಸಿ ದೇವ ।
ತದ್ಬಾಹ್ಯಕೃತ್ಯಾ ನರಕೇ ಪತಂತಿ ॥ ೧೧೨ ॥

ಕ್ರಿಮಾಸ್ಯತೇ ವಾ ಭವತಿ ಸ್ಥಿರೇಽಸ್ಮಿ
ನ್ರವೀಂದುವಸ್ವರ್ಕಮರುನ್ಮಹೀಭಿಃ ।
ತತ್ತ್ವೈಸ್ಸ್ವರೂಪೈ ಸ್ಸಮಧೂಪಧಾರಿ-
ನ್ನಾತ್ಮಸ್ವರೂಪೇ ವಿತತಪ್ರಭಾವಃ ॥ ೧೧೩ ॥

ಇತಿ ಸ್ತುತಿಂ ಮೇ ಭಗವನ್ಹ್ಯನಂತ
ಜುಷಸ್ವ ಭಕ್ತಸ್ಯ ವಿಶೇಷತಶ್ಚ ।
ಸಮಾಧಿಯುಕ್ತಸ್ಯ ವಿಶುದ್ಧಚೇತಸ
ಸ್ತದ್ಭಾವಭಾವೈಕಮನೋಽನುಗಸ್ಯ ॥ ೧೧೪ ॥

---

೧೧೨. ಸ್ವಾಮಿಯೇ ! ನೀನು ಬೃಹದಾಕಾರವಿಲ್ಲದೆ ಸೂಕ್ಷ್ಮನೂ ಆಗಿದ್ದೀಯೆ. ಎಲ್ಲರೂ ತೃಪ್ತಿಪಡಲು ನೋಡುವುದಕ್ಕೆ ಕಣ್ಣಿಗೆಕಾಣುವ ಸ್ಥೂಲನೂ ಆಗಿದ್ದೀಯೆ. ಸ್ಥೂಲನೂ, ಸೂಕ್ಷ್ಮನೂ ಅಲ್ಲದಿದ್ದರೂ ಎಲ್ಲರಿಗೂ ಸುಲಭದಿಂದ ಸಿಕ್ಕುತ್ತೀಯೆ. ನಿನ್ನನ್ನು ನಂಬದೆ ಇರತಕ್ಕವರು ನರಕದಲ್ಲಿ ಬೀಳುತ್ತಾರೆ.

೧೧೩. ಎಲೈ ಸ್ವಾಮಿಯೇ ! ನೀನು ಇರುತ್ತಿರಲಾಗಿ ಸೂರ್ಯ, ಚಂದ್ರರು, ವ್ಯರ್ಥರು. ಸೂರ್ಯ, ಗಾಳಿ, ಭೂಮಿಯು ರೂಪಗಳಾದ ತತ್ವಗಳಿಗೆ ಸಮವಾದ ರೂಪ ವನ್ನು ಹೊಂದಿದ್ದೀಯೆ. ಇಂತಹ ನೀನು ಆತ್ಮ ಸ್ವರೂಪವನ್ನು ಹೆಚ್ಚು ಕಡಿಮೆ ಮಾಡಿಕೊಳ್ಳುವ ಶಕ್ತಿಯುಳ್ಳವನು.

೧೧೪. ಎಲೈ ಭಗವಂತನೇ ! ಈ ಸ್ತುತಿಯನ್ನು ನೀನು ಪರಿಗ್ರಹಿಸು. ನಾನು ಭಕ್ತನಾಗಿರುವುದರಿಂದ ಅತಿಶಯದಿಂದ ಪರಿಗ್ರಹಿಸು. ನಾನು ಸಮಾಧಿಯಿಂದ ಕೂಡಿದ್ದೇನೆ. ಶುದ್ಧವಾದ ಮನಸ್ಸುಳ್ಳವನಾಗಿದ್ದೇನೆ. ಮತ್ತು ನಿನ್ನಲ್ಲಿಯೇ ಅಭಿಪ್ರಾಯವನ್ನಿಟ್ಟಿದ್ದೇನೆ.

ಸದಾ ಹೃದಿಸ್ಥೋಽಸಿ ಭವನ್ನಪುಸ್ತೇ
ನ ಸರ್ವಗವ್ಯೋಽಸಿ ಪೃಥಗ್ವ್ಯವಸ್ಥಃ ।
ಅತಿ ಪ್ರಕಾಶಂ ಕೃತಮೇತಮೀಶ
ಸ್ತ್ವಮಂ ಮಯಾ ಸರ್ವಗತಂ ಹಿ ಬುದ್ಧ್ವಾ ॥ ೧೧೫ ॥

ಸಂಸಾರಚಕ್ರಕ್ರಮಣಾದಿ ಯುಕ್ತ್ಯಾ ।
ಭೀತಂ ಪುನರ್ಮಾಂ ಪ್ರತಿಪಾಲಯಸ್ವ ॥ ೧೧೬ ॥

॥ ಬ್ರಹ್ಮೋವಾಚ ॥

ಸರ್ವಜ್ಞಸ್ತ್ವಂ ನ ಸಂದೇಹೋ ಜ್ಞಾನರಾಶಿಶ್ಚ ಕೇಶವ ।
ದೇವಾನಾಂ ಪ್ರಥಮಃ ಪೂಜ್ಯಃ ಸರ್ವದಾ ತ್ವಂ ಭವಿಷ್ಯಸಿ ॥ ೧೧೭ ॥

ನಾರಾಯಣಾದನಂತಂ ತಂರುದ್ರೋ ಭಕ್ತ್ಯಾ ವಿರಿಂಚಿನಂ ।
ತುಷ್ಟಾವ ಪ್ರಣತೋ ಭೂತ್ವಾ ಬ್ರಹ್ಮಾಣಂ ಕಮಲೋದ್ಭವಂ ॥ ೧೧೮ ॥

ನಮಃ ಕಮಲಪತ್ರಾಕ್ಷ ನಮಸ್ತೇ ಭವಪದ್ಮಜ ।
ನಮಃ ಸುರಾಸುರಗುರೋ ಕಾರಿಣೇ ಪರಮಾತ್ಮನೇ ॥ ೧೧೯ ॥

---

೧೧೫-೧೧೬. ಎಲೈ ಭಗವಂತನೇ ! ನೀನು ಯಾವಾಗಲೂ ನನ್ನ ಹೃದಯದ ಲ್ಲಿದ್ದೀಯೆ, ಬೇರೆಯಾಗಿದ್ದಂತೆ ಕಾಣುತ್ತೀಯೆ, ಎಲ್ಲರಿಗೂ ಸಿಕ್ಕದಂತಿದ್ದೀಯೆ, ನೀನು ಎಲ್ಲಾ ಕಡೆಯಲ್ಲಿಯೂ ಇದ್ದೀಯೆ, ಎಂಬುದನ್ನು ತಿಳಿದು ಈ ಸ್ತೋತ್ರದಿಂದ ಪ್ರಕಾಶ ಮಾಡಿದ್ದೇನೆ. ಸಂಸಾರಚಕ್ರದಿಂದ ಸುತ್ತುತ್ತಿರುವ ಭಯಶೀಲನಾದ ನನ್ನನ್ನು ಕಾಪಾಡು.

೧೧೭. ಬ್ರಹ್ಮನು ಹೇಳಿದನು– ಎಲೈ ಕೇಶವನೇ ! ನೀನು ಸರ್ವಜ್ಞನು ಸಂದೇಹವಿಲ್ಲ. ಜ್ಞಾನದರಾಶಿಯು. ದೇವತೆಗಳಿಗೆ ನೀನು ಪೂಜ್ಯನು. ನೀನು ಯಾವಾಗಲೂ ಶಾಶ್ವತನಾಗಿ ಇದ್ದೀಯೆ.

೧೧೮. ಹೀಗೆ ನಾರಾಯಣನು ಸ್ತುತಿಸಿದ ಮೇಲೆ ರುದ್ರನು ಆ ಬ್ರಹ್ಮನನ್ನೇ ಸ್ತುತಿಸಿದನು.

೧೧೯-೧೨೦. ಕಮಲದ ಪತ್ರದಂತಿರುವ ಕಣ್ಣುಳ್ಳವನೇ ! ನಿನಗೆ ನಮಸ್ಕಾರವು, ಶಾಶ್ವತವಾದ ಪದ್ಮದಲ್ಲಿ ಹುಟ್ಟಿದ ನಿನಗೆ ನಮಸ್ಕಾರವು, ಸುರಾಸುರಗುರುವಾದ ನಿನಗೆ ನಮಸ್ಕಾರವು, ಪರಮಾತ್ಮನಾದ ನಿನಗೆ ನಮಸ್ಕಾರವು, ಸರ್ವದೇವೇಶನೂ

ನಮಸ್ತೇ ಸರ್ವದೇವೇಶ ನಮೋ ವೈ ಮೋಹನಾಶನ ।
ವಿಷ್ಣೋರ್ನಾಭ್ಯುತ್ಥಿತವತೇ ಕಮಲಾಸನ ಜನ್ಮನೇ ॥ ೧೨೦ ॥

ನಮೋ ವಿದ್ರುಮರಕ್ತಾಂಗಪಾಣಿಪಲ್ಲವಶೋಭಿನೇ ।
ಶರಣಂ ತ್ವಾಂ ಪ್ರಪನ್ನೋಽಸ್ಮಿ ತ್ರಾಹಿ ಮಾಂ ಭವಸಂಸೃತೇಃ ॥ ೧೨೧ ॥

ಪೂರ್ವಂ ನೀಲಾಂಬುದಾಕಾರಂ ಕುಡ್ಮಲಂ ತೇ ಪಿತಾಮಹ ।
ದೃಷ್ಟ್ವಾರಕ್ತಮುಖಂ ಭೂಯಃ ಪತ್ರಕೇಸರಸಂಯುತಂ ॥ ೧೨೨ ॥

ಪದ್ಮಂ ಚಾನೇಕಪತ್ರಾನ್ತಮಸಂಖ್ಯಾತಂ ನಿರಂಜನಂ ।
ತತ್ರ ಸ್ಥಿತೇನ ತ್ವಯ್ಯೇಷಾ ಸರ್ವಾ ಸೃಷ್ಟಿಃ ಪ್ರಕೀರ್ತಿತಾ ॥ ೧೨೩ ॥

ತ್ವಾಂ ಮುಕ್ತ್ವಾ ನಾನ್ಯತಸ್ತ್ರಾಣಂ ಜಗದ್ವಂದ್ಯ ನಮೋಽಸ್ತು ತೇ ।
ಸಾವಿತ್ರೀಶಾಪದಗ್ಧೋಽಹಂ ಲಿಂಗಂ ಮೇ ಪತಿತಂ ಕ್ಷಿತೌ ॥ ೧೨೪ ॥

---

ಮೋಹನಾಶಕನೂ ಆದ ನಿನಗೆ ನಮಸ್ಕಾರವು, ವಿಷ್ಣುವಿನ ನಾಭಿಯಲ್ಲಿ ಹುಟ್ಟಿದ ಕಮಲದಿಂದ ಹುಟ್ಟಿದ ನಿನಗೆ ನಮಸ್ಕಾರವು.

೧೨೧. ಹವಳದಂತೆ ಕೆಂಪಾಗಿರುವ ಕೈಗಳುಳ್ಳ ನಿನಗೆ ನಮಸ್ಕಾರವು ನಿನ್ನನ್ನು ಮರೆಹೊಕ್ಕಿದ್ದೇನೆ. ಸಂಸಾರದಿಂದ ನನ್ನನ್ನು ಕಾಪಾಡು.

೧೨೨–೧೨೩. ಮೊದಲು ನೀಲಾಕಾರವಾದ ಕಮಲದ ಮೊಗ್ಗು ಕಂಡುಬಂದಿತು. ಅನಂತರದಲ್ಲಿ ಮುಖಭಾಗದಲ್ಲಿ ಕೆಂಪಗೆ ಕಂಡಿತು. ಆಮೇಲೆ ಪತ್ರಕೇಸರಗಳಿಂದ ಕೂಡಿರುವಂತೆ ಕಂಡುಬಂದಿತು. ಮತ್ತೆ ಅನೇಕ ಪತ್ರಗಳು ಕಂಡುಬಂದುವು. ಆದರಲ್ಲಿ ನಿರಂಜನನಾದ ನೀನು ಆ ಪತ್ರದ ಒಳಗಿರುವುದನ್ನು ಕಂಡೆನು. ಆ ನಿನ್ನಿಂದ ಸೃಷ್ಟಿಯು ಸೃಷ್ಟಿಸಲ್ಪಟ್ಟಿತು.

೧೨೪. ಎಲೈ ಜಗದ್ವಂದ್ಯನೇ ! ನಿನಗೆ ನಮಸ್ಕಾರವು. ನಿನ್ನನ್ನು ಬಿಟ್ಟರೆ ನನಗೆ ಬೇರೆ ರಕ್ಷಣೆಯಿಲ್ಲ ಸಾವಿತ್ರಿಯ ಶಾಪದಿಂದ ಕಂಗೆಟ್ಟಿದ್ದೇನೆ. ನನ್ನ ಲಿಂಗವು ಭೂಮಿಯಲ್ಲಿ ಬಿದ್ದು ಹೋಗಿದೆ.

ಇದಾನೀಂ ಕುರು ಮೇ ಶಾಂತಿಂ ತ್ರಾಹಿ ಮಾಂ ಸಹ ಭಾರ್ಯಯಾ ।
ಬ್ರಹ್ಮಾ ವೈ ಪಾತು ಮೇ ಪಾದೌ ಜಂಘೇ ತು ಕಮಲಾಸನಃ ॥ ೧೩೫ ॥

ವಿರಿಂಚೋ ಮೇ ಕಟಿಂ ಪಾತು ಸೃಷ್ಟಿಕೃದ್ಗುಹ್ಯಮೇವ ತು ।
ನಾಭಿಂ ಪದ್ಮನಿಭಃ ಪಾತು ಜಠರಂ ಚತುರಾನನಃ ॥ ೧೩೬ ॥

ಉರಸ್ತು ವಿಶ್ವಸೃಟ್ಪಾತು ಹೃದಯಂ ಪಾತು ಪದ್ಮಜಃ ।
ಸಾವಿತ್ರೀಪತಿರ್ಮೇ ಕಂಠಂ ಹೃಷೀಕೇಶೋ ಮುಖಂ ಮಮ ॥ ೧೩೭ ॥

ಪದ್ಮವರ್ಣಸ್ತು ನಯನೇ ಪರಮಾತ್ಮಾ ಶಿರೋ ಮಮ ।
ಏವಂ ನ್ಯಸ್ಯ ಗುರೋರ್ನಾಮ ಶಂಕರೋ ಲೋಕಶಂಕರಃ ॥ ೧೩೮ ॥

ನಮಸ್ತೇ ಭಗವನ್ಬ್ರಹ್ಮನ್ನಿತ್ಯುಕ್ತ್ವಾ ವಿರರಾಮ ಹ ।
ತತಸ್ತುಷ್ಟೋ ಹರಂ ಬ್ರಹ್ಮಾ ವಾಕ್ಯಮೇತದುವಾಚ ಹ ॥ ೧೩೯ ॥

॥ ಬ್ರಹ್ಮೋವಾಚ ॥

ಕಂ ತೇ ಕಾಮಂ ಕರೋಮ್ಯದ್ಯ ಪೃಚ್ಛ ಮಾಂ ಯದ್ಯದಿಚ್ಛಸಿ । ॥ ೧೪೦ ॥

---

೧೩೫-೧೩೯. ಈಗ ನನಗೆ ಸಮಾಧಾನವನ್ನು ಮಾಡು ನಮ್ಮ ದಂಪತಿಗಳನ್ನು ಕಾಪಾಡು. ಬ್ರಹ್ಮನು ನನ್ನ ಕಾಲುಗಳನ್ನೂ, ಕಮಲಾಸನನು ನನ್ನ ಮುಂಡಿಗಳನ್ನೂ, ವಿರಿಂಚಿಯು ಸೊಂಟವನ್ನೂ, ಸೃಷ್ಟಿಕರ್ತನು ಗುಹ್ಯವನ್ನೂ, ಪದ್ಮನಾಭನು ನಾಭಿಯನ್ನೂ, ಚತುರಾನನನು ಜಠರವನ್ನೂ, ವಿಶ್ವಸೃಜನು ಉರಸ್ಸನ್ನೂ, ಪದ್ಮಜನು ಹೃದಯವನ್ನೂ, ಸಾವಿತ್ರೀಪತಿಯು ಕಂಠವನ್ನೂ, ಹೃಷಿಕೇಶನು ಮುಖವನ್ನೂ, ಪದ್ಮವರ್ಣನು ನಯನಗಳನ್ನೂ, ಪರಮಾತ್ಮನು ಶಿರಸ್ಸನ್ನೂ ಕಾಪಾಡಲಿ. ಈ ರೀತಿ ಶಂಕರನು ಗುರುವಿನ ಹೆಸರನ್ನು ಹೇಳಿ ಅಂಗನ್ಯಾಸ ಮಾಡಿಕೊಂಡನು. ಭಗವಂತನಾದ ಬ್ರಹ್ಮನೇ ! ನಿನಗೆ ನಮಸ್ಕಾರವು, ಎಂದು ಸುಮ್ಮನಾದನು. ಆಗ ಸಂತುಷ್ಟನಾದ ಬ್ರಹ್ಮನು ಇಂತೆಂದನು.

೧೪೦. ಬ್ರಹ್ಮನು ಹೇಳಿದನು– ನಿನಗೆ ಯಾವ ಇಷ್ಟಾರ್ಥವನ್ನು ಪೂರ್ತಿಮಾಡಲಿ ? ನಿನಗೆ ಬೇಕಾದುದನ್ನು ಈಗ ಕೇಳಿಕೋ ?

॥ ರುದ್ರ ಉವಾಚ ॥

ಯದಿ ಪ್ರಸನ್ನೋ ಮೇ ನಾಥ ವರಾರ್ಹೋಽ ಯದಿ ವಾ ಮತಃ ।
ತದೇಕಂ ಮೇ ವದ ವಿಭೋ ಯಸ್ಮಿನ್ ಸ್ಥಾನೇ ಭವಾನ್ಸ್ಥಿತಃ　॥ ೧೩೧ ॥

ಕೇಷು ಕೇಷು ಚ ಸ್ಥಾನೇಷು ತ್ವಾಂ ಪಶ್ಯಂತಿ ಸದಾ ದ್ವಿಜಾಃ ।
ನಾಮ್ನಾ ಚ ಕೇನ ತೇ ಸ್ಥಾನಂ ಶೋಭತೇ ಧರಣೀತಲೇ ।
ತನ್ಮೇ ವದಸ್ವ ದೇವೇಶ ತವ ಭಕ್ತಿರತಸ್ಯ ಚ　॥ ೧೩೨ ॥

॥ ಬ್ರಹ್ಮೋವಾಚ ॥

ಪುಷ್ಕರೇಽಹಂ ಸುರಶ್ರೇಷ್ಠೋ ಗಯಾಯಾಂ ಚ ಚತುರ್ಮುಖಃ ।
ಕಾನ್ಯಕುಬ್ಜೇ ದೇವಗರ್ಭೋ ಭೃಗುಕ್ಷೇತ್ರೇ ಪಿತಾಮಹಃ　॥ ೧೩೩ ॥

ಕಾವೇರ್ಯಾಂ ಸೃಷ್ಟಿಕರ್ತಾ ಚ ನಂದೀಪುರ್ಯಾಂ ಬೃಹಸ್ಪತಿಃ ।
ಪ್ರಭಾಸೇ ಪದ್ಮಜನ್ಮಾ ಚ ವಾನರ್ಯಾಂ ಚ ಸುರಪ್ರಿಯಃ　॥ ೧೩೪ ॥

ದ್ವಾರವತ್ಯಾಂ ತು ಋಗ್ವೇದೋ ವೈದಿಶೇ ಭುವನಾಧಿಪಃ ।
ಪೌಂಡ್ರಕೇ ಪುಂಡರೀಕಾಕ್ಷಃ ಪಿಂಗಾಕ್ಷೋ ಹಸ್ತಿನಾಪುರೇ　॥ ೧೩೫ ॥

---

೧೩೧. ರುದ್ರನು ಹೇಳಿದನು– ನೀನು ನನಗೆ ಪ್ರಸನ್ನನಾಗಿದ್ದರೆ ನಾನು ವರಾರ್ಹನಾಗಿದ್ದರೆ ನೀನು ಎಲ್ಲಿದ್ದೀಯೆ? ಎಂಬುದನ್ನು ನನಗೆ ತಿಳಿಸು.

೧೩೨. ಎಲೈ ಬ್ರಹ್ಮನೇ! ನಿನ್ನನ್ನು ಬ್ರಾಹ್ಮಣರು ಎಲ್ಲಿ ಎಲ್ಲಿ ನೋಡಬಹುದು? ಭೂಮಿಯಲ್ಲಿ ನೀನಿರುವ ಸ್ಥಾನದ ಹೆಸರೇನು? ನಿನ್ನಲ್ಲಿ ಭಕ್ತಿಯುಳ್ಳ ನನಗೆ ಅವೆಲ್ಲವನ್ನೂ ತಿಳಿಸು.

೧೩೩ ೧೩೬. ಬ್ರಹ್ಮನು ಹೇಳಿದನು—ಪುಷ್ಕರದಲ್ಲಿ ಸುರಶ್ರೇಷ್ಠನು, ಗಂಗೆಯಲ್ಲಿ ಚತುರ್ಮುಖನು, ಕಾನ್ಯಕುಬ್ಜದಲ್ಲಿ ದೇವಗರ್ಭನು, ಭೃಗುಕ್ಷೇತ್ರದಲ್ಲಿ ಪಿತಾಮಹನು, ಕಾವೇರಿಯಲ್ಲಿ ಸೃಷ್ಟಿಕರ್ತನು, ನದೀಪುರಿಯಲ್ಲಿ ಬೃಹಸ್ಪತಿ, ಪ್ರಭಾಸದಲ್ಲಿ ಪದ್ಮಜ, ವಾನರಿಯಲ್ಲಿ ಸುರಪ್ರಿಯ, ದ್ವಾರವತಿಯಲ್ಲಿ ಋಗ್ವೇದನು, ವೈದಿಶದಲ್ಲಿ ಭುವನಾಧಿಪ, ಪೌಂಡ್ರಕದಲ್ಲಿ ಪುಂಡರೀಕಾಕ್ಷ, ಹಸ್ತಿನಾಪುರದಲ್ಲಿ ಪಿಂಗಾಕ್ಷ, ಜಯಂತಿಯಲ್ಲಿ

ಜಯನ್ತ್ಯಾಂ ವಿಜಯಶ್ಚಾಸ್ಮಿ ಜಯನ್ತಃ ಪುಷ್ಕರಾವತೇ ।
ಉಗ್ರೇಷು ಪದ್ಮಹಸ್ತೋ ವೈ ಶ್ಯಾಮಲಾಯಾಂ ಭವೋರುದಃ ॥ ೧೩೬ ॥

ಅಹಿಚ್ಛತ್ರೇ ಜಯಾನಂದಃ ಕಾಂತಿಪುರ್ಯಾಂ ಜನಪ್ರಿಯಃ ।
ಬ್ರಹ್ಮಾಹಂ ಪಾಟಲೀಪುತ್ರೇ ಋಷಿಕುಂಡೇ ಮುನಿಸ್ತಥಾ ॥ ೧೩೭ ॥

ಮಹಿಳಾರೊಪ್ಯೇ ಕುಮುದಃ ಶ್ರೀಕಂಠಶ್ಶ್ರೀನಿಕೇತನೇ ।
ಕಾಮರೂಪೇ ಶುಭಾಕಾರೋ ವಾರಾಣಸ್ಯಾಂ ಶಿವಪ್ರಿಯಃ ॥ ೧೩೮ ॥

ಮಲ್ಲಿಕಾಖ್ಯೇ ತಥಾ ವಿಷ್ಣುರ್ಮಹೇಂದ್ರೇ ಭಾರ್ಗವಸ್ತಥಾ ।
ಗೋನರ್ದೇ ಸ್ಥವಿರಾಕಾರ ಉಜ್ಜಯಿನ್ಯಾಂ ಪಿತಾಮಹಃ ॥ ೧೩೯ ॥

ಕೌಶಾಂಬ್ಯಾಂ ತು ಮಹಾಬೋಧಿರಯೋಧ್ಯಾಯಾಂ ಚ ರಾಘವಃ ।
ಮುನೀಂದ್ರಶ್ಚಿತ್ರಕೂಟೇ ತು ವಾರಾಹೋ ವಿಂಧ್ಯಪರ್ವತೇ ॥ ೧೪೦ ॥

ಗಂಗಾದ್ವಾರೇ ಪರಮೇಷ್ಠೀ ಶಂಕರೋ ಹಿಮವತ್ಯಪಿ ।
ದೇವಿಕಾಯಾಂ ಸ್ರುಚಾಹಸ್ತಃ ಸ್ರುವಹಸ್ತಶ್ಚತುಷ್ಪಥೇ ॥ ೧೪೧ ॥

---

ವಿಜಯ, ಪುಷ್ಕರಾವತದಲ್ಲಿ ಜಯಂತ, ಉಗ್ರದಲ್ಲಿ ಉಗ್ರಹಸ್ತ, ಶ್ಯಾಮಲೆಯಲ್ಲಿ ಭವೋರುದವೆಂಬ ಹೆಸರಿನಿಂದ ನಾನು ಇರುತ್ತೇನೆ.

೧೩೭-೧೩೯. ಅಹಿಚ್ಛತ್ರದಲ್ಲಿ ಜಯಾನಂದ, ಕಾಂತಿಪುರಿಯಲ್ಲಿ ಜನಪ್ರಿಯ, ಪಾಟಲಿಪುತ್ರದಲ್ಲಿ ಬ್ರಹ್ಮ, ಋಷಿಕುಂಡದಲ್ಲಿ ಮುನಿ, ಮಹಿಳಾರೋಪ್ಯದಲ್ಲಿ ಕುಮುದ, ಶ್ರೀನಿಕೇತನದಲ್ಲಿ ಶ್ರೀಕಂಠ, ಕಾಮರೂಪದಲ್ಲಿ ಶುಭಾಕಾರ, ವಾರಾಣಸಿಯಲ್ಲಿ ಶಿವಪ್ರಿಯ, ಮಲ್ಲಿಕೆಯಲ್ಲಿ ವಿಷ್ಣು, ಮಹೇಂದ್ರದಲ್ಲಿ ಭಾರ್ಗವ, ಗೋನರ್ದದಲ್ಲಿ ಸ್ಥವಿರ, ಉಜ್ಜಯಿನಿಯಲ್ಲಿ ಪಿತಾಮಹನೆಂದೂ ಇರುತ್ತೇನೆ.

೧೪೦-೧೪೩. ಕೌಶಾಂಬಿಯಲ್ಲಿ ಮಹಾಬೋಧಿ, ಅಯೋಧ್ಯೆಯಲ್ಲಿ ರಾಘವ, ಚಿತ್ರಕೂಟದಲ್ಲಿ ಮುನೀಂದ್ರ, ವಿಂಧ್ಯಪರ್ವತದಲ್ಲಿ ವಾರಾಹ, ಗಂಗಾದ್ವಾರದಲ್ಲಿ ಪರಮೇಷ್ಠಿ, ಹಿಮವಂತನಲ್ಲಿ ಶಂಕರ, ದೇವಿಕೆಯಲ್ಲಿ ಸ್ರುಚಾಹಸ್ತ, ಚತುಷ್ಪಥದಲ್ಲಿ ಸ್ರುವ

ವೃಂದಾವನೇ ಪದ್ಮಪಾಣಿಃ ಕುಶಹಸ್ತಶ್ಚ ನೈಮಿಷೇ ।
ಗೋಪ್ಲಕ್ಷೇ ಚೈವ ಗೋಪೀಂದ್ರಃ ಸುಚಂದ್ರೋ ಯಮುನಾತಟೇ ॥ ೧೪೨ ॥

ಭಾಗೀರಥ್ಯಾಂ ಪದ್ಮತನುಃ ಜನಾನಂದೋ ಜನಸ್ಥಳೇ ।
ಕೌಂಕಣೇ ಚೈವ ಮುದ್ರಾಕ್ಷಃ ಕಾಂಪಿಲ್ಯೇ ಕನಕಪ್ರಿಯಃ ॥ ೧೪೩ ॥

ಖೇಟಕೇ ಚಾನ್ನದಾತಾ ಚ ಶಂಭುಶ್ಚೈವ ಕುಶಸ್ಥಳೇ ।
ಲಂಕಾಯಾಂ ತು ಪುಲಸ್ತ್ಯೋಽಹಂ ಕಾಶ್ಮೀರೇ ಹಂಸವಾಹನಃ ॥ ೧೪೪ ॥

ವಸಿಷ್ಠಶ್ಚಾರ್ಬುದೇ ಚೈವ ನಾರದಶ್ಚೋತ್ಪಲಾವತೇ ।
ಮೇಧಕೇ ಶ್ರುತಿದಾತಾಹಂ ಪ್ರಯಾಗೇ ಯಜುಷಾಂಪತಿಃ ॥ ೧೪೫ ॥

ಸಾಮವೇದಸ್ತಥಾ ಯಜ್ಞ ಮಧುರೇ ಮಧುರಪ್ರಿಯಃ ।
ಅಂಕೋಲಕೇ ಯಜ್ಞಗರ್ಭೋ ಬ್ರಹ್ಮವಾಹೇ ಸುತಪ್ರಿಯಃ ॥ ೧೪೬ ॥

ನಾರಾಯಣಶ್ಚ ಗೋಮಂತೇ ವಿದರ್ಭಾಯಾಂ ದ್ವಿಜಪ್ರಿಯಃ ।
ಋಷಿವೇದೇ ದುರಾಧರ್ಷಃ ಪಂಪಾಯಾಂ ಸುರಮರ್ದನಃ ॥ ೧೪೭ ॥

---

ಹಸ್ತ ವೃಂದಾವನದಲ್ಲಿ ಪದ್ಮಪಾಣಿ, ನೈಮಿಷದಲ್ಲಿ ಕುಶಹಸ್ತ, ಗೋಪ್ಲಕ್ಷದಲ್ಲಿ ಗೋಪೀಂದ್ರ, ಯಮುನಾತಟದಲ್ಲಿ ಸುಚಂದ್ರನೆಂಬ ಹೆಸರಿನಿಂದಿರುತ್ತೇನೆ.

೧೪೩–೧೪೭. ಭಾಗೀರಥಿಯಲ್ಲಿ ಪದ್ಮತನುವು, ಜನಸ್ಥಳದಲ್ಲಿ ಜನಾನಂದ, ಕೊಂಕಣದಲ್ಲಿ ಮುದ್ರಾಕ್ಷ, ಕಾಂಪಿಲ್ಯದಲ್ಲಿ ಕನಕಪ್ರಿಯ, ಖೇಟಕದಲ್ಲಿ ಅನ್ನದಾತ, ಕುಶಸ್ಥಳದಲ್ಲಿ ಶಂಭು, ಲಂಕೆಯಲ್ಲಿ ಪುಲಸ್ತ್ಯ, ಕಾಶ್ಮೀರದಲ್ಲಿ ಹಂಸವಾಹನ. ಅರ್ಬುದದಲ್ಲಿ ವಸಿಷ್ಠ, ಉತ್ಪಲಾವತದಲ್ಲಿ ನಾರದ, ಮೇಧಕದಲ್ಲಿ ಶ್ರುತಿದಾತ, ಪ್ರಯಾಗದಲ್ಲಿ ಯಜುಷಾಂಪತಿ, ಯಜ್ಞದಲ್ಲಿ ಸಾಮವೇದ, ಮಧುರದಲ್ಲಿ ಮಧುರಪ್ರಿಯ, ಅಂಕೋಲಕದಲ್ಲಿ ಯಜ್ಞಗರ್ಭ, ಬ್ರಹ್ಮವಾಹದಲ್ಲಿ ಸುತಪ್ರಿಯ, ಗೋಮಂತದಲ್ಲಿ ನಾರಾಯಣ, ವಿದರ್ಭದಲ್ಲಿ ದ್ವಿಜಪ್ರಿಯ, ಋಷಿವೇದದಲ್ಲಿ ದುರಾಧರ್ಷ, ಪಂಪೆಯಲ್ಲಿ ಸುರಮರ್ದನನೆಂಬ ಹೆಸರಿನಿಂದಿದ್ದೇನೆ.

ವಿರಜಾಯಾಂ ಮಹಾರೂಪಃ ಸುರೂಪೋ ರಾಷ್ಟ್ರವರ್ಧನೇ ।
ಪೃಥೂದರಸ್ತು ಮಾಳವ್ಯಾಂ ಶಾಕಂಭರ್ಯಾಂ ರಸಪ್ರಿಯಃ ॥ ೧೪೮ ॥

ಪಿಂಡಾರಕೇತು ಗೋಪಾಲಃ ಶುಷ್ಕಂಧೋ ಭಗವರ್ಧನೇ ।
ಕಾದಂಬಕೇ ಪ್ರಜಾಧ್ಯಕ್ಷೋ ದೇವಾಧ್ಯಕ್ಷಃ ಸಮಸ್ಥಳೇ ॥ ೧೪೯ ॥

ಗಂಗಾಧರೋ ಭದ್ರಪೀಠೇ ಸುಪೀಠೇ ಜಲಮಾಲಿಕಃ ।
ತ್ರ್ಯಂಬಕೇ ತ್ರಿಪುರಾಧೀಶಃ ಶ್ರೀಪರ್ವತೇ ತ್ರಿಲೋಚನಃ ॥ ೧೫೦ ॥

ಮಹಾದೇವಃ ಪದ್ಮಪುರೇ ಕಲಾಪೇ ವೈಧಸಸ್ತಥಾ ।
ಶೃಂಗವೇರಪುರೇ ಶೌರಿರ್ನೈಮಿಷೇ ಚಕ್ರಪಾಣಿಕಃ ॥ ೧೫೧ ॥

ದಂಡಪುರ್ಯಾಂ ವಿರೂಪಾಕ್ಷೋ ಗೋತಮೋ ಧೂತಪಾತಕೇ ।
ಹಂಸನಾಥೋ ಮಾಲ್ಯವತಿ ದ್ವಿಜೇಂದ್ರೋ ವಾಲಿಕೇ ತಥಾ ॥ ೧೫೨ ॥

ಇಂದುಪುರ್ಯಾಂ ದೇವನಾಥೋ ಧೂತಾಷಾಢ್ಯಾಂ ಧುರಂಧರಃ ।
ಹಂಸವಾಹಸ್ತು ಲಂಬಾಯಾಂ ಚಂಡಾಯಾಂ ಗರುಡಪ್ರಿಯಃ ॥ ೧೫೩ ॥

---

೧೪೮-೧೫೧. ವಿರಜೆಯಲ್ಲಿ ಮಹಾರೂಪನು, ರಾಷ್ಟ್ರವರ್ಧನದಲ್ಲಿ ಸುರೂಪನು, ಮಾಳವಿಯಲ್ಲಿ ಪೃಥೂದರನು, ಶಾಕಂಭರಿಯಲ್ಲಿ ರಸಪ್ರಿಯನು, ಪಿಂಡಾರಕದಲ್ಲಿ ಗೋಪಾಲ, ಭೋಗವರ್ಧದಲ್ಲಿ ಶುಷ್ಕಂಧನು, ಕಾದಂಬಕದಲ್ಲಿ ಪ್ರಜಾಧ್ಯಕ್ಷನು, ಸಮಸ್ಥಳದಲ್ಲಿ ದೇವಾಧ್ಯಕ್ಷ, ಭದ್ರಪೀಠದಲ್ಲಿ ಗಂಗಾಧರ, ಸುಪೀಠಕದಲ್ಲಿ ಜಲಮಾಲಿಕ, ತ್ರ್ಯಂಬಕದಲ್ಲಿ ತ್ರಿಪುರಾಧೀಶ, ಶ್ರೀಪರ್ವತದಲ್ಲಿ ತ್ರಿಲೋಚನ, ಪದ್ಮಪುರದಲ್ಲಿ ಮಹಾದೇವ, ಕಲಾಪದಲ್ಲಿ ವೈಧಸ, ಶೃಂಗವೇರಪುರದಲ್ಲಿ ಶೌರಿ, ನೈಮಿಷದಲ್ಲಿ ಚಕ್ರಪಾಣಿ ಎಂಬ ಹೆಸರಿನಿಂದ ಇದ್ದೇನೆ.

೧೫೨-೧೫೮. ದಂಡಪುರಿಯಲ್ಲಿ ವಿರೂಪಾಕ್ಷನು, ಧೂತಪಾತಕದಲ್ಲಿ ಗೌತಮ, ಮಾಲ್ಯವಂತದಲ್ಲಿ ಹಂಸನಾಥ, ವಾಲಿಕೆಯಲ್ಲಿ ದ್ವಿಜೇಂದ್ರ, ಇಂದುಪುರಿಯಲ್ಲಿ ದೇವನಾಥ, ಧೂತಾಷಾಢಿಯಲ್ಲಿ ಧುರಂಧರನು, ಲಂಬೆಯಲ್ಲಿ ಹಂಸವಾಹ, ಚಂಡೆಯಲ್ಲಿ

ಮಹೋದಯೇ ಮಹಾಯಜ್ಞಃ ಸುಯಜ್ಞೋ ಯೂಪಕೇತನೇ ।
ಸಿದ್ಧೇಶ್ವರಃ ಪದ್ಮವನೇ ವಿಭಾಯಾಂ ಪದ್ಮಬೋಧನಃ ॥ ೧೫೪ ॥

ದೇವದಾರುವನೇ ಲಿಂಗ ಉದಕ್ಪಥ ಉಮಾಪತಿಃ ।
ವಿನಾಯಕೋ ಮಾತೃಸ್ಥಾನೇ ಅಲಕಾಯಾಂ ಧನಾಧಿಪಃ ॥ ೧೫೫ ॥

ತ್ರಿಕೂಟೇ ಚೈವ ಗೋವರ್ಧನಃ ಪಾತಾಳೇ ವಾಸುಕಿಸ್ತಥಾ ।
ಪದ್ಮಾಧ್ಯಕ್ಷಶ್ಚ ಕೇದಾರೇ ಕುಷ್ಮಾಂಡೇ ಸುರತಪ್ರಿಯಃ ॥ ೧೫೬ ॥

ಭೂತವಾಪ್ಯಾಂ ಶುಭಾಂಗಸ್ತು ಸಾವಳ್ಯಾಂ ಭಷಕಸ್ತಥಾ ।
ಅಕ್ಷರೇ ಪಾಪಹಾ ಚೈವ ಅಂಬಿಕಾಯಾಂ ಸುದರ್ಶನಃ ॥ ೧೫೭ ॥

ವರದಾಯಾಂ ಮಹಾವೀರಃ ಕಾಂತಾರೇ ದುರ್ಗನಾಶನಃ ।
ಅನಂತಶ್ಚೈವ ಪೂರ್ಣಾದೇ ಪ್ರಕಾಶಾಯಾಂ ದಿವಾಕರಃ ॥ ೧೫೮ ॥

ವಿರಜಾಯಾಂ ಪದ್ಮನಾಭೋ ಸುವೃದ್ಧಶ್ಚ ವೃಕಸ್ಥಳೇ ।
ಮಾರ್ತಂಡೋ ವಟಕೇ ಚೈವ ರೋಹಿಣ್ಯಾಂ ನಾಗಕೇತನಃ ॥ ೧೫೯ ॥

ಪದ್ಮಾವತ್ಯಾಂ ಪದ್ಮಗೃಹೋ ಗಗನೇ ಪದ್ಮಕೇತನಃ ।
ಅಷ್ಟೋತ್ತರಂ ಸ್ಥಾನಶತಂ ಮಯಾ ತೇ ಪರಿಕೀರ್ತಿತಂ ॥ ೧೬೦ ॥

---

ಗರುಡಪ್ರಿಯ, ಮಹೋದಯದಲ್ಲಿ ಮಹಾಯಜ್ಞ, ಯೂಪಕೇತನದಲ್ಲಿ ಸುಯಜ್ಞ, ಪದ್ಮವನದಲ್ಲಿ ಸಿದ್ಧೇಶ್ವರ, ವಿಭೆಯಲ್ಲಿ ಪದ್ಮಬೋಧನ. ದೇವದಾರುವನದಲ್ಲಿ ಲಿಂಗ, ಉದಕಿಯಲ್ಲಿ ಉಮಾಪತಿ, ಮಾತೃಸ್ಥಾನದಲ್ಲಿ ವಿನಾಯಕ, ಅಲಕೆಯಲ್ಲಿ ಧನಾಧಿಪ. ತ್ರಿಕೂಟದಲ್ಲಿ ಗೋವರ್ಧ, ಪಾತಾಳದಲ್ಲಿ ವಾಸುಕಿ, ಕೇದಾರದಲ್ಲಿ ಪದ್ಮಾಧ್ಯಕ್ಷ, ಕೂಷ್ಮಾಂಡದಲ್ಲಿ ಸುರತಪ್ರಿಯನು

೧೫೭-೧೬೦. ಭೂತವಾಪಿಯಲ್ಲಿ ಶುಭಾಂಗನು, ಸಾವಳಿಯಲ್ಲಿ ಭಷಕನು, ಅಕ್ಷರದಲ್ಲಿ ಪಾಪಹಾ, ಅಂಬಿಕೆಯಲ್ಲಿ ಸುದರ್ಶನ, ವರದೆಯಲ್ಲಿ ಮಹಾವೀರ, ಕಾಂತಾರದಲ್ಲಿ ದುರ್ಗನಾಶನ, ಪೂರ್ಣಾದದಲ್ಲಿ ಅನಂತ, ಪ್ರಕಾಶೆಯಲ್ಲಿ ದಿವಾಕರ. ವಿರಜೆಯಲ್ಲಿ ಪದ್ಮನಾಭ, ವೃಕಸ್ಥಳದಲ್ಲಿ ಸುವೃದ್ಧ, ವಟಕದಲ್ಲಿ ಮಾರ್ತಂಡ, ರೋಹಿಣಿಯಲ್ಲಿ ನಾಗಕೇತನ, ಪದ್ಮಾವತಿಯಲ್ಲಿ ಪದ್ಮಗೃಹ, ಗಗನದಲ್ಲಿ ಪದ್ಮಕೇತನನು. ಈ ರೀತಿಯಾಗಿ ನೂರೆಂಟು ಸ್ಥಾನಗಳಲ್ಲಿ ನೂರೆಂಟು ಹೆಸರುಗಳನ್ನು ಹೇಳಿರುವೆನು.

ಯತ್ರ ವೈ ಮಮ ಸಾನ್ನಿಧ್ಯಂ ತ್ರಿಸಂಧ್ಯಂ ತ್ರಿಪುರಾಂತಕೇ ।
ಏತೇಷಾಮಪಿ ಯಸ್ತ್ವೇಕಂ ಪಶ್ಯತೇ ಭಕ್ತಿಮಾನ್ನರಃ ॥ ೧೬೧ ॥

ಸ್ಥಾನಂ ಸ ವಿಮಲಂ ಲಬ್ಧ್ವಾ ಮೋದತೇ ಶಾಶ್ವತೀಸ್ಸಮಾಃ ।
ಮಾನಸಂ ವಾಚಿಕಂ ಚೈವ ಕಾಯಿಕಂ ಯಚ್ಚ ದುಷ್ಕೃತಂ ॥ ೧೬೨ ॥

ತತ್ಸರ್ವಂ ನಾಶಮಾಯಾತಿ ನಾತ್ರ ಕಾರ್ಯಾ ವಿಚಾರಣಾ ।
ಯಸ್ತ್ವೇತಾನಿ ಚ ಸರ್ವಾಣಿ ಗತ್ವಾ ಮಾಂ ಪಶ್ಯತೇ ನರಃ ॥ ೧೬೩ ॥

ಭವತೇ ಮೋಕ್ಷಗಾಮೀ ಚ ಯತ್ರಾಹಂ ತತ್ರ ವೈ ಸ್ಥಿತಃ ।
ಪುಷ್ಪೋಪಹಾರೈರ್ಧೂಪೈಶ್ಚ ಬ್ರಾಹ್ಮಣಾನಾಂ ಚ ತರ್ಪಣೈಃ ॥ ೧೬೪ ॥

ಧ್ಯಾನೇನ ಚ ಸ್ಥಿರೇಣಾಶು ಪ್ರಾಪ್ಸ್ಯತೇ ಪರಮೇಶ್ವರಂ ।
ತಸ್ಯ ಪುಣ್ಯಫಲಂ ಚಾಗ್ರ್ಯಮನ್ತೇ ಮೋಕ್ಷಫಲಂ ತಥಾ ॥ ೧೬೫ ॥

ಸ ಬ್ರಹ್ಮಲೋಕಮಾಸಾದ್ಯ ತತ್ಕಾಲಂ ತತ್ರ ತಿಷ್ಠತಿ ।
ಪುನಸ್ಸೃಷ್ಟೌ ಭವೇದ್ದೇವೋ ವೈರಾಜಾನಾಂ ಮಹಾತಪಾಃ ॥ ೧೬೬ ॥

---

೧೬೧-೧೬೫. ಎಲ್ಲೆ ತ್ರಿಪುರಾಂತಕನೇ, ಮೂರು ಕಾಲಗಳಲ್ಲಿಯೂ ಎಲ್ಲಿ ನನ್ನ ಸಾನ್ನಿಧ್ಯವಿರುವುದೋ ಅಂತಹ ಈ ಸ್ಥಳದಲ್ಲಿ ಒಂದರಲ್ಲಿಯಾದರೂ ಭಕ್ತಿಯಿಂದ ನೋಡಿದರೆ ಉತ್ತಮ ಸ್ಥಾನವನ್ನು ಹೊಂದಿ ಅಲ್ಲಿ ಅನೇಕ ಕಾಲಗಳು ಸುಖಿಸುತ್ತಾರೆ. ಮನೋವಾಕ್ಕಾಯಗಳ ಕರ್ಮಗಳು ಯಾವುವಿದ್ದರೂ, ಅವೆಲ್ಲವೂ ನಾಶವಾಗುತ್ತವೆ, ಸಂಶಯವಿಲ್ಲ. ಯಾವನು ಈ ಸ್ಥಳಗಳಿಗೆಲ್ಲಾ ಹೋಗಿ ನನ್ನ ದರ್ಶನ ಮಾಡುತ್ತಾನೋ ಅವನು ಮೋಕ್ಷವನ್ನು ಹೊಂದಿ ನಾನಿರುವ ಜಾಗದಲ್ಲಿ ಇರುತ್ತಾನೆ. ಹೂವು, ಧೂಪ, ಬ್ರಾಹ್ಮಣ ಸಂತರ್ಪಣೆ ಧ್ಯಾನ ಇವುಗಳಿಂದ ಪರಮೇಶ್ವರನನ್ನು ಹೊಂದು ಅವನಿಗೆ ಬಹುವಾದ ಪುಣ್ಯಫಲವುಂಟು. ಅದೇ ರೀತಿ ಮೋಕ್ಷಫಲವೂ ಹೆಚ್ಚು.

೧೬೬. ಅವನು ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನಿರುವಷ್ಟು ಕಾಲವು ಅಲ್ಲಿರುತ್ತಾನೆ. ಮತ್ತೆ ಸೃಷ್ಟಿಯಾಗುವಾಗ ದೇವನಾಗಿ ವೈರಾಜದಲ್ಲಿ ಮಹಾ ತಪಸ್ವಿಯಾಗುತ್ತಾನೆ.

ಬ್ರಹ್ಮಹತ್ಯಾದಿ ಪಾಪಾನಿ ಇಹ ಲೋಕೇ ಕೃತಾನ್ಯಪಿ ।
ಅಕಾಮತಃ ಕಾಮತೋ ವಾ ತಾನಿ ನಶ್ಯಂತಿ ತತ್ಕ್ಷಣಾತ್ ॥ ೧೬೭ ॥

ಇಹಲೋಕೇ ದರಿದ್ರೋ ಯೋ ಭ್ರಷ್ಟರಾಜ್ಯೋಽಥವಾ ಪುನಃ ।
ಸ್ಥಾನೇಷ್ವೇತೇಷು ವೈ ಗತ್ವಾ ಮಾಂ ಪಶ್ಯತಿ ಸಮಾಧಿನಾ ॥ ೧೬೮ ॥

ಕೃತ್ವಾ ಪೂಜೋಪಹಾರಂ ಚ ಸ್ನಾನಂ ಚ ವಿಧಿಪೂರ್ವಕಂ ।
ಕೃತ್ವಾ ಪಿಂಡಪ್ರದಾನಂ ಚ ಸೋಽಚಿರಾದ್ದುಃಖವರ್ಜಿತಃ ॥ ೧೬೯ ॥

ಏಕಚ್ಛತ್ರೋ ಭವೇದ್ರಾಜಾ ಸತ್ಯಮೇತನ್ನ ಸಂಶಯಃ ।
ಇಹಜನ್ಮನಿ ಸೌಭಾಗ್ಯಂ ಧನಧಾನ್ಯಂ ವರಸ್ತ್ರಿಯಃ ॥ ೧೭೦ ॥

ಭವಂತಿ ವಿವಿಧಾಸ್ತೇಷಾಂ ಯೈರ್ಯಾತ್ರಾ ಪುಷ್ಕರೇ ಕೃತಾ ।
ಇದಂ ಯಾತ್ರಾವಿಧಾನಂ ಯಃ ಕುರುತೇ ಕಾರಯೇತ ವಾ ॥ ೧೭೧ ॥

ಶೃಣೋತಿ ವಾ ಸ ಪಾಪೈಸ್ತು ಸರ್ವೈರೇವ ಪ್ರಮುಚ್ಯತೇ ।
ಅಗಮ್ಯಾಗಮನಂ ಯೇನ ಕೃತಂ ಜಾನಾತಿ ಮಾನವಃ ॥ ೧೭೨ ॥

ಬ್ರಹ್ಮಕ್ರಿಯಾಯಾ ಲೋಪೇನ ಬಹುವರ್ಷಕೃತೇನ ಚ ।
ಯಾತ್ರಾಂ ಚೇಮಾಂ ಸಕೃತ್ಕೃತ್ವಾ ವೇದಸಂಸ್ಕಾರಮಾಪ್ನುಯಾತ್ ॥೧೭೩॥

---

೧೬೭. ಈ ಲೋಕದಲ್ಲಿ ಮನಸ್ಸಿದ್ದು ಆಗಲಿ ಮನಸ್ಸಿಲ್ಲದೆ ಆಗಲಿ ಮಾಡಿದ ಬ್ರಹ್ಮಹತ್ಯಾದಿ ಪಾಪಗಳು ಒಡನೆಯೇ ನಾಶಹೊಂದುತ್ತದೆ

೧೬೮-೧೭೩. ಈ ಲೋಕದಲ್ಲಿ ದರಿದ್ರನಾದವನು ಅಥವಾ ರಾಜ್ಯವನ್ನು ಕಳೆದುಕೊಂಡವನು ಈ ಜಾಗಗಳಿಗೆ ಹೋಗಿ ಏಕಚಿತ್ತದಿಂದ ನನ್ನ ದರ್ಶನವನ್ನು ಮಾಡಿ ವಿಧಿವತ್ತಾಗಿ ಸ್ನಾನಮಾಡಿ ಪೂಜೆಮಾಡಿ ಪಿಂಡಪ್ರದಾನಗಳನ್ನು ಮಾಡಿದರೆ ದುಃಖವನ್ನು ಕಳೆದುಕೊಂಡು ಚಕ್ರವರ್ತಿಯಾಗುತ್ತಾನೆ ಪುಷ್ಕರದ ಯಾತ್ರೆಯನ್ನು ಮಾಡಿದರೆ ಇಹದಲ್ಲಿ ಸೌಖ್ಯವನ್ನೂ ಧನಧಾನ್ಯಗಳನ್ನೂ, ಉತ್ತಮ ಸ್ತ್ರೀಯರನ್ನೂ ಅನೇಕ ಬಗೆಯಲ್ಲಿ ಹೊಂದುತ್ತಾನೆ. ಈ ಯಾತ್ರೆಯನ್ನು ಮಾಡಿದರೂ ಸರಿ, ಮಾಡಿಸಿದರೂ ಸರಿ, ಕೇಳಿಸಿದರೂ ಸರಿ, ಅವನು ಸರ್ವ ಪಾಪಗಳಿಂದ ಬಿಡಲ್ಪಡುತ್ತಾನೆ. ಯಾವನು ಅಗಮ್ಯಾಗಮನವನ್ನು ಮಾಡುತ್ತಾನೋ ಬಹುವರ್ಷಗಳವರೆಗೆ ಬ್ರಾಹ್ಮಣ ಕ್ರಿಯೆಯನ್ನು ಮಾಡದೆ ಲೋಪ ಹೊಂದಿರುತ್ತಾನೋ ಅವನು ಈ ಯಾತ್ರೆಯನ್ನು ಮಾಡಿದರೆ ವೇದದಲ್ಲಿ ಹೇಳಿರುವ ಸಂಸ್ಕಾರವನ್ನು ಹೊಂದಿದಂತಾಗುತ್ತಾನೆ

ಕಿಮತ್ರ ಬಹುನೋಕ್ತೇನ ಇದಮಸ್ತೀಹ ಶಂಕರ ।
ಅಪ್ರಾಪ್ಯಂ ಪ್ರಾಪ್ಯತೇ ತೇನ ಪಾಪಂ ಚಾಪಿ ವಿನಶ್ಯತಿ ॥ ೧೭೪ ॥

ಸರ್ವಯಜ್ಞಫಲೈಸ್ತುಲ್ಯಂ ಸರ್ವತೀರ್ಥಫಲಪ್ರದಂ ।
ಸರ್ವೇಷಾಂ ಚೈವ ವೇದಾನಾಂ ಸಮಾಪ್ತಿಸ್ತೇನ ವೈ ಕೃತಾ ॥ ೧೭೫ ॥

ಯೈಃ ಕೃತಾ ಪುಷ್ಕರೇ ಸಂಧ್ಯಾ ಸಾವಿತ್ರೀ ಸಮುಪಾಸಿತಾ ।
ಸ್ವಪತ್ನೀ ಹಸ್ತದತ್ತೇನ ಪೌಷ್ಕರೇಣ ಜಲೇನ ತು ॥ ೧೭೬ ॥

ಭೃಂಗಾರಕೇಣ ಕರಕೇಣ ಮೃಣ್ಮಯೇನಾಪಿ ಶಂಕರ ।
ಆನೀಯ ತಜ್ಜಲಂ ಪುಣ್ಯಂ ಸಂಧ್ಯೋಪಾಸ್ತಿರ್ದಿನಕ್ಷಯೇ ॥ ೧೭೭ ॥

ಸಮಾಧಿನಾ ಸಮಾಧೇಯಾ ಸಾ ಪ್ರಾಣಾಯಾಮಪೂರ್ವಿಕಾ ।
ತಸ್ಯಾಂ ಕೃತಾಯಾಂ ಯತ್ಪುಣ್ಯಂ ತಚ್ಛೃಣುಷ್ವ ಹರಾದ್ಯ ವೈ ॥ ೧೭೮ ॥

ತೇನ ದ್ವಾದಶವರ್ಷಾಣಿ ಭವೇತ್ಸಂಧ್ಯಾ ತು ವಂದಿತಾ ।
ಅಶ್ವಮೇಧಫಲಂ ಸ್ನಾನೇ ದಾನೇ ದಶಗುಣಂ ಭವೇತ್ ॥ ೧೭೯ ॥

---

೧೭೪. ಎಲೈ ಶಂಕರನೇ! ಬಹಳವಾಗಿ ಹೇಳಿದುದರಿಂದೇನು? ಇದು ಈ ರೀತಿಯಾದುದು. ಸಿಕ್ಕದಿರುವುದನ್ನೂ ಹೊಂದಬಹುದು. ಪಾಪವೆಲ್ಲವೂ ನಾಶವಾಗುತ್ತದೆ.

೧೭೫. ಸರ್ವಯಜ್ಞಫಲದೊಡನೆ ಸಮವು. ಸರ್ವತೀರ್ಥಗಳ ಫಲವನ್ನು ಕೊಡುತ್ತದೆ. ಸರ್ವವೇದಗಳನ್ನು ಓದಿ ಮುಗಿಸಿದ ಫಲವು ಸಿಕ್ಕುತ್ತದೆ.

೧೭೬-೧೭೮. ಯಾರು ಪುಷ್ಕರದಲ್ಲಿ ಸಂಧ್ಯಾವಂದನೆಯನ್ನೂ, ಸಾವಿತ್ರಿಯ ಪುನಶ್ಚರಣೆಯನ್ನೂ, ಕಮಂಡಲುವಿನಿಂದಾಗಲೀ, ಮಣ್ಣು ಮಡಕೆಯಿಂದಾಗಲಿ ಆದರ ನೀರನ್ನು ತಂದು ಹೆಂಡತಿಯು ಕೈಯ್ಯಿಂದ ಆ ನೀರನ್ನು ಹಾಕಿಸಿಕೊಂಡು ಮಾಡುತ್ತಾರೋ, ಅಂಥವರಿಗೆ ಆದರಿಂದ ಬರುವ ಪುಣ್ಯವನ್ನು ಹೇಳುತ್ತೇನೆ ಕೇಳು.

೧೭೯–೧೮೧. ಅವನು ಹನ್ನೆರಡು ವರ್ಷಗಳ ಕಾಲ ಸಂಧ್ಯಾವಂದನೆಯನ್ನು ಮಾಡಿದಂತಾಗುತ್ತದೆ. ಸ್ನಾನಮಾಡಿದರೆ ಅಶ್ವಮೇಧದ ಫಲವು ಬರುತ್ತದೆ. ದಾನ ಮಾಡಿದರೆ ಅಶ್ವಮೇಧದ ಹತ್ತರಷ್ಟು ಫಲವು ಬರುತ್ತದೆ. ಉಪವಾಸ ಮಾಡಿದರೆ

ಉಪವಾಸೇ ಹ್ಯನಂತಂ ಚ ಸ್ವಯಂ ಪ್ರೋಕ್ತಂ ಮಯಾನಘ ।
ಸಾವಿತ್ರ್ಯಾಃ ಪುರತೋ ಯಸ್ತು ದಂಪತ್ಯೋರ್ಭೋಜನಂ ದದೇತ್ ॥ ೧೮೦ ॥

ತೇನಾಹಂ ಭೋಜಿತಸ್ತತ್ರ ಭವಾಮೀಹ ನ ಸಂಶಯ ।
ದ್ವಿತೀಯಂ ಭೋಜಯೇದ್ಯಸ್ತು ಭೋಜಿತಸ್ತೇನ ಕೇಶವಃ ॥ ೧೮೧ ॥

ಲಕ್ಷ್ಮೀಸಹಾಯೋ ವರದೋ ವರಾಂಸ್ತಸ್ಯ ಪ್ರಯಚ್ಛತಿ ।
ಉಮಾಸಹಾಯಸ್ತೃತೀಯೆ ಭೋಜಿತೋಸಿ ನ ಸಂಶಯಃ ॥ ೧೮೨ ॥

ಅಥವಾ ಯಾ ರೀಣಾಂ ಭಕ್ತ್ಯಾ ಕುರ್ಯಾತ್ತು ಭೋಜನಂ ।
ತಸ್ಯಾಃ ಕುಲೇ ಭವೇದ್ವಂಧ್ಯಾ ನ ಕದಾಚಿಚ್ಚ ದುರ್ಭಗಾ ॥ ೧೮೩ ॥

ನ ಕನ್ಯಾ ಜನನೀ ಕ್ವಾಪಿ ನ ಭರ್ತುರ್ಯಾ ನ ವಲ್ಲಿಭಾ ।
ತಸ್ಮಾತ್ಸರ್ವಪ್ರಯತ್ನೇನ ಸಾವಿತ್ರ್ಯಗ್ರೇ ತು ಭೋಜನಂ ॥ ೧೮೪ ॥

ಪಾರತ್ರಮೈಹಿಕಂ ಚಾಪಿ ಕಾಮಯದ್ಭಿರ್ನರೈಸ್ಸದಾ ।
ದಾತವ್ಯಂ ಸರ್ವದಾ ಭೀಷ್ಮ ಕಟುತೈಲವಿವರ್ಜಿತಂ ॥ ೧೮೫ ॥

---

ಅನಂತ ಫಲವು ಬರುತ್ತದೆ. ನಾನೇ ಹೇಳಿದ್ದೇನೆ. ಸಾವಿತ್ರಿಯ ಮುಂದೆ ದಂಪತಿಗಳಿಗೆ ಭೋಜನ ಮಾಡಿಸಿದರೆ ಅವನು ನನಗೆ ಭೋಜನ ಮಾಡಿಸಿದಂತಾಗುತ್ತದೆ. ಸಂಶಯವಿಲ್ಲ. ಮತ್ತೂ ಒಂದು ದಂಪತಿಗೆ ಅನ್ನ ಹಾಕಿದರೆ ಕೇಶವನನ್ನು ಭೋಜಿಸಿದಂತಾಗುತ್ತದೆ.

೧೮೨. ಅವನಿಗೆ ಲಕ್ಷ್ಮೀ ಸಹಾಯನಾದ ವಿಷ್ಣುವು ವರಗಳನ್ನು ಕೊಡುವನು ತದಿಗೆಯ ದಿವಸ ದಂಪತಿಗಳನ್ನು ಊಟ ಮಾಡಿಸಿದರೆ ಉಮಾಮಹೇಶ್ವರರು ಊಟ ಮಾಡಿದಂತಾಗುತ್ತದೆ.

೧೮೩. ಅದಿಲ್ಲದಿದ್ದರೆ ಯಾರು ಕುಮಾರಿಯರಿಗೆ ಭಕ್ತಿಯಿಂದ ಅನ್ನ ಹಾಕುವರೋ ಅವನ ವಂಶದಲ್ಲಿ ಬಂಜೆಯರಾಗುವುದೇ ಇಲ್ಲ.

೧೮೪–೧೮೫. ಎಲ್ಲರೂ ಗಂಡು ಮಕ್ಕಳನ್ನೇ ಹೆರುತ್ತಾರೆ. ಗಂಡನಿಗೆ ಪ್ರಿಯರಾಗಿರುತ್ತಾರೆ. ಆದ್ದರಿಂದ ಸರ್ವ ಪ್ರಯತ್ನದಿಂದಲೂ ಸಾವಿತ್ರಿಯ ಮುಂದೆ ಭೋಜನ ಮಾಡಿಸುವಿಕೆಯನ್ನು, ಇಹ ಪರಗಳನ್ನು ಅಪೇಕ್ಷಿಸುವವರು ಮಾಡಬೇಕು. ಆ ಊಟವು ಕಾರ ಎಣ್ಣೆಗಳಿಲ್ಲದೇ ಇರಬೇಕು

ನಚಾಮ್ಲಂ ನ ಚ ವೈ ಕ್ಷಾರಂ ಸ್ತ್ರೀಣಾಂ ಭೋಜ್ಯಂ ಕದಾಚನ ।
ಪಂಚಪ್ರಕಾರಂ ಮಧುರಂ ಹೃದ್ಯಂ ಸರ್ವಸುಸಂಸ್ಕೃತಂ ॥ ೧೮೬ ॥

ಘೃತಪೂರ್ಣಂ ಸುಪಕ್ವಂ ಚ ಬಹುಕ್ಷೀರಸಮನ್ವಿತಂ ।
ಪೂಪಕಾಸ್ತಾದೃಶಾಃ ಕಾರ್ಯಾ ದ್ವಿತೀಯಾಽಶೋಕವರ್ತಿಕಾ ॥ ೧೮೭ ॥

ತೃತೀಯಾಪೂರಿಕಾ ಕಾರ್ಯಾ ಖರ್ಜೂರೇಣ ಸುಪೂರಿತಾ ।
ಚತುರ್ಥಶ್ಚೈವ ಸಂಯಾವೋ ಘೃತಗುಡಸಮನ್ವಿತಃ ॥ ೧೮೮ ॥

ಶಿಖರಿಣೀ ಪಂಚಮೀ ಚ ದಧಿಕ್ಷೀರಸಮನ್ವಿತಾ ।
ಆಹ್ಲಾದಕಾರಿಣೀ ಪುಂಸಾಂ ಸ್ತ್ರೀಣಾಂ ಚಾತೀವ ವಲ್ಲಭಾ ॥ ೧೮೯ ॥

ಧನಧಾನ್ಯಂ ಜನೋಪೇತಂ ನಾರೀನರಶತಾಕುಲಂ ।
ಪೂಪಕೈಶ್ಶಷ್ಕುಲೈಸ್ತಸ್ಯಾ ಜಾಯತೇ ನಾತ್ರ ಸಂಶಯಃ ॥ ೧೯೦ ॥

---

೧೮೬–೧೮೭. ಕುಮಾರಿಯರಿಗೆ ಹುಳಿ ಕಾರಗಳನ್ನು ಹಾಕಿದ ಪದಾರ್ಥಗಳನ್ನೂ ಊಟ ಮಾಡಿಸಬಾರದು. ಸಿಹಿಯಾದ ಪದಾರ್ಥವನ್ನು ಐದು ಬಗೆಯಾಗಿಯೂ, ಚೆನ್ನಾಗಿಯೂ ಇರುವಂತೆ ಮಾಡಬೇಕು. ಅವನ್ನು ತುಪ್ಪದಲ್ಲಿ ಬೇಯಿಸಿರಬೇಕು. ಚೆನ್ನಾಗಿ ಬೆಂದಿರಬೇಕು. ಇವು ಒಂದು ಬಗೆಯವು ಹಾಲನ್ನು ಚೆನ್ನಾಗಿ ಹಾಕಿ ಅವುಗಳಿಂದ ಒಂದು ಬಗೆಯ ಪೂರಿಯನ್ನು ಮಾಡಿರಬೇಕು. ಇದು ಎರಡನೆಯದು.

೧೮೮. ಒಳಗೆ ಖರ್ಜೂರವನ್ನು ಹಾಕಿ ಪೂರಿಗಳನ್ನು ಮಾಡಬೇಕು. ಇದು ಮೂರನೆಯ ಬಗೆ. ಬೆಲ್ಲ ತುಪ್ಪಗಳನ್ನು ಹಾಕಿ ನಾಲ್ಕನೇ ಮತ್ತೊಂದು ಬಗೆಯನ್ನು ಮಾಡಿರಬೇಕು.

೧೮೯. ಮೊಸರು ಹಾಲುಗಳಿಂದ-ಕೂಡಿದುದು ಐದನೆಯ ಬಗೆಯದು ಇದಕ್ಕೆ ಶಿಖರಿಣಿ ಎಂದು ಹೆಸರು, ಇದು ಗಂಡಸರಿಗೆ ಆಹ್ಲಾದವನ್ನುಂಟುಮಾಡುತ್ತದೆ. ಹೆಂಗಸರಿಗೆ ಬಹುವಾಗಿ ಪ್ರಿಯವಾದುದು.

೧೯೦. ಈ ಪೂರಿ, ಹೋಳಿಗೆಗಳನ್ನೂ, ಚಕ್ಕುಲಿಗಳನ್ನೂ ಮಾಡಿ ಬಡಿಸಿದರೆ ಅವನಿಗೆ ಧನಧಾನ್ಯಗಳು ಹೆಚ್ಚಿ ಮನೆಯಲ್ಲಿ ಜನರೂ ಹೆಚ್ಚಿ ಬಹು ವೃದ್ಧಿಯಾಗುವುದರಲ್ಲಿ ಕೊಂಚವೂ ಸಂದೇಹವಿಲ್ಲ.

ನ ಜ್ವರೋ ನ ಚ ಸಂತಾಪೋ ನ ದುಃಖಂ ನ ವಿಯೋಗಿತಾ ।
ಅಸೌ ಪೂರಯತೇ ಸ್ವಾನಾಂ ಕುಲಾನಾಮೇಕವಿಶಂತಿಂ ॥ ೧೯೧ ॥

ಬಂಧುಭಿಸ್ಸಸುತೈಶ್ಚಾಪಿ ದಾಸೀದಾಸ್ಯೈರನಂತಕೈಃ ।
ಪೂರಿತಂ ಚ ಕುಲಂ ತಸ್ಯಾಃ ಪೂರಿಕಾಂ ಯಾ ಪ್ರದಾಸ್ಯತಿ ॥ ೧೯೨ ॥

ಏಧತೇ ಸುಚಿರಂ ಕಾಲಂ ಪುತ್ರಪೌತ್ರಸಮನ್ವಿತಂ ।
ಕುಲಂ ಸ ಬಾಂಧವಂ ತಸ್ಯಾಃ ಸಂಯಾವಂ ಯಾ ಪ್ರಯಚ್ಛತಿ ॥ ೧೯೩ ॥

ಪುತ್ರಿಣ್ಯೋ ವೈ ದುಹಿತರೋ ಬಂಧುಭಿಸ್ಸಹಿತಾಃ ಕುಲೇ ।
ಶಿಖರಿಣೀ ಪ್ರದಾತ್ರೀಣಾಂ ಯುವತೀನಾಂ ನ ಸಂಶಯಃ ॥ ೧೯೪ ॥

ಮೋದತೇ ತು ಕುಲಂ ತಸ್ಯಾಃ ಸರ್ವರ್ಧಿಪರಿಪೂರಿತಂ ।
ಮೋದಕಾನಾಂ ಪ್ರದಾನೇನ ಏವಮಾಹ ಪ್ರಜಾಪತಿಃ ॥ ೧೯೫ ॥

ಏತದೇವ ತು ಗೌರೀಣಾಂ ಭೋಜನಂ ಹರ ಶಸ್ಯತೇ ।
ಸುಭಗಾ ಪುತ್ರಿಣೀ ಸಾಧ್ವೀ ಧನಧಾನ್ಯಸಮನ್ವಿತಾ ॥ ೧೯೬ ॥

---

೧೯೧. ಅವನಿಗೆ ಜ್ವರವಾಗಲಿ, ಸಂತಾಪವಾಗಲಿ, ದುಃಖವಾಗಲಿ, ಅಗಲುವಿಕೆಯಾಗಲಿ, ಉಂಟಾಗುವುದಿಲ್ಲ. ಇವನು ತನ್ನ ಜೊತೆಯ ಇಪ್ಪತ್ತೊಂದು ತಲೆಗಳನ್ನು ಉದ್ಧಾರಮಾಡುತ್ತಾನೆ.

೧೯೨. ಬಂಧುಗಳೂ, ಮಕ್ಕಳು, ದಾಸರು, ದಾಸಿಯರು, ಇವರುಗಳು ಈ ಪೂರಿಯನ್ನು ದಾನಮಾಡುವುದರಿಂದ ಇವನ ಮನೆಯಲ್ಲಿ ಹೆಚ್ಚುತ್ತಾರೆ.

೧೯೩. ಸಂಯಾವವನ್ನು ದಾನಮಾಡಿದರೆ ಮಕ್ಕಳು ಮುಮ್ಮಕ್ಕಳು ಬಂಧುಗಳೊಡನೆ ಇವನ ಕುಲವು ಬಹುಕಾಲ ವೃದ್ಧಿಹೊಂದುತ್ತದೆ.

೧೯೪. ಶಿಖರಿಣಿಯನ್ನು ದಾನಮಾಡಿದರೆ ಅವರು ಮಕ್ಕಳೊಂದಿಗರಾಗಿ ಹೆಣ್ಣುಮಕ್ಕಳೂ, ಅವರ ಮಕ್ಕಳೂ, ಬಂಧುಗಳೂ, ಅವರ ವಂಶದಲ್ಲಿ ಹೆಚ್ಚುತ್ತಾರ,

೧೯೫. ಮೋದಕ (ಕಡುಬು) ಗಳನ್ನೂ ಕೊಡುವುದರಿಂದ ಅವನ ವಂಶವು ಎಲ್ಲಾ ಸಮೃದ್ಧಿಗಳಿಂದಲೂ, ಕೂಡಿ ಸುಖಿಸುತ್ತಾನೆ ಎಂದು ಬ್ರಹ್ಮನು ಹೇಳಿದ್ದಾನೆ.

೧೯೬–೨೦೩. ಇದೇನೆ ಗೌರಿ ಎಂಬ ಚಿಕ್ಕ ಹೆಣ್ಣುಮಕ್ಕಳಿಗೆ ಭೋಜನವು ಯೋಗ್ಯವಾದುದು. ಹೀಗೆ ಮಾಡಿದರೆ ಅವಳು ಸುಂದರಿಯಾಗಿಯೂ, ಸಾಧ್ವಿಯಾಗಿಯೂ, ಧನಧಾನ್ಯಗಳಿಂದ ಕೂಡಿದವಳಾಗಿಯೂ, ಸಾವಿರಾರು ಜನಗಳಿಗೆ ಊಟ

ಸಹಸ್ರಭೋಜಿನೀ ಶಂಭೋ ಜನ್ಮ ಜನ್ಮ ಭವಿಷ್ಯತಿ ।
ಪಾನಾನಿ ಚೈವ ಮುಖ್ಯಾನಿ ಹೃದ್ಯಾನಿ ಮಧುರಾಣಿ ಚ ॥ ೧೯೭ ॥

ದ್ರಾಕ್ಷಾಪಾನಂ ತಥಾನ್ಯೇಷಾಂ ಗುಡಖಂಡಸಮನ್ವಿತಂ ।
ಸಾರಸ್ವತೇನ ತೋಯೇನ ಕೃತ್ವಾ ಖಂಡಂ ನರೈಃ ಶುಭಂ ॥ ೧೯೮ ॥

ಸುವಾಸಿನೀನಾಂ ಪೇಯಾನಿ ದಾತವ್ಯಾನಿ ದ್ವಿಜನ್ಮನಾಂ ।
ಇತರೈರಿತರಾಸಾನಾಂ ವರ್ಣಯೋಗ್ಯಾನಿ ಯಾನಿ ಚ ॥ ೧೯೯ ॥

ಮದ್ಯಾನಿ ಚೈವ ಪೇಯಾನಿ ತಾಸು ಯೋಗ್ಯಾನಿ ದಾಪಯೇತ್ ।
ಪ್ರತಿಪೂಜ್ಯ ವಿಧಾನೇನ ವಸ್ತ್ರದಾನೈಸ್ಸಕಂಚುಕೈಃ ॥ ೨೦೦ ॥

ಕುಂಕುಮೇನ ವಿಲಿಪ್ತಾಂಗೀಃ ಸ್ರಗ್ದಾಮಾಭಿರಲಂಕೃತಾಃ ।
ದತ್ವಾ ಉಪಾನಹೌ ರಕ್ತೇ ನಾರಿಕೇರಂ ತಥಾ ಕರೇ ॥ ೨೦೧ ॥

ಅಕ್ಷ್ಣೋಶ್ಚೈವಾಂಜನಂ ದತ್ವಾ ಸಿಂದೂರಂ ಚೈವ ಮಸ್ತಕೇ ।
ಪೂಗೀಫಲಾನಿ ಹೃದ್ಯಾನಿ ವಾಸಿತಾನಿ ಮೃದೂನಿ ಚ ॥ ೨೦೨ ॥

---

ಮಾಡಿಸುವವಳಾಗಿಯೂ, ಜನ್ಮ ಜನ್ಮಕ್ಕೂ ಆಗುತ್ತಾಳೆ. ಚೆನ್ನಾಗಿಯೂ, ಮಧುರವಾಗಿಯೂ, ಇರುವ ಪಾನಗಳು ಮುಖ್ಯಗಳು. ದ್ರಾಕ್ಷಾಪಾನ ಮತ್ತು ಸರಸ್ವತೀನದಿಯ ನೀರಿನಿಂದ ಮಾಡಿದ ಪಾನಕವು ಇವು ಉತ್ತಮವಾದುವು. ಈ ನದಿಯ ನೀರಿನಿಂದ ಮಂಜುಗಡ್ಡೆಯನ್ನು ಮಾಡಿ ಬ್ರಾಹ್ಮಣರಿಗೂ, ಸುವಾಸಿನಿಯರಿಗೂ ಕೊಡಬೇಕು. ಆಯಾಯ ವರ್ಣದವರು ಅವರವರ ಜಾತಿಗೆ ಯೋಗ್ಯವಾದ ಪಾನಗಳನ್ನು ಎಂದರೆ ಮದ್ಯವೇ ಮುಂತಾದುವನ್ನು ಕೊಡಬೇಕು. ಆ ಹೆಂಗಸರನ್ನು ವಿಧಿವತ್ತಾಗಿ ಪೂಜಿಸಬೇಕು. ಶೀರೆ ಕುಪ್ಪಸಗಳನ್ನೂ, ಕೊಡಬೇಕು. ಮೈಗೆಲ್ಲಾ ಕುಂಕುಮವನ್ನೂ ಬಳಿಯಬೇಕು. ಹೂಹಾರವನ್ನು ಹಾಕಬೇಕು. ಕೆಂಪಾದ ಕೆರಗಳನ್ನು ಕೊಡಬೇಕು. ಕೈಗೆ ತೆಂಗಿನಕಾಯನ್ನು ಕೊಡಬೇಕು. ಕಣ್ಣಿಗೆ ಕಾಡಿಗೆಯನ್ನು ಹಚ್ಚಿ ಮುಂದಲೆಗೆ ಚಂದ್ರವನ್ನು ಹಚ್ಚಬೇಕು. ಉತ್ತಮವಾದ ಮೃದುವಾದ ವಾಸನೆ ಕಟ್ಟಿರುವ ಅಡಕೆಯನ್ನು ಎಲೆಯಲ್ಲಿ ಒಂದು ತಟ್ಟೆಯಲ್ಲಿಟ್ಟು ತಟ್ಟೆಯ ಸಹಿತವಾಗಿ ಕೊಟ್ಟು ಕಳುಹಿಸ

ಹಸ್ತೇ ದತ್ವಾ ಸಪಾತ್ರಾಣಿ ಪ್ರಣಿಪತ್ಯ ವಿಸರ್ಜಯೇತ್ ।
ಸ್ವಯಂ ಭುಂಜೀತ ವೈ ಪಶ್ಚಾತ್ಸಬಂಧುರ್ಬಾಲಕೈಸ್ಸಹ ॥ ೨೦೩ ॥

ಅಥವಾ ನೈವ ಸಂಪತ್ತಿಸ್ತೀರ್ಥೇ ದಾತುಂ ಚ ಭೋಜನಂ ।
ಗೃಹೇ ಗತಸ್ತು ದಾಸ್ಯಾಮಿ ತುಷ್ಟೋ ದೇವ ಭವಸ್ವ ಮೇ ॥ ೨೦೪ ॥

ಏವಮೇವ ಪಿತೃಣಾಂ ಚ ಆಗತ್ಯ ಸ್ವೇ ಚ ಮಂದಿರೇ ।
ಪಿಂಡಪ್ರದಾನಪೂರ್ವಂ ತು ಶ್ರಾದ್ಧಂ ಕುರ್ಯಾದ್ವಿಧಾನತಃ ॥ ೨೦೫ ॥

ಪಿತರಸ್ತಸ್ಯ ವೈ ತೃಪ್ತಾ ಭವಂತಿ ಬ್ರಹ್ಮಣೋ ದಿನಂ ।
ತೀರ್ಥಾದಷ್ಟಗುಣಂ ಪುಣ್ಯಂ ಸ್ವಗೃಹೇ ದದತಾಂ ಶಿವ ॥ ೨೦೬ ॥

ನ ಚ ಪಶ್ಯಂತಿ ವೈ ನೀಚಾಃ ಶ್ರಾದ್ಧಂ ದತ್ತಾಂ ದ್ವಿಜಾತಿಭಿಃ ।
ಏಕಾಂತೇ ತು ಗೃಹೇ ಗುಪ್ತೇ ಪಿತೃಣಾಂ ಶ್ರಾದ್ಧಮಿಷ್ಯತೇ ॥ ೨೦೭ ॥

ನೀಚ ದೃಷ್ಟ್ಯಾಹತಂ ತಚ್ಚ ಪಿತೃಣಂ ನೋಪತಿಷ್ಠತೇ ।
ತಸ್ಮಾತ್ಸರ್ವಪ್ರಯತ್ನೇನ ಶ್ರಾದ್ಧಂ ಗುಪ್ತಂ ಚ ಕಾರಯೇತ್ ॥ ೨೦೮ ॥

---

ಬೇಕು ಅನಂತರ ಹುಡುಗರು ಮಕ್ಕಳೊಡನೆಯೂ, ಬಂಧುಗಳೊಡನೆಯೂ, ಊಟ ಮಾಡಬೇಕು.

೨೦೪. ತೀರ್ಥದಲ್ಲಿ ಅನ್ನ ಹಾಕುವಷ್ಟು ಶಕ್ತಿಯಿಲ್ಲದಿದ್ದರೆ ಮನೆಗೆ ಹೋಗಿ ಅನ್ನ ಹಾಕುತ್ತೇನೆ ತೃಪ್ತನಾಗು, ಎಂದು ಸ್ವಾಮಿಯನ್ನು ಪ್ರಾರ್ಥಿಸಬೇಕು.

೨೦೫-೨೦೬. ಇದೇ ರೀತಿ ಮನೆಗೆ ಬಂದ ಮೇಲೆ ಪಿತೃಗಳಿಗೆ ಪಿಂಡವನ್ನು ಹಾಕಿ ಕ್ರಮದಿಂದ ಶ್ರಾದ್ಧವನ್ನು ಮಾಡಬೇಕು. ಹೀಗೆ ಮಾಡಿದರೆ ಆತನ ಪಿತೃಗಳು ಬ್ರಹ್ಮನ ಒಂದು ದಿನದವರೆಗೂ ತೃಪ್ತರಾಗಿರುತ್ತಾರೆ. ಮನೆಯಲ್ಲಿ ಶ್ರಾದ್ಧಮಾಡಿದರೆ ತೀರ್ಥಕ್ಕಿಂತಲೂ ಎಂಟರಷ್ಟು ಪುಣ್ಯ ಹೆಚ್ಚಾಗಿ ಬರುತ್ತದೆ.

೨೦೭-೨೧೧. ಅಯೋಗ್ಯರು, ಬ್ರಾಹ್ಮಣರು ಮಾಡುವ ಶ್ರಾದ್ಧವನ್ನು ನೋಡಬಾರದು. ಆದ್ದರಿಂದ ಶ್ರಾದ್ಧವನ್ನು ಯಾರೂ ಕಾಣದಂತೆ ಮಾಡಬೇಕು. ಹಾಗೆ ಮಾಡಿದರೆ ಪಿತೃಗಳಿಗೆ ತೃಪ್ತಿಯಾಗುತ್ತದೆಂದು ಬ್ರಹ್ಮನು ಹೇಳಿದ್ದಾನೆ. ಗೌರಿಯಲ್ಲಿ ಭಕ್ತಿಯುಳ್ಳವರಿಗೆ ಹೀಗೆ ಕೊಡಬೇಕು. ಅಥವಾ ವಿಷಯವನ್ನು ತಿಳಿದಿರುವವರಿಗೆ

ಪಿತೄಣಾಂ ತೃಪ್ತಿದಂ ಪ್ರೋಕ್ತಂ ಸ್ವಯಮೇವ ಸ್ವಯಂಭುವಾ ।
ಗೌರೀಭಕ್ತ್ಯಧಿಕಾ ಯಾ ತು ಶಸ್ತಾ ಜ್ಞಾತಕ್ರಿಯಾ ತು ಯಾ ॥ ೨೦೯ ॥

ರಾಜಸೀ ಸಾ ಸಮಾಖ್ಯಾತಾ ಜನಾನಾಂ ಕೀರ್ತಿದಾಯಿನೀ ।
ಗುಪ್ತದಾನಂ ಸದಾ ದೇಯಮಾತ್ಮನೋ ಹಿತಮಿಚ್ಛತಾ ॥ ೨೧೦ ॥

ಪಕ್ವಾನ್ನಂ ದೃಶ್ಯತಾಮೇತಿ ದೀಯಮಾನಂ ಜನೈರ್ಭುವಿ ।
ದೃಶ್ಯದಾನಂ ತು ತತ್ತುಷ್ಟ್ಯೈ ಭವತೇ ನೇಹ ಕರ್ಹಿಚಿತ್ ॥ ೨೧೧ ॥

ಏಕಸ್ಮಿನ್ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ।
ಭವನೇ ನಾತ್ರ ಸಂದೇಹೋ ಸತ್ಯಂ ಪೌರಾಣಿಕಂ ವಚಃ ॥ ೨೧೨ ॥

ತೀರ್ಥೇಷು ಬ್ರಾಹ್ಮಣಂ ನೈವ ಪರೀಕ್ಷೇತ ಕಥಂಚನ ।
ಅನ್ನಾರ್ಥಿನಮನುಪ್ರಾಪ್ತಂ ಭೋಜ್ಯಂ ತಂ ಮನುರಬ್ರವೀತ್ ॥ ೨೧೩ ॥

ಸಕ್ತುಭಿಃ ಪಿಂಡದಾನಂ ಚ ಸಂಯಾವೈಃ ಪಾಯಸೇನ ವಾ ।
ಕರ್ತವ್ಯಮೃಷಿಭಿರ್ದೃಷ್ಟಂ ಪಿಣ್ಯಾಕೇನೆಂಗುದೇನ ಚ ॥ ೨೧೪ ॥

---

ಕೊಡುವುದು ಉತ್ತಮವಾದುದು. ರಾಜಸೀದಾನವೆನ್ನಿಸಿಕೊಳ್ಳುತ್ತದೆ. ಜನಗಳಿಗೆ ಕೀರ್ತಿಯನ್ನೂ ಉಂಟುಮಾಡುತ್ತದೆ. ಹಿತಕಾಂಕ್ಷಿಯಾದವನು ಯಾವಾಗಲೂ ಗುಟ್ಟಾಗಿ ದಾನವನ್ನು ಕೊಡಬೇಕು. ಪಕ್ವಮಾಡಿದ ಅನ್ನವು ಎಲ್ಲರ ಕಣ್ಣಿಗೂ ದಾನ ಮಾಡುವಾಗ ಕಾಣುತ್ತದೆ. ಅಂತಹ ಎಲ್ಲರ ಕಣ್ಣಿಗೂ ಕಾಣುವ ದಾನವು ಆ ಗೌರಿಗೆ ತೃಪ್ತಿಕರವಾಗುವುದೇ ಇಲ್ಲ.

೨೧೨. ಮನೆಯಲ್ಲಿ ಗುಟ್ಟಾಗಿ ಒಬ್ಬ ಬ್ರಾಹ್ಮಣನಿಗೆ ಭೋಜನಮಾಡಿಸಿದರೆ ಕೋಟಿ ಜನಕ್ಕೆ ಅನ್ನ ಹಾಕಿದ ಫಲ ಬರುತ್ತದೆ. ಪುರಾಣದಲ್ಲಿ ಹೇಳಿರುವುದು ನಿಜ.

೨೧೩. ತೀರ್ಥಗಳಲ್ಲಿ ಬಂದ ಬ್ರಾಹ್ಮಣನನ್ನು ಪರೀಕ್ಷೆಮಾಡಬಾರದು. ಅನ್ನಕ್ಕೋಸ್ಕರ ಬಂದವನನ್ನು ಊಟಮಾಡಿಸಬೇಕೆಂದು ಮನುವು ಹೇಳಿದ್ದಾನೆ.

೨೧೪-೨೧೬. ಹಿಟ್ಟಿನಲ್ಲಿ ಉಂಡೆಯನ್ನು ಮಾಡಿ ಪಿಂಡ ಹಾಕಬೇಕು. ಅಥವಾ ಯವದಿಂದ ಬೇಕಾದರೂ ಹಾಕಬಹುದು. ಪಾಯಸದಿಂದಲೂ ಹಾಕಬ

ತಿಲಪಿಣ್ಯಾಕಕೈರ್ದೇಯಂ ಭಕ್ತಿಮದ್ಭಿರ್ನರೈಸ್ಸದಾ ।
ಶ್ರಾದ್ಧಂ ತತ್ರ ತು ಕರ್ತವ್ಯಮರ್ಘ್ಯಾವಾಹನವರ್ಜಿತಂ ॥ ೨೧೫ ॥

ಶ್ವಧ್ವಾಂಕ್ಷ ಗೃಧ್ರಕಾಕಾ ವಾ ನೈವ ದೃಶ್ಯಾ ಹನಂತಿ ತೇ ।
ಶ್ರಾದ್ಧಂ ತತ್ತೈರ್ಥಿಕಂ ಪ್ರೋಕ್ತಂ ಪಿತೃಣಾಂ ತುಷ್ಟಿದಂ ಪರಂ ॥ ೨೧೬ ॥

ಕರ್ತವ್ಯಂ ತತ್ಪ್ರಯತ್ನೇನ ಭಕ್ತಿರೇವಾತ್ರ ಕಾರಣಂ ।
ಭಕ್ತ್ಯಾ ತುಷ್ಯಂತಿ ಪಿತರಸ್ತುಷ್ಟಾಃ ಕಾಮಾನ್ದದಂತಿ ತೇ ॥ ೨೧೭ ॥

ಪುತ್ರಪೌತ್ರ ಧನಂ ಧಾನ್ಯಂ ಕಾಮಾನ್ಯಾ ಮನಸೇಚ್ಛತಿ ।
ಭಕ್ತ್ಯಾವಾರಾಧಿತಾ ರುದ್ರ ನೃಣಾಂ ಪ್ರೀತಾಃ ಪಿತಾಮಹಾಃ ॥ ೨೧೮ ॥

ಅಕಾಲೇಽಪ್ಯಥ ಕಾಲೇ ವಾ ತೀರ್ಥೇ ಶ್ರಾದ್ಧಂ ಸದಾ ನರೈಃ ।
ಪ್ರಾಪ್ತೈರೇವ ಸದಾ ಸ್ನಾನಂ ಕರ್ತವ್ಯಂ ಪಿತೃತರ್ಪಣಂ ॥ ೨೧೯ ॥

ಪಿಂಡದಾನಂ ಚ ವೈ ಶಸ್ತಂ ಪಿತೃಣಾಂ ಚಾತಿವಲ್ಲಭಂ ।
ಪಿತರೋ ಹಿ ನಿರೀಕ್ಷಂತೇ ಗೋತ್ರಜಂ ಸಮುಪಾಗತಂ ॥ ೨೨೦ ॥

---

ಹುದು. ಇಂಗಳದ ಹಿಂಡಿಯಿಂದ ಎಳ್ಳಿನ ಹಿಂಡಿಯಿಂದ ಪಿಂಡವನ್ನು ಹಾಕಬಹುದು. ತೀರ್ಥದಲ್ಲಿ ಶ್ರಾದ್ಧ ಮಾಡುವವರು ಅರ್ಘ್ಯವನ್ನು ಕೊಡಬೇಕಾಗಿಲ್ಲ. ಆವಾಹಿಸಬೇಕಾದುದಿಲ್ಲ ನಾಯಿ, ನರಿ, ಹದ್ದು, ಕಾಗೆಗಳು ನೋಡಬಾರದು. ಅವು ನೋಡಿದರ ಶ್ರಾದ್ಧವು ಕೆಟ್ಟುಹೋಗುತ್ತದೆ. ಈ ತೀರ್ಥಶ್ರಾದ್ಧವು ಪಿತೃಗಳಿಗೆ ತೃಪ್ತಿಯನ್ನುಂಟ ಮಾಡುತ್ತದೆ.

೨೧೭. ಈ ಶ್ರಾದ್ಧವನ್ನು ಮಾಡಬೇಕು. ಇದರಲ್ಲಿ ಭಕ್ತಿಯೇ ಕಾರಣವು. ಭಕ್ತಿಯಿಂದ ತೃಪ್ತರಾದ ಪಿತೃಗಳು ಇಷ್ಟವಾದುವನ್ನು ಕೊಡುತ್ತಾರೆ.

೨೧೮-೨೨೧. ಕಾಲವಾಗಲಿ ಅಕಾಲವಾಗಲಿ ತೀರ್ಥಕ್ಕೆ ಹೋದಕೂಡಲೇ ಸ್ನಾನಮಾಡಿ ಪಿತೃತರ್ಪಣಮಾಡಿ ಶ್ರಾದ್ಧಮಾಡಬೇಕು. ಭಕ್ತಿಯಿಂದ ಪೂಜಿಸಿದರೆ ಮಕ್ಕಳು, ಮೊಮ್ಮಕ್ಕಳು, ಧನ, ಧಾನ್ಯ, ಇನ್ನೂ ಮನಸ್ಸಿಗೆ ಇಷ್ಟ ಬಂದುವನ್ನೆಲ್ಲಾ ಆ ಪಿತೃಗಳು ಕೊಡುತ್ತಾರೆ. ಅಲ್ಲಿ ಪಿಂಡದಾನಮಾಡಿದರೆ ಪಿತೃಗಳಿಗೆ ಬಹು ಪ್ರೀತಿಯು. ತಮ್ಮ ಗೋತ್ರದವರು ತೀರ್ಥಕ್ಕೆ ಬಂದುದನ್ನು ನೋಡುತ್ತಾರೆ. ಆತ

ತಿಲಯಾ ಪರಯಾ ಯುಕ್ತಾಃ ಕಾಂಕ್ಷಂತೇ ಸಲಿಲಂ ಚ ತೇ ।
ವಿಲಂಬೋ ನೈವ ಕರ್ತವ್ಯೋ ನೈವ ವಿಘ್ನಂ ಸಮಾಚರೇತ್ ॥ ೨೨೧ ॥

ಅಚ್ಛಿನ್ನಾ ಸಂತತಿಸ್ತೇಷಾಂ ಸದಾಕಾಲಂ ಭವಿಷ್ಯತಿ ।
ಪಿತರಃ ಪುತ್ರದಾತಾರೋ ವೃದ್ಧಿಶ್ರಾದ್ಧಾಭಿಕಾಂಕ್ಷಿಣಃ ॥ ೨೨೨ ॥

ತೇನ ತೇ ಸಂತತಿಚ್ಛೇದಂ ನ ಪ್ರಕುರ್ವಂತಿ ಕರ್ಹಿಚಿತ್ ।
ಅತಃ ಶ್ರಾದ್ಧಂ ಪುರಾ ಪ್ರೋಕ್ತಂ ಸ್ವಯಮೇವ ಸ್ವಯಂಭುವಾ ॥ ೨೨೩ ॥

ಗುಣೋತ್ತರಂ ತು ಯತ್ಕಾರ್ಯಂ ದ್ವಿಜೈಃ ಪಿತೃಪರಾಯಣೈಃ ।
ತೀರ್ಥೇ ಕ್ಷೇತ್ರೇ ಗೃಹೇ ವಾಪಿ ಸಂಕ್ರಾಂತೌ ಗ್ರಹಣೇಪಿ ವಾ ॥ ೨೨೪ ॥

ವಿಷುವೇ ಅಯನೇ ಚಾಪಿ ಜನ್ಮರ್ಕ್ಷೇ ಚ ಪ್ರಪೀಡಿತೇ ।
ಏತಾನ್ವೈ ಶ್ರಾದ್ಧಕಾಲಾಂಸ್ತು ಪುರಾ ಸ್ವಾಯಂಭುವೋಽಬ್ರವೀತ್ ॥ ೨೨೫ ॥

ಕೃತೇ ಶ್ರಾದ್ಧೇ ನ ವೈ ಪುಂಸಾಂ ಪೀಡಾ ಭವತಿ ದೇಹಜಾ ।
ತದಾ ಪುತ್ರಕೃತಂ ವಾಪಿ ಸರ್ವಂ ತ್ಯಜತಿ ದುಷ್ಕೃತಂ ॥ ೨೨೬ ॥

---

ಯಿಂದ ತರ್ಪಣಕೊಡುವುದನ್ನು ಕಾಯುತ್ತಿರುತ್ತಾರೆ. ವಿಲಂಬ ಮಾಡಬಾರದು. ವಿಘ್ನವನ್ನು ಮಾಡಬಾರದು.

೨೨೨-೨೨೩. ಅವರ ಸಂತತಿಯು ಛೇದವನ್ನು ಹೊಂದದೇ ಯಾವಾಗಲೂ ಇರುತ್ತದೆ. ವೃದ್ಧಿಶ್ರಾದ್ಧವನ್ನೂ ಅಪೇಕ್ಷಿಸಿಯೇ ಪಿತೃಗಳು ಮಕ್ಕಳನ್ನು ಕೊಡುತ್ತಾರೆ. ಆದ್ದರಿಂದ ಅವರು ವಂಶಚ್ಛೇದವನ್ನು ಮಾಡುವುದೇ ಇಲ್ಲ. ಆದ್ದರಿಂದಲೇ ಬ್ರಹ್ಮನು ಶ್ರಾದ್ಧವನ್ನು ತಾನಾಗಿಯೇ ಹೇಳಿರುವುದು.

೨೨೪-೨೨೫. ಪಿತೃಗಳಲ್ಲಿ ಆಸಕ್ತರಾದ ಬ್ರಾಹ್ಮಣರು ಹೆಚ್ಚು ಗುಣಕ್ಕೋಸ್ಕರ ಈ ವೃದ್ಧಿ ಶ್ರಾದ್ಧಗಳನ್ನು ಮಾಡಬೇಕು. ತೀರ್ಥ, ಕ್ಷೇತ್ರ, ಮನೆ, ಸಂಕ್ರಾಂತಿ, ಗ್ರಹಣ, ವಿಷುವತ್ಪುಣ್ಯಕಾಲ, ಜನ್ಮನಕ್ಷತ್ರ, ಇವುಗಳು ಈ ವೃದ್ಧಿಶ್ರಾದ್ಧಗಳಿಗೆ ಕಾಲವೆಂದು ಬ್ರಹ್ಮನೇ ಹೇಳಿದ್ದಾನೆ.

೨೨೬-೨೨೭. ಆ ಶ್ರಾದ್ಧವನ್ನು ಮಾಡಿದರೆ ಜನರಿಗೆ ದೇಹದಲ್ಲಿ ಯಾವ ವಿಧವಾದ ಪೀಡೆಯೂ ಉಂಟಾಗುವುದಿಲ್ಲ, ಆಗ ಮಗನು ಮಾಡಿದ ಪಾಪವನ್ನೆಲ್ಲಾ

ಯಥಾ ನ ಭವತೇ ಪೀಡಾ ಗ್ರಹಚೌರನೃಪಾದಿಕಾತ್ ।
ದುಷ್ಕೃತಂ ನಶ್ಯತೇ ಸರ್ವಂ ಪರತ್ರ ಚ ಗತಿಂ ಶುಭಾಂ ॥ ೨೨೭ ॥

ಲಭತೇ ನಾತ್ರ ಸಂದೇಹಃ ಪ್ರಜಾಪತಿವಚೋ ಯಥಾ ।
ಕೃತೇ ಯುಗೇ ಪುಷ್ಕರಾಣಿ ತ್ರೇತಾಯಾಂ ನೈಮುಷಂ ಸ್ಮೃತಂ ॥ ೨೨೮ ॥

ದ್ವಾಪರೇ ಚ ಕುರುಕ್ಷೇತ್ರಂ ಕಲೌ ಗಂಗಾಂ ಸಮಾಶ್ರಯೇತ್ ।
ದುಷ್ಕರಃ ಪುಷ್ಕರೇ ವಾಸೋ ದುಷ್ಕರಂ ಪುಷ್ಕರೇ ತಪಃ ॥ ೨೨೯ ॥

ದುಷ್ಕರಂ ಪುಷ್ಕರೇ ದಾನಂ ದುಷ್ಕರಃ ಪುಷ್ಕರೇ ಜಪಃ ।
ಯದನ್ಯತ್ರ ಕೃತಂ ಪಾಪಂ ತೀರ್ಥೇ ತದ್ಯಾತಿ ಲಾಘವಂ ॥ ೨೩೦ ॥

ನ ತೀರ್ಥಕೃತಮನ್ಯತ್ರ ಕ್ವಚಿತ್ಪಾಪಂ ವ್ಯಪೋಹತಿ ।
ಸಾಯಂ ಪ್ರಾತಸ್ಸ್ಮರೇದ್ಯಸ್ತು ಪುಷ್ಕರಾಣಿ ಕೃತಾಂಜಲಿಃ ॥ ೨೩೧ ॥

---

ಅವರು ಕಳೆದು ಬಿಡುತ್ತಾರೆ. ಗ್ರಹ, ಕಳ್ಳರು, ಮತ್ತು ರಾಜರ ಪೀಡೆಗಳೊಂದೂ ಉಂಟಾಗುವುದಿಲ್ಲ. ದುಷ್ಕೃತವೆಲ್ಲವೂ ಹೋಗುತ್ತವೆ. ಪರಲೋಕದಲ್ಲಿ ಒಳ್ಳೆಯ ಗತಿಯನ್ನು ಹೊಂದುತ್ತಾರೆ. ಇವುಗಳನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ಇವ ಲ್ಲವನ್ನೂ ಬ್ರಹ್ಮನೇ ಹೇಳಿದ್ದಾನೆ.

೨೨೮. ಕೃತಯುಗದಲ್ಲಿ ಪುಷ್ಕರವನ್ನೂ, ತ್ರೇತಾಯುಗದಲ್ಲಿ ನೈಮಿಷವನ್ನೂ ದ್ವಾಪರಯುಗದಲ್ಲಿ ಕುರುಕ್ಷೇತ್ರವನ್ನೂ ಕಲಿಯುಗದಲ್ಲಿ ಗಂಗೆಯನ್ನೂ ಆಶ್ರಯಿಸ ಬೇಕು.

೨೨೯. ಪುಷ್ಕರದಲ್ಲಿ ವಾಸ, ತಪಸ್ಸು, ದಾನ, ಜಪಗಳು ಸಿಕ್ಕುವುದು ಕಷ್ಟವು.

೨೩೦. ಬೇರೆಯ ಕಡೆಯಲ್ಲಿ ಮಾಡಿದ ಪಾಪವು ತೀರ್ಥದಲ್ಲಿ ಸುಲಭವಾಗಿ ಹೋಗುತ್ತದೆ. ತೀರ್ಥದಲ್ಲಿ ಮಾಡಿದ ಪಾಪವು ಬೇರೆ ಯೆಲ್ಲಿಯೂ ಹೋಗುವುದಿಲ್ಲ.

೨೩೧. ಯಾವನು ಕೈಮುಗಿದುಕೊಂಡು ಪುಷ್ಕರವನ್ನು ಹಗಲೂ ರಾತ್ರಿಯೂ ಸ್ಮರಿಸುತ್ತಾನೆಯೋ ಅವನು ಎಲ್ಲಾ ತೀರ್ಥದಲ್ಲಿಯೂ ಸ್ನಾನಮಾಡಿದಂತಾಗುತ್ತದೆ.

ಉಪಸ್ಪೃಷ್ಟಂ ಭವೇತ್ತೇನ ಸರ್ವತೀರ್ಥೇಷು ಭಾರತ ।
ಸಾಯಂಪ್ರಾತರುಪಸ್ಪೃಶ್ಯ ಪುಷ್ಕರೇ ನಿಯತೇಂದ್ರಿಯಃ ॥ ೨೩೨ ॥

ಕ್ರತೂನ್ಸರ್ವಾನವಾಪ್ನೋತಿ ಬ್ರಹ್ಮಲೋಕಂಚ ಗಚ್ಛತಿ ।
ದ್ವಾದಶಾಬ್ದಂ ದ್ವಾದಶಾಹಂ ಮಾಸಂ ಮಾಸಾರ್ಧಮೇವ ವಾ ॥ ೨೩೩ ॥

ಯೋ ವಸೇತ್ಪುಷ್ಕರೇ ನಿತ್ಯಂ ಸ ಗಚ್ಛೇತ್ಪರಮಾಂ ಗತಿಂ ।
ಸರ್ವೇಷಾಮೇವಲೋಕಾನಾಂ ಬ್ರಹ್ಮಲೋಕೋಪರಿಸ್ಥಿತಃ ॥ ೨೩೪ ॥

ಯ ಇಚ್ಛೇತ್ಪುರುಷಂ ಗಂತುಂ ಸೋನುಸೇವೇತ ಪುಷ್ಕರಂ ।
ಯಥಾಲೋಮ ವಿಲೋಮಾಭ್ಯಾಂ ತಥಾ ವ್ಯಸ್ತಸಮಸ್ತಯೋಃ ॥ ೨೩೫ ॥

---

೨೩೨. ಸಾಯಂಕಾಲ ಪ್ರಾತಃಕಾಲಗಳಲ್ಲಿ ಜಿತೇಂದ್ರಿಯನಾಗಿ ಪುಷ್ಕರದಲ್ಲಿ ಸ್ನಾನಮಾಡಿದರೆ ಎಲ್ಲಾ ಯಾಗಗಳನ್ನೂ ಮಾಡಿದ ಪುಣ್ಯವನ್ನು ಹೊಂದಿ ಬ್ರಹ್ಮಲೋಕವನ್ನು ಹೊಂದುತ್ತಾನೆ.

೨೩೩-೨೩೪. ಹನ್ನೆರಡು ವರ್ಷ, ಹನ್ನೆರಡು ದಿನ, ಮೂವತ್ತು ದಿನ, ಅಥವಾ ಹದಿನೈದು ದಿನಗಳು ಯಾವನು ಪುಷ್ಕರದಲ್ಲಿ ವಾಸಿಸುವನೋ ಅವನು ಉತ್ತಮಗತಿಯನ್ನು ಹೊಂದುತ್ತಾನೆ ಎಲ್ಲಾ ಲೋಕಗಳಿಗಿಂತಲೂ ಮೇಲಿರುವ ಬ್ರಹ್ಮಲೋಕದಲ್ಲಿ ವಾಸಿಸುತ್ತಾನೆ.

೨೩೫. ಪುಷ್ಕರಕ್ಕೆ ಹೋಗಲು ಇಚ್ಛಿಸುವವನು ಪುಷ್ಕರವನ್ನು ಸೇವಿಸಿದಂತೆಯೇ ಆಗುತ್ತದೆ. ಒಂದೊಂದಾಗಿ ವೃದ್ಧಿಯಿಂದಲೂ, ಬೇಕಾದ ಒಂದು ನಿಯಮಕ್ಕೆ ಹೆಚ್ಚಿಸಿ ಅಲ್ಲಿಯವರೆಗೂ ಮಾಡುವುದೂ ಮೊದಲೇ ಹೆಚ್ಚಾಗಿ ಮಾಡಿ ಕಡಿಮೆಗೆ ತರುವುದರಿಂದಲೂ ಈ ರೀತಿ ಸ್ನಾನಮಾಡಿದರೆ ಕೋಟಿಪಾಲು ಹೆಚ್ಚು ಫಲವನ್ನು ಹೊಂದುತ್ತಾನೆ. ಮೊದಲನೆಯ ದಿನ ಒಂದು ಸ್ನಾನ, ಎರಡನೆಯ ದಿನ ಎರಡು ಸ್ನಾನ, ಮೂರನೆಯ ದಿನ ಮೂರು ಸ್ನಾನ, ಈ ರೀತಿಯಾಗಿ ಮೂವತ್ತನೆಯ ದಿನ ಮೂವತ್ತು ಸ್ನಾನಮಾಡುವುದು ಇದು ಅನುಲೋಮ ಸ್ನಾನ. ಮೂವತ್ತೊಂದನೆಯ ದಿವಸ ಇಪ್ಪತ್ತೊಂಭತ್ತು ಸ್ನಾನ, ಮೂವತ್ತೆರಡನೆಯ ದಿನ ಇಪ್ಪತ್ತೆಂಟು ಸ್ನಾನ. ಈ ರೀತಿಯಾಗಿ ಕಡಿಮೆ ಮಾಡುತ್ತಾ ಬರುವುದು. ವಿಲೋಮಸ್ನಾನವೆನಿಸಿಕೊಳ್ಳುತ್ತದೆ.

ಸ್ನಾತಸ್ತು ಪುಷ್ಕರೇ ಸಮ್ಯಕ್ಕ್ಕೋಟ್ಯಾ ಚ ಫಲಮಶ್ನುತೇ ।
ವಿಧಿವತ್ಕ್ರಿಯಮಾಣೇಷು ಸರ್ವತೀರ್ಥೇಷು ಯತ್ಫಲಂ　　॥ ೨೩೬ ॥

ಪುಷ್ಕರಾಲೋಕನಾದೇವ ನರಃ ಪ್ರಾಪ್ನೋತಿ ತತ್ಫಲಂ ।
ದಶಕೋಟಿ ಸಹಸ್ರಾಣಿ ತೀರ್ಥಾನಾಂ ವೈ ಮಹೀತಳೇ　　॥ ೨೩೭ ॥

ಸಾನ್ನಿಧ್ಯಂ ಪುಷ್ಕರೇ ತೇಷಾಂ ತ್ರಿಸಂಧ್ಯಂ ಕುರುನಂದನ ।
ಯಾವತ್ತಿಷ್ಠನ್ತಿ ಗಿರಯೋ ಯಾವತ್ತಿಷ್ಠಂತಿ ಸಾಗರಾಃ　　॥ ೨೩೮ ॥

ತಾವತ್ಪುಷ್ಕರಮ್ಯತ್ಯೂನಾಂ ಬ್ರಹ್ಮಲೋಕೋ ನ ಸಂಶಯಃ ।
ಜನ್ಮಾಂತರಸಹಸ್ರೈಶ್ಚ ಆಜನ್ಮಮರಣಾಂತಿಕಂ　　॥ ೨೩೯ ॥

ನಿರ್ದಹೇದ್ದುಷ್ಕೃತಂ ಸರ್ವಂ ಸಕೃತ್ಸ್ನಾತ್ವಾ ತು ಪುಷ್ಕರೇ ।
ಪುಷ್ಕರೇ ವಾಜಗಂಧಂ ಯೇ ಪ್ರಪಶ್ಯಂತಿ ಸ್ಮ ಮಾನವಾಃ　　॥ ೨೪೦ ॥

ತೇಽಪ್ಯಶೇಷಾಘನಿರ್ಮುಕ್ತಾ ಯಾನ್ತಿ ರುದ್ರಸಲೋಕತಾಂ ।
ತತ್ರೋಷ್ಯ ರಜನೀಮೇಕಾಂ ಭವಸ್ಯ ಸದನೇ ಶುಚಿಃ　　॥ ೨೪೧ ॥

---

೨೩೬. ಮಿಕ್ಕ ಎಲ್ಲಾ ತೀರ್ಥಗಳಲ್ಲಿಯೂ ವಿಧಿವತ್ತಾಗಿ ಸ್ನಾನಮಾಡಿದರೆ ಬರುವ ಫಲವು ಪುಷ್ಕರವನ್ನು ನೋಡುವುದರಿಂದಲೇ ಬರುತ್ತದೆ

೨೩೭. ಹತ್ತುಕೋಟಿ ಸಾವಿರ ತೀರ್ಥಗಳು ಈ ಭೂಮಿಯಲ್ಲಿವೆ. ಅವುಗಳೆಲ್ಲವೂ ಮೂರು ಸಂಧ್ಯೆಗಳಲ್ಲಿಯೂ ಪುಷ್ಕರದಲ್ಲಿ ಸಾನ್ನಿಧ್ಯವನ್ನು ಹೊಂದುತ್ತವೆ.

೨೩೮. ಪುಷ್ಕರದಲ್ಲಿ ಸತ್ತವರು ಸಾಗರಗಳೂ, ಗಿರಿಗಳೂ ಇರುವವರೆಗೂ ಬ್ರಹ್ಮಲೋಕದಲ್ಲಿ ಸುಖಿಸುತ್ತಾರೆ. ಸಂಶಯವಿಲ್ಲ.

೨೩೯. ಸಾವಿರ ಜನ್ಮಗಳಿಂದಲೂ ಈ ಜನ್ಮದಲ್ಲಿ ಸಾಯುವವರೆಗೂ ಮಾಡಿರುವ ಪಾಪಗಳನ್ನು ಪುಷ್ಕರಸ್ನಾನವು ನಾಶಮಾಡುತ್ತದೆ.

೨೪೦. ಪುಷ್ಕರದಲ್ಲಿ ಅಜಗಂಧವೆಂಬ ಈಶ್ವರನನ್ನು ಸೇವಿಸಿದ ನರರು ಪಾಪಗಳೆಲ್ಲವನ್ನೂ ಕಳೆದುಕೊಂಡು ರುದ್ರನಿಗೆ ಸರಿಯಾದ ಸ್ಥಾನವನ್ನು ಹೊಂದುತ್ತಾರೆ.

೨೪೧. ಆ ಈಶ್ವರನ ದೇವಸ್ಥಾನದಲ್ಲಿ ಒಂದು ರಾತ್ರಿಯನ್ನು ಶುಚಿಯಾಗಿ ನೀರನ್ನು ಮಾತ್ರ ತೆಗೆದುಕೊಳ್ಳುತ್ತಾ ಕಳೆದರೆ ಶಿವನ ಸಾಯುಜ್ಯವು ಸಿಕ್ಕುತ್ತದೆ.

ಅಂಬುಭಕ್ಷೋ ವಾಯುಭಕ್ಷಃ ಶಿವಸಾಯುಜ್ಯತಾಂ ವ್ರಜೇತ್ ।
ಅಜಕರ್ಣೇ ಹ್ರದೇ ಸ್ನಾತ್ವಾ ದೃಷ್ಟ್ವಾ ಮಾಹೇಶ್ವರಂ ಪದಂ ॥ ೨೪೨ ॥

ಸುವರ್ಣಮೌಳಿಮಾಲೋಕ್ಯ ಕಿಂ ಪುನಃ ಪರಿತಪ್ಯತೇ ।
ಏಕಹಂಸಂ ಕುರುಕ್ಷೇತ್ರೇ ಗಂಗಾಭೇದಂ ಚ ನೈಮಿಷೇ ॥
ಪುಷ್ಕರೇ ತು ಅಜಂ ದೃಷ್ಟ್ವಾ ಮುಕ್ತಿರೇಷಾ ವಿಶಿಷ್ಯತೇ ॥ ೨೪೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಬ್ರಹ್ಮಯಜ್ಞ
ವರ್ಣನಂ ನಾಮ ಏಕೋನತ್ರಿಂಶೋಽಧ್ಯಾಯಃ

---

೨೪೨. ಅಜಕರ್ಣಹ್ರದದಲ್ಲಿ ಸ್ನಾನಮಾಡಿ ಮಾಹೇಶ್ವರನ ಪಾದದರ್ಶನವನ್ನು ಮಾಡಿ ಮೇರುಶಿಖರದ ದರ್ಶನವನ್ನೂ ಮಾಡಿದರೆ ಅವನಿಗೆ ಪಾಪವೆಲ್ಲವೂ ನಾಶವಾಗಿ ಉತ್ತಮಗತಿಯನ್ನು ಹೊಂದುತ್ತಾನೆ.

೨೪೩. ಕುರುಕ್ಷೇತ್ರದಲ್ಲಿ ಏಕಹಂಸನನ್ನೂ, ನೈಮಿಷದಲ್ಲಿ ಗಂಗಾಭೇದನನ್ನೂ, ಪುಷ್ಕರದಲ್ಲಿ ಅಜನನ್ನೂ, ನೋಡಿದರೆ ಈ ಮುಕ್ತಿಯು ವಿಶೇಷವಾದುದು. ಎಲ್ಲಕ್ಕಿಂತಲೂ ಹೆಚ್ಚಾದುದು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಬ್ರಹ್ಮಯಜ್ಞ ವರ್ಣನವೆಂಬ
ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ತ್ರಿಂಶೋಽಧ್ಯಾಯಃ ॥



॥ ಭೀಷ್ಮ ಉವಾಚ ॥

**ಕ್ಷೇಮಂಕರೀ ತು ಯಾ ದೇವೀ ಸ್ಥಿತಾ ಪುಷ್ಕರಪರ್ವತೇ ।**
**ತಸ್ಯಾ ಉತ್ಪತ್ತಿಮಾಚಕ್ಷ್ವ ಪರಂ ಕೌತೂಹಲಂ ಹಿ ಮೇ ॥ ೧ ॥**

॥ ಪುಲಸ್ತ್ಯ ಉವಾಚ ॥

**ಯಾ ಸಾ ಕ್ಷೇಮಂಕರೀ ದೇವೀ ಸರ್ವಸತ್ವ ಬಲೋತ್ಕಟಾ ।**
**ಸಾತ್ವಿಕೀ ಪರಮಾ ಶಕ್ತಿಃ ಪುಷ್ಕರಂ ಪ್ರಾಪ ಕಾರಣೇ ॥ ೨ ॥**

**ಶುಭವಸ್ತ್ರಾಂಬುಜಾ ದೇವೀ ನೀಲಾಯತವಿಲೋಚನಾ ।**
**ತಸ್ಯಾಸ್ತಪಸ್ಯಾಃ ಕಾಲೇನ ಮಹತಾ ತ್ವತ್ಕುಪಿತಂ ಮನಃ ॥ ೩ ॥**

---

### ॥ ಮೂವತ್ತನೆಯ ಅಧ್ಯಾಯವು ॥

೧. ಭೀಷ್ಮನು ಹೇಳಿದನು—ಪುಷ್ಕರಪರ್ವತದಲ್ಲಿ ಕ್ಷೇಮಂಕರಿಯೆಂಬ ದೇವತೆ ಇದ್ದಾಳೆಯೆಂದು ಹೇಳಿದೆಯಷ್ಟೆ. ಅವಳ ಉತ್ಪತ್ತಿಯನ್ನು ಹೇಳು, ನನಗೆ ಬಹು ಕುತೂಹಲವಾಗಿದೆ.

೨. ಪುಲಸ್ತ್ಯನು ಹೇಳಿದನು—ಸರ್ವ ಪ್ರಾಣಿಗಳಲ್ಲಿಯೂ ಬಲಿಷ್ಠಳಾದ ಆ ಕ್ಷೇಮಂಕರೀ ಎಂಬ ದೇವಿಯು ಸಾತ್ವಿಕವಾದ ಪರಾಶಕ್ತಿಯು. ಯುದ್ಧಮಾಡುವ ಸಂದರ್ಭದ ಕಾರಣದಲ್ಲಿ ಪುಷ್ಕರವನ್ನು ಹೊಂದಿದಳು.

೩. ಚೆನ್ನಾಗಿರತಕ್ಕ ಮುಖವುಳ್ಳವಳು, ನೀಲವಾಗಿಯೂ ದೀರ್ಘವಾಗಿಯೂ, ಇರುವ ಕಣ್ಣುಗಳುಳ್ಳವಳು. ಆಕೆಯು ತಪಸ್ಸು ಮಾಡಲು ಮೊದಲು ಮಾಡಿದಳು. ಬಹುಕಾಲ ತಪಸ್ಸು ಮಾಡಿದರೂ ಪ್ರತಿಫಲ ಬಾರದುದರಿಂದ ಆಕೆಯು ಕೋಪಗೊಂಡಳು.

ತಸ್ಯ ಕ್ರೋಧಾತ್ಸಮುತ್ತಸ್ಥುಃ ಕುಮಾರ್ಯಸ್ಸೌಮ್ಯಲೋಚನಾಃ ।
ನೀಲಕುಂಚಿತಕೇಶಾನ್ತಾಃ ಬಿಂಬೋಷ್ಠಾಃ ಪದ್ಮಲೋಚನಾಃ ॥ ೪ ॥

ನಿತಂಬರಶನಾದಾಮನೂಪುರಾಢ್ಯಾಸ್ಸುವರ್ಚಸಃ ।
ಏವಂ ವಿಧಾಸ್ತ್ರಿಯೋ ದೇವ್ಯಾಃ ಕ್ಷುಭಿತೇ ಮನಸಿ ದ್ರುತಂ ॥ ೫ ॥

ಸಹಸ್ರಶಸ್ಸಮುತ್ತಸ್ಥುಃ ಕೋಟಿಶೋ ವಿವಿಧಾಮಲಾಃ ।
ಸೃಷ್ಟ್ವಾ ಕುಮಾರೀಸ್ತಾ ದೇವೀಸ್ತಸ್ಮಿನ್ನೇವ ಗಿರೌ ಶುಭಾಃ ॥ ೬ ॥

ತಪಸಾ ನಿರ್ಮಿತಂ ದೇವ್ಯಾ ಪುರಮಾಕಾಶಗಂ ಮಹತ್ ।
ವಿಶಾಲರಥಸೌವರ್ಣಪ್ರಾಕಾರೇಣೋಪಶೋಭಿತಂ ॥ ೭ ॥

ಅಂತರ್ಜಲಾನಿ ವೇಶ್ಮಾನಿ ಮಣಿಸೋಪಾನವನ್ತಿ ಚ ।
ರತ್ನಜಾಲಗವಾಕ್ಷಾಣಿ ಆಸನ್ನೋಪವನಾನಿ ಚ ॥ ೮ ॥

ಪ್ರಾಧಾನ್ಯೇನ ಪ್ರವಕ್ಷ್ಯಾಮಿ ಕನ್ಯಾನಾಮಾನಿ ತೇಽನಘ ।
ವಿದ್ಯುತ್ಪ್ರಭಾ ಚಂದ್ರಕಾನ್ತಿಸ್ಸೂರ್ಯಕಾನ್ತಿಸ್ತಥಾಪರಾ ॥ ೯ ॥

---

೪-೫. ಸೌಮ್ಯವಾದ ನೋಟವುಳ್ಳ, ಕಪ್ಪಗೆ ಗುಂಗುರು ಗುಂಗುರಾಗಿರುವ ಮುಂಗೂದಲುಳ್ಳ, ತೊಂಡೆಯ ಹಣ್ಣಿನಂತೆ ತುಟಿಯುಳ್ಳ, ಪದ್ಮಾಕ್ಷಿಯರಾದ ಸೊಂಟದಲ್ಲಿ ಗೆಜ್ಜೆ ಕಟ್ಟಿದ ಡಾಬುಳ್ಳ ಕಾಲುಮಿಂಚನ್ನು ಹಾಕಿಕೊಂಡಿರುವ ತೇಜೋವಂತೆಯರಾದ ಹುಡುಗಿಯರು ಅವಳ ಮನಸ್ಸು ಕೋಪದಿಂದ ಕಲಕಿದೊಡನೆಯೇ ಸಾವಿರಗಟ್ಟಲೆಯಲ್ಲೂ, ಕೋಟಿಗಟ್ಟಲೆಯಲ್ಲೂ ಹೊರಬಂದರು.

೬. ಆ ಪುಷ್ಕರಪರ್ವತದಲ್ಲಿ ಈ ರೀತಿಯಲ್ಲಿ ಇವರನ್ನು ಸೃಷ್ಟಿಮಾಡಿ ತಪೋಬಲದಿಂದ ಆಕಾಶದಲ್ಲೇ ಸಂಚರಿಸುವ ಒಂದು ದೊಡ್ಡ ಪಟ್ಟಣವನ್ನೂ ನಿರ್ಮಿಸಿದಳು.

೭-೮. ಆ ಪಟ್ಟಣವು ತೇರುಗಳು ಓಡಾಡುವಂತೆ ವಿಶಾಲವಾಗಿಯೂ ಮತ್ತು ಚಿನ್ನದಿಂದ ಕೂಡಿರುವ ಕೋಟೆಯುಳ್ಳದ್ದಾಗಿಯೂ, ಒಳಗೆ ನೀರಿರುವ ಮಣಿಯಿಂದ ಕೂಡಿದ ಮೆಟ್ಟಲುಗಳುಳ್ಳ, ಕಿಟಕಿಗಳಿಗೆ ರತ್ನದ ಜಾಲಂಧ್ರಗಳನ್ನು ಹಾಕಿರುವ, ಹತ್ತಿರದಲ್ಲೇ ಕೈತೋಟಗಳುಳ್ಳ ಮನೆಗಳುಳ್ಳದ್ದಾಗಿಯೂ ಇತ್ತು.

೯-೧೨. ಹೀಗೆ ಸೃಷ್ಟರಾದ ಕನ್ಯೆಯರಲ್ಲಿ ಮುಖ್ಯರಾದವರ ಕೆಲವರ ಹೆಸರನ್ನು ನಿನಗೆ ಹೇಳುತ್ತೇನೆ. ವಿದ್ಯುತ್ಪ್ರಭೆ, ಚಂದ್ರಕಾಂತಿ, ಸೂರ್ಯಕಾಂತಿ, ಗಂಭೀರೆ, ದಾರು

ಗಂಭೀರಾ ದಾರುಕೇಶೀ ಚ ಸುಕೇಶೀ ಚಾಪಿ ಸುಂದರೀ ।
ನೀಲಕೇಶೀ ಘೃತಾಚೀ ಚ ಉರ್ವಶೀ ಶೀಲಮಂಡನಾ ॥ ೧೦ ॥

ಚಾರುಕರ್ಣಾ ವಿಶಾಲಾಕ್ಷೀ ಧನ್ಯಾ ಪೀನಪಯೋಧರಾ ।
ಚಂದ್ರಪ್ರಭಾ ಗಿರಿಸುತಾ ತಥಾ ಸೂರ್ಯಪ್ರಭಾನನಾ ॥ ೧೧ ॥

ಸ್ವಯಂಪ್ರಭಾ ಚಾರುಮುಖೀ ಸರ್ವದೂತೀ ವಿಭಾವರೀ ।
ಜಯಾ ಚ ವಿಜಯಾ ಚೈವ ತಥಾ ಚೈವಾಪರಾಜಿತಾ ॥ ೧೨ ॥

ಏತಾಶ್ಚಾನ್ಯಾಶ್ಚ ಶತಶಃ ಕನ್ಯಾಸ್ತಸ್ಮಿನ್ಪುರೋತ್ತಮೇ ।
ದೇವ್ಯಾ ಅನುಚರ್ಯಸ್ಸರ್ವಾಃ ಪಾಶಾಂಕುಶಧರಾಃ ಶುಭಾಃ ॥ ೧೩ ॥

ತಾಭಿಃ ಪರಿವೃತಾ ದೇವೀ ಸಿಂಹಾಸನಗತಾ ಸ್ಥಿತಾ ।
ಯೌವನಸ್ಥಾ ಮಹಾಭಾಗಾ ಪಿನೋನ್ನತಪಯೋಧರಾ ॥ ೧೪ ॥

ಚಂಪಕಾಶೋಕಪುನ್ನಾಗನಾಗಕೇಸರದಾಮಭಿಃ ।
ಸ ಚಾಮರಾರ್ಚಿತಾ ದೇವೀ ಯಾವದಾಸ್ತೇ ತಪೋನ್ವಿತಾ ॥ ೧೫ ॥

---

ಕೇಶಿ, ಸುಕೇಶಿ, ಸುಂದರಿ, ನೀಲಕೇಶಿ, ಘೃತಾಚಿ, ಉರ್ವಶಿ, ಶೀಲಮಂಡನೆ, ಚಾರುಕರ್ಣೆ, ವಿಶಾಲಾಕ್ಷೀ, ಧನ್ಯೆ, ಚಂದ್ರಪ್ರಭೆ, ಗಿರಿಸುತೆ, ಸೂರ್ಯಪ್ರಭೆ, ಸ್ವಯಂಪ್ರಭೆ, ಚಾರುಮುಖೀ, ಸರ್ವದೂತಿ, ವಿಭಾವರಿ, ಜಯೆ, ವಿಜಯೆ, ಅಪರಾಜಿತೆ ಎಂಬುವರು.

೧೩. ಇವರೂ ಮತ್ತು ಇತರರೂ, ಪಾಶ, ಅಂಕುಶಗಳನ್ನು ಹಿಡಿದು ಮಂಗಳಕರವಾದ ಅಲಂಕಾರಗಳಿಂದ ಕೂಡಿಕೊಂಡು ಆ ಪಟ್ಟಣದಲ್ಲಿ ನೂರರಗಟ್ಟಲೆಯಲ್ಲಿ ಆ ದೇವಿಯನ್ನು ಹಿಂಬಾಲಿಸುತ್ತಿದ್ದರು

೧೪-೧೫. ಯೌವನಶಾಲಿನಿಯೂ, ಉದಾರಸ್ವಭಾವಳೂ, ದಪ್ಪವಾಗಿ ಎತ್ತರವಾಗಿರುವ ಸ್ತನಗಳುಳ್ಳವಳೂ, ಸಂಪಿಗೆ, ಅಶೋಕ, ಪುನ್ನಾಗನಾಗಕೇಸರದ ಹೂವಾಲೆಯುಳ್ಳವಳೂ ಆಗಿ ಆ ದೇವಿಯು ಸಿಂಹಾಸನದಲ್ಲಿ ಕುಳಿತು ಛತ್ರ ಚಾಮರಗಳಿಂದ ಸೇವಕಿಯರಿಂದ ಸೇವೆಯನ್ನು ತೆಗೆದುಕೊಳ್ಳುತ್ತಿರುವಾಗ ಬ್ರಹ್ಮನ ಮಗನಾದ ನಾರದನು ಅಲ್ಲಿಗೆ ಬಂದನು.

ತಾವದಾಗತವಾಂಸ್ತತ್ರ ನಾರದೋ ಬ್ರಹ್ಮಣಸ್ಸುತಃ ।
ತಂ ದೃಷ್ಟ್ವಾ ಸಹಸಾಯಾತಂ ಬ್ರಹ್ಮಪುತ್ರಂ ತಪೋನಿಧಿಂ ॥ ೧೬ ॥

ವಿದ್ಯುತ್ಪ್ರಭಾಮುವಾಚೇದಮಾಸನಂ ದೀಯತಾಮಿತಿ ।
ಪಾದ್ಯಮಾಚಮನೀಯಂ ಚ ಕ್ಷಿಪ್ರಮಸ್ಮೈ ಪ್ರದೀಯತಾಂ ॥ ೧೭ ॥

ಏವಮುಕ್ತಾ ತದಾ ದೇವೀ ಕೆನ್ಯಾ ವಿದ್ಯುತ್ಪ್ರಭಾ ಶುಭಾ ।
ಆಸನಂ ಪಾದ್ಯಮರ್ಘ್ಯಂ ಚ ನಾರದಾಯ ನ್ಯವೇದಯತ್ ॥ ೧೮ ॥

ತತಃ ಕೃತಾಸನಂ ದೃಷ್ಟ್ವಾ ಪ್ರಣತಂ ನಾರದಂ ಮುನಿಂ ।
ಉವಾಚ ವಚನಂ ದೇವೀ ಹರ್ಷೇಣ ಮಹತಾನ್ವಿತಾ ॥ ೧೯ ॥

॥ ದೇವ್ಯುವಾಚ ॥

ಸ್ವಾಗತಂ ತೇ ಮುನಿಶ್ರೇಷ್ಠ ಕಸ್ಮಾಲ್ಲೋಕಾದಿಹಾಗತಃ ।
ಕಿಂ ಕಾರ್ಯಂ ದೇವ ಯತ್ಕೃತ್ಯಂ ಮಾ ನಃ ಕಾಲಾತ್ಯಯೋ ಭವೇತ್ ॥ ೨೦ ॥

॥ ಪುಲಸ್ತ್ಯ ಉವಾಚ ॥

ಇತ್ಯೇವ ಮುಕ್ತಸ್ಸಮುನಿಃ ನಾರದಃ ಪ್ರಾಹ ಲೋಕವಿತ್ ॥ ೨೧ ॥

---

೧೬-೧೭. ಗೊತ್ತಾಗದಂತೆ ಬಂದ ಈ ನಾರದನನ್ನು ನೋಡುತ್ತಲೇ ವಿದ್ಯುತ್ಪ್ರಭೆಯನ್ನು ಕುರಿತು ಈತನಿಗೆ ಆಸನವನ್ನೂ, ಅರ್ಘ್ಯವನ್ನೂ, ಪಾದ್ಯಗಳನ್ನೂ ಕೊಡುವಂತೆ ಹೇಳಿದಳು.

೧೮. ಹೀಗೆ ಹೇಳುತ್ತಲೂ ಆ ವಿದ್ಯುತ್ಪ್ರಭೆಯು ಆತನಿಗೆ ಆಸನ, ಪಾದ್ಯ ಅರ್ಘ್ಯಗಳನ್ನು ಕೊಟ್ಟಳು.

೧೯. ಆ ಮೇಲೆ ನಮ್ರಭಾವದಿಂದ ಆಸನದಲ್ಲಿ ಕುಳಿತಿರುವ ಈ ನಾರದನನ್ನು ನೋಡಿ ದೇವಿಯು ಸಂತೋಷದಿಂದ ಇಂತೆಂದಳು.

೨೦. ಎಲೈ ಋಷಿವರ್ಯನೆ! ಸುಖಾಗಮನವೇ? ಯಾವ ಲೋಕದಿಂದಿಲ್ಲಿಗೆ ಬಂದೆ? ನಿನಗೆ ಆಗಬೇಕಾದ ಕೆಲಸಗಳೇನು? ಹೇಳು. ವ್ಯರ್ಥವಾಗಿ ನಮಗೆ ಕಾಲವನ್ನು ಕಳೆಸಬೇಡ.

೨೧. ಪುಲಸ್ತ್ಯನು ಹೇಳಿದನು— ಹೀಗೆ ಹೇಳಲ್ಪಟ್ಟ ಲೋಕದ ವಿಷಯವನ್ನು ಬಲ್ಲ ನಾರದನು ಹೇಳಿದನು.

॥ ನಾರದ ಉವಾಚ ॥

ಬ್ರಹ್ಮಲೋಕಾದಿಂದ್ರಲೋಕಂ ತಸ್ಮಾಚ್ಚೌದ್ರಮಥಾಚಲಂ ।
ಇಹಸ್ಥಾಂ ತ್ವಾಂ ಚ ವೈ ದೇವಿ ದ್ರಷ್ಟುಮಭ್ಯಾಗತೋಽಹ್ಯಹಂ ॥ ೨೨ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತ್ವಾ ಮುನಿವರಸ್ತಾಂ ದೇವೀಂ ಸನ್ನಿರೀಕ್ಷ್ಯ ಚ ।
ಅಹೋಽಭಯಮಹೋ ಧೈರ್ಯಮಹೋ ಕಾನ್ತಿರಹೋ ವಯಃ ॥ ೨೩ ॥

ಅಹೋ ನಿಷ್ಕಾಮತಾ ದೇವ್ಯಾ ಇತಿ ಖೇದಮುಪಾಯಯೌ ।
ದೇವಗನ್ಧರ್ವಸಿದ್ಧಾನಾಂ ಯಕ್ಷಕಿನ್ನರರಕ್ಷಸಾಂ ॥ ೨೪ ॥

ನ ರೂಪಮೀದೃಶಂ ಕ್ವಾಪಿ ಸ್ತ್ರೀಷ್ವನ್ಯಾಸ್ವಿಹ ದೃಶ್ಯತೇ ।
ಏವಂ ಸಂಚಿತ್ಯ ಮನಸಾ ನಾರದೋ ವಿಸ್ಮಯಾನ್ವಿತಃ ॥ ೨೫ ॥

ಪ್ರಣಮ್ಯ ದೇವೀಂ ವರದಾಂ ಉತ್ಪಪಾತ ನಭಸ್ಥಲಂ ।
ಗತಶ್ಚ ತ್ವರಯಾ ಯುಕ್ತಃ ಪುರೀಂ ದೈತ್ಯೇಂದ್ರಪಾಲಿತಾಂ ॥ ೨೬ ॥

---

೨೨. ನಾರದನು ಹೇಳಿದನು—ಬ್ರಹ್ಮಲೋಕ, ಇಂದ್ರಲೋಕ, ಶಿವಸ್ಥಾನವಾದ ಕೈಲಾಸಗಿರಿಗಳನ್ನು ಸುತ್ತಿದೆನು. ಅಲ್ಲಿ ನೀನಿರಲಿಲ್ಲ. ನೀನಿಲ್ಲದಿರುವುದನ್ನು ತಿಳಿದು ನಿನ್ನನ್ನು ನೋಡಬೇಕೆಂದು ಬಂದಿರುವೆನು.

೨೩. ಪುಲಸ್ತ್ಯನು ಹೇಳಿದನು—ಆ ಋಷಿಯು ಹೀಗೆಂದು ಹೇಳಿ ಆಕೆಯನ್ನು ನೋಡಿ ಈಕೆಯ ನಿರ್ಭಯವೂ, ಧೈರ್ಯವೂ, ಕಾನ್ತಿಯೂ, ವಯಸ್ಸೂ ಆಶ್ಚರ್ಯಕರವಾದುವು.

೨೪. ಹೀಗಿದ್ದರೂ ಈಕೆಗೆ ಕಾಮಾಸಕ್ತಿಯೇ ಇಲ್ಲವಲ್ಲ. ಎಂದು ದುಃಖಿಸಿದನು. ದೇವತೆಗಳು, ಗಂಧರ್ವರು, ಸಿದ್ಧರು, ಯಕ್ಷರು, ಕಿನ್ನರರು, ರಾಕ್ಷಸರು, ಇವರ ಸ್ತ್ರೀಯರಲ್ಲಿ ಯಾರಲ್ಲಿಯೂ ಇಂತಹ ರೂಪವನ್ನು ಕಾಣಲಿಲ್ಲ

೨೫. ನಾರದನು ಹೀಗೆ ಮನಸ್ಸಿನಲ್ಲಿ ಯೋಚಿಸುತ್ತಾ ಆಶ್ಚರ್ಯಗೊಂಡನು. ವರದಳಾದ ಆ ದೇವಿಗೆ ನಮಸ್ಕಾರಮಾಡಿ ಅಂತರಿಕ್ಷಕ್ಕೆ ಹಾರಿದನು.

೨೬. ಸಮುದ್ರ ಮಧ್ಯದಲ್ಲಿ ಮಹಿಷದ ಹೆಸರಿನಿಂದ ಕೂಡಿದ ಆದೇ ರಾಕ್ಷಸನು ಕಾಪಾಡುತ್ತಿರುವ ಪಟ್ಟಣವನ್ನು ಹೊಂದಿದನು.

ಮಹಿಷಾಖ್ಯೇನ ಯಾ ಭೀಷ್ಮ ಸಮುದ್ರಾನ್ತಸ್ಥಿತಾ ತದಾ ।
ತತ್ರಾಸಸಾದ ಭಗವಾನ್ಮಹಿಷಂ ದಾನವಾಕೃತಿಂ ॥ ೨೭ ॥

ದೃಷ್ಟ್ವಾ ಲಬ್ಧವರಂ ವೀರಂ ದೇವಸೈನ್ಯಾನ್ತಕಂ ಮಹತ್ ।
ಸ ತೇನ ಪೂಜಿತೋ ಭಕ್ತ್ಯಾ ನಾರದೋ ಮುನಿಪುಂಗವಃ ॥ ೨೮ ॥

ಪ್ರೀತಾತ್ಮಾ ನಾರದಸ್ತಸ್ಮೈ ದೇವ್ಯಾ ರೂಪಮನುತ್ತಮಂ ।
ಆಚಖ್ಯೌ ತದ್ಯಥಾನ್ಯಾಯಂ ಯದ್ದೃಷ್ಟಂ ಪುಷ್ಕರೇ ತಥಾ ॥ ೨೯ ॥

॥ ನಾರದ ಉವಾಚ ॥

ಅಸುರೇಂದ್ರ ಶೃಣುಷ್ವೈಕಂ ಕನ್ಯಾರತ್ನಸಮನ್ವಿತಂ ।
ಯೇನ ಲಬ್ಧೇನ ಲಬ್ಧಂ ಸ್ಯಾತ್ತ್ರೈಲೋಕ್ಯಂ ಸಚರಾಚರಂ ॥ ೩೦ ॥

ಬ್ರಹ್ಮಲೋಕಾದಹಂ ದೈತ್ಯ ಪುಷ್ಕರಾರಣ್ಯಮಾಗತಃ ।
ತತ್ರ ದೇವೀಪುರಂ ದೃಷ್ಟಂ ಕುಮಾರೀಶತಸಂಕುಲಂ ॥ ೩೧ ॥

---

೨೭. ಅಲ್ಲಿಗೆ ಹೋಗಿ ದಾನವನಾದ ಮಹಿಷನನ್ನು ನೋಡಿದನು.

೨೮. ಅಸದೃಶವಾದ ವರವನ್ನು ಪಡೆದ, ದೇವಸೈನ್ಯಕ್ಕೆ ಯಮನಾದ, ಆ ವೀರನನ್ನು ನೋಡಿ ನಾರದನು ಆತನಿಂದ ಭಕ್ತಿಯಿಂದ ಪೂಜಿಸಲ್ಪಟ್ಟನು.

೨೯. ಸಂತೋಷಗೊಂಡ ನಾರದನು ಆ ರಾಕ್ಷಸನಿಗೆ ಪುಷ್ಕರದಲ್ಲಿ ತಾನು ನೋಡಿದ ಆ ದೇವಿಯ ಸ್ವರೂಪವನ್ನು ಸ್ವಲ್ಪವೂ ಬಿಡದೆ ವರ್ಣಿಸಿದನು.

೩೦. ನಾರದನು ಹೇಳಿದನು—ಎಲೈ ಅಸುರೇಂದ್ರನೇ! ಕೇಳು. ಒಂದು ಕನ್ಯಾರತ್ನವಿದೆ. ಅದರ ಯೋಗ್ಯತೆಯು ಅಪಾರವಾದುದು. ಅದೊಂದನ್ನು ಹೊಂದಿದರೆ ಚರಾಚರಗಳುಳ್ಳ ಮೂರು ಲೋಕವೂ ಸಿಕ್ಕಿದಂತಾಗುತ್ತದೆ.

೩೧ ನಾನು ಬ್ರಹ್ಮಲೋಕದಿಂದ ಪುಷ್ಕರಾರಣ್ಯಕ್ಕೆ ಬಂದೆನು. ಅಲ್ಲಿ ಬಹುಜನ ಕುಮಾರಿಯರಿಂದ ಕೂಡಿರುವ ದೇವಿಪುರವು ಕಂಡಿತು.

ತತ್ರ ಪ್ರಧಾನಾ ಯಾ ಕನ್ಯಾ ತಾಪಸೀವ್ರತಧಾರಿಣೀ ।
ಆದೇವದೈತ್ಯಯಕ್ಷಾಣಾಂ ಮಧ್ಯೇ ಕಾಚಿನ್ನ ದೃಶ್ಯತೇ ॥ ೩೨ ॥

ತಾದೃಶೀ ತು ಶುಭಾ ದೈತ್ಯ ತಾದೃಗ್ಬ್ರಹ್ಮಾಂಡಮಧ್ಯತಃ ।
ತಾದೃಶೀ ಭ್ರಮತಾ ದೃಷ್ಟಾ ನ ಕದಾಚಿನ್ಮಯಾ ಸತೀ ॥ ೩೩ ॥

ತಸ್ಯಾಶ್ಚ ದೇವಗಂಧರ್ವಾಃ ಸಿದ್ಧಕಿನ್ನರಚಾರಣಾಃ ।
ಉಪಾಸಾಂಚಕ್ರಿರೇ ಸರ್ವೇ ಯೇಚಾನ್ಯೇ ದೇವನಾಯಕಾಃ ॥ ೩೪ ॥

ತಾಂ ದೃಷ್ಟ್ವಾ ಚ ಶುಭಾಂ ದೇವೀಂ ತ್ವಾಂ ದ್ರಷ್ಟುಂ ಸಮುಪಾಗತಃ ।
ಅಜಿತ್ವಾ ದೇವತಾಸ್ಸರ್ವಾ ನ ತಾಂ ಲಭೇತ ಕರ್ಹಿಚಿತ್ ॥ ೩೫ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತ್ವಾ ಕ್ಷಣಂ ಸ್ಥಿತ್ವಾ ತಮನುಜ್ಞಾಪ್ಯ ನಾರದಃ ।
ಯಥಾಗತಂ ಯಯೌ ಧೀಮಾನನ್ತರ್ಧಾನೇನ ತತ್ಕ್ಷಣಾತ್ ॥ ೩೬ ॥

---

೩೨. ಆ ಕುಮಾರಿಯರ ಮಧ್ಯದಲ್ಲಿ ತಾಪಸವ್ರತವನ್ನು ಧರಿಸಿರುವಳೊಬ್ಬ ಕನ್ಯೆಯಿರುವಳು ಅವಳಂಥವಳು ದೇವ ದೈತ್ಯ ಯಕ್ಷರೊಳಗೆ ಒಬ್ಬಳೂ ಇಲ್ಲ.

೩೩. ಅವಳು ಅಷ್ಟು ರೂಪವತಿಯು. ಅಷ್ಟು ಬ್ರಹ್ಮಾಂಡಮಧ್ಯದಲ್ಲಿ ಸುತ್ತುತ್ತಿರುವ ನನಗೆ ಅಂಥವಳು ಎಲ್ಲೂ ಕಾಣಲ್ಪಡಲಿಲ್ಲ,

೩೪. ದೇವ ಗಂಧರ್ವ, ಕಿನ್ನರ, ಚಾರಣರೂ, ಅನೇಕರಾದ ನಾಯಕರು ಅವಳನ್ನು ಸೇವಿಸುತ್ತಿದ್ದಾರೆ.

೩೫. ಆ ಉತ್ತಮ ಸ್ತ್ರೀಯನ್ನು ನೋಡಿದೊಡನೆಯೇ ನಿನ್ನನ್ನು ನೋಡಲು ಬಂದೆನು. ದೇವತೆಗಳನ್ನೆಲ್ಲಾ ಜಯಿಸಿದ ಹೊರತು ಅವಳನ್ನು ಹೊಂದಲಸಾಧ್ಯವು

೩೬. ಪುಲಸ್ತ್ಯನು ಹೇಳಿದನು—ಈ ರೀತಿಯಾಗಿ ಹೇಳಿ ಕ್ಷಣಕಾಲವಲ್ಲಿದ್ದು ಅವನ ಒಪ್ಪಿಗೆಯನ್ನು ಪಡೆದು ಆ ಕ್ಷಣದಲ್ಲಿಯೇ ಅಂತರ್ಧಾನನಾಗಿ ಬಂದಂತೆ ಹೊರಟು ಹೋದನು.

ಗತೇ ತು ನಾರದೇ ದೈತ್ಯಶ್ಚಿಂತಯಾಮಾಸ ತಾಂ ಶುಭಾಂ ।
ಶ್ರುತ್ವಾ ಯಾಂ ನಾರದಮುಖಾತ್ಸ್ಮೃತ್ವಾ ವಿಸ್ಮಿತಮಾನಸಃ ॥ ೩೭ ॥

ತಾಮೇವ ಚಿಂತಯನ್ ಶರ್ಮ ನ ಲೇಭೇ ದೈತ್ಯಸತ್ತಮಃ ।
ತತ್ತ್ವಜ್ಞಾನ್ಸರ್ವಮಂತ್ರಾಣಾಂ ಮಂತ್ರಿಣಃ ಸಮುಪಾಹ್ವಯತ್ ॥ ೩೮ ॥

ತಸ್ಯಾಷ್ಟೌ ಮಂತ್ರಿಣೋ ವೀರಾ ನೀತಿಮಂತೋ ಬಹುಶ್ರುತಾಃ ।
ಪ್ರಘಸೋ ವಿಘಸಶ್ಚೈವ ಶಂಕುಕರ್ಣೋ ವಿಭಾವಸುಃ ॥ ೩೯ ॥

ವಿದ್ಯುನ್ಮಾಲೀ ಸುಮಾಲೀ ಚ ಪರ್ಜನ್ಯೋಽಕ್ರೂರ ಏವ ಚ ।
ಏತೇ ಮಂತ್ರಿವರಾಸ್ಸರ್ವೇ ಪ್ರಾಧಾನ್ಯೇನ ಪ್ರಕೀರ್ತಿತಾಃ ॥ ೪೦ ॥

ತೇ ದಾನವೇಂದ್ರಮಾಸಾದ್ಯ ಊಚುಃ ಕೃತ್ಯಂ ವಿಧೀಯತಾಂ ।
ತೇಷಾಂ ತದ್ವಚನಂಶ್ರುತ್ವಾ ದಾನವೇಂದ್ರೋ ಮಹಾಬಲಃ ॥ ೪೧ ॥

ಉವಾಚ ಕನ್ಯಾಲಾಭಾಯ ನಾರದಾವಾಪ್ತನಿಶ್ಚಯಃ ॥ ೪೨ ॥

---

೩೭. ನಾರದನು ಹೊರಟು ಹೋಗುತ್ತಲೂ ನಾರದನು ಹೇಳಿದ ಆಕೆಯನ್ನು ಕುರಿತು ಸ್ಮರಿಸಿಕೊಂಡು ಆಶ್ಚರ್ಯಪಡುತ್ತಾ ಚಿಂತಾಸಕ್ತನಾದನು.

೩೮. ಅವಳನ್ನು ಯೋಚಿಸುತ್ತಾ ಆ ದೈತ್ಯನು ಚಿಂತೆಯಲ್ಲಿ ಮುಳುಗಿದನು. ಆಗ ಎಲ್ಲಾ ಯೋಚನೆಗಳ ಸ್ವರೂಪವನ್ನು ಬಲ್ಲ ಮಂತ್ರಿಗಳನ್ನು ಕರೆಸಿದನು.

೩೯-೪೦. ಪ್ರಘಸ, ವಿಘಸ, ಶಂಕುಕರ್ಣ, ವಿಭಾವಸು, ವಿದ್ಯುನ್ಮಾಲೀ, ಸುಮಾಲೀ, ಪರ್ಜನ್ಯ, ಅಕ್ರೂರ, ಎಂಬ ಹೆಸರುಳ್ಳ ನೀತಿವಂತರೂ, ವಿದ್ವಾಂಸರೂ, ಆದ ಎಂಟು ಜನ ಮಂತ್ರಿಗಳು ಪ್ರಧಾನರು.

೪೧-೪೨. ಅವರು ಆ ರಾಕ್ಷಸೇಂದ್ರನ ಸಮೀಪಕ್ಕೆ ಬಂದು ಕೆಲಸವೇನು ? ಹೇಳು. ಎಂದರು. ಆ ಮಂತ್ರಿಗಳ ಮಾತನ್ನು ಕೇಳಿ ಬಲಿಷ್ಠನಾದ ಮಹಿಷನು ನಾರದನಿಂದ ಹೊಂದಿದ ನಿಶ್ಚಯಾಂಶವನ್ನು ತಿಳಿಸಿದನು.

॥ ಮಹಿಷಾಸುರ ಉವಾಚ ॥

ಮಹ್ಯಂ ಹಿ ಕಥಿತಾ ಬಾಲಾ ನಾರದೇನ ಸುರರ್ಷಿಣಾ ।
ಬಿಂಬೋಷ್ಠೀ ಚಾರುಸರ್ವಾಂಗೀ ಚಂದ್ರಕಾನ್ತತರಾ ಹಿ ಸಾ ॥ ೪೩ ॥

ಸ್ತನೌ ಚ ಪೀನೌ ಕಠಿನೌ ಸಂಹತೌ ಚಾರುದರ್ಶನೌ ।
ಮೃಣಾಳಕೋಮಲೌ ಬಾಹೂ ನಯನೇ ಚ ಸುತಾರಕೇ ॥ ೪೪ ॥

ಗಂಭೀರಾವರ್ತುಳಾ ನಾಭಿಸ್ತ್ರಿವಳೀಶೋಭನೋದರಾ ।
ವಿಸ್ತೀರ್ಣಜಘನಾ ಚೈವ ಸುಶ್ರೋಣೀ ಮೃದುಗಾಮಿನೀ ॥ ೪೫ ॥

ಕದಳೀಗರ್ಭಸಂಕಾಶಮೂರುಯುಗ್ಮಂ ಚ ಶೋಭನಂ ।
ಚರಣೌ ಸುಪ್ರಭೌ ತಸ್ಯಾ ಧರಣ್ಯಾಂ ಸುಪ್ರತಿಷ್ಠಿತೌ ॥ ೪೬ ॥

ಪರೋಪಕಾರಿಣಾ ತೇನ ಮುನಿನಾ ಭಾವಿತಾತ್ಮನಾ ।
ಏವಂವಿಧಾ ಮೇ ಕಥಿತಾ ಶ್ರುತಾ ಯಾ ವೀರ್ಯಹಾರಿಣೀ ॥ ೪೭ ॥

---

೪೩. ಮಹಿಷಾಸುರನು ಹೇಳಿದನು– ನಾರದನು ನನಗೊಬ್ಬ ಹುಡುಗಿಯ ವಿಷಯವನ್ನು ಹೇಳಿದನು. ಅವಳು ತೊಂಡೆಯ ಹಣ್ಣಿನಂತಿರುವ ತುಟಿಯುಳ್ಳವಳು ಮನೋಹರವಾದ ಅವಯವಗಳುಳ್ಳವಳು. ಚಂದ್ರನಂತೆ ಮನೋಹರಳು.

೪೪. ಆಕೆಯ ಸ್ತನಗಳು ದಪ್ಪನಾಗಿಯೂ, ಕಠಿಣವಾಗಿಯೂ ಸೇರಿಕೊಂಡು ನೋಡಲು ಮನೋಹರವಾಗಿಯೂ ಇವೆ ತೋಳುಗಳು ಕಮಲದ ಒಳ್ಳಿಯಂತೆ ಕೋಮಲವಾಗಿಯೂ, ಕಣ್ಣುಗಳು ಚೆನ್ನಾಗಿರುವ ಗುಡ್ಡೆಗಳಿಂದಲೂ ಕೂಡಿವೆ.

೪೫. ಹೊಕ್ಕಳು ಆಳವಾಗಿಯೂ ವರ್ತುಳಾಕಾರವಾಗಿಯೂ ಇದೆ. ತ್ರಿವಳಿಗಳಿಂದ ಹೊಟ್ಟೆಯು ರಂಜಿಸುತ್ತಿದೆ. ಜಘನ ಪ್ರದೇಶಗಳು ಅಗಲವಾಗಿಯೂ, ಸೊಂಟವು ಮನೋಹರವಾಗಿಯೂ ಇದೆ. ಮಂದಗಾಮಿನಿಯೂ ಆಗಿದ್ದಾಳೆ

೪೬. ತೊಡೆಗಳೆರಡೂ ಬಾಳೆಯ ಒಳಭಾಗದಂತೆಯೂ, ಮನೋಹರವಾಗಿಯೂ ಇವೆ. ಪಾದಗಳನ್ನು ಭೂಮಿಯ ಮೇಲಿಟ್ಟರೆ ಬಹು ಮನೋಹರವಾಗಿ ಕಾಣುತ್ತವೆ.

೪೭. ಪರೋಪಕಾರಿಯಾದ ಇಂದ್ರಿಯ ನಿಗ್ರಹವುಳ್ಳ ಆ ನಾರದನಿಂದ ಈ ರೀತಿಯಾದ ಈಕೆಯು ತಿಳಿಸಲ್ಪಟ್ಟಳು. ಅವಳ ವಿಷಯವನ್ನು ಕೇಳಿದೊಡನೆಯೇ ಪರಾಕ್ರಮವು ಹಾರಿಹೋಗುತ್ತದೆ.

ಪುಂಸಾಂ ವೈ ಶ್ರಾವಿತೇ ಲಿಂಗೇ ದೃಷ್ಟ್ವಾ ಪ್ರಾಣಹರಾ ಹಿ ಸಾ ।
ಅವಶ್ಯಂ ಸಾ ಮಯಾ ಗ್ರಾಹ್ಯಾ ಯುಷ್ಮಾಕಂ ಸನ್ನಿಧೌ ರಣೇ ॥ ೪೮ ॥

ಸಾ ನಾ ಜಿತ್ವಾಽಸುರಾನ್ಯಕ್ಷಾನ್ನ ಲಭ್ಯೇತ ಕಿಲಾಂಗನಾ ।
ಏತದರ್ಥಂ ಭವಂತೋ ಮೇ ಕಥಯಂತು ವಿನಿಶ್ಚಯಂ ॥ ೪೯ ॥

ಕಥಂ ಸಾ ಲಭ್ಯತೇ ಬಾಲಾ ಕಥಂ ದೇವಾಶ್ಚ ನಿರ್ಜಿತಾಃ ।
ಭವೇಯುರಿತಿ ತೇ ಸರ್ವೇ ಮಂತ್ರಿಣೋ ದಾನವೇಶ್ವರಂ ॥ ೫೦ ॥

ಊಚುಸ್ಸಂಮಂತ್ರಿತಾಸ್ಸರ್ವೇ ಕಥಯಾಮೋ ವಯಂ ತವ ।
ಏವಮುಕ್ತ್ವಾ ವಚೋವೋಚತ್ಪ್ರಘಸೋ ದಾನವೇಶ್ವರಂ ॥ ೫೧ ॥

॥ ಪ್ರಘಸ ಉವಾಚ ॥

ಯಾ ಸಾ ತೇ ಕಥಿತಾ ದೈತ್ಯ ನಾರದೇನ ಮಹಾಸತೀ ।
ಸಾ ಶಕ್ತಿಃ ಪರಮಾ ದೇವೀ ವೈಷ್ಣವೀ ಲೋಕಧಾರಿಣೀ ॥ ೫೨ ॥

ಗುರುಪತ್ನೀಂ ಭೃತ್ಯಪತ್ನೀಂ ತಥಾ ಸಾಮಂತ್ತಯೋಷಿತಃ ।
ಜಿಘೃಕ್ಷನ್ಮ್ರಿಯತೇ ರಾಜನ್ನಗಮ್ಯಾಗಮನೇನ ಚ ॥ ೫೩ ॥

---

೪೮. ಆಕೆಯ ಲಕ್ಷಣಗಳನ್ನು ಕೇಳಿದರೆ ಗಂಡಸರಿಗೆ ಹೊಂದಬೇಕೆಂಬಾಸೆಯಾಗುವಾಗ ನೋಡಿದರೆ ಪ್ರಾಣಗಳು ಹೋಗುವುವೋ ಏನೋ! ಯುದ್ಧಮಾಡಿ ನಿಮ್ಮ ಸಮಕ್ಷಮದಲ್ಲಿ ಆಕೆಯನ್ನು ನಾನು ಹೊಂದಬೇಕು.

೪೯. ದೇವತೆಗಳು ಯಕ್ಷರು ಇವರನ್ನು ಜಯಿಸದೆ ಆಕೆಯು ಸಿಕ್ಕುವಂತಿಲ್ಲ ಇದಕ್ಕೋಸ್ಕರ ಏನು ಮಾಡಬೇಕೆಂಬುದನ್ನು ನೀವು ಹೇಳಿರಿ.

೫೦-೫೧. ಆ ಕನ್ಯೆಯು ಹೇಗೆ ಸಿಕ್ಕುತ್ತಾಳೆ? ದೇವತೆಗಳು ಹೇಗೆ ಜಿತರಾಗುವರು? ಎನ್ನಲು ಎಲ್ಲಾ ಮಂತ್ರಿಗಳೂ ಒಟ್ಟುಗೂಡಿ ಯೋಚಿಸಿ ಹೇಳುತ್ತೇವೆಂದರು. ಈ ರೀತಿ ಹೇಳಿದ ಮೇಲೆ ಪ್ರಘಸನು ದಾನವೇಶ್ವರನನ್ನು ಕುರಿತು ಹೇಳಿದನು.

೫೨. ಪ್ರಘಸನು ಹೇಳಿದನು– ಎಲೈ ದೈತ್ಯನೇ! ನಾರದನು ನಿನಗೆ ಹೇಳಿದಾಕೆಯು ಲೋಕಧಾರಕಳಾದ ವೈಷ್ಣವಿಯಾದ ಪರಾಶಕ್ತಿಯು.

೫೩. ಗುರುವಿನ ಹೆಂಡತಿ, ಆಳಿನ ಹೆಂಡತಿ, ಸಾಮಂತರಾಜರ ಹೆಂಡಿರು ಗಮಿಸುವುದಕ್ಕೆ ಅಯೋಗ್ಯರಾದವರು. ಇವರನ್ನು ಕಾಮಾತುರತೆಯಿಂದ ತರಲಪೇಕ್ಷಿಸಿದರೆ ಅಂಥವನು ಸಾಯುತ್ತಾನೆ.

ಸಾಗ್ನಿ ಜ್ವಾಲಾ ತೃಣಂ ತ್ವಂ ಚ ಸಾ ಚ ತ್ವಾಂ ನಿರ್ದಹಿಷ್ಯತಿ ।
ಏವಂ ಜ್ಞಾತ್ವಾ ನ ಭಾವಂ ತು ಕರ್ತುಮರ್ಹಸಿ ದಾನವ ॥ ೫೪ ॥

ಸುರರ್ಷಿಣಾ ಸುರಕಾರ್ಯಂ ಕರ್ತುಕಾಮೇನ ಕೀರ್ತಿತಾ ॥ ೫೫ ॥

॥ ಪುಲಸ್ತ್ಯ ಉವಾಚ ॥

ಪ್ರಘಸೇನೈವಮುಕ್ತೇ ತು ತದ್ದೇವೀಂ ಪ್ರತಿ ಪಾರ್ಥಿವ ।
ದೈತ್ಯೇಶ್ವರಮಥಾಹೇದಂ ವಿಘಸೋ ನಯಕೋವಿದಃ ॥ ೫೬ ॥

॥ ವಿಘಸ ಉವಾಚ ॥

ವಾರಣೀಯಾ ಕದಾಚಿತ್ತು ಸರ್ವದಾ ವಿಜಿಗೀಷುಭಿಃ ।
ಅನ್ಯತಂತ್ರೇಣ ಕನ್ಯಾಯಾಃ ಕಾರ್ಯಂ ಕ್ವಾಪಿ ಪ್ರಧರ್ಷಣಂ ॥ ೫೭ ॥

ಯದಿ ತೇ ರೋಚತೇ ವಾಕ್ಯಂ ಮದೀಯಂ ರಾಜಸತ್ತಮ ।
ಇದಾನೀಂ ತು ಶುಭಾಂ ದೇವೀಂ ಗತ್ವಾ ಯಾಚತು ಕಶ್ಚನ ॥ ೫೮ ॥

ಯೋ ಮಹಾತ್ಮಾ ಭವೇತ್ತಸ್ಯ ಬಂಧುಸ್ತಂ ಯಾಚಯಾಮಹೇ ।
ಸಾಮ್ನೈವಾದೌ ತತಃ ಪಶ್ಚಾತ್ಕರಿಷ್ಯಾಮಃ ಪ್ರಣಾಮಕಂ ॥ ೫೯ ॥

---

೫೪. ಅವಳು ಅಗ್ನಿಜ್ವಾಲೆಯು, ನೀನು ಹುಲ್ಲು. ಅವಳು ನಿನ್ನನ್ನು ಸುಡುತ್ತಾಳೆ. ಇದನ್ನು ತಿಳಿದು ಆಕೆಯನ್ನು ತರುವ ಅಭಿಪ್ರಾಯವನ್ನು ಬಿಡು.

೫೫ ದೇವಕಾರ್ಯವನ್ನಾಗಮಾಡಬೇಕೆಂದು ಆ ದೇವರ್ಷಿಯು ಹೇಳಿದ್ದಾನೆ.

೫೬. ಪುಲಸ್ತ್ಯನು ಹೇಳಿದನು– ಪ್ರಘಸನು ಹೀಗೆ ಹೇಳುತ್ತಿರಲು, ನೀತಿವಂತನಾದ ವಿಘಸನು ದೈತ್ಯೇಶ್ವರನನ್ನು ಕುರಿತು ಇತೆಂದನು.

೫೭. ವಿಘಸನು ಹೇಳಿದನು– ಜಯಶಾಲಿಗಳಾಗಬೇಕೆಂಬ ರಾಜರು ಪರಾಧೀನತೆಯಲ್ಲಿರುವ ಕನ್ಯೆಯನ್ನು ಒಂದು ವೇಳೆ ಅಪಹರಿಸಲು ಯತ್ನಿಸಿದರೆ ಅದನ್ನು ನಿವಾರಿಸಬೇಕು.

೫೮. ನನ್ನ ಮಾತಿನಲ್ಲಿ ನಿನಗೆ ರುಚಿ ಇದ್ದರೆ ಯಾವನಾದರೂ ಒಪ್ಪಿ ಹೋಗಿ ನಮಗೋಸ್ಕರ ಆ ಕನ್ಯೆಯನ್ನು ಯಾಚಿಸಲಿ.

೫೯. ಯಾವ ಮಹಾತ್ಮನು ಆಕೆಯ ಬಂಧುವೋ ಅವನನ್ನೇ ಯಾಚಿಸೋಣ. ಮೊದಲು ಒಳ್ಳೆಯ ಮಾತಿನಿಂದ ಕೇಳೋಣ ಕೊಡದಿದ್ದರೆ ನಮಸ್ಕರಿಸಿ ಕೇಳೋಣ.

ತತೋ ಭೇದಂ ಕರಿಷ್ಯಾಮಃ ತತೋ ದಂಡಂ ಕ್ರಮೇಣ ವಾ ।
ಅನೇನ ಕ್ರಮಯೋಗೇನ ಯದಿ ಸಾ ನೈವ ಲಭ್ಯತೇ ॥ ೬೦ ॥

ತತಸ್ಸನ್ನಹ್ಯ ಗಚ್ಛಾಮ ಬಲಾದ್ಗೃಹ್ಣಾಮ ತಾಂ ತದಾ ।
ಸಾಧೂಕ್ತೋ ವಿಘಸೇನೈಷ ಯತ್ನಃ ಪ್ರತಿ ವರಾನನಾಂ ॥ ೬೧ ॥

॥ ಮಹಿಷಾಸುರ ಉವಾಚ ॥

ತದೇವ ಕ್ರಿಯತಾಂ ಶೀಘ್ರಂ ದೂತಸ್ತತ್ರ ವಿಸೃಜ್ಯತಾಂ ।
ಯಸ್ಸರ್ವಶಾಸ್ತ್ರನೀತಿಜ್ಞಃ ಶುಚಿಶ್ಶೌಚಸಮನ್ವಿತಃ ॥ ೬೨ ॥

ಸತ್ಯಂ ಜ್ಞಾತ್ವಾ ತು ತಾಂ ದೇವೀಂ ವರ್ಣತೋ ರೂಪತೋ ಗುಣೈಃ ।
ಪರಾಕ್ರಮೇಣ ಶೌರ್ಯೇಣ ವಯಸಾ ಚ ಬಲೇನ ಚ ॥ ೬೩ ॥

ಬಂಧುವರ್ಗೇಣ ಸಾಮಗ್ರ್ಯಾ ಮಾನೇನಾಭರಣೇನ ಚ ।
ಏವಂ ಜ್ಞಾತ್ವಾ ತು ತಾಂ ದೇವೀಂ ತತಃ ಕಾರ್ಯಂ ವಿಧೀಯತಾಂ ॥ ೬೪ ॥

---

೬೦-೬೨. ಆಮೇಲೆ ಭೇದವನ್ನು ಹುಡುಕೋಣ. ಅದಕ್ಕೂ ಸಾಧ್ಯವಿಲ್ಲದಿದ್ದರೆ ದಂಡವನ್ನಾಚರಿಸೋಣ. ಈ ಸಾಮ ದಾನ ಭೇದ ದಂಡಗಳಿಂದ ಸಿಕ್ಕದಿದ್ದರೆ ಎಲ್ಲರೂ ಒಟ್ಟಿಗೆ ಹೋಗಿ ಆಗ ಬಲಾತ್ಕಾರದಿಂದ ಆಕೆಯನ್ನು ತರೋಣ ಎಂದನು.

೬೧. ಮಹಿಷಾಸುರನು ಹೇಳಿದನು—ವಿಘಸನು ಅವಳನ್ನು ತರುವ ರೀತಿಯನ್ನು ಚೆನ್ನಾಗಿ ಹೇಳಿದನು. ಅದೇ ಚೆನ್ನಾಗಿದೆ. ಅದನ್ನೇ ಜಾಗ್ರತೆ ಮಾಡೋಣ. ಅವಳ ಬಳಿಗೆ ದೂತನನ್ನು ಕಳುಹಿಸಿ,

೬೨. ಯಾವನು ಸಮಸ್ತ ಶಾಸ್ತ್ರನೀತಿಗಳನ್ನರಿತು ಶೌಚದಿಂದಿರುವನೋ ಅಂಥವನು ಹೋಗಲಿ.

೬೩-೬೪. ಆಕೆಯ ವರ್ಣ, ರೂಪ, ಬಲ, ಪರಾಕ್ರಮ, ಶೌರ್ಯ, ವಯಸ್ಸು, ಗುಣ, ಬಂಧುವರ್ಗ, ಸಾಮಗ್ರಿಗಳು, ಮಾನ, ಆಭರಣ ಇವು ಹೇಗಿವೆ ? ಎಂಬುದನ್ನು ತಿಳಿಯಬೇಕು. ಹಾಗೆ ತಿಳಿದನಂತರ ಆಮೇಲೆ ಮುಂದಿನ ಕೆಲಸಕ್ಕುಪಕ್ರಮಿಸಬಹುದು.

॥ ಪುಲಸ್ತ್ಯ ಉವಾಚ ॥

ಪ್ರಶಸ್ಯ ತಸ್ಯ ತದ್ವಾಕ್ಯಂ ವಿಘಸಂ ಮಂತ್ರಿಸತ್ತಮಂ ।
ಪ್ರಶಸ್ಯ ಸರ್ವೇ ತಂ ದೂತಂ ಸಂದೇಷ್ಟುಮುಪಚಕ್ರಮುಃ ॥ ೬೫ ॥

ವಿದ್ಯುತ್ಪ್ರಭಂ ಮಹಾಭಾಗಂ ಬಹುಮಾಯಾವಿದಂ ಶುಭಂ ।
ವಿಸರ್ಜಯಿತ್ವಾ ತಂ ದೂತಂ ವಿಘಸೋ ವಾಕ್ಯಮಬ್ರವೀತ್ ॥ ೬೬ ॥

॥ ವಿಘಸ ಉವಾಚ ॥

ಸನ್ನಹ್ಯತಾಂ ದಾನವೇಂದ್ರ ಚತುರಂಗಬಲೇನ ಚ ।
ಕ್ರಿಯತಾಂ ವಿಜಯಂ ತಾವದ್ದೇವಸೈನ್ಯಂ ಪ್ರತಿ ಪ್ರಭೋ ॥ ೬೭ ॥

ಅಸುರೇಂದ್ರ ಸುರೈರ್ಭಗ್ನೈಸ್ತ್ವತ್ಪರಾಕ್ರಮಭೀಷಿತಾ ।
ಸಾ ಕನ್ಯಾ ವಶ್ಯತಾಮೇತಿ ತ್ವಯಿ ಶಕ್ರತ್ವಮಾಗತೇ ॥ ೬೮ ॥

ಲೋಕಪಾಲೈರ್ಜಿತೈಸ್ಸರ್ವೈಸ್ತಥೈವ ಮರುತಾಂ ಗಣೈಃ ।
ನಾಗೈರ್ವಿದ್ಯಾಧರೈಸ್ಸಿದ್ಧೈಃ ಗನ್ಧರ್ವೈಸ್ಸರ್ವತೋ ಜಿತೈಃ ॥ ೬೯ ॥

---

೬೫. ಪುಲಸ್ತ್ಯನು ಹೇಳಿದನು—ಆ ರಾಜನ ಮಾತನ್ನೂ ಪ್ರಶಂಶಿಸಿ, ವಿಘಸನನ್ನೂ ಪ್ರಶಂಶಿಸಿ, ವಿಘಸನಂತೆ ದೂತನನ್ನು ಅಲ್ಲಿಗೆ ಕಳುಹಲು ಎಲ್ಲರೂ ಉಪಕ್ರಮಿಸಿದರು.

೬೬. ಮಹಾನುಭಾವನಾದ, ಮಾಯೆಯನ್ನು ಬಲ್ಲ, ವಿದ್ಯುತ್ಪ್ರಭನನ್ನು ದೂತನನ್ನಾಗಿ ಕಳುಹಿ ವಿಘಸನು ಅವನಿಗೆ ಈ ವಾಕ್ಯವನ್ನು ಹೇಳಿದನು.

೬೭. ವಿಘಸನು ಹೇಳಿದನು—ಚತುರಂಗಸೇನೆಯೊಡನೆ ನೀನು ಸಿದ್ಧನಾಗಿ ದೇವಸೈನ್ಯದಮೇಲೆ ವಿಜಯಯಾತ್ರೆ ಹೊರಡು.

೬೮. ಎಲೈ ರಾಕ್ಷಸನೇ ! ನಿನ್ನ ಪರಾಕ್ರಮದಿಂದ ಹೆದರಿ ಸುರರು ಭಗ್ನರಾಗಲು ನೀನು ಇಂದ್ರಪದವಿಯನ್ನಲಂಕರಿಸಲು ಆ ಹುಡುಗಿಯು ನಿನಗೆ ವಶಳಾಗುತ್ತಾಳೆ.

೬೯-೭೦. ಲೋಕಪಾಲರು, ಮರುದ್ಗಣಗಳು, ನಾಗರು, ವಿದ್ಯಾಧರರು, ಸಿದ್ಧರು, ಗಂಧರ್ವರು, ರುದ್ರರು, ವಸುಗಳು, ಆದಿತ್ಯರು ಇವರೆಲ್ಲರೂ ಸೋತಮೇಲೆ

ರುದ್ರೈರ್ವಸುಭಿರಾದಿತ್ಯೈಃ ತ್ವಮೇವೇಂದ್ರೋ ಭವಿಷ್ಯಸಿ ।
ಇಂದ್ರಸ್ಯ ತೇ ಸತಃ ಕನ್ಯಾ ದೇವಗನ್ಧರ್ವಯೋಷಿತಃ ।
ವಶ್ಯಮೇವಾಗಮಿಷ್ಯಂತಿ ಸರ್ವದಾ ಭಯಪೀಡಿತಾಃ ॥ ೭೦ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತಸ್ತದಾ ದೈತ್ಯಃ ಸೇನಾಪತಿಮುವಾಚ ಹ ।
ವಿರೂಪಾಕ್ಷಂ ಮಹಾಮೇಘಂ ನೀಲಾಂಜನಸಮಪ್ರಭಂ ॥ ೭೧ ॥

॥ ಮಹಿಷಾಸುರ ಉವಾಚ ॥

ಆನೀಯತಾಂ ದ್ರುತಂ ಸೈನ್ಯಂ ಹಸ್ತ್ಯಶ್ವರಥಪತ್ತಿಮತ್ ।
ಯೇನ ದೇವಾಂಶ್ಚ ಗಂಧರ್ವಾನ್ಜಯಾಮೋ ಯುಧಿ ದುರ್ಜಯಾನ್ ॥ ೭೨ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತೋ ವಿರೂಪಾಕ್ಷೋ ತಂ ಗೃಹೀತ್ವಾ ಸ ಮೂರ್ಧನಿ ।
ಉವಾಚ ತಂ ದಾನವೇಂದ್ರಂ ಪ್ರಣಿಪತ್ಯ ಪ್ರಶಸ್ಯ ಚ ॥ ೭೩ ॥

---

ನೀನೇ ಇಂದ್ರನಾಗುತ್ತೀಯೆ. ನೀನು ಇಂದ್ರನಾದ ಮೇಲೆ ಆ ಕನ್ಯಾಮಣಿಯೂ, ದೇವಗಂಧರ್ವಸ್ತ್ರೀಯರೂ ಹೆದರಿಕೊಂಡು ನಿನಗೆ ವಶರಾಗುತ್ತಾರೆ.

೭೧ ಪುಲಸ್ತ್ಯನು ಹೇಳಿದನು— ಹೀಗೆ ಹೇಳಿದಮೇಲೆ ಆ ಮಹಿಷನು ಕಣ್ಣು ಕೆಂಪಗೂ, ದೇಹವೆಲ್ಲಾ ಕಪ್ಪಗೂ ಇರುವ ಮಹಾಮೇಘ ಮತ್ತು ವಿರೂಪಾಕ್ಷರೆಂಬ ಸೇನಾಪತಿಗಳನ್ನು ಕುರಿತು ಹೇಳಿದನು.

೭೨. ಮಹಿಷಾಸುರನು ಹೇಳಿದನು— ಆನೆ, ಕುದುರೆ, ರಥ, ಕಾಲಾಳುಗಳಿಂದ ಕೂಡಿದ ಸೈನ್ಯವನ್ನು ಶೀಘ್ರವಾಗಿ ತೆಗೆದುಕೊಂಡು ಬನ್ನಿರಿ. ಅದರಿಂದ ಯುದ್ಧದಲ್ಲಿ ದುರ್ಜಯರಾದ ದೇವಗಂಧರ್ವರನ್ನು ಜಯಿಸೋಣ.

೭೩. ಪುಲಸ್ತ್ಯನು ಹೇಳಿದನು— ಹೀಗೆ ಹೇಳಲ್ಪಟ್ಟ ವಿರೂಪಾಕ್ಷನು ಆ ಅಪ್ಪಣೆಯನ್ನು ಶಿರಸಾವಹಿಸಿ ನಮಸ್ಕರಿಸಿ ದಾನವೇಂದ್ರನಿಗೆ ವಿಜ್ಞಾಪಿಸಿದನು.

॥ ವಿರೂಪಾಕ್ಷ ಉವಾಚ ॥

ಅವಿರೋಧೇನ ದೇವಾನಾಂ ತಿಷ್ಠ ರಾಜನ್ ಶತಂ ಸಮಾಃ ।
ಜೀವದ್ಭಿಃ ಪ್ರಾಪ್ಯತೇ ರಾಜ್ಯಂ ಭೋಗಾಃ ಸೌಖ್ಯಂ ಧನಾನಿ ಚ ॥ ೭೪ ॥

ಏತನ್ಮತ್ವಾ ನ ವಿರೋಧಂ ಸುರೈರ್ಗಚ್ಛ ಮಹಾದ್ಯುತೇ ।
ಬ್ರಹ್ಮಣಾ ತೇ ವರೋ ದತ್ತಸ್ತ್ವಜೇಯಸ್ತ್ವಂ ದಿವೌಕಸಾಂ ॥ ೭೫ ॥

ಅನೇನೈವ ವರೇಣ ತ್ವಂ ಸ್ವಸ್ಥಾನೇ ತಿಷ್ಠ ವೈ ಸುಖಂ ।
ದೇವಾನಾಂ ದಾನವಾನಾಂ ಚ ಕನ್ಯಯಾ ರೂಪತೋಧಿಕಾಃ ॥ ೭೬ ॥

ಪತಿಸ್ತ್ವಾಸಾಂ ದಾನವೇಂದ್ರ ಸ ವೈ ಕರ್ತಾಸ್ಮಿ ತೇ ವಚಃ ।
ಅತೀವ ಸ್ಪರ್ಧತೇ ಲೋಕೋ ಜೇತುಂ ಸ್ವೇನ ಬಲೇನ ಚ ॥ ೭೭ ॥

---

೭೪. ವಿರೂಪಾಕ್ಷನು ಹೇಳಿದನು—ಎಲೈ ರಾಜನೇ! ದೇವತೆಗಳೊಡನೆ ವಿರೋಧವಿಲ್ಲದೆ ಅನೇಕ ವರ್ಷಗಳವರೆಗೆ ಇರು. ಜೀವವಿದ್ದರೆ ರಾಜ್ಯ, ಭೋಗ, ಸೌಖ್ಯ, ಧನಗಳೆಲ್ಲವೂ ಸಿಕ್ಕುತ್ತವೆ.

೭೫. ಇದನ್ನು ತಿಳಿದು ದೇವತೆಗಳೊಡನೆ ವಿರೋಧವನ್ನು ಹೊಂದಿದರು. ಬ್ರಹ್ಮನು ನಿನಗೆ ವರವನ್ನೇನೋ ಕೊಟ್ಟಿದ್ದಾನೆ. ಅದರಿಂದ ನಿನ್ನನ್ನು ದೇವತೆಗಳು ಜಯಿಸಲಾರರು. ಈ ವರದಿಂದ ಅವರಮೇಲೆ ಯುದ್ಧಮಾಡುವ ಬಲವು ನಿನಗಿದ್ದರೂ ಅದರಿಂದ ರಕ್ಷಿತನಾಗಿ ಸ್ವಸ್ಥಾನದಲ್ಲೇ ಸುಖವಾಗಿರು.

೭೬. ದೇವದಾನವರ ಕನ್ಯೆಯರ ರೂಪಕ್ಕಿಂತ ಅಧಿಕ ರೂಪವುಳ್ಳವರಿಗೆ ನೀನು ಪತಿಯಾಗಿದ್ದೀಯೆ. ಅವಳಿಂದೇನು? ನಿನ್ನ ಅಪ್ಪಣೆಯನ್ನು ನಾನು ಪಾಲಿಸಲು ಅಭ್ಯಂತರವಿಲ್ಲ.

೭೭. ಯಾವಾಗಲೂ ಜನಗಳು ತಮ್ಮ ಬಲವನ್ನೆಲ್ಲಾ ಬಿಟ್ಟು ಜಯಿಸಬೇಕೆಂದು ಹೋರಾಡುತ್ತಾರೆ.

ತೇಷಾಂ ಪ್ರಧಾನಭೂತಾನಾಂ ಕೋಟಯಸ್ತ್ವರ್ಬುದಾನಿ ಚ ।
ಏತೇಷಾಂ ಸ್ವಬಲಮಾಯಾತಿ ಶತಕೋಟ್ಯಯುತಾಧಿಕಂ ॥ ೭೮ ॥

ತೇಷಾಂ ದೈತ್ಯಸಹಸ್ರಾಣಿ ದಾನವಾನಾಂ ಮಹಾತ್ಮನಾಂ ।
ಸಮಂತಂ ಚಕ್ರುರವ್ಯಗ್ರಾಸ್ತದಾ ದೈತ್ಯಾಃ ಪ್ರಚಾರಿಣಃ ।
ಪ್ರಯಾಣಂ ರೋಚಯಾಮಾಸ ದೇವಸೈನ್ಯಜಿಘಾಂಸಯಾ ॥ ೭೯ ॥

॥ ಪುಲಸ್ತ್ಯ ಉವಾಚ ॥

ತತೋ ಮಹಿಷದೈತ್ಯಸ್ತು ಕಾಮರೂಪೀ ಮಹಾಬಲಃ ।
ಮತ್ತಂ ನಾಗಂ ಸಮಾರೂಢೋ ಯಯಾಸುಮೇರುಪರ್ವತಂ ॥ ೮೦ ॥

ತತ್ರೇಂದ್ರಪುರಮಾಸಾದ್ಯ ದೇವೈಸ್ಸಹ ಶತಕ್ರತುಂ ।
ಅಭಿರುದ್ರಾವ ದೈತ್ಯೇಂದ್ರಃ ತತೋ ದೇವಾಃ ಕ್ರುಧಾನ್ವಿತಾಃ ॥ ೮೧ ॥

ಶಿತಾನ್ಯಾದಾಯ ಶಸ್ತ್ರಾಣಿ ವಾಹನಾನಿ ವಿಶೇಷತಃ ।
ಅಧಿಷ್ಠಾಯ ಸುರಾನಾಜೌ ದುದ್ರುವುರ್ಮುದಿತಾ ಭೃಶಂ ॥ ೮೨ ॥

---

೭೮. ಆ ದೈತ್ಯರಲ್ಲಿ ಪ್ರಧಾನರಾದವರು ಅರ್ಬುದದ ಮೇಲೆ ಅನೇಕ ಕೋಟಿಗಳು ಇರುವರು. ಅವರಲ್ಲಿ ಒಬ್ಬೊಬ್ಬರೂ, ಅಯುತದ ಮೇಲೆ ಅನೇಕ ಕೋಟಿ ಸೈನಿಕರನ್ನು ತರುವರು.

೭೯. ಅವರೊಳಗೆ ಸಹಸ್ರಜನ ದೈತ್ಯರೂ, ಸಹಸ್ರಜನ ದಾನವರೂ, ಎಲ್ಲ ಕಡೆಯಲ್ಲೂ ಯುದ್ಧಕ್ಕೆ ಸಿದ್ಧತೆಯನ್ನು ಮಾಡಿದರು. ಕೊನೆಗೆ ದೇವತೆಗಳಮೇಲೆ ಯುದ್ಧಮಾಡಲು ಪ್ರಯಾಣವನ್ನು ನಿರ್ಧರಿಸಿದನು.

೮೦. ಪುಲಸ್ತ್ಯನು ಹೇಳಿದನು- ಕಾಮರೂಪಿಯೂ, ಮಹಾಬಲಿಷ್ಠನೂ ಆದ ಮಹಿಷಾಸುರನು ಯುದ್ಧಕ್ಕೋಸ್ಕರ ಮೇರು ಪರ್ವತಕ್ಕೆ ಹೋಗಲು ಮದ್ದಾನೆಯನ್ನು ಹತ್ತಿದನು.

೮೧. ಆ ದೈತ್ಯೇಂದ್ರನು ಮೇರು ಪರ್ವತದಲ್ಲಿ ದೇವತೆಗಳನ್ನೂ, ಇಂದ್ರನನ್ನೂ ಎದುರಿಸಿದನು. ದೇವತೆಗಳಿಗೂ ಕೋಪ ಬಂತು.

೮೨. ದೇವತೆಗಳೂ ಹರಿತವಾದ ಆಯುಧಗಳನ್ನು ತೆಗೆದುಕೊಂಡು ಉತ್ತಮ ವಾಹನಗಳನ್ನೇರಿ ಒರಲು ಮುಖಂಡರುಗಳು ಮುಂದಾಗಿ ಬಂದು ಎದುರಿಸಿದರು.

ತೇಷಾಂ ಪ್ರವವೃತೇ ಯುದ್ಧಂ ಮಹತಾಂ ಭೀಮವಿಕ್ರಮಂ ।
ಘೋರಂ ಪ್ರಚಂಡಯೋಧಾನಾಂ ಅನ್ಯೋನ್ಯಮತಿಗರ್ಜಿತಂ ॥ ೮೩ ॥

ತತ್ರಾಂಜನೋ ನೀಲಕುಕ್ಷಿಃ ಮೇಘವರ್ಣೋ ಮಹಾಬಲಃ ।
ಉದರಾಕ್ಷೋ ಲಲಾಟಾಕ್ಷೋ॥ ಮಹಾಕ್ಷೋ ಭೀಮವಿಕ್ರಮಃ ॥ ೮೪ ॥

ಸ್ವರ್ಭಾನುರ್ವಸುರಷ್ಟಾಘಃ ಸರ್ವೇ ದುದ್ರುವುರಾಹವೇ ।
ಯಥಾಸಂಖ್ಯೇನ ತದ್ವಚ್ಚ ದೈತ್ಯಾ ದ್ವಾದಶಚಾಪರೇ ॥ ೮೫ ॥

ಆದಿತ್ಯಾನ್ ದೈತ್ಯಸಂಘಾಸ್ತೇತೇಷಾಂ ಪ್ರಾಧಾನ್ಯತಃ ಶೃಣು ।
ಭೀಮಾಕ್ಷೋ ಗಜಕರ್ಣಶ್ಚ ಶಂಕುಕರ್ಣಸ್ತಥೈವ ಚ ॥ ೮೬ ॥

ರಕ್ತಾಕ್ಷೋ ಭೀಮದಂಷ್ಟ್ರಶ್ಚ ವಿದ್ಯುಜ್ಜಿಹ್ವಸ್ತಥೈವ ಚ ।
ಅತಿಕಾಯೋ ಮಹಾಕಾಯೋ ದೀರ್ಘಬಾಹುಃ ಕೃತಾಂತಕೃತ್ ॥ ೮೭ ॥

ಏತೇ ದ್ವಾದಶದೈತ್ಯೇಂದ್ರಾ ಆದಿತ್ಯಾನಭಿದುದ್ರುವುಃ ।
ಸ್ವಂ ಸ್ವಂ ಬಲಮುಪಾದಾಯ ತದ್ವದನ್ಯೇಽಪಿ ದಾನವಾಃ ॥ ೮೮ ॥

---

೮೩. ಪ್ರಚಂಡವಾದ ಪರಸ್ಪರ ಗರ್ಜಿಸುತ್ತಿರುವ ಪರಾಕ್ರಮಿಗಳಾದ ಇವರಿಗೆ ಅನ್ಯೋನ್ಯವಾಗಿ ಯುದ್ಧವು ಮೊದಲಾಯಿತು.

೮೪-೮೭. ಅಂಜನ, ನೀಲಕುಕ್ಷಿ, ಮೇಘವರ್ಣ, ಬಲಾಹಕ. ಉದರಾಕ್ಷ, ಲಲಾಟಾಕ್ಷ, ಮಹಾಕ್ಷ, ಭೀಮವಿಕ್ರಮ, ಸ್ವರ್ಭಾನು, ವಸು, ಅಷ್ಟಾಘ ಇವರೆಲ್ಲರೂ ಎದುರಿಸಿದರು. ಸಂಖ್ಯೆಯನ್ನತಿಕ್ರಮಿಸದೆ ಒಬ್ಬರಿಗೊಬ್ಬರು ಸಿದ್ಧರಾದರು ಅವರಲ್ಲಿ ಇನ್ನು ಮುಖ್ಯರಾದ ಹನ್ನೆರಡು ಜನ ದೈತ್ಯರು ಇದ್ದಾರೆ. ಅವರ ಹೆಸರನ್ನು ಕೇಳು. ಭೀಮಾಕ್ಷ ಗಜಕರ್ಣ, ಶಂಕುಕರ್ಣ, ರಕ್ತಾಕ್ಷ, ಭೀಮದಂಷ್ಟ್ರ, ವಿದ್ಯುಜ್ಜಿಹ್ವ, ಅತಿಕಾಯ, ದೀರ್ಘಬಾಹು, ಕೃತಾನ್ತಕೃತ್, ಮಹಾಕಾಯ ಈ ಹನ್ನೆರಡು ಜನರು ಆದಿತ್ಯರನ್ನು ಎದುರಿಸಿದರು.

೮೮. ಇನ್ನೂ ಕೆಲವರು ದಾನವರು ತಮ್ಮ ತಮ್ಮ ಸೈನ್ಯವನ್ನು ತೆಗೆದುಕೊಂಡು ರುದ್ರರುಗಳನ್ನು ಕ್ರಮವಾಗಿ ಎದುರಿಸಿದರು.

ಯಥಾಸಂಖ್ಯೇನ ರುದ್ರಾಸ್ತು ದುರ್ಧರ್ಷ ಭೀಮವಿಕ್ರಮಾಃ ।
ಶೇಷಾನ್ದೇವಾನ್ ಶೇಷದೈತ್ಯಾ ಯಥಾಯೋಗ್ಯಮುಪಾದ್ರವನ್ ॥ ೮೯ ॥

ಸ್ವಯಂ ಮಹಿಷದೈತ್ಯಸ್ತು ಇಂದ್ರಂ ದುದ್ರಾವ ವೇಗತಃ ।
ಸ ಚಾತಿಬಲವಾನ್ದೈತ್ಯೋ ಬ್ರಹ್ಮಣೋ ವರದರ್ಪಿತಃ ॥ ೯೦ ॥

ಅವಧ್ಯಃ ಪುರುಷೇಣಾಜೌ ಯದ್ಯಪಿಸ್ಯಾತ್ಪಿನಾಕಧೃಕ್ ।
ಆದಿತ್ಯೈರ್ವಸುಭಿಸ್ಸರ್ವೈರುದ್ರೈಶ್ಚಾಪಿ ಮಹದ್ಭೃಶಂ ॥ ೯೧ ॥

ಅಸುರಾ ಯಾತುಧಾನಾಶ್ಚ ಸಂಖ್ಯಾಪೂರಣಕೇವಲಾಃ ।
ದೇವಾನಾಮಪಿ ಸೈನ್ಯಾನಿ ನಿಹತಾನ್ಯಸುರೈರ್ಯುಧಿ ॥ ೯೨ ॥

ಏವಂಭೂತೇ ತದಾ ಭಗ್ನೇ ದೇವೇಂದ್ರೇ ವಿದ್ರುತಾಸ್ಸುರಾಃ ।
ಅರ್ದಿತಾ ವಿವಿಧೈಶ್ಶಸ್ತ್ರೈಶ್ಶೂಲಪಟ್ಟಿಸಮುದ್ಗರೈಃ ॥ ೯೩ ॥

ಗತವಂತೋ ಬ್ರಹ್ಮಲೋಕಮಸುರೈರರ್ದಿತಾಸ್ಸುರಾಃ ।
ಅಥ ವಿದ್ಯುತ್ಪ್ರಭೋ ದೈತ್ಯಸ್ತದಾ ದೂತೋ ವಿಸರ್ಜಿತಃ ॥ ೯೪ ॥

---

೮೯. ಉಳಿದ ದೇವತೆಗಳನ್ನೂ ಮಿಕ್ಕ ದೈತರೂ ಕ್ರಮವಾಗಿ ಎದುರಿಸಿದರು ಮಹಿಷಾಸುರನು ಸ್ವಂತವಾಗಿ ತಾನೇ ಇಂದ್ರನನ್ನು ರಭಸದಿಂದ ಎದುರಿಸಿದನು.

೯೦. ಬ್ರಹ್ಮನ ವರದಿಂದ ಬಲಿಷ್ಠನಾದ ಆ ದೈತ್ಯನು ಈಶ್ವರನೇ ಎದುರಿಗೆ ಪಿನಾಕವನ್ನು ಹಿಡಿದು ಬಂದರೂ ಅವಧ್ಯನು.

೯೧. ಆದಿತ್ಯರು, ವಸುಗಳು, ರುದ್ರರು, ಇವರಿಂದ ದೊಡ್ಡದಾಗಿರುವ ಆ ರಾಕ್ಷಸರ ಮತ್ತು ಯಾತುಧಾನರ ಗುಂಪು ಕೇವಲ ಸಂಖ್ಯೆಗೆ ಮಾತ್ರವೇ ಇದ್ದುವು.

೯೨. ಹೀಗೆ ಯುದ್ಧ ನಡೆಯುತ್ತಿರಲು ರಾಕ್ಷಸರು ದೇವತೆಗಳನ್ನು ಸೋಲಿಸಿದರು. ಸೋತಮೇಲೆ ದೇವೇಂದ್ರನೂ ದೇವತೆಗಳೂ ಓಡಿದರು.

೯೩. ನಾನಾ ಬಗೆಯಾದ ಶೂಲ, ಪಟ್ಟಿಸ, ಮುದ್ಗರಗಳಿಂದ ಹೊಡೆಯಲ್ಪಟ್ಟ ದೇವತೆಗಳು ಬ್ರಹ್ಮಲೋಕಕ್ಕೆ ಹೋದರು.

೯೪. ಆಮೇಲೆ ಆ ಕನ್ಯೆಯ ಸಮೀಪಕ್ಕೆ ವಿದ್ಯುತ್ಪ್ರಭನೆಂಬ ದೈತ್ಯನನ್ನು ದೂತತನಕ್ಕೆ ಕಳುಹಿಸಿದರು. ದೇವಿಯ ಬಳಿಗೆ ಆ ದೂತನು ಹೋಗಿ ಇಂತೆಂದನು

ದೇವ್ಯಾಸ್ಸಕಾಶಂ ಗತ್ವಾ ತು ಉವಾಚ ತನುಮಧ್ಯಮಾಂ ।
ಪ್ರಣಮ್ಯ ಪ್ರಣತೋ ಭೂತ್ವಾ ಕುಮಾರೀಶತಸಂಕುಲಾಂ ॥ ೯೫ ॥

ಆಸ್ಥಾನೇ ವಿನಯಾಯುಕ್ತಃ ತಥಾ ವಚನಮಬ್ರವೀತ್ ।
ದೇವಿ ಪೂರ್ವಮೃಷಿಸ್ತ್ವಾಸೀದಾದಿಸರ್ಗೇಷು ಸಂಭವಃ ॥ ೯೬ ॥

ಸಂವತ್ಸರಶತಾಜ್ಜಾತಃ ಸುಪಾರ್ಶ್ವೋ ನಾಮ ವೈ ಭುವಿ ।
ತಸ್ಯಾಭವನ್ಮಹಾತೇಜಾಃ ಸಿಂಧುದ್ವೀಪಃ ಪ್ರತಾಪವಾನ್ ॥ ೯೭ ॥

ಸ ಹಿ ತೀವ್ರಂ ತಪಸ್ತೇಪೆ ಮಾಹಿಷ್ಮತ್ಯಾಂ ಸುರೋತ್ತಮೇ ।
ಕುರ್ವನ್ಸ್ಥಿತಸ್ತಪೋ ಘೋರೇ ನಿರಾಹಾರಸ್ತ್ವಶೋಭನೇ ॥ ೯೮ ॥

ದೈತ್ಯಸ್ಯ ವಿಪ್ರಚಿತ್ತೇಸ್ತು ಸುತಾ ಸುರಸುತೋಪಮಾ ।
ಮಾಹೀಷ್ಮತೀತಿ ವಿಖ್ಯಾತಾ ರೂಪೇಣಾಸದೃಶೀ ಭುವಿ ॥ ೯೯ ॥

ಸಖೀಭಿಸ್ಸಾ ಪರಿವೃತಾ ವಿಹರಂತೀ ಯದೃಚ್ಛಯಾ ।
ಆಗತಾ ಮಂದರದ್ರೋಣೀಂ ತತ್ರಾಪಶ್ಯತ್ತಪೋವನಂ ॥ ೧೦೦ ॥

---

೯೫. ಅನೇಕ ಕುಮಾರಿಯರಿಂದ ಕೂಡಿದ ಆಸ್ಥಾನದಲ್ಲಿ ಆಕೆಗೆ ನಮಸ್ಕರಿಸಿ ನಮ್ರನಾಗಿ ವಿನಯದಿಂದ ವಿಜ್ಞಾಪಿಸಿದನು.

೯೬. ಬ್ರಹ್ಮನ ಮೊದಲನೆಯ ಸೃಷ್ಟಿಯಾದ ನೂರುವರ್ಷಗಳ ಮೇಲೆ ಸುಪಾರ್ಶ್ವನೆಂಬ ಒಬ್ಬ ಋಷಿಯು ಹುಟ್ಟಿದನು

೯೭.-೯೮ ಅವನಿಗೆ ಸಿಂಧುದ್ವೀಪನೆಂಬ ಒಬ್ಬ ಬಲಿಷ್ಠನಾದ ಮಗನಾದನು. ಅವನು ಮಾಹಿಷ್ಮತಿಯಲ್ಲಿ ತೀವ್ರವಾದ ತಪಸ್ಸನ್ನು ಮಾಡಿದನು. ನಿರಾಹಾರನಾಗಿ ಕಠಿಣವಾದ ತಪಸ್ಸನ್ನು ಅವನು ಮಾಡುತ್ತಿದ್ದನು.

೯೯-೧೦೦ ದೈತ್ಯನಾದ ವಿಪ್ರಚಿತ್ತಿಗೆ ಮಾಹಿಷ್ಮತಿ ಎಂಬ ಮಗಳಿದ್ದಳು. ಅವಳು ಅತ್ಯಂತ ರೂಪವತಿಯು. ಆಕೆಯು ಸಖಿಯರೊಡನೆ ಕ್ರೀಡಿಸುತ್ತ ಆಕಸ್ಮಾತ್ತಾಗಿ ಆ ಮಂದರಪರ್ವತದ ಇಕ್ಕಟ್ಟಾದ ಸ್ಥಳಕ್ಕೆ ಬಂದು ಆ ತಪೋವನವನ್ನು ನೋಡಿದಳು.

ಮುನೇರಂಬರಸಂಸಕ್ತೈ ರ್ವಿವಿಧದ್ರುಮಮಾಲಿಕಂ ।
ಲತಾಗೃಹೈಸ್ಸನಿಹಿತೈರ್ಬಕುಳೈರಾಮ್ರತಿಂದುಕೈಃ ॥ ೧೦೧ ॥

ಚಂದನೈರ್ಬದರೈಶ್ಶಾಲೈಸ್ಸರಳೈರುಪಶೋಭಿತಂ ।
ವಿಚಿತ್ರವನಖಂಡೈಶ್ಚ ಭೂಷಿತಂ ತನ್ಮಹಾತ್ಮಭಿಃ ॥ ೧೦೨ ॥

ದೃಷ್ಟ್ವೋತ್ತಮಂ ವನಂ ರಮ್ಯಂ ಆಸುರೀ ಕನ್ಯಕಾ ಶುಭಾ ।
ಮಾಹಿಷ್ಮತೀ ವರಾರೋಹಾ ಚಿಂತಯಾಮಾಸ ಭಾಮಿನೀ ॥ ೧೦೩ ॥

ಭೀಷಯಿತ್ವಾಹಮೇತಾಂಸ್ತು ತಾಪಸಾನಾಶ್ರಮೇ ಸ್ವಯಂ ।
ಶಿಷ್ಯಾಮಿ ಕ್ರೀಡತೀ ಸಾರ್ಧಂ ಸಖೀಭಿಃ ಪರಮಾರ್ಚಿತಾ ॥ ೧೦೪ ॥

ಏವಂ ಸಂಚಿನ್ತ್ಯ ಸಾ ದೇವೀ ಮಹಿಷೀ ಸಂಬಭೂವ ಹ ।
ಮಹಿಷೀಭಿಸ್ಸಹಾನ್ಯಾಭಿಸ್ತೀಕ್ಷ್ಣಶೃಂಗಾಗ್ರಧಾರಿಣೀ ॥ ೧೦೫ ॥

ತಮೃಷಿಂ ಭೀಷಿತುಂ ತಾಭಿರ್ಮಹಾನಾದಂ ನನಾದ ಸಾ
ಅಸೌ ಚ ಭೀಷಿತಸ್ತಾಭಿಸ್ತಾಂ ಜ್ಞಾತ್ವಾ ಜ್ಞಾನಚಕ್ಷುಷಾ ॥ ೧೦೬ ॥

---

೧೦೧-೧೦೨ ಆಕಾಶವನ್ನು ಮುಟ್ಟುತ್ತಿರುವ ಅನೇಕ ಮರಗಳ ಸಾಲುಳ್ಳ ಚೆನ್ನಾಗಿರುವ ಲತಾಗ್ರಹಗಳುಳ್ಳ, ಬಕುಲ, ಆಮ್ರ (ಮಾವು) ತಿಂದುಕ, ಚಂದನ. ಬದರಿ, ಸಾಲ, ಸರಳಗಳಿಂದ ಶೋಭಿತವಾದ ವಿಚಿತ್ರವಾದ ಉಪವನಗಳುಳ್ಳ ಆ ಮಹಾತ್ಮನಿಂದ ಭೂಷಿತವಾದ ಆ ತಪೋವನವನ್ನು ನೋಡಿದಳು.

೧೦೩. ಈ ರಾಕ್ಷಸ ಕನ್ಯೆಯಾದ ಮಹಿಷ್ಮತಿಯು ಆ ವನವನ್ನು ನೋಡಿ ಯೋಚಿಸಿದಳು.

೧೦೪-೧೦೯. ಈ ವನದಲ್ಲಿರುವ ತಾಪಸರನ್ನೆಲ್ಲಾ ಹೆದರಿಸಿ ಓಡಿಸಿ ಸಖಿಯರಿಂದ ಸೇವೆ ತೆಗೆದುಕೊಳ್ಳುತ್ತಾ, ಇಲ್ಲಿ ರಮಿಸುವನೆಂದು ಯೋಚಿಸಿ ಆಕೆಯು ಎಮ್ಮೆಯ ಆಕಾರವನ್ನು ಹೊಂದಿದಳು. ಸಖಿಯರೂ ಅದಕ್ಕೆ ತಕ್ಕ ಆಕಾರವನ್ನು ಹೊಂದಿದರು. ತಾನೂ ಚೂಪಾದ ಕೊಂಬುಗಳನ್ನು ಹೊಂದಿ ಚೂಪಾದ ಕೊಂಬುಗಳುಳ್ಳ ಮಿಕ್ಕ ಎಮ್ಮೆಗಳೊಡನೆ ಕೂಡಿಕೊಂಡು ಆ ಋಷಿಯನ್ನು ಹೆದರಿಸಲು ದೊಡ್ಡದಾಗಿ ಕೂಗಿದಳು. ಅವರಿಂದ ಹೆದರಿಸಲ್ಪಟ್ಟ ಆತನು ಜ್ಞಾನಚಕ್ಷುಸ್ಸಿನಿಂದ ಅವರ ವಿಷಯ

ಆಸುರೀಂ ಕ್ರೋಧಮಾಪನ್ನಃ ಶಶಾಪ ಚ ಸುಲೋಚನಾಂ ।
ಯಸ್ಮಾದ್ಭೀಷಯಸೇ ಮಾಂ ತ್ವಂ ಮಹಿಷೀರೂಪಧಾರಿಣೀ ॥ ೧೦೭ ॥

ಅತೋ ಭವ ಮಹಿಷ್ಯೇವ ಪಾಪಕರ್ಮೇ ಶತಂ ಸಮಾಃ ।
ಏವಮುಕ್ತಾ ತದಾ ಸಾತು ಸಖೀಭಿಃ ಸಹ ವೇಪತೀ ॥ ೧೦೮ ॥

ಪಾದಯೋರಪತತ್ತಸ್ಯ ಶಾಪಾನ್ತಂ ಕುರು ಜಲ್ಪತೀ ।
ತಸ್ಯಾಸ್ತದ್ವಚನಂ ಶ್ರುತ್ವಾ ಸ ಮುನಿಃ ಕರುಣಾನ್ವಿತಃ ।
ಶಾಪಾನ್ತಮಕರೋತ್ತಸ್ಯಾ ವಾಕ್ಯಂ ಚೇದಮುವಾ ಚ ಹ ॥ ೧೦೯ ॥

॥ ಮುನಿರುವಾಚ ॥

ಅನೇನೈವ ತು ರೂಪೇಣ ಪುತ್ರಮೇಕಂ ಪ್ರಸೂಯಸೇ ।
ಶಾಪಾನ್ತೋ ಭವಿತಾ ಭದ್ರೇ ಮದ್ವಾಕ್ಯಂ ನ ಮೃಷಾ ಭವೇತ್ ॥ ೧೧೦ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತಾ ಗತಾ ಸಾ ತು ನರ್ಮದಾತೀರಮುತ್ತಮಂ ।
ಯತ್ರ ತೇಪೇ ತಪೋ ಘೋರಂ ಸಿಂಧುದ್ವೀಪಃ ಪ್ರತಾಪವಾನ್ ॥ ೧೧೧ ॥

---

ವನ್ನು ತಿಳಿದು ರಾಕ್ಷಸರಿಗೆ ಯೋಗ್ಯವಾದ ಕೋಪವನ್ನು ಹೊಂದಿ ಆಕೆಯನ್ನು ಶಪಿ, ದನು. ನನ್ನನ್ನು ನೀನು ಎಮ್ಮೆಯ ಆಕಾರವನ್ನು ಹೊಂದಿ ಭಯಪಡಿಸುತ್ತಿರುವುದರಿಂದ ಎಲೈ ಪಾಪಿನಿ ! ನೀನು ನೂರು ವರ್ಷಗಳವರೆಗೆ ಎಮ್ಮೆಯೇ ಆಗು ಎಂದು ಶಪಿಸಿದನು. ಹೀಗೆ ಶಪಿಸಲ್ಪಟ್ಟ ಆಕೆಯು ನಡುಗುತ್ತಾ ಸಖಿಯರೊಡನೆ ಆತನ ಪಾದಗಳ ಮೇಲೆ ಬಿದ್ದು ಶಾಪಕ್ಕೆ ಕೊನೆಯನ್ನು ದಯವಿಟ್ಟು ಕಾಣಿಸೆಂದಳು. ಅವಳ ಆ ಮಾತನ್ನು ಕೇಳಿ ಕೃಪೆಯಿಂದ ಆ ಮುನಿಯು ಶಾಪದ ಕೊನೆಗಾಣಿಸುವ ಈ ಮಾತುಗಳನ್ನು ಹೇಳಿದನು.

೧೧೦. ಮುನಿಯು ಹೇಳಿದನು- ಭದ್ರೆಯೇ ! ಈ ರೂಪದಿಂದಲೇ ಒಬ್ಬ ಮಗನನ್ನು ಹೆರುತ್ತೀಯೆ. ಅದೇ ನಿನಗೆ ಶಾಪದ ಕಡೆ. ನನ್ನ ಮಾತು ಸುಳ್ಳಾಗುವುದಿಲ್ಲ

೧೧೧. ಪುಲಸ್ತ್ಯನು ಹೇಳಿದನು— ಹೀಗೆ ಹೇಳಿದ ನಂತರ ಆಕೆಯು ಸಿಂಧುದ್ವೀಪನು ತಪಸ್ಸು ಮಾಡುತ್ತಿದ್ದ ನರ್ಮದಾನದಿಯ ತೀರಕ್ಕೆ ಹೋದಳು.

ತತ್ರ ವಿದ್ಯುನ್ಮತೀ ನಾಮ ನಾಮ ದೈತ್ಯಕನ್ಯಾತಿರೂಪಿಣೀ ।
ಸಾ ದೃಷ್ಟ್ವಾ ತೇನ ಮುನಿನಾ ವಿವಸ್ತ್ರಾ ಮಜ್ಜತೀ ಜಲೇ ॥ ೧೧೨ ॥

ಚಸ್ಕಂದ ಸ ಮುನಿಶ್ಶುಕ್ರಂ ಶಿಲಾದ್ರೋಣ್ಯಾಂ ಮಹಾತಪಾಃ ।
ಗಚ್ಛ ಮಾಹಿಷ್ಮತೀ ದೃಷ್ಟ್ವಾ ದಿವ್ಯಗಂಧಿ ಸುಗಂಧಿ ಚ ॥ ೧೧೩ ॥

ನಿಜಾಂ ಸಖೀಮುವಾಚೇದಂ ಪಿಬಾಮಿ ಚ ಜಲಂ ಶುಭಂ ।
ಏವಮುಕ್ತ್ವಾ ತು ಸಾ ಪೀತ್ವಾ ತಚ್ಛುಕ್ರಂ ಮುನಿಸಂಭವಂ ॥ ೧೧೪ ॥

ಪ್ರಾಪ ಗರ್ಭಂ ಮುನೇರ್ವೀರ್ಯಾದ್ವತ್ಸರಂ ಜಠರೇ ಧೃತಂ ।
ತಸ್ಯಾಃ ಪುತ್ರೋ ಭವಚ್ಛ್ರೀಮಾನ್ಮಹಾಬಲಪರಾಕ್ರಮಃ ॥ ೧೧೫ ॥

ಮಹಿಷೇತಿ ಸ್ಮೃತೋ ನಾಮ್ನಾ ಬ್ರಹ್ಮವಂಶವಿವರ್ಧನಃ ।
ಸುರಾಣಾಮಪಹೃತ್ಯಾಜೌ ತ್ರೈಲೋಕ್ಯಂ ಸಮ್ಮತೋನಘೇ ॥ ೧೧೬ ॥

ಆಗಮ್ಯ ದಾಸ್ಯತೇ ಸುಭ್ರು ತವ ದೇವಿ ಮಹಾಸುರಃ ।
ತಸ್ಮಾತ್ಮನಃಪ್ರದಾನೇನ ಕುರು ದೇವಿ ಮಹತ್ಕೃತಂ ॥ ೧೧೭ ॥

---

೧೧೨. ಅಲ್ಲಿ ವಿದ್ಯುನ್ಮತಿಯೆಂಬ ಅತಿ ರೂಪವತಿಯಾದ ದೈತ್ಯ ಕನ್ನಿಕೆಯು ಬಟ್ಟೆಯನ್ನು ಉಟ್ಟುಕೊಳ್ಳದ (ಬೆತ್ತಲೆ· ಆ ನದಿಯಲ್ಲಿ ಸ್ನಾನಮಾಡುತ್ತಿದ್ದುದನ್ನು ಆ ಸಿಂಧುದ್ವೀಪನು ನೋಡಿದನು.

೧೧೩-೧೧೭. ಅವಳನ್ನು ನೋಡಿದೊಡನೆಯೇ ವೀರ್ಯಸ್ಖಲನವಾಗಲು ಅದನ್ನು ಒಂದು ಕಲ್ಲಿನ ದೋಣಿಯಲ್ಲಿ ಬಿಟ್ಟನು ಅಲ್ಲಿಗೆ ಮಾಹಿಷ್ಮತಿಯು ಹೋದಾಗ ಆ ಕಲ್ಲಿನ ದೋಣಿಯಲ್ಲಿ ನೀರನ್ನು ನೋಡಿದಳು. ಅದು ಎಲ್ಲೂ ಎಂದೂ ಕಾಣದಷ್ಟು ಸುವಾಸನೆಯಾಗಿದ್ದಿತು. ಆಗ ತನ್ನ ಸಖಿಯನ್ನು ಕುರಿತು ಈ ನೀರು ಚೆನ್ನಾಗಿದೆ ಕುಡಿಯುತ್ತೇನೆ. ಎಂದಳು. ಹೀಗೆ ಹೇಳಿ ಆಕೆಯು ಆ ವೀರ್ಯವನ್ನು ಪಾನಮಾಡಿದಳು. ಆದರಿಂದ ಗರ್ಭವನ್ನೂ ಧರಿಸಿದಳು. ಅದು ಹೊಟ್ಟೆಯಲ್ಲಿ ಒಂದು ವರ್ಷದವರೆಗೆ ಬೆಳೆಯಿತು. ಅವಳಿಗೆ ಗಂಡುಕೂಸು ಹುಟ್ಟಿತು. ಅದೇ ಮಹಾಬಲಪರಾಕ್ರಮವುಳ್ಳ ಮಹಿಷನು. ಬ್ರಾಹ್ಮಣನ ವಂಶೋದ್ಧಾರಕನು. ಯುದ್ಧದಲ್ಲಿ ದೇವತೆಗಳನ್ನು ಜಯಿಸುವನು. ಬಂದು ನಿನಗೆ ಇಷ್ಟವಾದುದನ್ನು ಕೊಡುತ್ತಾನೆ. ಅವನಿಗೆ ನಿನ್ನ ದೇಹವನ್ನು ಅರ್ಪಿಸುವುದರಿಂದ ಮಹದುಪಕಾರವನ್ನು ಮಾಡು.

ಆತ್ಮನಾ ಸ್ವಯಮಾತ್ಮಾನಂ ಶೋಚಮಾನಾ ಸುಖೀಭವ ।
ವೃಥಾ ತ್ವಂ ಯೌವನಂ ಪ್ರಾಪ್ತಾ ಪೀನೌ ಚೇಮೌ ಪಯೋಧರೌ ॥ ೧೧೮ ॥

ಯದಿ ತಸ್ಯಾಂಗಸಂಲಗ್ನೌ ಸಫಲಂ ಜೀವಿತಂ ಭವೇತ್ ।
ಭವತ್ಯಾ ನ ತು ಸಂದೇಹಃ ಪ್ರಾಪ್ತಂ ವೈ ಜನ್ಮತಃ ಫಲಂ ॥ ೧೧೯ ॥

ಮಾ ಕ್ಲೇಶಯ ವೃಥಾ ದೇವಿ ವಯಶ್ಚೇದಂ ಸ ಯೌವನಂ ।
ಸಭಾಗ್ಯಾ ಭವ ಸುಶ್ರೋಣಿ ಪತಿಂ ಪ್ರಾಪ್ನುಹಿ ದಾನವಂ ॥ ೧೨೦ ॥

ಕಿಮನೇನ ತು ವಕ್ತ್ರೇಣ ಯನ್ಮುಖೇ ತಸ್ಯ ನಾರ್ಪ್ಯತೇ ।
ಸುಧಾರಸಸ್ಯಾಭ್ಯಧಿಕಮಾಸ್ವಾದಂ ಲಭ ಶೋಭನಂ ॥ ೧೨೧ ॥

ಏವಮುಕ್ತ್ವಾ ತದಾ ದೇವಿ ತೇನ ದೂತೇನ ಶೋಭನಂ ।
ಜಹಾಸ ಪರಮಾ ದೇವೀ ವಾಚಂ ನೋವಾಚ ಕಿಂಚನ ॥ ೧೨೨ ॥

ತಸ್ಯಾ ಹಸನ್ತ್ಯಾಸ್ಸಹಿತಂ ತ್ರೈಲೋಕ್ಯಂ ಸ ಚರಾಚರಂ ।
ದದರ್ಶ ಕುಕ್ಷೌ ಸಂಭ್ರಾನ್ತಃ ತತ್ಕ್ಷಣಾತ್ಸಮುಪದ್ಯತ ॥ ೧೨೩ ॥

---

೧೧೮-೧೧೯. ಅವನೇ ನೀನು. ನೀನೇ ಅವನಾಗುವುದರಿಂದ ನಿನ್ನ ಯೋಗಕ್ಷೇಮವನ್ನು ನೀನೇ ನೋಡಿಕೊಳ್ಳುತ್ತಾ ಸುಖಿಯಾಗು. ವ್ಯರ್ಥವಾಗಿ ಈಗ ಹೊಂದಿರುವ ಯೌವನವೂ, ದೊಡ್ಡದಾಗಿಯೂ ದಪ್ಪವಾಗಿಯೂ, ಇರುವ ಈ ಸ್ತನಗಳು ಅವನ ಅಂಗಗಳ ಸಂಗವಾದರೆ ಸಾಫಲ್ಯವನ್ನು ಹೊಂದಿ ನಿನ್ನ ಜೀವಿತವೂ, ಸಫಲವಾದೀತು. ಆಗ ಸಂದೇಹವಿಲ್ಲದೆ ನಿನ್ನ ಜನ್ಮವು ಹುಟ್ಟಿದುದಕ್ಕೂ ಸಾರ್ಥಕವಾಗುತ್ತದೆ.

೧೨೦. ಈ ವಯಸ್ಸನ್ನೂ, ಈ ಯೌವನವನ್ನೂ ವ್ಯರ್ಥವಾಗಿ ಕ್ಲೇಶಗೊಳಿಸಬೇಡ. ಭಾಗ್ಯವತಿಯಾಗು. ಆ ದೈತ್ಯನನ್ನು ಪತಿಯನ್ನಾಗಿ ಹೊಂದು.

೧೨೧. ಅವನ ಮುಖಕ್ಕೆ ಮುಖವನ್ನು ಅರ್ಪಿಸದಿದ್ದರೆ ಈ ಮುಖದಿಂದೇನು? ಸುಧಾರಸಕ್ಕಿಂತಲೂ ಮಿಗಿಲಾದ ರುಚಿಯನ್ನು ಹೊಂದು.

೧೨೨. ಆ ದೂತನು ಹೀಗೆ ಹೇಳಿದನಂತರ ಆ ದೇವಿಯು ಹೆಚ್ಚಾಗಿ ನಕ್ಕಳು. ಯಾವ ಮಾತನ್ನೂ ಆಡಲೇ ಇಲ್ಲ.

೧೨೩. ಅವಳು ನಗಲು ಬಾಯಬಿಟ್ಟಾಗ ಅವಳ ಹೊಟ್ಟೆಯಲ್ಲಿ ಚರಾಚರಗಳಿಂದ ಕೂಡಿದ ಮೂರು ಲೋಕಗಳನ್ನೂ ಆ ದೂತನು ನೋಡಿ ಭ್ರಾಂತನಾದನು.

ತತೋ ದೇವ್ಯಾಃ ಪ್ರತೀಹಾರೀ ಜಯನಾಮಾಸಿತೇಕ್ಷಣಾ ।
ದೇವ್ಯಾ ಹೃದಿ ಸ್ಥಿತಂ ವಾಕ್ಯಮುವಾಚ ತನುಮಧ್ಯಮಾ ॥ ೧೨೪ ॥

ಕನ್ಯಾರ್ಥಂ ಯತ್ತ್ವಯಾ ದೂತ ವಚನಂ ಸಮುದೀರಿತಂ ।
ಇದಂ ನಾಮ ವ್ರತಂ ವಾಸ್ಯಾಃ ಕೌಮಾರಂ ಸಾರ್ವಕಾಲಿಕಂ ॥ ೧೨೫ ॥

ಅನ್ಯಾ ಅಪಿ ಕುಮಾರ್ಯೋತ್ರ ಸನ್ತಿ ದೇವ್ಯಾಃ ಪದಾನುಗಾಃ ।
ತಾಸಾಮೇಕಾಪಿ ನೋ ಲಭ್ಯಾ ಕಿಮು ದೇವೀ ಸ್ವಯಂ ಶುಭಾ ॥ ೧೨೬ ॥

ಯಾಹಿ ದೂತ ತ್ವರಾವಾಂಸ್ತ್ವಂ ಕಿಂಚಿದನ್ಯದ್ಭವಿಷ್ಯತಿ ।
ಏವಮುಕ್ತಸ್ತತೋ ದೂತಸ್ತಾವದ್ವ್ಯೋಮ್ನಿ ಮಹಾಮುನಿಃ ॥ ೧೨೭ ॥

ಆಯಾತೋ ನಾರದಸ್ತೂರ್ಣಂ ಏತದೂಚೇ ಮಹಾತಪಾಃ ।
ದೇವಿ ದೇವೈರಹಂ ಪ್ರೀತ್ಯಾ ಪ್ರೇಷಿತೋಸ್ಮಿ ತವಾಂತಿಕಂ ॥ ೧೨೮ ॥

ದೇವಾಸ್ಸರ್ವೇ ಜಿತಾ ಮೇರುಂ ವಿಹಾಯ ಬ್ರಹ್ಮಣೋನ್ತಿಕಂ ।
ವಿಗತಾ ದೇವಿ ದೈತ್ಯೇನ ಮಹಿಷಾಖ್ಯೇನ ನಿರ್ಜಿತಾಃ ॥ ೧೨೯ ॥

---

೧೨೪. ಅನಂತರ ಜಯೆ ಎಂಬ ಬಾಗಿಲುಕಾಯುವವಳು ದೇವಿಯ ಮನಸ್ಸಿನಲ್ಲಿರುವುದನ್ನು ಇಂತೆಂದು ಹೇಳಿದಳು.

೧೨೫. ಎಲೈ ದೂತನೇ ! ಕನ್ಯಾರ್ಥಿಯಾಗಿ ನೀನು ಇಷ್ಟು ಹೇಳಿದೆಯಷ್ಟೆ ಆದರೆ ಈಕೆಯು ಯಾವಾಗಲೂ ಕೌಮಾರವ್ರತವನ್ನೇ ಧರಿಸಿ ಇರಬೇಕೆಂದು ನಿಯಮ ಮಾಡಿಕೊಂಡಿರುವಳು.

೧೨೬. ದೇವಿಯ ಪರಿಚಾರಿಕೆಯರಾದ ಇನ್ನೂ ಅನೇಕ ಮಂದಿ ಕುಮಾರಿಯರಿದ್ದಾರೆ. ಅವರಲ್ಲೂ ಕೂಡ ಒಬ್ಬರನ್ನೂ ನೀನು ಹೊಂದಲಾರೆ. ಅಂಥದುದರಲ್ಲಿ ಆ ದೇವಿಯು ತಾನು ನಿನಗೆ ಸಿಕ್ಕಿಯಾಳೆ ?

೧೨೭-೧೨೯. ಎಲೈ ದೂತನೇ! ಹೊರಡು, ಜಾಗ್ರತೆ ಹೊರಡು, ನಿನಗಿನ್ನೇನಾದರೂ ಕೆಟ್ಟದ್ದು ಆದೀತು. ದೂತನಿಗೆ ಇಷ್ಟನ್ನು ಹೇಳುವುದರೊಳಗೆ ಆಕಾಶದಲ್ಲಿ ನಾರದಮುನಿಯು ಜಾಗ್ರತೆಯಾಗಿ ಬಂದು ಈ ಮಾತನ್ನು ಹೇಳಿದನು. ಎಲೈ ದೇವಿಯೇ ! ದೇವತೆಗಳು ನನ್ನನ್ನು ಪ್ರೀತಿಯಿಂದ ನಿನ್ನ ಬಳಿಗೆ ಕಳುಹಿಸಿದ್ದಾರೆ. ಮಹಿಷಾಸುರನು ದೇವತೆಗಳನ್ನು ಜಯಿಸಲು ಅವರು ಮೇರುವನ್ನು ಬಿಟ್ಟು ಬ್ರಹ್ಮನ ಬಳಿಗೆ ಹೋದರು.

ತ್ವಾಂ ಗೃಹೀತುಂ ಹಿ ಯತ್ನಂ ಸ ಕೃತವಾನ್ದೇವಿ ದೈತ್ಯರಾಟ್ ।
ಏವಮುಕ್ತ್ವಾಸಿ ದೇವಿ ತ್ವಂ ಯೋಧಯಸ್ವ ವರಾನನೇ　　　　॥ ೧೩೦ ॥

ಸ್ಥಿರೀಭೂತ್ವಾ ಮಹಾದೇವಿ ತಂ ದೈತ್ಯಂ ಪ್ರತಿಘಾತಯ ।
ಉಕ್ತ್ವೈವಾನ್ತರ್ಹಿತಸ್ಸದ್ಯೋ ನಾರದಸ್ಸ್ವೇಚ್ಛಯಾ ಯಯೌ　　॥ ೧೩೧ ॥

ದೇವೀ ಚ ಕನ್ಯಾಕೋಟ್ಯಸ್ತಾಃ ಸನ್ನಹ್ಯಸ್ತಾಮುವಾಚ ಹ ।
ತತಃ ಕನ್ಯಾ ಮಹಾಭಾಗಾಃ ಸರ್ವಾಸ್ತಾ ದೇವಿಶಾಸನಾತ್　　　॥ ೧೩೨ ॥

ಬಭೂವುರ್ಘೋರರೂಪಿಣ್ಯಃ ಖಡ್ಗಚರ್ಮಧನುರ್ಧರಾಃ ।
ಸಂಗ್ರಾಮಹೇತೋಸ್ಸನ್ತಸ್ಥುಃ ಸೈನ್ಯವಿಧ್ವಂಸನಾಯ ವೈ　　　॥ ೧೩೩ ॥

ತಚ್ಚ ದೇವಬಲಂ ತ್ಯಕ್ತ್ವಾ ಸಾ ವೈ ದೈತ್ಯಚಮೂರ್ದ್ರುತಂ ।
ಆಗತಾ ಯತ್ರ ಸಾ ದೇವೀ ಸನ್ನದ್ಧಂ ಸ್ತ್ರೀಬಲಂ ಮಹತ್　　　॥ ೧೩೪ ॥

ತತಸ್ತಾ ಯುಯುಧುಃ ಕನ್ಯಾ ದಾನವೈಸ್ಸಹ ದರ್ಪಿತಾಃ ।
ಕ್ಷಣೇನ ತದ್ಬಲಂ ತಾಭಿಃ ಚತುರಂಗಂ ನಿಪಾತಿತಂ　　　　　॥ ೧೩೫ ॥

---

೧೩೦-೧೩೧. ನಿನ್ನನ್ನು ಹಿಡಿಯಲು ಆ ರಾಕ್ಷಸನು ಯತ್ನವನ್ನು ಮಾಡಿರುವನು. ನಿನ್ನನ್ನು ಯುದ್ಧಮಾಡುವಂತೆ ಹೇಳಿದ್ದಾರೆ. ಎಲೈ ದೇವಿಯೇ ! ನೀನು ಸ್ಥಿರವಾಗಿ ನಿಂತುಕೊಂಡು ಆ ದೈತ್ಯನನ್ನು ಎದುರಿಸಿ ಕೊಂದು. ನಾರದನು ಹೀಗೆಂದು ಹೇಳಿ ಅಂತರ್ಧಾನನಾಗಿ ಇಷ್ಟಬಂದಂತೆ ಹೋದನು.

೧೩೨-೧೩೩. ಆ ದೇವಿಯೂ ಕೂಡ ಕೋಟಿಜನ ಕನ್ಯೆಯರೂ ಸಿದ್ಧರಾಗಿ ಎಂದು ಅಪ್ಪಣೆ ಮಾಡಿದಳು. ಆಮೇಲೆ ಆ ಕನ್ಯೆಯರೆಲ್ಲರೂ ದೇವಿಯ ಅಪ್ಪಣೆಯಿಂದ ಖಡ್ಗ, ಚರ್ಮ, ಧನುಸ್ಸುಗಳನ್ನು ಧರಿಸಿ ಘೋರರೂಪರಾಗಿ ಕಾಣಿಸಿಕೊಂಡರು. ಮತ್ತು ಯುದ್ಧದಲ್ಲಿ ಸೈನ್ಯನಾಶಕ್ಕೋಸ್ಕರ ಎದ್ದು ನಿಂತರು.

೧೩೪. ಆಗ ರಾಕ್ಷಸಸೈನ್ಯವೆಲ್ಲವೂ ದೇವತೆಗಳ ಸೈನ್ಯವನ್ನು ಬಿಟ್ಟು ಯುದ್ಧ ಕೊಡಲು ಸಿದ್ಧವಾಗಿದ್ದ ಸ್ತ್ರೀ ಬಲದ ಬಳಿಗೆ ಬಂದಿತು.

೧೩೫. ಅನಂತರ ಆ ಕನ್ಯೆಯರು ದರ್ಪದಿಂದ ದಾನವರೊಡನೆ ಯುದ್ಧಮಾಡಿದರು. ಒಂದು ಕ್ಷಣದಲ್ಲಿಯೇ ಚತುರಂಗವುಳ್ಳ ಆ ಸೈನ್ಯವು ನಾಶಮಾಡಲ್ಪಟ್ಟಿತು.

ಶಿರಾಂಸಿ ತತ್ರ ಕೇಷಾಂಚಿಚ್ಛಿನ್ನಾನಿ ಪತಿತಾನಿ ಚ ।
ಇತರೇಷಾಂ ವಿದಾರ್ಯಾಶು ಕ್ರವ್ಯಾದಾಃ ಶೋಣಿತಂ ಪಪುಃ ॥ ೧೩೬ ॥

ಅನ್ಯೇ ಕಬನ್ಧಭೂತಾಸ್ತು ನನೃತುಸ್ತತ್ರ ದಾನವಾಃ ।
ಏವಂ ಕ್ಷಣೇನ ತೇ ಸರ್ವೇ ವಿಧ್ವಸ್ತಾಃ ಪಾಪಚೇತಸಃ ॥ ೧೩೭ ॥

ಅಪರೇ ವಿದ್ರುತಾಸ್ಸರ್ವೇ ಯತ್ರಾಸೌ ಮಹಿಷಾಸುರಃ ।
ತತೋ ಹಾಹಾಕೃತಂ ಸರ್ವಂ ತದಾ ದೈತ್ಯಬಲಂ ಮಹತ್ ॥ ೧೩೮ ॥

ಏವಂ ತದಾಕುಲಂ ದೃಷ್ಟ್ವಾ ಮಹಿಷೋ ವಾಕ್ಯಮಬ್ರವೀತ್ ।
ಸೇನಾಪತೇ ಕಿಮೇತದ್ಧಿ ಬಲಂ ಭಗ್ನಂ ಮಮಾಗ್ರತಃ ॥ ೧೩೯ ॥

ತತೋ ಯಜ್ಞಹತೋ ನಾಮದೈತ್ಯೋ ಹಸ್ತಿಸ್ವರೂಪವಾನ್ ।
ಉವಾಚ ಹತಮೇತದ್ಧಿ ಕುಮಾರೀಭಿಸ್ಸಮಂತತಃ ॥ ೧೪೦ ॥

ಭವಾನಪೂರ್ವಕನ್ಯಾರ್ಥೀ ಕಥಿತಂ ನಾರದೇನ ತೇ ।
ತಯಾ ಹತಮಿದಂ ಸರ್ವಂ ಮನ್ಯೇ ತ್ವಾಂ ತು ಹನಿಷ್ಯತಿ ॥ ೧೪೧ ॥

---

೧೩೬. ಅವರಲ್ಲಿ ಕೆಲವರ ತಲೆಗಳು ಕಡಿಯಲ್ಪಟ್ಟು ಕೆಡವಲ್ಪಟ್ಟವು. ಇತರರನ್ನೂ, ಸೀಳಿದುದರಿಂದ ಕ್ರವ್ಯಾದರು ರಕ್ತವನ್ನು ಕುಡಿದರು.

೧೩೭. ಮತ್ತೆ ಕೆಲವರು ದಾನವರು ತಲೆಯನ್ನು ಕಳೆದುಕೊಂಡು ಕುಣಿಯುತ್ತಿದ್ದರು. ಈ ರೀತಿಯಾಗಿ ಪಾಪಿಗಳಾದ ಆ ದಾನವರು ಕ್ಷಣಕಾಲದಲ್ಲಿ ನಾಶವಾದರು.

೧೩೮. ಮತ್ತೆ ಕೆಲವರು ಮಹಿಷಾಸುರನಿದ್ದಲ್ಲಿಗೆ ಓಡಿದರು. ಆಗ ಆ ದಾನವ ಸೈನ್ಯವೆಲ್ಲವೂ ಹಾಹಾಕಾರ ಮಾಡುತ್ತಿದ್ದುವು.

೧೩೯. ಈರೀತಿಯಾದುದನ್ನು ನೋಡಿ ಮಹಿಷನು ಇಂತೆಂದನು. ಎಲೈ ಸೇನಾಪತಿಯೇ ! ಇದೇನು ? ನನ್ನೆದುರಿಗೇ ನನ್ನ ಸೈನ್ಯವು ನಷ್ಟವಾಯಿತಲ್ಲ ?

೧೪೦. ಆಮೇಲೆ ಆನೆಯ ರೂಪವನ್ನು ಹೊಂದಿದ್ದ ಯಜ್ಞಹತನೆಂಬ ರಾಕ್ಷಸನು ಈ ನಮ್ಮ ಸೈನ್ಯವು ಕುಮಾರಿಯರಿಂದ ಎಲ್ಲಾ ವಿಧದಲ್ಲಿಯೂ ಹತವಾಯಿತು. ಎಂದನು.

೧೪೧. ನೀನು ಅಪೂರ್ವವಾದ ಕನ್ಯೆಯನ್ನು ಯಾಚಿಸುತ್ತೀ. ನಾರದನು ನಿನಗೆ ಹೇಳಿದನು. ಅವಳಿಂದಲೇ ಇವೆಲ್ಲವೂ ನಾಶವಾಯಿತು. ಆಕೆಯು ನಿನ್ನನ್ನೂ ಇಷ್ಟರಲ್ಲಿಯೇ ಕೊಲ್ಲುವಳು.

ತತೋ ದುದ್ರಾವ ಮಹಿಷಸ್ತಾಂ ಕನ್ಯಾಂ ಶುಭಲೋಚನಾಂ ।
ಗದಾ ಮುಸಲಹಸ್ತಶ್ಚ ಕನ್ಯಾಂ ದುದ್ರಾವ ತಾಂ ಬಲಾತ್ ॥ ೧೪೨ ॥

ಯತ್ರ ತಿಷ್ಠತಿ ಸಾ ದೇವೀ ದೇವಗಂಧರ್ವಪೂಜಿತಾ ।
ತತ್ರೈವ ಸೋಽಸುರಃ ಪ್ರಾಪ ಯತ್ರ ದೇವೀ ವ್ಯವಸ್ಥಿತಾ ॥ ೧೪೩ ॥

ಸಾ ತು ದೃಷ್ಟ್ವಾ ತಮಾಯಾಂತಂ ವಿಂಶತ್ಪಾಣಿ ರ್ಬಭೂವ ಹಿ ।
ಧನುಃ ಖಡ್ಗಂ ತಥಾ ಶಕ್ತಿಃ ಶರಶ್ಶೂಲಂ ತಥಾ ಗದಾ ॥ ೧೪೪ ॥

ಸಹಸ್ರಾರಂ ತಥಾ ಚಕ್ರಂ ಮುಸಲಂ ಭಿಂಡಿವಾಳಕಂ ।
ಪರಶುರ್ಡಮರುಶ್ಚೈವ ತಥಾ ಘಂಟಾವಿಶಾಲಿನೀ ॥ ೧೪೫ ॥

ಶತಘ್ನೀ ಮುದ್ಗರೋ ಘೋರೋ ಭುಶುಂಡೀ ಕುಂತಮೇವ ಚ ।
ದಂಡಪಾಶೌ ಧ್ವಜಶ್ಚೈವ ಪದ್ಮಂ ಚೇತೀಹ ವಿಂಶತಿಃ ॥ ೧೪೬ ॥

ಭೂತ್ವಾ ವಿಂಶದ್ಭುಜಾ ದೇವೀ ಸಿಂಹಮಾಸ್ಥಾಯ ದಂಶಿತಾ ।
ಸಸ್ಮಾರ ರುದ್ರಂ ದೇವೇಶಂ ರೌದ್ರಂ ಸಂಹಾರಕಾರಿಣಂ ॥ ೧೪೭ ॥

---

೧೪೨. ಆಮೇಲೆ ಗದೆಯನ್ನೂ, ಮುಸಲಾಯುಧವನ್ನೂ ಕೈಯಲ್ಲಿ ಹಿಡಿದು ಮಹಿಷನು ಆ ಕನ್ಯೆಯಿರುವಲ್ಲಿಗೆ ಯುದ್ಧಕ್ಕೋಸ್ಕರ ಓಡಿದನು

೧೪೩. ದೇವಗಂಧರ್ವರಿಂದ ಪೂಜಿಸಲ್ಪಟ್ಟ ಆ ದೇವಿಯು ಇರುವಲ್ಲಿಗೆ ಓಡಿದನು. ದೇವಿ ಇದ್ದಲ್ಲಿಗೆ ಹೋಗಿ ಆಕೆಯನ್ನು ಎದುರಿಸಿದನು.

೧೪೪-೧೪೭. ಆ ದೇವಿಯು ಆ ರಾಕ್ಷಸನು ಓಡಿಬರುತ್ತಿರುವುದನ್ನು ನೋಡಿ ಇಪ್ಪತ್ತು ಕೈಗಳುಳ್ಳವಳಾದಳು. ಧನುಸ್ಸು, ಕತ್ತಿ, ಶಕ್ತಿ, ಬಾಣ, ಶೂಲ, ಗದೆ, ಸಾವಿರ ಹಾರೆ ಕಾಲುಳ್ಳ ಚಕ್ರ, ಮುಸಲ, ಭಿಂಡಿವಾಳ, ಕೊಡಲಿ, ಡಮರು, ಘಂಟೆ, ಶತಘ್ನೀ (ಬಂದೂಕ) ಮುದ್ಗರ, ಭುಶುಂಡಿ, ಕುಂತ, ದಂಡ, ಪಾಶ, ಧ್ವಜ, ಪದ್ಮ, ಈ ರೀತಿಯಾದ ಇಪ್ಪತ್ತು ಬಗೆಯನ್ನೂ ಇಪ್ಪತ್ತು ಕೈಗಳಲ್ಲಿ ಹಿಡಿದುಕೊಂಡು ಯುದ್ಧದ ವೇಷದಿಂದ ಭೂಷಿತಳಾಗಿ ಸಿಂಹದ ಮೇಲೆ ಕುಳಿತಳು. ಸೃಷ್ಟಿಸಂಹಾರಕನಾದ ರುದ್ರನನ್ನು ಸ್ಮರಿಸಿದಳು. ಆ ಕ್ಷಣವೇ ರುದ್ರನು ವೃಷಧ್ವಜನಾಗಿ ಅಲ್ಲಿಗೆ

ತತೋ ವೃಷಧ್ವಜಸ್ಸಾಕ್ಷಾದ್ರುದ್ರಸ್ತತ್ರೈವ ಸಂಯಯೌ ।
ತಯಾ ಪ್ರಣಮ್ಯ ವಿಜ್ಞಪ್ತಃ ಸರ್ವಾನ್ದೈತ್ಯಾನ್ಹಯಾಮ್ಯಹಂ ॥ ೧೪೮ ॥

ತ್ವಯಿ ಸನ್ನಿಹಿತೇ ದೇವೇ ವಿಷ್ಣೌ ಚಾಪಿ ಪರಂತಪ ।
ಯುಷ್ಮತ್ಸನ್ನಿಧಿಮಾತ್ರೇ ತು ಪಶ್ಯ ದೇವ ಸನಾತನ ॥ ೧೪೯ ॥

ಏವಮುಕ್ತ್ವಾಽಸುರಾನ್ಸರ್ವಾನ್ ಜಿಘಾಂಸುಃ ಪರಮೇಶ್ವರೀ ।
ಮುಕ್ತ್ವಾ ತಮೇಕಂ ಮಹಿಷಂ ವಧಾರ್ಥಂ ಸಾ ತಮನ್ವಗಾತ್ ॥ ೧೫೦ ॥

ತಥಾ ದೇವೀಂ ತತಸ್ಸೋಽಪಿ ದೃಷ್ಟ್ವಾ ದುದ್ರಾವ ಚೇಶ್ವರೀಂ ।
ಕ್ವಚಿದ್ಯುಧ್ಯತಿ ದೈತ್ಯೇಂದ್ರಃ ಕ್ವಚಿನ್ನೈವ ಪಲಾಯತೇ ॥ ೧೫೧ ॥

ಕ್ವಚಿತ್ಪುನರ್ಭೃಶಂ ಚಕ್ರೇ ಕ್ವಚಿತ್ಪುನರುಪಾಗಮತ್ ।
ಏವಂ ವರ್ಷಸಹಸ್ರಾಣಿ ದಶ ತಸ್ಯ ತಯಾ ಸಹ ॥ ೧೫೨ ॥

ದೇವ್ಯಾ ವಿನಿರ್ಗತಾನಿ ಸ್ಯುಃ ಯುಧ್ಯತಸ್ತಸ್ಯ ಶೋಭನೇ ।
ಬಭ್ರಾಮ ಸಕಲಂ ತ್ವಾಜೌ ಬ್ರಹ್ಮಾಂಡಂ ಭೀತಮಾನಸಂ ॥ ೧೫೩

---

ಬಂದನು. ಆ ಶಕ್ತಿಯು ಅತನಿಗೆ ನಮಸ್ಕರಿಸಿ ನಾನು ಎಲ್ಲಾ ರಾಕ್ಷಸರನ್ನೂ ಜಯಿ ಸುತ್ತೇನೆಂದಳು.

೧೪೯. ದೇವನಾಗಿರತಕ್ಕ ನೀನೂ ವಿಷ್ಣುವೂ, ಹತ್ತಿರದಲ್ಲಿದ್ದಮಾತ್ರದಿಂದಲೇ ಆಗುವುದನ್ನು ನೋಡು. ನಿಮ್ಮ ಸಾನಿಧ್ಯ ಮಾತ್ರ ಸಾಕು.

೧೫೦. ಹೀಗೆ ಹೇಳಿ ಆ ದೇವಿಯು ಎಲ್ಲರನ್ನೂ ಕೊಲ್ಲಲಿಚ್ಛೆಯುಳ್ಳವಳಾಗಿ ಅವರೆಲ್ಲರನ್ನೂ ಬಿಟ್ಟು ಮಹಿಷಾಸುರನೊಬ್ಬನನ್ನು ಎದುರಿಸಿದಳು.

೧೫೧-೧೫೩. ಹಾಗೆ ಬರುತ್ತಿರುವುದನ್ನು ನೋಡಿ ಆ ಮಹಿಷನು ಅವಳೆದುರಿಗೆ ಓಡಿಬಂದನು. ಆ ದೈತ್ಯೇಂದ್ರನು ಒಂದು ಸಲ ಯುದ್ಧಮಾಡುತ್ತಾನೆ ಮತ್ತೊಂದು ಸಲ ಇಲ್ಲ. ಇನ್ನೊಂದಾವರ್ತಿ ಓಡುತ್ತಾನೆ. ಮಗದೊಂದು ಸಲ ಬರುತ್ತಾನೆ ಎಲ್ಲೋ ಒಂದು ಸಲ ರಭಸದಿಂದ ಯುದ್ಧಮಾಡುತ್ತಾನೆ. ಹೀಗೆ ಆ ರಾಕ್ಷಸರೊಡನೆ ಯುದ್ಧಮಾಡುತ್ತ ದೇವಿಗೆ ಹತ್ತುಸಾವಿರ ವರ್ಷಗಳು ಕಳೆದವು. ಹೀಗೆ ಯುದ್ಧ ಮಾಡುತ್ತ ಬ್ರಹ್ಮಾಂಡವನ್ನೇ ಸುತ್ತಿದಳು. ಬ್ರಹ್ಮಾಂಡವೆಲ್ಲವೂ ಹೆದರಿತು.

ತತಃ ಕಾಲೇನ ಮಹತಾ ಶತಶೃಂಗೇ ಮಹಾಗಿರೌ ।
ದೈತ್ಯೇಶ್ವರಂ ಚ ತಂ ದೃಷ್ಟ್ವಾ ದೇವೀ ವಚನಮಬ್ರವೀತ್ ॥ ೧೫೪ ॥

ರೂಪಲೋಭಾತ್ತ್ವಯಾ ನೀಚ ದೂತೋ ಯೋಽಸೌ ಮಮಾಂತಿಕಂ ।
ಪ್ರೇಷಿತೋ ಯತ್ತ್ವಯಾ ತಸ್ಯ ಸಂದಿಷ್ಟಂ ತದ್ವದಸ್ವ ಮೇ ॥ ೧೫೫ ॥

ನ ಮಯಾ ತಚ್ಛ್ರುತಂ ಪೂರ್ವಮಿದಾನೀಂ ತ್ವನ್ಮುಖಾತ್ಸ್ವನಃ ।
ಶ್ರೋತುಮಿಚ್ಛಾಮಿ ತದ್ವಾಕ್ಯಂ ಭವಾನನುಭವಿಷ್ಯತಿ ॥ ೧೫೬ ॥

ಪದ್ಭ್ಯಾಮಾಕ್ರಮ್ಯ ಶೂಲೇನ ನಿಹತೋ ದೈತ್ಯಸತ್ತಮಃ ।
ಛಿನ್ನೇ ಶಿರಸಿ ಖಡ್ಗೇನ ತತ್ಕಂಠಾದುತ್ಥಿತಃ ಪುಮಾನ್ ॥ ೧೫೭ ॥

ರೌದ್ರೋಽಪಿ ಸ ಗತಸ್ಸ್ವರ್ಗಂ ದೇವ್ಯಾ ಶಸ್ತ್ರನಿಪಾತಿತಃ ।
ತತೋ ದೇವಗಣಾಸ್ಸರ್ವೇ ಮಹಿಷಂ ವೀಕ್ಷ್ಯ ನಿರ್ಜಿತಂ ।
ಸೇಂದ್ರಾದ್ಯಾಸ್ತು ಸ್ತುತಿಂ ಚಕ್ರುರ್ದೇವ್ಯಾಸ್ತುಷ್ಟೇನ ಮಾನಸಾ ॥ ೧೫೮ ॥

---

೧೫೪. ಹೀಗೆ ಅನೇಕ ದಿನ ಕಳೆದ ಮೇಲೆ ಒಂದು ಸಾರಿ ಶೃತಶೃಂಗಪರ್ವತದಲ್ಲಿ ಆ ದೈತ್ಯೇಶ್ವರನು ಸಿಕ್ಕಲು ದೇವಿಯು ಹೀಗೆಂದಳು.

೧೫೫. ಎಲೈ ನೀಚನೇ ! ರೂಪಿನ ಆಸೆಯಿಂದ ನೀನು ನನ್ನ ಬಳಿಗೆ ದೂತ ನನ್ನು ಕಳುಹಿಸಿದ್ದೆಯಷ್ಟೆ ! ಅದೇನು ? ಹೇಳು.

೧೫೬. ಆಗ ಆ ಮಾತನ್ನು ನಾನು ಕೇಳಲಿಲ್ಲ ಈಗ ನಿನ್ನ ಬಾಯಿಂದಲೇ ಕೇಳಬೇಕೆಂದಿದ್ದೇನೆ. ಅದರ ಫಲವನ್ನು ನೀನೂ ಅನುಭವಿಸುವಿ.

೧೫೭-೧೫೮. ಹೀಗೆಂದು ಹೇಳಿ ಅವನನ್ನು ಹಿಡಿದು ಕಾಲಿನಿಂದ ತುಳಿದು ಕೊಂಡು ಶೂಲದಿಂದ ಆತನನ್ನು ಕೊಂದಳು. ಅವನ ತಲೆಯನ್ನು ಶಕ್ತಿಯಿಂದಲೂ ಕಡಿದಳು. ಆಗ ಆ ಕತ್ತಿನಿಂದ ಒಬ್ಬ ರೌದ್ರಾಕಾರನಾದ ಮನುಷ್ಯನು ಹೊರಟು ದೇವಿಯ ಶಸ್ತ್ರಘಾತದ ಮಹಿಮೆಯಿಂದ ಸ್ವರ್ಗವನ್ನು ಹೊಂದಿದನು. ಅನಂತರ ದೇವತೆಗಳೆಲ್ಲ ಮಹಿಷಾಸುರನು ಜಿತನಾದುದನ್ನು ನೋಡಿ ಇಂದ್ರನೇ ಮೊದಲಾದ ದೇವತೆಗಳು ಸಂತೋಷದಿಂದ ಆಕೆಯನ್ನು ಸ್ತುತಿಸಿದರು.

॥ ದೇವಾ ಊಚುಃ ॥

ನಮೋ ದೇವಿ ಮಹಾಭಾಗೇ ಗಂಭೀರೇ ಭೀಮದರ್ಶನೇ ।
ಜಯಸ್ತೇ ಸ್ಥಿತಿಸಿದ್ಧಾಂತೇನ ತ್ರಿನೇತ್ರೇ ವಿಶ್ವತೋಮುಖಿ ॥ ೧೫೯ ॥

ವಿದ್ಯಾವಿದ್ಯೇ ಜಪೇ ಜಾಪ್ಯೇ ಮಹಿಷಾಸುರಮರ್ದಿನಿ ।
ಸರ್ವಗೇ ಸರ್ವವಿದ್ಯೇಶಿ ವಿಶ್ವರೂಪಿಣಿ ವೈಷ್ಣವಿ ॥ ೧೬೦ ॥

ವೀತಶೋಕೇ ಧ್ರುವೇ ದೇವಿ ಪದ್ಮೇ ಪದ್ಮಾಯತೇಕ್ಷಣೇ ।
ಶುದ್ಧಸತ್ವವ್ರತಸ್ಥೇ ಚ ಚಂಡರೂಪೇ ವಿಭಾವರಿ ॥ ೧೬೧ ॥

ಋದ್ಧಿಸಿದ್ಧಿಪ್ರದೇ ದೇವಿ ಸರ್ವಸತ್ವಮಯೇ ಧ್ರುವೇ ।
ವಿದ್ಯಾಪುರಾಣಶಿಲ್ಪಾನಾಂ ಜನನಿ ಭೂತಧಾರಿಣಿ ॥ ೧೬೨ ॥

ಸರ್ವದೇವರಹಸ್ಯಾನಾಂ ಸರ್ವಸತ್ವವತಾಂ ಶುಭೇ ।
ನಮೋಽಸ್ತು ತೇ ಮಹಾದೇವಿ ನಮೋಽಸ್ತು ಪರಮೇಶ್ವರಿ ॥ ೧೬೩ ॥

---

೧೫೯-೧೬೦. ದೇವತೆಗಳು ಹೇಳಿದರು- ಮಹಾ ಭಾಗಳೇ ! ಭಯಂಕರವಾದ ದರ್ಶನವುಳ್ಳವಳೇ ! ನಿನಗೆ ನಮಸ್ಕಾರವು. ಸ್ಥಿರವಾದ ಸಿದ್ಧಾಂತಸ್ವರೂಪಳಾದ, ಮೂರು ಕಣ್ಣುಗಳುಳ್ಳ, ಸರ್ವಮುಖಿಯಾದ, ವಿದ್ಯೆ, ಅವಿದ್ಯೆ ಸ್ವರೂಪಿಣಿಯಾದ, ಜಪ ರೂಪಿಣಿಯೂ ಅದಕ್ಕೆ ವಿಷಯಳೂ ಆದ ಮಹಿಷಾಸುರಮರ್ದಿನಿಯಾದ ಸರ್ವರಲ್ಲಿಯೂ ಇರುವ, ಸರ್ವ ವಿದ್ಯೆಗಳಿಗೂ ಒಡತಿಯಾದ, ವಿಶ್ವರೂಪಿಣಿಯಾದ, ವೈಷ್ಣವಿಯಾದ ನಿನಗೆ ನಮಸ್ಕಾರವು.

೧೬೧. ದುಃಖವಿಲ್ಲದವಳೇ, ಶಾಶ್ವತಳೇ, ಲಕ್ಷ್ಮೀರೂಪಳೇ, ಕಮಲದಂತೆ ಕಣ್ಣುಳ್ಳವಳೇ, ಶುದ್ಧವಾದ ಸತ್ವವೇವ್ರತವಾಗಿ ಉಳ್ಳವಳೇ, ಚಂಡರೂಪಳೇ, ವಿಭಾವರಿಯೇ ! ನಮಸ್ಕಾರವು.

೧೬೨. ಏಳಿಗೆ ಸಿದ್ಧಿಗಳನ್ನು ಕೊಡುವವಳೇ, ಸರ್ವಪ್ರಾಣಿಗಳಲ್ಲೂ ಇರುವವಳೆ, ಧ್ರುವಳೆ, ವಿದ್ಯೆ ಪುರಾಣ ಶಿಲ್ಪಗಳಿಗೆ ತಾಯಿಯೆ, ಪ್ರಾಣಿಗಳನ್ನು ಧರಿಸುವವಳೇ, ನಿನಗೆ ನಮಸ್ಕಾರವು.

೧೬೩. ದೇವತೆಗಳ ಸರ್ವರಹಸ್ಯಗಳಿಗೂ ಸರ್ವ ಪ್ರಾಣಿಗಳಿಗೂ ಶುಭಳೆ, ನಿನಗೆ ನಮಸ್ಕಾರ, ಮಹಾದೇವಿ, ಪರಮೇಶ್ವರಿ ನಿನಗೆ ನಮಸ್ಕಾರವು.

ನಮೋಽಸ್ತು ಸರ್ವಭೂತಾನಾಂ ಮಾತರ್ನಿತ್ಯೇಽಕ್ಷಯೇಽವ್ಯಯೇ ।
ನ ತೇಷಾಂ ಜಾಯತೇ ಕಿಂಚಿದಶುಭಂ ರಣಸಂಕಟೇ ॥ ೧೬೪ ॥

ಯೇಽತು ವ್ಯಾಘ್ರಭಯೇ ಘೋರೇ ಚೌರರಾಜಭಯೇ ತಥಾ ।
ಸರ್ವಭೂತಾ ಭಯೇ ದೇವಿ ಕ್ಷೇಮ್ಯಾಕ್ಷೇಮಂಕರೀತಿ ಚ ॥ ೧೬೫ ॥

ವಿಭಾವರೀ ಭಾವರೀ ಚ ಸರ್ವಸ್ಥಿತಿಕರೀ ತಥಾ ।
ಸರ್ವಾಸಾಂ ಭಗವಾನ್ರುದ್ರಃ ಸರ್ವಗತ್ವಾತ್ಪತಿಸ್ಸ್ಮೃತಃ ॥ ೧೬೬ ॥

ಯಾವತ್ಯಸ್ತು ಮಹಾಶಕ್ತ್ಯಃ ತಾವದ್ರೂಪಸ್ತು ಶಂಕರಃ ।
ನಿಗಡಸ್ಥೋಽಪಿ ಯೋ ದೇವಿ ತ್ವಾಂ ಸ್ಮರಿಷ್ಯತಿ ಮಾನವಃ ।
ಸೋಽಪಿ ಬಂಧಾತ್ಪ್ರಮುಚ್ಯೇತ ಸ ಸುಖಂ ವಸತೇ ಸುಖೀ ॥ ೧೬೭ ॥

॥ ಪುಲಸ್ತ್ಯ ಉವಾಚ ॥

ಏವಂ ಸ್ತುತಾ ಸುರೈರ್ದೇವೀ ಪ್ರಣಿಪಾತಪುರಸ್ಕೃತಾ ।
ಉವಾಚ ದೇವಿ ಸುಶ್ರೋಣೀ ವೃಣುಧ್ವಂ ವರಮುತ್ತಮಂ ॥ ೧೬೮ ॥

---

೧೬೪–೧೬೬. ಸರ್ವ ಪ್ರಾಣಿಗಳಿಗೂ ತಾಯಿಯಾದ, ನಿತ್ಯಳೂ, ಅಕ್ಷಯಳೂ, ಅವ್ಯಯಳೂ ಆದ ನಿನಗೆ ನಮಸ್ಕಾರವು. ಯಾರು ನಿನ್ನನ್ನು ಸ್ಮರಿಸುತ್ತಾರೋ ಅವರಿಗೆ ಯುದ್ಧದಲ್ಲಿ ಕಷ್ಟವುಂಟಾಗುವುದಿಲ್ಲ. ಹುಲಿ, ಕಳ್ಳರು, ರಾಜರುಗಳ ಭಯದಲ್ಲಿ ನಿನ್ನನ್ನು ಸ್ಮರಿಸಿದರೆ ಅವರು ಅದರಿಂದ ಪಾರಾಗುವರು. ಸರ್ವಭೂತಾಭಯಳೇ! ಕ್ಷೇಮಳು, ಕ್ಷೇಮಂಕರಿಯು, ವಿಭಾವರಿ, ಭಾವರಿ, ಸರ್ವಸ್ಥಿತಿಕರೀ, ಇವೇ ಮೊದಲಾದವರಿಗೆಲ್ಲಾ ರುದ್ರನೇ ಪತಿಯು. ಆತನು ಎಲ್ಲರಲ್ಲೂ ಇರುವುದರಿಂದ ಅವರಿಗೂ ಕೂಡ ಅವನೇ ಗಂಡನು. ನೀನು ಅನೇಕ ರೂಪಗಳನ್ನು ಹೊಂದಿದ್ದೀಯೆ.

೧೬೭. ಎಷ್ಟು ಮಹಾಶಕ್ತಿಗಳು ಪ್ರಪಂಚದಲ್ಲಿವೆಯೋ, ಶಂಕರನೂ ಅಷ್ಟು ರೂಪವನ್ನು ಧರಿಸಿರುತ್ತಾನೆ. ಎಲೈ ದೇವಿಯೆ! ಕಾರಾಗೃಹದಲ್ಲಿದ್ದರೂ ಯಾರು ನಿನ್ನನ್ನು ಸ್ಮರಿಸುತ್ತಾರೆಯೋ ಅವರು ಆ ಬಂಧನದಿಂದ ಮುಕ್ತರಾಗುತ್ತಾರೆ. ಮತ್ತು ಸುಖಿಗಳಾಗಿಯೂ ಇರುತ್ತಾರೆ.

೧೬೮. ನಮಸ್ಕಾರ ಪೂರ್ವಕವಾಗಿ ದೇವತೆಗಳು ಆಕೆಗೆ ಹೀಗೆ ಸ್ತೋತ್ರಮಾಡಲು ಆಗ ಆಕೆಯು ತುಷ್ಟಳಾಗಿ ಬೇಕಾದ ವರವನ್ನು ಕೇಳಿ. ಎಂದಳು.

॥ ದೇವಾ ಊಚುಃ ॥

ದೇವಿ ಪುಷ್ಕರಸಂಸ್ಥಾಂ ತ್ವಾಂ ಸ್ತುವಂತ್ಯನೇನ ಭಕ್ತಿತಃ ।
ತೇ ಸರ್ವಕಾಮಸಂಪನ್ನಾ ಭವಂತು ವರ ಏಷ ವೈ ॥ ೧೬೯ ॥

॥ ಪುಲಸ್ತ್ಯ ಉವಾಚ ॥

ಏವಮಸ್ತ್ವಿತಿತಾನ್ದೇವಾನುಕ್ತ್ವಾ ದೇವೀ ಪರಾವರಾನ್ ।
ವಿಸರ್ಜಯಿತ್ವಾ ತಾಂ ದೇವೀ ಸ್ವಯಂ ತತ್ರೈವ ಸಂಸ್ಥಿತಾ ॥ ೧೭೦ ॥

ಏವಂ ಯಃ ಶೃಣುತೇ ಜನ್ಮ ದೇವ್ಯಾಃ ಕುರುಕುಲೋದ್ವಹ ।
ಸದಾ ಸೇವೇತ ವಿರಜ ಇದಂ ಪ್ರಾಪ್ನೋತ್ಯನಾಮಯಂ ॥ ೧೭೧ ॥

ಯಃ ಕ್ಷೇಮಂಕರೀವೃತ್ತಾನ್ತಂ ಬ್ರಹ್ಮಶಕ್ತಿಸಮುದ್ಭವಂ ।
ಸ ಪುತ್ರಪೌತ್ರಪಶುಮಾನ್ಸಮೃದ್ಧಿಮುಪಗಚ್ಛತಿ ॥ ೧೭೨ ॥

ಯಶ್ಚೇದಂ ಶೃಣುಯಾದ್ಭಕ್ತ್ಯಾ ದೇವೀಸ್ತೋತ್ರಮನುತ್ತಮಂ ।
ಸರ್ವಬಾಧಾವಿನಿರ್ಮುಕ್ತಂ ಪದಂ ನಿರ್ವಾಣಮೃಚ್ಛತಿ ॥ ೧೭೩ ॥

---

೧೬೯. ದೇವತೆಗಳು ಹೇಳಿದರು– ಎಲೈ ದೇವಿಯೇ ! ಪುಷ್ಕರದಲ್ಲಿರುವ ಈ ನಿನ್ನನ್ನು ಯಾರು ಈ ಸ್ತೋತ್ರದಿಂದ ಭಕ್ತಿಪೂರ್ವಕವಾಗಿ ಸ್ತೋತ್ರ ಮಾಡುತ್ತಾರೋ ಅವರಿಗೆ ಸರ್ವ ಕಾಮಗಳೂ ಲಭಿಸಲಿ. ಇದೇ ನೀನು ನಮಗೆ ಕೊಡಬೇಕಾದ ವರವು.

೧೭೦. ಪುಲಸ್ತ್ಯನು ಹೇಳಿದನು—ಹಾಗೇ ಆಗಲೆಂದು ಹೇಳಿ ದೇವತೆಗಳನ್ನೆಲ್ಲ ಕಳುಹಿಸಿ ತಾನು ಅಲ್ಲೇ ನಿಂತಳು.

೧೭೧. ಈ ರೀತಿಯಾದ ದೇವಿಯ ಜನ್ಮವನ್ನು ಕೇಳಿದವನೂ ಈ ಪುಷ್ಕರ ವನ್ನು ಸೇವಿಸಿದವನೂ ಉತ್ತಮವಾದ ಲೋಕವನ್ನು ಹೊಂದುವರು.

೧೭೨. ಬ್ರಹ್ಮಶಕ್ತಿಯಿಂದುತ್ಪನ್ನಳಾದ ಈಕೆಯ ವೃತ್ತಾಂತವನ್ನು ಕೇಳಿದವನು ಪುತ್ರ, ಪೌತ್ರ, ಪಶುಗಳಿಂದ ಸಮೃದ್ಧಿಯನ್ನು ಹೊಂದುತ್ತಾನೆ.

೧೭೩. ಈ ದೇವೀ ಸ್ತೋತ್ರವನ್ನು ಭಕ್ತಿಯಿಂದ ಕೇಳಿದವನು ತೊಂದರೆ ಯನ್ನು ಕಳೆದುಕೊಂಡು ಮೋಕ್ಷವನ್ನು ಹೊಂದುತ್ತಾನೆ.

ಯ ಏತಾಂ ವೇದ ವೈ ದೇವ್ಯಾ ಉತ್ಪತ್ತಿಂ ತ್ರಿವಿಧಾ ಸ್ಥಿತಾಂ ।
ಸರ್ವಪಾಪವಿನಿರ್ಮುಕ್ತಃ ಪದಂ ನಿರ್ವಾಣಮೃಚ್ಛತಿ ॥ ೧೭೪ ॥

ಭ್ರಷ್ಟರಾಜ್ಯಪದೋ ರಾಜಾ ಸಪ್ತಮ್ಯಾಂ ನಿಯತಶ್ಶುಚಿಃ ।
ಅಷ್ಟಮ್ಯಾಂ ಚ ನವಮ್ಯಾಂ ಚ ಉಪಪಾಸೀ ನರೋತ್ತಮ ॥ ೧೭೫ ॥

ಸಂವತ್ಸರೇಣ ಲಭತೇ ರಾಜ್ಯಂ ನಿಷ್ಕಂಟಕಂ ನೃಪಃ ।
ಯಾ ಸಾ ತ್ರಿವೇದಸಂಭೂತಾ ವೇದಶಕ್ತಿಃ ಪರಾವರಾ ॥ ೧೭೬ ॥

ಏಷಾ ಜ್ಞಾನಾತ್ಮಿಕಾ ಸರ್ವಾ ಸಾತ್ವಿಕಾ ಬ್ರಹ್ಮಸಂಜ್ಞಿತಾ ।
ಏಷೈವ ರಕ್ತಾ ರಾಜಸೀ ವೈಷ್ಣವೀ ಪರಿಕೀರ್ತಿತಾ ॥ ೧೭೭ ॥

ಏಷೈವ ಕೃಷ್ಣಾ ತಾಮಸೀ ರೌದ್ರೀ ದೇವೀ ಪ್ರಕೀರ್ತಿತಾ ।
ಪರಮಾತ್ಮಾ ಯಥಾ ದೇವ ಏಕ ಏವ ತ್ರಿಧಾ ಸ್ಥಿತಃ ॥ ೧೭೮ ॥

ಅಪರಾ ಚ ಪರಾ ಚೈವ ತಥೈವಾನ್ಯಾ ಪರಾವರಾ ।
ತ್ರಿಧಾ ವ್ಯವಸ್ಥಿತಾ ಶಕ್ತಿರೇಕೈಕಾ ತ್ರಿವಿದಾ ಭವೇತ್ ॥ ೧೭೯ ॥

---

೧೭೪. ಯಾವನು ದೇವಿಯ ಉತ್ಪತ್ತಿ, ಬಾಲ್ಯ, ಯೌವನ, ಕೌಮಾರಾವಸ್ಥೆಗಳನ್ನು ತಿಳಿಯುತ್ತಾನೋ ಅವನು ಪಾಪಮುಕ್ತನಾಗಿ ಸ್ವರ್ಗವನ್ನು ಹೊಂದುತ್ತಾನೆ.

೧೭೫-೧೭೭. ರಾಜ್ಯವನ್ನು ಕಳೆದುಕೊಂಡ ರಾಜನು ಸಪ್ತಮಿ ದಿನ ನಿಯಮದಿಂದ ಶುಚಿಯಾಗಿದ್ದು ಅಷ್ಟಮಿ, ನವಮಿಗಳಲ್ಲಿ ಉಪವಾಸ ಮಾಡಿ ಈ ಮೂರು ದಿನಗಳೂ ದೇವಿಯನ್ನು ಸೇವಿಸಿದರೆ ಒಂದು ವರ್ಷದೊಳಗಾಗಿ ತೊಂದರೆಯಿಲ್ಲದೆ ರಾಜ್ಯವನ್ನು ಹೊಂದುತ್ತಾನೆ. ತ್ರಿವೇದಗಳಿಂದ ಉತ್ಪನ್ನಳಾದ ಇವಳೇ ವೇದಶಕ್ತಿಯು ಪರಾತ್ಪರಳು, ಉತ್ಕೃಷ್ಟಳು, ಜ್ಞಾನಸ್ವರೂಪಿಣಿಯು, ಸಾತ್ವಿಕವಾದ ಬ್ರಹ್ಮಸ್ವ. ಈಕೆಯೇ ಕೆಂಪು ಬಣ್ಣವುಳ್ಳವಳಾಗಿ (ಆಸೆಯುಳ್ಳವಳಾಗಿ) ರಾಜಸವನ್ನು ಹೊಂದಿ ವೈಷ್ಣವೀ ಎಂದೆನಿಸುತ್ತಾಳೆ.

೧೭೮-೧೭೯. ಈಕೆಯೇ ಕಪ್ಪುಬಣ್ಣವುಳ್ಳವಳಾಗಿ (ಕ್ರೂರ ಕೆಲಸದಲ್ಲಿ ತೊಡಗಿದವಳಾಗಿ) ತಾಮಸಸ್ಥಿತಿಯನ್ನು ಹೊಂದಿ ರೌದ್ರೀ (ರುದ್ರ ಸಂಬಂಧಳು) ಎನಿಸುತ್ತಾಳೆ. ಪರಮಾತ್ಮನು ಒಬ್ಬನೇ ಹೇಗೆ ಬ್ರಹ್ಮ, ವಿಷ್ಣು, ಶಿವಾತ್ಮಕನಾಗಿ ಮೂರು ಬಗೆಯಾಗಿರುವನೋ, ಹಾಗೆ ಈಕೆಯೂ, ಪರಾ, ಅಪರಾ, ಪರಾಪರಾ ಎಂದು ಮೂರು ಬಗೆಯಾಗಿರುವಳು. ಈ ಮೂರೂ ಸತ್ವ ರಜಸ್ತಮೋರೂಪಗಳಿಂದ ಮೂರು ಮೂರು ಬಗೆಯಾಗುತ್ತವೆ.

ಯ ಏವಂ ಶೃಣುಯಾತ್ಸರ್ವಂ ಕ್ಷೇಮ್ಯಾಯಾಃ ಪರಮಂ ಶಿವಂ ।
ಸರ್ವಪಾಪವಿನಿರ್ಮುಕ್ತಃ ಸದಂ ನಿರ್ವಾಣಮಾಪ್ನುಯಾತ್ ॥ ೧೮೦ ॥

ಯಶ್ಚೈವಂ ಪಠತೇ ಭಕ್ತ್ಯಾ ನವಮ್ಯಾಂ ನಿಯತಶ್ಶುಚಿಃ ।
ಸ ರಾಜ್ಯಾಪತ್ಯಲಾಭೇನ ಭಯೇಭ್ಯಃ ಪರಿಮುಚ್ಯತೇ ॥ ೧೮೧ ॥

ಯತ್ರೈವಂ ಲಿಖಿತಾ ಗೇಹೇ ಸದಾ ತಿಷ್ಠತಿ ಧಾರಿತಾ ।
ನ ತತ್ರಾಗ್ನಿಭಯಂ ಘೋರಂ ಚೌರ್ಯಸರ್ಪಾದಿಕಂ ನೃಪ ॥ ೧೮೨ ॥

ಯಶ್ಚೈತತ್ಪೂಜಯೇದ್ಭಕ್ತ್ಯಾ ಪುಸ್ತಕೇ ಲಿಖಿತಂ ಬುಧಃ ।
ತೇನ ಚೇಷ್ಟಂ ಭವೇತ್ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೧೮೩ ॥

ಜಾಯನ್ತೇ ಪಶವಃ ಪುತ್ರಾಃ ತಥಾ ಧಾನ್ಯಂ ವರಸ್ತ್ರಿಯಃ ।
ರತ್ನಾನ್ಯಶ್ವಾ ಗಜಾ ಭೃತ್ಯಾ ಗ್ರಾಮಾಶ್ಚಾಶು ಭವನ್ತ್ಯುತ ॥ ೧೮೪ ॥

ಯಸ್ಯೇದಂ ತಿಷ್ಠತೇ ಗೇಹೇ ತಸ್ಯಾಪ್ಯೇತದ್ಧ್ರುವಂ ಭವೇತ್ ।
ಏತದೇವ ರಹಸ್ಯಂ ಮೇ ಕೀರ್ತಿತಂ ನೃಪಸತ್ತಮ ॥ ೧೮೫ ॥

---

೧೮೦. ಕ್ಷೇಮಂಕರಿಯ ಈ ಉತ್ತಮವಾದ ವಿಷಯಗಳನ್ನು ಕೇಳಿದವನು ಪಾಪದಿಂದ ಮುಕ್ತನಾಗಿ ಮೋಕ್ಷಪದವನ್ನು ಹೊಂದುತ್ತಾನೆ.

೧೮೧. ನವಮಿಯದಿನ ಶುಚಿಯಾಗಿ ಯಾವನು ಭಕ್ತಿಯಿಂದ ಓದುತ್ತಾನೋ ಅವನು ರಾಜ್ಯ, ಮಕ್ಕಳನ್ನು ಹೊಂದುವುದಲ್ಲದೆ ಭಯದಿಂದಲೂ ಮುಕ್ತನಾಗುತ್ತಾನೆ.

೧೮೨. ಇದನ್ನು ಮನೆಯಲ್ಲಿ ಬರೆದಿಟ್ಟಿದ್ದರೆ ಬೆಂಕಿ, ಕಳ್ಳರು, ಸರ್ಪಾದಿಗಳ ಭಯವಿಲ್ಲ.

೧೮೩. ಇದನ್ನು ಪುಸ್ತಕದಲ್ಲಿ ಬರೆದು ಯಾರು ಭಕ್ತಿಯಿಂದ ಪೂಜಿಸುತ್ತಾರೋ ಅವರಿಗೆ ಪ್ರಪಂಚದಲ್ಲಿ ಎಲ್ಲವೂ ಇಷ್ಟವಾಗಿ ಬೇಕಾದುದನ್ನು ಕೊಡುತ್ತವೆ.

೧೮೪. ಅವನಿಗೆ ಪಶುಗಳು, ಪುತ್ರರು, ಧಾನ್ಯ ಉತ್ತಮರಾದ ಸ್ತ್ರೀಯರು ರತ್ನ, ಅಶ್ವ, ಗಜ, ಭೃತ್ಯರು, ಗ್ರಾಮಗಳೂ ಜಾಗ್ರತೆ ಸಿಕ್ಕುತ್ತವೆ.

೧೮೫. ಯಾವನ ಮನೆಯಲ್ಲಿ ಇದು ಇರುತ್ತದೋ ಅವರಿಗೆ ಇವು ಸಿಕ್ಕುತ್ತವೆ ಇದೇ ರಹಸ್ಯವು ನಿನಗೆ ಹೇಳಿದ್ದೇನೆ.

ಕ್ಷೇಮಂಕರೀ ಭವಂತ್ವೇತು ಸರ್ವಂ ಕ್ಷೇಮಂಕರಂ ಶುಭಂ ।
ಕ್ಷೇಮ್ಯಾ ಕ್ಷೇಮಂಕರೀ ದೇವೀ ಸರ್ವೇಷಾಂ ಭಯನಾಶಿನೀ ॥ ೧೮೬ ॥

ರುದ್ರಸ್ಯ ಖಲು ಮಾಹಾತ್ಮ್ಯಂ ದೇವೀನಾಂ ಸಂಭವಸ್ತಥಾ ।
ನವಕೋಟ್ಯಸ್ತು ಚಾಮುಂಡಾ ಭೇದಭಿನ್ನಾ ವ್ಯವಸ್ಥಿತಾಃ ॥ ೧೮೭ ॥

ಯಾ ರೌದ್ರೀ ತಾಮಸೀ ಶಕ್ತಿಃ ಸಾ ಚಾಮುಂಡೀ ಪ್ರಕೀರ್ತಿತಾ ।
ಅಷ್ಟಾದಶ ತಥಾ ಕೋಟ್ಯೋ ವೈಷ್ಣವ್ಯಾ ಭೇದ ಉಚ್ಯತೇ ॥ ೧೮೮ ॥

ಯಾ ಸಾ ತು ರಾಜಸೀ ಶಕ್ತಿಃ ಪಾಲನೇ ಚೈವ ವೈಷ್ಣವೀ ।
ಯಾ ಬ್ರಾಹ್ಮೀ ಶಕ್ತಿಸತ್ವಸ್ಥಾ ಸಾ ಚಾನನ್ತಾ ಪ್ರಕೀರ್ತಿತಾ ॥ ೧೮೯ ॥

ಕ್ಷೇಮಂಕರ್ಯಾ ನ ಸಂಖ್ಯಾ ತು ಬ್ರಾಹ್ಮೀಶಕ್ತಿಃ ಪರಾವರಾ ।
ಬ್ರಹ್ಮಾಣೀ ಸಾ ಭುವಿಜ್ಞೇಯಾ ಸೃಷ್ಟಿರೂಪಾ ಜಗತ್ಸ್ಥಿತಾ ॥ ೧೯೦ ॥

---

೧೮೬. ಕ್ಷೇಮಂಕರಿಯು ನಿನಗೆ ಸರ್ವದಲ್ಲಿಯೂ ಕ್ಷೇಮಂಕರಿಯಾಗಲಿ ಶುಭವನ್ನು ಮಾಡಲಿ ಈಕೆಯು ತಾನೂ ಕ್ಷೇಮವಾಗಿ ಇತರರಿಗೂ ಕ್ಷೇಮವನ್ನುಂಟು ಮಾಡುವಳು. ಸರ್ವರಿಗೂ ಭಯವನ್ನು ನಾಶಮಾಡುವಳು

೧೮೭. ರುದ್ರನ ಮಹಾತ್ಮ್ಯೆಯ ರೂಪವಾಗಿಯೇ ಈ ದೇವಿಯರು ಉದ್ಭವಿಸಿರುವುದು. ಅಂದರೆ ಈ ದೇವಿಯರು ರುದ್ರಮಹಾತ್ಮೆಯ ರೂಪದವರು. ಒಂಭತ್ತು ಕೋಟಿ ಚಾಮುಂಡೆಯರು ಭೇದವಿಲ್ಲದೆ ಇದ್ದಾರೆ.

೧೮೮. ರುದ್ರನ ತಾಮಸ ಶಕ್ತಿಯೇ ಚಾಮುಂಡೀ ಎನ್ನಿಸಿಕೊಳ್ಳುತ್ತದೆ ವೈಷ್ಣವೀ ಭೇದದಿಂದ ಹದಿನೆಂಟು ಕೋಟಿ ಶಕ್ತಿಗಳು ಉತ್ಪನ್ನವಾಗಿವೆ.

೧೮೯. ರಾಜಸೀ ಶಕ್ತಿಯು ವೈಷ್ಣವ ಸಂಬಂಧದಿಂದ ಪ್ರಪಂಚದ ಪಾಲನೆಯಲ್ಲಿ ತೊಡಗಿದೆ. ಸತ್ವರೂಪದ ಬ್ರಾಹ್ಮೀ ಶಕ್ತಿಯು ಅನಂತವಾಗಿದೆ.

೧೯೦. ಕ್ಷೇಮಂಕರಿಯು ಸಂಖ್ಯಾರಹಿತಳು. ಬ್ರಾಹ್ಮೀ ಶಕ್ತಿ ಎಂಬುದು ಪರಾವರವಾದುದು. ಆ ಬ್ರಾಹ್ಮೀ ಶಕ್ತಿಯೇ ಸೃಷ್ಟಿರೂಪದಿಂದ ಜಗತ್ತಿನಲ್ಲಿದೆ. ಅದೇ ಬ್ರಹ್ಮಾಣಿ ಎನಿಸುತ್ತದೆ.

ಏತಾಸಾಂ ಸರ್ವಭೇದೇಷು ಪೃಥಗೇಕೈಕಶೋಭನಾಃ ।
ಸರ್ವಾಸಾಂ ಭಗವಾನ್ರುದ್ರಃ ಸರ್ವಗತ್ವಾತ್ಪತಿಸ್ಸ್ಮೃತಃ ॥ ೧೯೧ ॥

ಯಾವತ್ಯಸ್ತಾ ಮಹಾಶಕ್ತ್ಯಃ ತಾವದ್ರೂಪಾಣಿ ಶಂಕರಃ ।
ಕೃತ್ವಾಸಾಸ್ತು ಭಜತೇ ಪತಿರೂಪೇಣ ಸರ್ವದಾ ॥ ೧೯೨ ॥

ಯಶ್ಚಾರಾಧಯತೇ ತಾಸ್ತು ತಸ್ಯ ರುದ್ರೋಽಪಿ ತುಷ್ಯತಿ ।
ಸಿದ್ಧ್ಯನ್ತೇ ತಾಸ್ತದಾ ದೇವ್ಯೋ ಮಂತ್ರಿಣೋ ನಾತ್ರ ಸಂಶಯಃ ॥ ೧೯೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಕ್ಷೇಮಂಕರ್ಯುತ್ಪತ್ತಿರ್ನಾಮ
॥ ತ್ರಿಂಶತ್ತಮೋಽಧ್ಯಾಯಃ ॥

---

೧೯೧. ಇವರ ಇಷ್ಟು ಭೇದಗಳಲ್ಲಿ ಒಂದೊಂದು ಭೇದಕ್ಕೂ ಒಬ್ಬೊಬ್ಬಳು ಉತ್ತಮಳು, ಗಟ್ಟಿಗಳು, ಒಳ್ಳೆಯವಳು. ಆ ಎಲ್ಲಾ ಶಕ್ತಿಗಳಲ್ಲೂ ರುದ್ರನು ಇರುವುದರಿಂದ ಅವರಿಗೆಲ್ಲಾ ರುದ್ರನು ಗಂಡನು.

೧೯೨. ಶಕ್ತಿಗಳೆಷ್ಟಿವೆಯೋ ಅಷ್ಟು ರೂಪವಾಗಿಯೂ ಶಂಕರನಿರುವನು. ಈಶ್ವರನು ಪತಿರೂಪದಿಂದ ಆ ಶಕ್ತಿಗಳಲ್ಲಿ ರಮಿಸುತ್ತಾನೆ.

೧೯೩. ಹೆಂಡತಿಯರಾಗಿರುವ ಆ ಶಕ್ತಿಗಳನ್ನು ಪೂಜಿಸುವವರಿಗೆ ರುದ್ರನೂ ಪ್ರಸನ್ನನಾಗುತ್ತಾನೆ. ಆ ದೇವಿಯರ ಮಂತ್ರವನ್ನು ಜಪಿಸುವವರಿಗೆ ಆಯಾ ದೇವಿಯರು ಸಿದ್ಧಿಯನ್ನುಂಟುಮಾಡುತ್ತಾರೆ. ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಕ್ಷೇಮಂಕರಿಯ ಜನನವೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ಏಕತ್ರಿಂಶೋಽಧ್ಯಾಯಃ ॥



॥ ಭೀಷ್ಮ ಉವಾಚ ॥

**ಯಾ ಸಂಭೂತಾ ಶರೀರಾತ್ತು ಬ್ರಹ್ಮಣೋಽವ್ಯಕ್ತಜನ್ಮನಃ ।**
**ಗಾಯತ್ರ್ಯಷ್ಟಭುಜಾ ಭೂತ್ವಾ ಖ್ಯಾತಾ ವಿಂಶಭುಜಾ ತಥಾ ॥ ೧ ॥**

**ಸೈವ ಚಾನ್ಯಾಭವದ್ದೇವೀ ದೇವಕಾರ್ಯಚಿಕೀರ್ಷಯಾ ।**
**ಮಹಿಷಾಖ್ಯಾಸುರವಧಂ ಕುರ್ವತೀ ಬ್ರಹ್ಮಣೋ ರತಾ ॥ ೨ ॥**

**ವೈಷ್ಣವ್ಯಾ ನಿಹತೋ ದೈತ್ಯಃ ಕತಮೋ ಯೋ ಮಹಾಬಲಃ ।**
**ಚಾಮುಂಡಯಾ ರುದ್ರಶಕ್ತ್ಯಾ ಕತಮೋ ದಾನವೋ ಹತಃ ॥ ೩ ॥**

---

### ಮೂವತ್ತೊಂದನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು - ಪರಬ್ರಹ್ಮನ ಶರೀರದಿಂದ ಹುಟ್ಟುವಾಗ ಎಂಟು ಭುಜವುಳ್ಳವಳಾಗಿ ಗಾಯತ್ರೀ ದೇವಿಯು ಜನಿಸಿ ಕಡೆಗೆ ಇಪ್ಪತ್ತು ಭುಜವನ್ನು ಹೊಂದಿ ಪ್ರಖ್ಯಾತಳಾದಳು.

೨ ದೇವತೆಗಳ ಕೆಲಸವನ್ನು ಮಾಡಬೇಕಾದುದರಿಂದ ಬೇರೆ ಹೆಸರನ್ನೇ ಹೊಂದಿದಳು. ಆಗ ಮಹಿಷನೆಂಬ ದೈತ್ಯನನ್ನು ವಧಿಸಿ ಬ್ರಹ್ಮನಲ್ಲಿ ಐಕ್ಯಳಾದಳು

೩. ಶಕ್ತಿಗಳನಂತವೆಂದೂ ಅವುಗಳಲ್ಲಿ ಒಂದೊಂದು ಗುಂಪಿಗೂ ಒಂದೊಂದು ಮುಖ್ಯವೆಂದೂ ಹೇಳಿದೆಯಷ್ಟೆ. ಇವುಗಳಲ್ಲಿ ವೈಷ್ಣವೀ ಶಕ್ತಿಯು ಯಾರನ್ನು ಕೊಂದಿತು ? ರುದ್ರಶಕ್ತಿಯಾದ ಚಾಮುಂಡಿಯು ಯಾರನ್ನು ಕೊಂದಳು. ?

॥ ಪುಲಸ್ತ್ಯ ಉವಾಚ ॥

ಇದಂ ಜಗತ್ಸ್ಥಿತಂ ಭೀಷ್ಮ ಗಂಗಾಸಿಕತಸಂಖ್ಯಯಾ ।
ಯತ್ಕಿಂಚಿದ್ಭವತೇ ವೃತ್ತಂ ತತ್ಸರ್ವಂ ವೇದ ಸರ್ವವಿತ್ ॥ ೪ ॥

ಸ್ವಾಯಂಭುವೇ ಹತೋ ದೈತ್ಯೋ ವೈಷ್ಣವ್ಯಾ ಮಂದರೇ ಗಿರೌ ।
ಮಹಿಷಾಖ್ಯೋऽಭಿಧಾಸ್ಯಶ್ಚ ಸ ಚ ವೈವಸ್ವತೇ ಪುನಃ ॥ ೫ ॥

ನಂದಯಾ ನಿಹತೋ ಸಂಖ್ಯೇ ಮಹಾಬಲಪರಾಕ್ರಮಃ ।
ಅಥವಾ ಜ್ಞಾನಶಕ್ತಿಶ್ಚ ಮಹಿಷೋऽಜ್ಞಾನ ಮೂರ್ತಿಮಾನ್ ॥ ೬ ॥

ಅಜ್ಞಾನಂ ಜ್ಞಾನಸಾಧ್ಯಂ ತು ಭವತೀಹ ನ ಸಂಶಯಃ ।
ಮೂರ್ತಿಪಕ್ಷೇ ಚೇತಿಹಾಸೋ ಮನ್ಮೂರ್ತಿಃ ಸ್ವೇನ ಬಾಧ್ಯತೇ ॥ ೭ ॥

---

೪. ಪುಲಸ್ತ್ಯನು ಹೇಳಿದನು- ಭೀಷ್ಮನೇ ! ಈ ಜಗತ್ತು ಗಂಗೆಯಲ್ಲಿರುವ ಮರಳಿನಷ್ಟು ಸಂಖ್ಯೆಯುಳ್ಳದ್ದು. ಆ ಜಗತ್ತಿನಲ್ಲಿ ನಡೆಯುವ ಅಲ್ಪ ವೃತ್ತಾಂತವನ್ನೂ ಆ ಬ್ರಹ್ಮನು ಬಲ್ಲನು.

೫-೧೦. ಸ್ವಾಯಂಭುವ ಮನ್ವಂತರದಲ್ಲಿ ವೈಷ್ಣವೀ ಶಕ್ತಿಯು ಮಂದರ ಪರ್ವತದಲ್ಲಿ ಮಹಿಷಾಸುರರನ್ನು ಕೊಂದಳು. ಅದೇ ಮಹಿಷಾಸುರನು ವೈವಸ್ವತ ಮನ್ವಂತರದಲ್ಲಿ ನಂದೆಯೆಂಬ ಶಕ್ತಿಯಿಂದ ಕೊಲ್ಲಲ್ಪಟ್ಟನು. ಅದನ್ನು ಪ್ರಸ್ತಾಪಿಸಬೇಕಾಗಿದೆ. ಅಥವಾ ಆ ನಂದಾಶಕ್ತಿಯೇ ಜ್ಞಾನಶಕ್ತಿಯೆಂದು ಭಾವಿಸೋಣ. ಮಹಿಷನೆ ಅಜ್ಞಾನಮೂರ್ತಿಯೆಂದು ತಿಳಿಯೋಣ. ಆಗ್ಗೆ ಜ್ಞಾನೋದಯವಾಗಿ ಅಜ್ಞಾನವು ನಾಶವಾಗಬೇಕಾದರೆ ಜ್ಞಾನವು ಬೇಕು ಎಂಬುದರಲ್ಲಿ ಸಂಶಯವೇನಿದೆ ? ಉಪದೇಶಿಸುವ ರೀತಿಗಳೆರಡು ಮಾರ್ಗವಾಗಿವೆ ! ಗುಣಗಳನ್ನು ಎತ್ತಿ ಅವುಗಳ ವಿಷಯವನ್ನು ಬೋಧಿಸುವುದು. ಇದು ನುರಿತ ಜ್ಞಾನಿಗಳಿಗೆ ಸಂಬಂಧಿಸಿದುದು. ಮತ್ತೊಂದು ನಮಗೆ ಬೇಕಾದ ಗುಣಗಳನ್ನು ತೆಗೆದುಕೊಂಡು ಆದು ಜನರಿಗೆ ಅದರಲ್ಲೂ ಅಜ್ಞರಾದವರಿಗೆ ಸುಲಭವಾಗಿ ತಿಳಿಯಲು ಆ ಕಾರವನ್ನು ಕಲ್ಪಿಸಿ ಕಥೆಯಾಗಿ ಮಾಡುವುದು. ಇದರಲ್ಲಿ ಮೊದಲನೆಯದು ಜ್ಞಾನ ಪಕ್ಷವು. ಅದು ವೇದ ವೇದಾಂತಿಗಳ ವಿಷಯು, ಎರಡನೆಯದಕ್ಕೆ ಆ ಜ್ಞಾನಗಳನ್ನು ಮೂರ್ತಿ (ಆಕಾರ) ಗಳನ್ನಾಗಿ ಕಲ್ಪಿಸಿ ಕೊಂಡಿರುವುದರಿಂದ ಮೂರ್ತಿಪಕ್ಷವೆಂದು ಹೆಸರು. ಇದನ್ನೇ ಇತಿಹಾಸವು ಬೋಧಿಸುತ್ತದೆ. ಇದು

ಖ್ಯಾಪ್ಯತೇ ವೇದವಾದ್ಯೈಸ್ತು ಅಹಂ ತೈರ್ವೇದವಾಧಿಭಿಃ ।
ಇದಾನೀಂ ಶೃಣು ಮೇ ರಾಜನ್ ಪಂಚಪಾತಕ ನಾಶನಂ ॥ ೮ ॥

ಯಜನಂ ದೇವದೇವಸ್ಯ ಬ್ರಹ್ಮಪುತ್ರ ವಸುಪ್ರದಂ ।
ಇಹ ಜನ್ಮನಿ ದಾರಿದ್ರ್ಯವ್ಯಾಧಿಕುಷ್ಠಾದಿಪೀಡಿತಃ ॥ ೯ ॥

ಅಲಕ್ಷ್ಮೀವಾನಪುತ್ರಸ್ತು ಯೋ ಭವೇತ್ಪುರುಷೋ ಭುವಿ ।
ತಸ್ಯ ಸದ್ಯೋ ಭವೇಲ್ಲಕ್ಷ್ಮೀರಾಯುರ್ವರ್ಚಃ ಸುತಾಃ ಸುಖಂ ॥ ೧೦ ॥

ಕೃತ್ವಾ ತು ಮಂಡಲಗತಂ ಲೋಕಪಾಲ ಸಮನ್ವಿತಂ ।
ಬ್ರಹ್ಮಾಣಂ ತು ಪರಂ ದೇವಂ ಯಃ ಪಶ್ಯತಿ ವಿಧಾನತಃ ॥ ೧೧ ॥

ಪೂಜಿತಂ ತೇನ ಸಕಲಂ ಜಗತ್‌ಸ್ಥಾವರಜಂಗಮಂ ।
ಆಧಾರ್ಯ ದರ್ಶಿತಂ ದೇವಂ ಮಂತ್ರಮೂರ್ತಿಮಯೋನಿಜಂ ॥ ೧೨ ॥

---

ಅಜ್ಞಾನಿಗಳ ವಿಷಯವಾದುದು. ಇತಿಹಾಸ ರೀತಿಯಲ್ಲೂ ಯಾವ ಜ್ಞಾನವನ್ನು ಯಾವ ಜ್ಞಾನವು ಬಾಧಿಸುತ್ತದೆ ಎಂಬುದನ್ನು ಹೇಳುತ್ತೇನೆ. ಇದನ್ನು ವೇದವನ್ನರಿ ತವರು ಹೇಳುತ್ತಾರೆ. ನಾನು ಆ ವೇದಾದಿಗಳಿಂದ ತಿಳಿದಿದ್ದೇನೆ. ಈಗ ದೇವದೇ ವನು ಯಾಗಮಾಡಿ ಬ್ರಹ್ಮಪುತ್ರನಿಗೆ ದಾನಮಾಡಿದ ರೀತಿಯನ್ನು ಕೇಳು. ಇದು ಪಂಚಮಹಾಪಾತಕಗಳನ್ನೂ ನಾಶಮಾಡುತ್ತದೆ. ಮತ್ತು ಐಶ್ವರ್ಯವನ್ನೂ ಕೊಡುತ್ತದೆ. ಈ ಜನ್ಮದಲ್ಲಿ ದಾರಿದ್ರ್ಯ, ರೋಗ, ಕುಷ್ಠಾದಿಗಳಿಂದ ಕೂಡಿದ್ದರೂ ಮಕ್ಕಳಿಲ್ಲದಿದ್ದರೂ ಅಂತಹ ಮನುಷ್ಯನಿಗೆ ಇದನ್ನು ಕೇಳುವುದರಿಂದ ದಾರಿದ್ರ್ಯನಾಶವೂ, ಆಯುಸ್ಸೂ, ಮಕ್ಕಳೂ ಸುಖವೂ ಉಂಟಾಗುತ್ತವೆ.

೧೧-೧೨. ಒಂಭತ್ತು ನಾಭಿಗಳಿರುವಂತೆ ಚಕ್ರವನ್ನು ಬರೆದು ಮಧ್ಯದಲ್ಲಿ ಬ್ರಹ್ಮನನ್ನೂ ಸುತ್ತಲೂ ಅಷ್ಟ ದಿಕ್ಕುಗಳಲ್ಲಿ ಅಷ್ಟ ಲೋಕಪಾಲಕರನ್ನೂ ಬರೆದು (ಮಂತ್ರಗಳಿಂದ) ಪೂಜಿಸಬೇಕು. ಹೀಗೆ ಪೂಜಿಸಿದರೆ ಅವನು ಪ್ರಪಂಚವನ್ನೇ ಪೂಜಿಸಿದಂತೆ ಆಗುತ್ತದೆ. ಉತ್ಪತ್ತಿ ರಹಿತನಾದ ಮಂತ್ರಮೂರ್ತಿಯನ್ನು ತೋರಿಸಿದಂತಾಗುತ್ತದೆ.

ಕಾರ್ತಿಕೇ ಮಾಸಿ ಶುಕ್ಲಾಯಾಂ ಪೌರ್ಣಮಾಸ್ಯಾಂ ವಿಶೇಷತಃ ।
ಸರ್ವಾಸು ವಾ ಯಜೇದೇವಂ ಪೂರ್ಣಿಮಾ ವಿಶೇಷತಃ ॥ ೧೩ ॥

ಸಂಕ್ರಾಂತೌ ಚ ಮಹಾಬಾಹೋ ಚಂದ್ರಸೂರ್ಯಗ್ರಹೇಽಪಿವಾ ।
ಯಃ ಪಶ್ಯತಿ ವಿಭುಂ ದೇವಂ ಪೂಜಿತಂ ಗುರುಣಾ ನೃಪ ॥ ೧೪ ॥

ತಸ್ಯ ಸದ್ಯೋ ಭವೇತ್ತುಷ್ಟಿಃ ಪಾಪಧ್ವಂಸಶ್ಚ ಜಾಯತೇ ।
ಸ ಮಾನ್ಯೋ ದೇವತಾನಾಂ ಚ ಭವತೀತಿ ನರಾಧಿಪ ॥ ೧೫ ॥

ಬ್ರಾಹ್ಮಣಕ್ಷತ್ರಿಯವಿಶಾಂ ಭಕ್ತಾನಾಂ ತು ಪರೀಕ್ಷಣಂ ।
ಸಂವತ್ಸರಂ ಗುರುಃ ಕುರ್ಯಾಜ್ಜಾತಿಶೌಚಕ್ರಿಯಾದಿಭಿಃ ॥ ೧೬ ॥

ಉಪಪನ್ನಮಿತಿ ಜ್ಞಾತ್ವಾ ಹೃದಯೇನಾವಧಾರಯೇತ್ ।
ತೇಽಪಿ ಭಕ್ತಿಯುತಾ ಜ್ಞಾತ್ವಾ ಆತ್ಮಾನಂ ಪರಮೇಶ್ವರಂ ॥ ೧೭ ॥

---

೧೩. ಕಾರ್ತಿಕ ಮಾಸದ ಹುಣ್ಣಿಮೆಯಲ್ಲಿ ವಿಶೇಷ ಪೂಜೆಮಾಡಬೇಕು. ಎಲ್ಲಾ ಹುಣ್ಣಿಮೆಗಳಲ್ಲಾದರೂ ಆಗಬಹುದು. ವಿಧಿಯುಕ್ತವಾಗಿ ಪೂಜಿಸಬೇಕು.

೧೪. ಸಂಕ್ರಮಣಗಳಲ್ಲಾಗಲಿ, ಚಂದ್ರಸೂರ್ಯಗ್ರಹಣಗಳಲ್ಲಾಗಲಿ ಅದನ್ನು ಪೂಜಿಸಿ ಗುರುವನ್ನು ಪೂಜಿಸಬೇಕು. ಅಥವಾ ಗುರುವು ಪೂಜಿಸಿದುದನ್ನು ನೋಡಬೇಕು.

೧೫. ಅವನಿಗೆ ಒಡನೆಯೇ ತೃಪ್ತಿಯೂ ಆಗುವುದಲ್ಲದೆ ಪಾಪವೂ ನಾಶವಾಗುತ್ತದೆ. ಅವನು ದೇವತೆಗಳಿಗೂ ಮಾನ್ಯನಾಗುತ್ತಾನೆ, ಸಂಶಯವಿಲ್ಲ.

೧೬. ಗುರುವು ಶಿಷ್ಯರು ಯಾವ ಜಾತಿಯವರೋ ಅವರ ಪರೀಕ್ಷೆಯನ್ನು ಅವರವರ ಜಾತಿಗೆ ತಕ್ಕ ರೀತಿಯಲ್ಲಿ ಪರೀಕ್ಷಿಸಬೇಕು. ವರ್ಷಪರ್ಯಂತರ ಆ ಪರೀಕ್ಷೆಯನ್ನು ಮಾಡಬೇಕು. ಇವರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮೂವರೂ ಇರಬೇಕು. ಭಕ್ತರಾಗಿರಬೇಕು.

೧೭-೧೮. ಗುರುವು ಅವರ ವಿಷಯವು ಸರಿಯಾಗಿದೆ. ಎಂದು ಮನಸ್ಸಿನಲ್ಲಿ ದೃಢಮಾಡಿಕೊಳ್ಳಬೇಕು. ಆ ಶಿಷ್ಯರೂ ಕೂಡ ಆಚಾರ್ಯನೇ ಪರಮೇಶ್ವರನೆಂದು

ಸಂವತ್ಸರಂ ಗುರೌಭಕ್ತಿಂ ಕುರ್ಯುರ್ವಿಷ್ಣುಸಮಂ ತಥಾ ।
ಸಂವತ್ಸರೇ ತತಃ ಪೂರ್ಣೇ ಗುರುಮೇವಂ ಪ್ರಸಾದಯೇತ್ ॥ ೧೮ ॥

ಭಗವಂಸ್ತ್ವತ್ಪ್ರಸಾದೇನ ಸಂಸಾರಾರ್ಣವತಾರಣಂ ।
ಪರಬ್ರಹ್ಮೋಪದೇಶೇನ ವಿರಿಂಚ್ಯಾರಾಧನೇ ರತಃ ॥ ೧೯ ॥

ಸಹಸ್ರಶೀರ್ಷಜಾಪ್ಯೇನ ಮಂಡಲಬ್ರಾಹ್ಮಣೇನ ಚ ।
ಧ್ಯಾನೇನ ಸ್ಯಾತ್ತಥಾಸ್ಮಾಕಮುಪದೇಶಃ ಪ್ರದೀಯತಾಂ ॥ ೨೦ ॥

ಇಚ್ಛಾಮಶ್ಚೈಹಿಕಾಂಲಕ್ಷ್ಮೀಂ ವಿಶೇಷೇಣ ನಿಗದ್ಯತಾಂ ।
ಏವಮಭ್ಯರ್ಥ್ಯ ಮೇಧಾವೀ ಬ್ರಹ್ಮವಿಷ್ಣು ಶಿವಾಗ್ರತಃ ೧ ॥

ಅಭ್ಯರ್ಥಿತಸ್ತ್ವಸೌ ಯಾ ತು ಕಾರ್ತಿಕಸ್ಯ ಚತುರ್ದಶೀ ।
ಕ್ಷೀರವೃಕ್ಷಸಮುದ್ಭೂತಂ ದಾಪಯೇದ್ದಂದಧಾವನಂ ॥ ೨೨ ॥

---

ತಿಳಿದು ಸಂವತ್ಸರ ಪರ್ಯಂತವೂ ವಿಷ್ಣುವಿನಲ್ಲಿಟ್ಟಿರುವಂತೆ ಭಕ್ತಿಯನ್ನು ಆತನಲ್ಲಿ ಇಡಬೇಕು. ಸಂವತ್ಸರವು ಪೂರ್ಣವಾಗುತ್ತಲು ಗುರುವಿಗೆ ಗೌರವಮಾಡಿ ಅನುಗ್ರಹವನ್ನು ಪಡೆಯಬೇಕು.

೧೯-೨೦. ಸ್ವಾಮಿ ! ತಮ್ಮ ಪ್ರಸಾದದಿಂದಲೂ ಪರಬ್ರಹ್ಮೋಪಾಸನದಿಂದಲೂ ವಿರಿಂಚಿಯ ಪೂಜೆಯಿಂದಲೂ ಪುರುಷಸೂಕ್ತ ಜಪದಿಂದಲೂ ಮಂಡಲ ಬ್ರಾಹ್ಮಣದ ಪಠನದಿಂದಲೂ ಧ್ಯಾನದಿಂದಲೂ ಪ್ರಸನ್ನನಾಗಿ ನನಗೆ ಉಪದೇಶವನ್ನು ಕೊಡು.

೨೧. ಎಲೈ ಗುರುವೆ! ನಮಗೆ ಇಹಲೋಕದ ಸಂಪತ್ತು ಬೇಕು. ಅದನ್ನು ಅತಿಶಯವಾಗಿ ಹೇಳಿಕೊಡು. ಎಂದೆನ್ನಬೇಕು. ಬುದ್ಧಿವಂತನಾದ ಶಿಷ್ಯನೂ ಬ್ರಹ್ಮ ವಿಷ್ಣು ಶಿವರ ಮುಂದೆ ಹಾಗೆಯೇ ಪ್ರಾರ್ಥಿಸಬೇಕು.

೨೨. ಈರೀತಿಯಾಗಿ ಯಾಚಿಸಿಕೊಂಡು ಕಾರ್ತಿಕ ಶುದ್ಧ ಚತುರ್ದಶಿಯ ದಿವಸ ಬೆಳಿಗ್ಗೆ ಎದ್ದು ದಂತಧಾವನವನ್ನು ಮಾಡಿಕೊಳ್ಳಬೇಕು. ಆ ಹಲ್ಲುಜ್ಜುವ ಕಡ್ಡಿಯು ಹಾಲು ಒರುವ ಮರದ್ದಾಗಿರಬೇಕು.

ತೇ ಚ ತಂ ಭಕ್ಷಯೇಯುರ್ಹಿ ನದೀಂ ಗತ್ವಾ ಸಮುದ್ರಗಾಂ ।
ದೇವಖಾತಂ ತಟಾಗಂ ವಾ ಗೃಹೇವಾಪಿ ವಿಧಾನತಃ ॥ ೨೩ ॥

ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಬದ್ಧಪದ್ಮಾಸನಸ್ತು ತೇ ।
ಧ್ಯಾತ್ವಾ ಗುರುಂ ಸಹಸ್ರಾರೇ ಶ್ವೇತವಸ್ತ್ರೋಪವೀತಕಂ ॥ ೨೪ ॥

ಶ್ವೇತಮಾಲ್ಯಾಂಬರಧರಂ ಶ್ವೇತಗಂಧಾನುಲೇಪನಂ ।
ನಿರ್ಗಮ್ಯ ಚ ಬಹಿರ್ನದ್ಯಾಂ ಕುರ್ಯುರ್ನಿತ್ಯಮತಂದ್ರಿತಾಃ ॥ ೨೫ ॥

ತದ್ಭಕ್ಷಯೇಯುರ್ಮಂತ್ರೇಣ ಮಂತ್ರಿತಂ ಪರಮೇಷ್ಠಿನಃ ।
ಆಪೋಹಿಷ್ಠೇತಿ ಮಂತ್ರೇಣ ಸಪ್ತಕೃತ್ವೋಽಭಿಮಂತ್ರಿತಂ ॥ ೨೬ ॥

ದೇವಸ್ಯತ್ವೇತಿ ಜಪ್ತ್ವಾ ತು ಯುಂಜಾನೇತಿ ಕರೇ ನ್ಯಸೇತ್ ।
ಇರಾವತ್ಯೇತಿ ಪ್ರಕ್ಷಾಳ್ಯ ಬ್ರಹ್ಮೋದೇನೇತಿ ವೈ ಮುಖೇ ॥ ೨೭ ॥

---

೨೩. ಅವರು ಸಮುದ್ರವನ್ನು ಸೇರುವ ನದಿಗಾಗಲಿ, ಕೆರೆಗಾಗಲಿ, ಸಣ್ಣ ಹೊಳೆಗಳಿಗಾಗಲಿ ಹೋಗಬೇಕು ಇಲ್ಲವೆ ಮನೆಯಲ್ಲಿಯೇ ಆಗಲಿ, ಶಾಸ್ತ್ರ ವಿಧಾನದಿಂದ ಆ ಕಡ್ಡಿಯನ್ನು ಅಗಿಯಬೇಕು.

೨೪. ಬ್ರಾಹ್ಮ ಮುಹೂರ್ತದಲ್ಲೆದ್ದು ಪದ್ಮಾಸನವನ್ನು ಹಾಕಿಕೊಂಡು ಸಹಸ್ರ ಅರಗಳುಳ್ಳ ಚಕ್ರದಲ್ಲಿ ಗುರುವನ್ನು ಧ್ಯಾನಮಾಡಬೇಕು. ಧ್ಯಾನಿಸುವಾಗ ಆತನ ಬಿಳಿ ವಸ್ತ್ರ ಯಜ್ಞೋಪವೀತಗಳನ್ನು ಹಾಕಿಕೊಂಡಿರುವಂತೆ ಧ್ಯಾನಿಸಬೇಕು.

೨೫. ಬಿಳೀಮಾಲೆ, ಬಿಳೀಬಟ್ಟೆ ಧರಿಸಿರುವಿಕೆ, ಬಿಳೀ ಗಂಧವನ್ನು ತೊಡೆದು ಕೊಂಡಿರುವುದು ಇಂತಹವನನ್ನು ಧ್ಯಾನಿಸಬೇಕು. ಆಮೇಲೆ ಹೊರಗೆ ಹೋಗಿ ಆಲಸ್ಯವಿಲ್ಲದೆ ನದಿಗಳಲ್ಲಿ ಈ ಕೆಲಸವನ್ನು ಮಾಡಬೇಕು.

೨೬. ಬ್ರಹ್ಮಮಂತ್ರದಿಂದ ಮಂತ್ರಿಸಿದ ಆ ಕಡ್ಡಿಯನ್ನು ಅಗಿಯಬೇಕು. ಆ ಆ ಕಡ್ಡಿಯನ್ನು ಆಪೋಹಿಷ್ಠ ಎಂಬ ಮಂತ್ರದಿಂದ ಏಳಾವರ್ತಿ ಮಂತ್ರಿಸಬೇಕು.

೨೭. ದೇವಸ್ಯತ್ವಾ ಎಂಬ ಮಂತ್ರವನ್ನು ಜಪಿಸಿ ಯುಂಜಾನಃ ಪ್ರಥಮಂ ಎಂಬ ಮಂತ್ರದಿಂದ ಕೈಗೆ ಕೊಡಬೇಕು. ಇರಾವತಿ ಧೇನುಮತೀಹಿ ಭೂತಂ ಎಂಬುದ ರಿಂದ ಆ ಕಡ್ಡಿಯನ್ನು ತೊಳೆದು ಬ್ರಹ್ಮೋದ ಎಂಬ ಮಂತ್ರದಿಂದ ಬಾಯಲ್ಲಿಟ್ಟು ಕೊಳ್ಳಬೇಕು.

ಭಕ್ಷಯಿತ್ವಾ ಕ್ಷಿಪೇದ್ದೂರಂ ಪತಿತಂ ಚ ನಿರೀಕ್ಷಯೇತ್ ।
ಸಮ್ಮುಖಂ ಪ್ರಾಜ್ಮುಖಂ ವಾಪಿ ವಿದಿಶಂ ವಾಪಿ ವಾ ಗತಂ ॥ ೨೮ ॥

ಸಂಮುಖೇ ದೇವತಾಲಬ್ಧಿರ್ಮಂತ್ರಸಿದ್ಧಿಶ್ಚ ಜಾಯತೇ ।
ಪರಾಙ್ಮುಖೇ ದಂತಕಾಷ್ಠೇ ಸರ್ವೇ ದೇವಾಃ ಪರಾಙ್ಮುಖಾಃ ॥ ೨೯ ॥

ಉತ್ತರೇಣ ಗತೇ ತಸ್ಮಿನ್ ಸಿದ್ಧಿರ್ಭವತಿ ವಾ ನ ವಾ ।
ದಕ್ಷಿಣೇನ ಭವೇನ್ಮೃತ್ಯುರ್ಗುರೋಸ್ತಸ್ಯ ನ ಸಂಶಯಃ ॥ ೩೦ ॥

ಪ್ರೇಕ್ಷ್ಯಾಶುಭಂ ಸ್ವಪೇದ್ಭೂಮೌ ದೇವದೇವಸ್ಯ ಸನ್ನಿಧೌ ।
ಸ್ವಪ್ನಾನ್ ದೃಷ್ಟ್ವಾ ಗುರೋರಗ್ರೇ ಶ್ರಾವಯೇಯುರ್ವಿಚಕ್ಷಣಾಃ ॥ ೩೧ ॥

ತತಃ ಶುಭಾಶುಭಂ ತತ್ರ ಲಕ್ಷಯೇತ್ಪರಮೋ ಗುರುಃ ।
ಪೌರ್ಣಮಾಸ್ಯಾಮಥ ಸ್ನಾತ್ವಾ ತತೋ ದೇವಾಲಯಂ ವ್ರಜೇತ್ ॥ ೩೨ ॥

ಗುರುಶ್ಚ ಮಂಡಲಂ ಭೂಮೌ ಕಲ್ಪಿತಾಯಾಂ ತು ವರ್ತಯೇತ್ ।
ಲಕ್ಷಣೈರ್ವಿವಿಧೈರ್ಭೂಮಿಂ ಲಕ್ಷಯಿತ್ವಾ ವಿಧಾನತಃ ॥ ೩೩ ॥

---

೨೮. ಆಗಿದು ದೂರಕ್ಕೆ ಎಸೆಯಬೇಕು. ಎದುರಿಗೋ ಪೂರ್ವಕ್ಕೋ ಮತ್ತಾವ ದಿಕ್ಕಿಗೆ ಬಿದ್ದಿತೆಂದು ನೋಡಬೇಕು.

೨೯-೩೦. ಎದುರಿಗೆ ಬಿದ್ದರೆ ದೇವತೆಯು ಪ್ರಸನ್ನಳಾಗುತ್ತಾಳೆ ಮಂತ್ರಸಿದ್ಧಿಯೂ ಆಗುತ್ತದೆ. ಆ ದಂತಕಾಷ್ಠವು ಹಿಂದೆಬಿದ್ದರೆ ಆ ಎಲ್ಲಾ ದೇವತೆಗಳೂ ನಮ್ಮ ವಿಷಯದಲ್ಲಿ ಪರಾಙ್ಮುಖರು. ಉತ್ತರಕ್ಕೆ ಬಿದ್ದರೆ ಸಿದ್ಧಿ ಆಗುವುದೋ ಇಲ್ಲವೋ ಸಂಶಯ. ದಕ್ಷಿಣಕ್ಕೆ ಬಿದ್ದರೆ ಗುರುವಿಗೆ ಮೃತ್ಯುವು ಸಂಭವಿಸುತ್ತದೆ. ಸಂಶಯವಿಲ್ಲ.

೩೧. ಅಶುಭವೆಂದು ಕಂಡುಬಂದರೆ ಆ ದೇವತೆಗಳ ಬಳಿಯಲ್ಲ ಭೂಮಿಯಲ್ಲಿ ಮಲಗಬೇಕು ಆಗ ಉಂಟಾದ ಸ್ವಪ್ನವನ್ನು ಗುರುವಿಗೆ ತಿಳಿಸಬೇಕು.

೩೨. ಆಮೇಲೆ ಶುಭಾಶುಭಗಳನ್ನು ಗುರುವು ಲಕ್ಷಿಸಬೇಕು. ಹುಣ್ಣಿಮೆ ದಿನ ಸ್ನಾನಮಾಡಿ ದೇವಸ್ಥಾನಕ್ಕೆ ಹೋಗಬೇಕು.

೩೩. ಅನೇಕ ರೀತಿಗಳಿಂದ ಪರೀಕ್ಷಿಸಿದ ಭೂಮಿಯಲ್ಲಿ ಗುರುವು ಮಂಡಲಗಳನ್ನು ಮಾಡಿಕೊಂಡು ಅದರಲ್ಲೇ ಕೆಲಸಗಳನ್ನು ಮಾಡುತ್ತಿರಬೇಕು.

ಷೋಡಶಾರಂ ಲಿಖೇತ್ಪದ್ಮಂ ನವಧಾರಮಥಾಪಿ ವಾ ।
ಅಷ್ಟಪತ್ರಮಥೋ ವಾಪಿ ಲಿಖಿತ್ವಾ ದರ್ಶಯೇದ್ಬುಧಃ ॥ ೩೪ ॥

ನೇತ್ರಬಂಧಂ ತು ಕುರ್ವೀತ ಸಿತವಸ್ತ್ರೇಣ ಯತ್ನತಃ ।
ವರ್ಣಾನುಕ್ರಮತಃ ಶಿಷ್ಯಾನ್ಪುಷ್ಪಹಸ್ತಾನ್ಪ್ರವೇಶಯೇತ್ ॥ ೩೫ ॥

ನವನಾಭಂ ಯದಾ ಕುರ್ಯಾನ್ಮಂಡಲಂ ವರ್ಣಕೈರ್ಬುಧಃ ।
ಇಂದ್ರಾಣೀಪೂರ್ವಕಂ ದೇವಮಿಂದ್ರಮೈಂದ್ರ್ಯಾಂ ತು ಪೂಜಯೇತ್ ॥ ೩೬ ॥

ಲೋಕಪಾಲೈಸ್ಸಮಂ ತದ್ವದಗ್ನಿಂ ಸಂಪೂಜಯೇನ್ನೃಪಃ ।
ದಿಶಿ ವಹ್ನೇರ್ಯಮಂ ಯಾಮ್ಯಾಂ ನೈರ್ಋತ್ಯಾಂ ಚೈವ ನಿರ್ಋತಿಂ ॥ ೩೭ ॥

ವರುಣಂ ವಾರುಣಾಶಾಯಾಂ ವಾಯುಂ ವಾಯವ್ಯಗೋಚರೇ ।
ಧನದಂ ಚೋತ್ತರೇ ನ್ಯಸ್ಯ ರುದ್ರಮೀಶಾನಗೋಚರೇ ॥ ೩೮ ॥

ಕಮಂಡಲುಂ ಪೂರ್ವತೋ ಹಿ ಸ್ರುಚಂ ವೈ ದಕ್ಷಿಣೇ ತಥಾ ।
ಹಂಸಂ ವೈ ಪಶ್ಚಿಮಾಯಾಂ ತು ಉತ್ತರಾಯಾಂ ಸ್ರುವಂ ತಥಾ ॥ ೩೯ ॥

---

೩೪. ಹದಿನಾರು ಅಥವಾ ಒಂಬತ್ತು ದಳವುಳ್ಳ ಪದ್ಮವನ್ನು ಬರೆಯುಬೇಕು. ಅದಿಲ್ಲದಿದ್ದರೆ ಎಂಟುದಳದ ಪದ್ಮವನ್ನಾದರೂ ಬರೆಯುಬೇಕು.

೩೫. ಶಿಷ್ಯನಿಗೆ ಬಿಳಿಯುಬಟ್ಟೆಯಿಂದ ಕಣ್ಣು ಕಾಣಿಸದಂತೆ ಭದ್ರವಾಗಿ ಕಟ್ಟಬೇಕು. ವರ್ಣಮಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ರೀತಿಯಲ್ಲಿಯೇ ಒಬ್ಬರ ಹಿಂದೊಬ್ಬರನ್ನು ಕೈಯಲ್ಲಿ ಹೂ ಕೊಟ್ಟು ಒಳಕ್ಕ ಪ್ರವೇಶಿಸಿಸಬೇಕು.

೩೬-೩೮. ಒಂಭತ್ತು ದಳವುಳ್ಳ ಪದ್ಮವನ್ನು ಬರೆದಿದ್ದರೆ ಮುಂದಿನ ರೀತಿಯಂತೆ ಮಾಡಬೇಕು. ಇಂದ್ರಾಣಿಯೊಡನೆ ಕೂಡಿರುವ ಇಂದ್ರನನ್ನು ಪೂರ್ವ ದಿಕ್ಕಿನಲ್ಲಿ ಪೂಜಿಸಬೇಕು. ಲೋಕಪಾಲಕರನ್ನೂ ಹೀಗೆ ಅವರವರ ದಿಕ್ಕಿನಲ್ಲಿ ಅವರವರನ್ನು ಪೂಜಿಸಬೇಕು. ಆಗ್ನೇಯದಲ್ಲಿ ಅಗ್ನಿಯನ್ನು ಪೂಜಿಸಬೇಕು. ದಕ್ಷಿಣದಲ್ಲಿ ಯಮನನ್ನೂ ನೈಋತ್ಯದಲ್ಲಿ ನಿರೃತಿಯನ್ನೂ ಪಶ್ಚಿಮದಲ್ಲಿ ವರುಣನನ್ನೂ ವಾಯುವ್ಯದಲ್ಲಿ ವಾಯುವನ್ನೂ ಉತ್ತರದಲ್ಲಿ ಕುಬೇರನನ್ನೂ ಈಶಾನ್ಯದಲ್ಲಿ ಈಶಾನನನ್ನೂ ಪೂಜಿಸಬೇಕು.

೩೯-೪೦. ಪೂರ್ವದಿಕ್ಕಿನಲ್ಲಿ ಕಮಂಡಲವನ್ನೂ ದಕ್ಷಿಣದಲ್ಲಿ ಸ್ರುಕ್ಕನ್ನೂ ಪಶ್ಚಿಮದಲ್ಲಿ ಹಂಸವನ್ನೂ ಉತ್ತರದಲ್ಲಿ ಸ್ರುವವನ್ನೂ ಆಗ್ನೇಯದಲ್ಲಿ ಬೃಸಿಯನ್ನೂ

ಆಗ್ನೇಯ್ಯಾಂ ಚ ಬೃಸೀಂ ದದ್ಯಾನ್ನೈರ್ಋತ್ಯಾಂ ಪಾದುಕೇ ತಥಾ ।
ವಾಯವ್ಯಾಂ ಯೋಗಪಟ್ಟಂ ಚ ಐಶಾನ್ಯಾಂ ಚ ಜಯಂತಿಕಾಂ ॥ ೪೦ ॥

ವಿಷ್ಣುಸ್ತು ಪೂರ್ವತಃ ಪೂಜ್ಯೋ ದಕ್ಷಿಣೇ ಚಾಪಿ ಶಂಕರಃ ।
ಪಶ್ಚಿಮೇ ತು ರವಿರ್ದೇವ ಋಷಯಶ್ಚೋತ್ತರೇ ತಥಾ ॥ ೪೧ ॥

ಮಧ್ಯೇ ಸ್ವಯಂ ಪದ್ಮಜನ್ಮಾ ಸಾವಿತ್ರೀ ದಕ್ಷಿಣೇ ತಥಾ ।
ಉತ್ತರೇ ಚೈವ ಗಾಯತ್ರೀ ದೇವೀ ಪದ್ಮದಳೇಕ್ಷಣಾ ॥ ೪೨ ॥

ಋಗ್ವೇದಂ ಪೂರ್ವತೋ ನ್ಯಸ್ಯ ಯಜುರ್ವೇದಂ ಚ ದಕ್ಷಿಣೇ ।
ಪಶ್ಚಿಮೇ ಸಾಮವೇದಂ ಚ ಅಥರ್ವಂ ಚೋತ್ತರೇ ತಥಾ ॥ ೪೩ ॥

ಇತಿಹಾಸಪುರಾಣಾನಿ ಛಂದೋ ಜ್ಯೋತಿಷಮೇವ ಚ ।
ಧರ್ಮಶಾಸ್ತ್ರಾಣಿ ಚಾನ್ಯಾನಿ ಇಂದ್ರಾದಿದಿಕ್ಷು ವಿನ್ಯಸೇತ್ ॥ ೪೪ ॥

ಪೂರ್ವಪತ್ರೇ ಬಲಂ ಪೂಜ್ಯ ಪ್ರದ್ಯುಮ್ನಂ ದಕ್ಷಿಣೇ ದಳೇ ।
ಪಶ್ಚಿಮೇ ಚಾನಿರುದ್ಧಂ ಚ ವಾಸುದೇವಮಥೋತ್ತರೇ ॥ ೪೫ ॥

---

ನೈಋತದಲ್ಲಿ ಪಾದುಕೆಯನ್ನೂ ವಾಯುವ್ಯದಲ್ಲಿ ಯೋಗಪಟ್ಟವನ್ನೂ ಈಶಾನ್ಯದಲ್ಲಿ ಜಯಂತಿಕೆಯನ್ನೂ ಆವಾಹಿಸಬೇಕು.

೪೧-೪೨. ಪೂರ್ವದಲ್ಲಿ ವಿಷ್ಣುವನ್ನೂ ದಕ್ಷಿಣದಲ್ಲಿ ಶಂಕರನನ್ನೂ ಪಶ್ಚಿಮದಲ್ಲಿ ರವಿಯನ್ನೂ ಉತ್ತರದಲ್ಲಿ ಸಪ್ತರ್ಷಿಗಳನ್ನೂ ಮಧ್ಯದಲ್ಲಿ ಬ್ರಹ್ಮನನ್ನೂ ದಕ್ಷಿಣದಲ್ಲಿ ಸಾವಿತ್ರಿಯನ್ನೂ ಉತ್ತರದಲ್ಲಿ ಗಾಯತ್ರಿಯನ್ನೂ ಆವಾಹನೆ ಮಾಡಬೇಕು.

೪೩. ಋಗ್ವೇದವನ್ನು ಪೂರ್ವದಲ್ಲೂ ಯಜುರ್ವೇದವನ್ನು ದಕ್ಷಿಣದಲ್ಲೂ ಸಾಮವೇದವನ್ನು ಪಶ್ಚಿಮದಲ್ಲೂ ಅಥರ್ವವೇದವನ್ನು ಉತ್ತರದಲ್ಲೂ ಆವಾಹಿಸಬೇಕು.

೪೪. ಇತಿಹಾಸ ಪುರಾಣಗಳನ್ನು ಪೂರ್ವದಲ್ಲೂ, ಛಂದಸ್ಸನ್ನು ದಕ್ಷಿಣದಲ್ಲೂ ಜ್ಯೋತಿಷ್ಯವನ್ನು ಪಶ್ಚಿಮದಲ್ಲೂ ಧರ್ಮಶಾಸ್ತ್ರವೇ ಮುಂತಾದುವನ್ನು ಉತ್ತರ ದಿಕ್ಕಿನಲ್ಲೂ ಆವಾಹಿಸಬೇಕು.

೪೫-೪೭. ಪೂರ್ವದಲ್ಲಿ ಬಲನನ್ನೂ, ದಕ್ಷಿಣದಳದಲ್ಲಿ ಪ್ರದ್ಯುಮ್ನನನ್ನೂ ಪಶ್ಚಿಮದಲ್ಲಿ ಅನಿರುದ್ಧನನ್ನೂ ಉತ್ತರದಲ್ಲಿ ವಾಸುದೇವನನ್ನೂ ಆವಾಹಿಸಿ ಆರಂಭಿ

ಪೂರ್ವತೋ ವಾಮದೇವಂ ಚ ಸದ್ಯೋಜಾತಂ ತು ದಕ್ಷಿಣೇ ।
ಈಶಾನಂ ಪಶ್ಚಿಮೇ ಸ್ಥಾಪ್ಯ ತತ್ಪುರುಷಂ ಚೋತ್ತರೇ ತಥಾ ॥ ೪೬ ॥

ಅಘೋರಸ್ಸರ್ವತಃ ಪೂಜ್ಯ ಏಷಾ ಪೂಜಾ ತು ಮಂಡಲೇ ॥ ೪೭ ॥

ಪೂರ್ವತೋ ಭಾಸ್ಕರಂ ಪೂಜ್ಯ ದಕ್ಷಿಣೇನ ದಿವಾಕರಂ ।
ಪ್ರಭಾಕರಂ ಪಶ್ಚಿಮೇ ತು ಗ್ರಹರಾಜಮಥೋತ್ತ ॥ ೪೮ ॥

ಏವಂ ಪೂಜ್ಯ ವಿಧಾನೇನ ಬ್ರಹ್ಮಾಣಂ ಪರಮೇಶ್ವರಂ ।
ದಿಙ್ಮಂಡಲೇ ತು ವಿನ್ಯಸ್ಯ ಅಷ್ಟೌ ಕುಂಭಾನ್ವಿಧಾನತಃ ॥ ೪೯ ॥

ಬ್ರಾಹ್ಮಂ ತು ಕಲಶಂ ಮಧ್ಯೇ ನವಮಂ ತತ್ರ ಕಲ್ಪಯೇತ್ ।
ಸ್ನಾಪಯೇನ್ಮುಕ್ತಿಕಾಮಂ ತು ಬ್ರಹ್ಮಣೋ ವೈ ಘಟೇನ ತು ॥ ೫೦ ॥

ಶ್ರೀಕಾಮಂ ವೈಷ್ಣವೇನೇಹ ಕಲಶೇನ ತು ಪಾರ್ಥಿವ ।
ರಾಜ್ಯಾರ್ಥಿನಂ ಸ್ಥಾಪಯೇಚ್ಚ ಐಂದ್ರೇಣ ಕಲಶೇನ ತು ॥ ೫೧ ॥

---

ಬೇಕು. ಪೂರ್ವದಲ್ಲಿ ವಾಮದೇವನನ್ನೂ ದಕ್ಷಿಣದಲ್ಲಿ ಸದ್ಯೋಜಾತನನ್ನೂ ಪಶ್ಚಿಮದಲ್ಲಿ ಈಶಾನನನ್ನೂ ಉತ್ತರದಲ್ಲಿ ತತ್ಪುರುಷನನ್ನೂ ಆವಾಹಿಸಬೇಕು ಆ ಘೋರ ಮೂರ್ತಿಯನ್ನು ಎಲ್ಲ ಕಡೆಯಲ್ಲೂ ಆರಾಧಿಸಬೇಕು.

೪೮. ಪೂರ್ವದಲ್ಲಿ ಭಾಸ್ಕರನನ್ನೂ ದಕ್ಷಿಣದಲ್ಲಿ ದಿವಾಕರನನ್ನೂ ಪಶ್ಚಿಮದಲ್ಲಿ ಪ್ರಭಾಕರನನ್ನೂ ಉತ್ತರದಲ್ಲಿ ಗ್ರಹರಾಜನಾದ ಸೂರ್ಯನನ್ನೂ ಅವಾಹಿಬೇಕು.

೪೯. ಈ ರೀತಿಯಾಗಿ ಪರಮೇಶ್ವರನಾದ ಬ್ರಹ್ಮನನ್ನು ಪೂಜಿಸಿ ಎಂಟು ಕುಂಭಗಳನ್ನು ಎಂಟು ದಿಕ್ಕುಗಳಲ್ಲೂ ಇಟ್ಟು ಅವುಗಳಲ್ಲಿ ಕ್ರಮದಿಂದ ಅಷ್ಟದಿಕ್ಪಾಲಕರನ್ನೂ ಪೂಜಿಸಬೇಕು.

೫೦-೬೨. ಮಧ್ಯ ಭಾಗದಲ್ಲಿ ಬ್ರಹ್ಮನಿಗೋಸ್ಕರ ಒಂಭತ್ತನೆಯ ಕಲಶವನ್ನು ಇಡಬೇಕು. ಹೀಗೆ ಪೂಜಿಸಿದನಂತರ ಮುಕ್ತಿ ಕಾಮನಿಗೆ ಬ್ರಹ್ಮಕಲಶದ, ಶ್ರೀ ಕಾಮನಿಗೆ ವಿಷ್ಣುಕಲಶದ, ರಾಜ್ಯಾರ್ಥಿಗೆ ಇಂದ್ರ ಕಲಶದ, ದ್ರವ್ಯ ಮತ್ತು ಪ್ರತಾಪಕಾಮ

ಪ್ರವ್ಯಪ್ರತಾಪಕಾಮಂ ತು ಆಗ್ನೇಯಘಟವಾರಿಣಾ ।
ಮೃತ್ಯುಂಜಯವಿಧಾನಾಯ ಯಾಮ್ಯೇನ ಸ್ಥಾಪಯೇನ್ನರಂ ॥ ೫೨ ॥

ದುಷ್ಟಪ್ರಧ್ವಂಸನಾಯಾಲಂ ನೈರ್ಋತ್ಯೇನ ವಿಧೀಯತೇ ।
ಸ್ಥಾಪಯೇದ್ವಾರುಣೇನಾಶು ಪಾಪನಾಶಾಯ ಮಾನವಂ ॥ ೫೩ ॥

ಶರೀರಾರೋಗ್ಯಕಾಮಂ ತು ವಾಯವ್ಯೇನಾಭಿಷೇಚಯೇತ್ ।
ದ್ರವ್ಯಸಂಪತ್ತಿಕಾಮಸ್ಯ ಕೌಬೇರೇಣ ವಿಧೀಯತೇ ॥ ೫೪ ॥

ರೌದ್ರೇಣ ಜ್ಞಾನಕಾಮಸ್ಯ ಲೋಕಪಾಲಘಟಾಸ್ತ್ವಮೇ ।
ಏಕೈಕೇನ ನರಃ ಸ್ನಾತ್ವಾ ಸರ್ವದೋಷವಿವರ್ಜಿತಃ ॥ ೫೫ ॥

ಜಾಯತೇ ಬ್ರಹ್ಮಸದೃಶೋ ರಾಜಾ ಸದ್ಯೋಽಥವಾ ನರಃ ।
ಅಥವಾ ದಿಕ್ಷು ಸರ್ವಾಸು ಯಥಾಸಂಖ್ಯೇನ ಲೋಕಪಾನ್ ॥ ೫೬ ॥

ಪೂಜಯೇತ್ತು ಸ್ವನಾಮ್ನಾ ತು ಕುಂಭೈರೇವ ವಿಧಾನಶಃ ।
ಏವಂ ಸಂಪೂಜ್ಯ ದೇವಾಂಸ್ತು ಲೋಕಪಾಲಾನ್ ಪ್ರಸನ್ನಧೀಃ ॥ ೫೭ ॥

ಪಶ್ಚಾತ್ಪರೀಕ್ಷಿತಾನ್ ಶಿಷ್ಯಾನ್ಬದ್ಧನೇತ್ರಾನ್ಪ್ರವೇಶಯೇತ್ ।
ದಗ್ಧಾಗ್ನೇಯ್ಯಾ ಧಾರಣಾಯಾ ವಾಯುನಾ ವಿಧುನೇತ್ತತಃ ॥ ೫೮ ॥

---

ನಿಗೆ ಅಗ್ನಿಕಲಶದ ಮೃತ್ಯುಂಜಯ ಕಾಮನಿಗೆ ಯಮನ ಕಲಶದ ದುಷ್ಟರು ಶತ್ರುಗಳು ನಾಶವಾಗಬೇಕಾದವನಿಗೆ ನೈಋತ್ಯ ಕಲಶದ, ಪಾಪನಾಶಾಪೇಕ್ಷಿಗೆ ವರುಣಕಲಶದ ಶರೀರಾರೋಗ್ಯ ಕಾಮನಿಗೆ ವಾಯುಕಲಶದ ದ್ರವ್ಯ ಸಂಪತ್ತಿ ಕಾಮನಿಗೆ ಕುಬೇರ ಕಲಶದ ಜ್ಞಾನಾಪೇಕ್ಷಿಗೆ ರುದ್ರಕಲಶದ ಉದಗಕಳಿಂದ ಸ್ನಾನಮಾಡಿಸಬೇಕು. ಒಂದೊಂದರಿಂದಲೂ ಬೇರೆಬೇರೆ ರೀತಿಯಿಂದ ಎಲ್ಲದರಿಂದಲೂ ಸ್ನಾನವಮಾಡಿದವನು ದೋಷಗಳನ್ನು ಕಳೆದುಕೊಂಡು ಅಥವಾ ಸದ್ಯದಲ್ಲಿಯೇ ರಾಜನಾಗಿಯಾದರೂ ಆಗುತ್ತಾನೆ ಹಾಗಿಲ್ಲದಿದ್ದರೆ ಆಯಾ ದಿಕ್ಕುಗಳಲ್ಲಿ ಆಯಾ ಲೋಕ ಪಾಲಕರ ಆಯಾ ಕಲಶವನ್ನು ಇಟ್ಟು ಬ್ರಹ್ಮ ಕಲಶವನ್ನೂ ಇಟ್ಟು ಕ್ರಮವಾಗಿ ಧ್ಯಾನಾವಾಹನಾದಿಗಳಿಂದ ಪೂಜಿಸಬೇಕು. ಈ ರೀತಿ ಪೂಜಿಸಿದ ಮೇಲೆ ಗುರುವು ಸಂತೋಷವುಳ್ಳವನಾಗಿ ಶಿಷ್ಯರನ್ನು ಪರೀಕ್ಷಿಸಿ ಅವರ ಕಣ್ಣುಗಳನ್ನು ಹಿಂದೆ ಹೇಳಿದಂತೆ ಕಟ್ಟಿ ಒಳಗೆ ಬಿಡಬೇಕು. ಅಗ್ನಿಕುಂಭದಿಂದ ಅಗ್ನಿ ಮಂತ್ರವನ್ನು ಹೇಳಿ ಪ್ರೋಕ್ಷಿಸಿದರೆ ಸುಟ್ಟಂತಾಗುತ್ತದೆ. ಆದ್ದರಿಂದ

ಸೋಮೇನಾಪ್ಯಾಯಿತಾನ್ಕೃತ್ವಾ ಶ್ರಾವಯೇತ್ಸಮಯಾಂಸ್ತತಃ ।
ನ ನಿಂದ್ಯಾದ್ಬ್ರಾಹ್ಮಣಾನ್ದೇವಾನ್ವಿಷ್ಣುಂ ಬ್ರಹ್ಮಾಣಮೇವ ಚ ॥ ೫೯ ॥

ಇಂದ್ರಮಾದಿತ್ಯಮಗ್ನಿಂ ಚ ಲೋಕಪಾಲಾನ್ಗ್ರಹಾಂಸ್ತಥಾ ।
ಗುರುಂ ಚ ಬ್ರಾಹ್ಮಣಂ ವಾಪಿ ಮುನೀಂದ್ರಂ ಪೂರ್ವದೀಕ್ಷಿತಂ ॥ ೬೦ ॥

ಏವಂ ಸುಸಮಯಾನ್ ಶ್ರಾವ್ಯ ಪಶ್ಚಾದ್ಧೋಮಂ ತು ಕಾರಯೇತ್ ।
ಓಂ ನಮೋ ಭಗವತೇ ಬ್ರಹ್ಮಣೇ ಸರ್ವರೂಪಿಣೇ ಹುಂ ಫಟ್ ಸ್ವಾಹಾ ॥೬೧॥

ಷೋಡಶಾಕ್ಷರಮಂತ್ರೇಣ ಹೋಮಯೇಜ್ಜ್ವಲಿತೇಽನಲೇ ।
ಗರ್ಭಾದಾನಾದಿಕಾಸ್ಸರ್ವಾ ಆಹುತೀಸ್ಸಂಪ್ರದಾಪಯೇತ್ ॥ ೬೨ ॥

ತಿಸೃಭಿಸ್ತು ವ್ಯಾಹೃತೀಭಿರ್ದೇವದೇವಸ್ಯ ಸಂನಿಧೌ ।
ಹೋಮಾಂತೇ ದೀಕ್ಷಿತಃ ಪಶ್ಚಾದ್ದಾಪಯೇದ್ಗುರುದಕ್ಷಿಣಾಂ ॥ ೬೩ ॥

---

ಅಗ್ನಿಕುಂಭದಿಂದ ಸುಡಬೇಕು. ವಾಯುಕುಂಭದ ನೀರನ್ನು ಪ್ರೋಕ್ಷಿಸಿದರೆ ಆ ಮಂತ್ರವು ಬೀಸುವ ಗಾಳಿಯ ವಿಷಯವನ್ನು ಹೇಳುವುದರಿಂದ ಬೀಸಿದಂತಾಯಿತು. ಎರಡನೇ ಬಾರಿ ಬೀಸಬೇಕು. ಸೋಮಕುಂಭದ ನೀರನ್ನು ಪ್ರೋಕ್ಷಿಸಿದರೆ ಆ ಮಂತ್ರವು ಸುಡುವವರನ್ನು ಸಂತೋಷಪಡಿಸುವಿಕೆಯನ್ನು ಹೇಳುವುದರಿಂದ ಆಪ್ಯಾಯನವಾಯಿತು. ಆದ್ದರಿಂದ ಮೂರನೇ ಬಾರಿ ಆಪ್ಯಾಯನ ಮಾಡಬೇಕು. ಆಮೇಲೆ ಅವರಿಂದ ಹೀಗೆ ಪ್ರತಿಜ್ಞೆ ಮಾಡಿಸಬೇಕು. ಬ್ರಾಹ್ಮಣರು, ದೇವತೆಗಳು, ವಿಷ್ಣು, ಬ್ರಹ್ಮ ಇಂದ್ರ, ಆದಿತ್ಯ ಅಗ್ನಿ ಇತ್ಯಾದಿ ಲೋಕಪಾಲಕರು ಗುರು, ಮುನೀಂದ್ರ ಹಿಂದೆ ಯಜ್ಞ ಮಾಡಿದ ದೀಕ್ಷಿತ, ಇವರನ್ನು ನಿಂದಿಸಕೂಡದು. ಎಂಬುದಾಗಿ ಪ್ರತಿಜ್ಞೆಮಾಡಿಸಿಕೊಂಡು ಆಮೇಲೆ ಹೋಮವನ್ನು ಮಾಡಬೇಕು. ಓಂ ನಮೋ ಭಗವತೇ ಎಂಬುವ ಹದಿನಾರಕ್ಷರದ ಮಂತ್ರದಿಂದ ಹೋಮಮಾಡಬೇಕು. ಗರ್ಭಧಾನಾದಿಯಾದ ಕರ್ಮ ಮಂತ್ರಗಳಿಂದ ಹೋಮ ಮಾಡಬೇಕು.

೬೩. ಓಂ ಭೂರ್ಭುವಸ್ವಃ ಎಂಬ ವ್ಯಾಹೃತಿಗಳು ಮೂರರಿಂದಲೂ ಹೋಮ ಮಾಡಬೇಕು. ದೀಕ್ಷಿತನು ಹೋಮದ ಕೊನೆಯಲ್ಲಿ ಗುರುದಕ್ಷಿಣೆಯನ್ನು ಕೊಡಬೇಕು.

ಹಸ್ತ್ಯಶ್ವಯಾನಶಕಟಹೇಮಧಾನ್ಯಾದಿಕಂ ನೃಪ ।
ದಾಪಯೇದ್ಗುರವೇ ಪ್ರಾಜ್ಞೋ ಮಧ್ಯಮೋ ಮಧ್ಯಮಂ ತಥಾ ॥ ೬೪ ॥

ದಾಪಯೇದಪರೇ ಯುಗ್ಮಂ ಸಹಿರಣ್ಯಂ ತು ತದ್ಗುರೋಃ ।
ಏವಂ ಕೃತೇ ತು ಯತ್ಪುಣ್ಯಂ ಮಹತ್ಸಂಜಾಯತೇ ತಥಾ ॥ ೬೫ ॥

ತನ್ನ ಶಕ್ಯಂ ನಿಗದಿತುಂ ಅಪಿ ವರ್ಷಶತೈರಪಿ ।
ದೀಕ್ಷಿತೋಽಥ ಪುರೋ ಭೂತ್ವಾ ಪಾದ್ಮಂ ವೈ ಶೃಣುಯಾದ್ಯದಿ ॥ ೬೬ ॥

ತೇನ ವೇದಾಃ ಪುರಾಣಾನಿ ಸರ್ವಮಂತ್ರಾಸ್ಸಸಂಗ್ರಹಾಃ ।
ಜಪ್ತಾಸ್ಸ್ಯುಃ ಪುಷ್ಕರೇ ತೀರ್ಥೇ ಪ್ರಯಾಗೇ ಸಿಂಧುಸಾಗರೇ ॥ ೬೭ ॥

ದೇವಹ್ರದೇ ಕುರುಕ್ಷೇತ್ರೇ ವಾರಾಣಸ್ಯಾಂ ವಿಶೇಷತಃ ।
ಗ್ರಹಣೇ ವಿಷುವೇ ಚೈವ ಯತ್ಫಲಂ ಜಪತಾಂ ಭವೇತ್ ॥ ೬೮ ॥

---

೬೪-೬೫. ಆನೆ, ಕುದುರೆ, ರಥ, ಪಲ್ಲಕ್ಕಿ, ಚಿನ್ನ, ಧಾನ್ಯಾದಿಗಳು ಇವನ್ನು ಗುರುಗಳಿಗೆ ಕೊಡಬೇಕು. ಮಧ್ಯಮವರ್ಗದವರು ಯಥಾಯೋಗ್ಯವಾಗಿ ಕೊಡುವರು. ಇನ್ನು ಕೆಲವರು ಆನೆ ಮೊದಲಾದುವುಗಳಲ್ಲದೆ ಬೇಕಾದಷ್ಟು ಹಣ ಎರಡನ್ನೂ ಕೊಡುವರು. ಹೀಗೆ ಮಾಡಿದರೆ ಬಹು ಪುಣ್ಯ ಬರುತ್ತದೆ.

೬೬-೬೭. ಈ ಕೊಡುವಿಕೆ ಈ ಪುಣ್ಯಗಳ ವಿಷಯವನ್ನು ಹೇಳುತ್ತ ಹೋದರೆ ನೂರು ವರ್ಷಗಳು ಹೇಳಿದರೂ ಮುಗಿಯುವುದಿಲ್ಲ. ದೀಕ್ಷಿತನಾದವನು ಪದ್ಮ ಪುರಾಣಗಳನ್ನು ಕೇಳಿದರೆ ಅವನಿಗೆ ವೇದ, ಮಂತ್ರ, ಪುರಾಣಗಳನ್ನು ಪುಷ್ಕರ ತೀರ್ಥ ಪ್ರಯಾಗ, ನದೀ ಸಮುದ್ರ ಸಂಗಮಗಳಲ್ಲಿ ಜಪ ಮಾಡಿದರೆ ಯಾವ ಪುಣ್ಯಗಳು ಬರುತ್ತವೆಯೋ ಆ ಪುಣ್ಯಗಳು ಬರುತ್ತವೆ.

೬೮. ದೇವಹ್ರದ, ಕುರುಕ್ಷೇತ್ರ, ವಾರಾಣಸಿಗಳಲ್ಲಿ ಗ್ರಹಣ, ವಿಷುವತ್ಪುಣ್ಯ ಕಾಲಗಳಲ್ಲಿ ವೇದಾದಿಗಳನ್ನು ಜಪಿಸಿದರೆ ಯಾವ ಫಲವು ಬರುತ್ತದೆಯೋ ಆ ಫಲವು ಬರುತ್ತದೆ.

ಫಲಂ ಶತಗುಣಂ ತಚ್ಚ ಪುಷ್ಕರಸ್ಥಂ ಪಿತಾಮಹ ।
ದೃಷ್ಟ್ವಾ ಪ್ರಾಪ್ನೋತಿ ವಿವಿಧಾನ್ಕಾಮಾನ್ಕಾಮಯತೇ ಯದಿ ॥ ೭೯ ॥

ಪೂಜಾಂ ವೈಧಾನಿಕೀಂ ಕೃತ್ವಾ ದೀಕ್ಷಿತೋ ಯಃ ಶೃಣೋತಿ ಚ ।
ದೇವಾ ಅಪಿ ತಪಃ ಕೃತ್ವಾ ಧ್ಯಾಯಂತಿ ಚ ವದಂತಿ ಚ ॥ ೭೦ ॥

ಕದಾ ನೋ ಭಾರತೇ ವರ್ಷೇ ಜನ್ಮ ಸ್ಯಾದಿತಿ ಪಾರ್ಥಿವ ।
ದೀಕ್ಷಿತಾಶ್ಚ ಭವಿಷ್ಯಾಮಃ ಪಾದ್ಮಂ ಶ್ರೋಷ್ಯಾಮಹೇ ಕದಾ ॥ ೭೧ ॥

ಪಾದ್ಮಂ ತು ಷೋಡಶಾತ್ಮಾನಂ ನ್ಯಸ್ಯ ದೇಹೇ ಕದಾ ವಯಂ ।
ಯಾಸ್ಯಾಮಸ್ತು ಪರಂ ಸ್ಥಾನಂ ಯದ್ಗತ್ವಾ ನ ಪುನರ್ಭವೇತ್ ॥ ೭೨ ॥

ಏವಂ ಜಲ್ಪಂತಿ ವಿಬುಧಾ ಮನಸಾ ಚಿಂತಯಂತಿ ಚ ।
ಬ್ರಹ್ಮಯಜ್ಞಂ ಚ ಕಾರ್ತಿಕ್ಯಾಂ ಕದಾ ದ್ರಕ್ಷ್ಯಾಮಹೇ ನೃಪ ॥ ೭೩ ॥

---

೬೯. ವಿಧಿವತ್ತಾಗಿ ಪೂಜೆಯನ್ನು ಮಾಡಿ ದೀಕ್ಷಿತನಾದವನು ಈ ಪಾದ್ಮವನ್ನು ಕೇಳಿದರೆ ಪುಷ್ಕರದಲ್ಲಿರುವ ಪಿತಾಮಹನ್ನು (ಬ್ರಹ್ಮನನ್ನು) ನೋಡಿದುದರ ನೂರರಷ್ಟು ಪುಣ್ಯ ಬರುತ್ತದೆ. ಮತ್ತು ಸರ್ವ ಕಾಮಗಳನ್ನೂ ಹೊಂದುತ್ತಾನೆ.

೭೦–೭೧. ವಿಧಿವತ್ತಾಗಿ ಪೂಜೆಮಾಡಿ ಕೇಳುವ ದೀಕ್ಷಿತನ ಜೊತೆಯಲ್ಲಿ ದೇವತೆಗಳೂ ಈ ಪಾದ್ಮವನ್ನು ಕೇಳುತ್ತಾರೆ. ಅಲ್ಲದೆ ನಾವು ಭಾರತ ವರ್ಷದಲ್ಲಿ ಯಾವಾಗ ಹುಟ್ಟುತ್ತೇವೆ? ದೀಕ್ಷಿತರಾಗಿ ಯಾವಾಗ ಆಗುತ್ತೇವೆ? ಪಾದ್ಮವನ್ನು ಯಾವಾಗ ಕೇಳುತ್ತೇವೆ? ಎಂದು ಎನ್ನುತ್ತಾರೆ.

೭೨. ಪಾದ್ಮದಿಂದ ಷೋಡಶಾಂಗನ್ಯಾಸಗಳನ್ನು ಮಾಡಿಕೊಂಡು ಪುನರುತ್ಪತ್ತಿ ರಹಿತವಾದ ಉತ್ತಮಸ್ಥಾನವನ್ನು ಯಾವಾಗ ಹೊಂದಿಯೇವೆನ್ನುತ್ತಾರೆ.

೭೩. ದೇವತೆಗಳು ಹೀಗೆ ಹೇಳುತ್ತಾರೆ. ಅಲ್ಲದೆ ಯೋಚಿಸುತ್ತಲೂ ಇರುತ್ತಾರೆ. ಕಾರ್ತಿಕಮಾಸದಲ್ಲಿ ಬ್ರಹ್ಮಯಜ್ಞವನ್ನು ಯಾವಾಗ ನೋಡುವೆವೆಂದು ಯೋಚಿಸುತ್ತಿರಬೇಕು.

ಏವಂ ತೇ ವಿಧಿರುದ್ದಿಷ್ಟೋ ಮಯಾಯಂ ಕುರುಸತ್ತಮ ।
ದೇವಗಂಧರ್ವಯಕ್ಷಾಣಾಂ ಸರ್ವದಾ ದುರ್ಲಭೋ ಹ್ಯಸೌ ॥ ೭೪ ॥

ಏವಂ ಯೋ ವೇತ್ತಿ ತತ್ವೇನ ಯಶ್ಚ ಪಶ್ಯತಿ ಮಂಡಲಂ ।
ಯಶ್ಚೇಮ ಶೃಣುಯಾಚ್ಚೈವ ಸರ್ವೇ ಮುಕ್ತಾ ಇತಿ ಶ್ರುತಿಃ ॥ ೭೫ ॥

ಅತಃ ಪರಂ ಪ್ರವಕ್ಷ್ಯಾಮಿ ರಹಸ್ಯಮಿದಮುತ್ತಮಂ ।
ಯೇನ ಲಕ್ಷ್ಮೀರ್ಧೃತಿಸ್ತುಷ್ಟಿಃ ಪುಷ್ಟಿಶ್ಚಾಪಿ ಭವೇನ್ನೃಣಾಂ ॥ ೭೬ ॥

ಸರ್ವಗ್ರಹಾಸ್ಸದಾ ಸೌಮ್ಯಾ ಜಾಯಂತೇ ಯೇನ ಪಾರ್ಥಿವ ।
ಆದಿತ್ಯವಾರಂ ಹಸ್ತೇನ ಪೂರ್ವಮಾದಾಯ ಭಕ್ತಿತಃ ॥ ೭೭ ॥

ಭಕ್ತ್ಯೈಕೇನ ಕ್ಷಿಪೇತ್ತಾವದ್ಯಾವತ್ಸಪ್ತ ಚ ಸಂಖ್ಯಯಾ ।
ತತಸ್ತು ಸಪ್ತಯೇ ಪೂರ್ಣೇ ಕುರ್ಯಾದ್ಬ್ರಾಹ್ಮಣಭೋಜನಂ ॥ ೭೮ ॥

---

೭೪. ಈ ರೀತಿಯಾಗಿ ನಾನು ವಿಧಿಯನ್ನು ಹೇಳಿದ್ದೇನೆ. ದೇವ ಗಂಧರ್ವ ಯಕ್ಷರಿಗೂ ಕೂಡ ಈ ವಿಧಿಯು ದುರ್ಲಭವು.

೭೫. ಇದನ್ನು ಯಾವನು ತಿಳಿದುಕೊಳ್ಳುವನೋ ಯಾವನು ಈ ಮಂಡಲ ವನ್ನು ನೋಡುತ್ತಾನೋ ಯಾವನು ಇದನ್ನು ಕೇಳುತ್ತಾನೋ ಅವರೆಲ್ಲರೂ ಮುಕ್ತ ರಾಗುತ್ತಾರೆ ಎಂದು ಶ್ರುತಿಯಿರುವುದು.

೭೬-೭೮. ಇನ್ನು ಒಂದು ರಹಸ್ಯವನ್ನು ಹೇಳುತ್ತೇನೆ, ಕೇಳು. ಅದರಿಂದ ಲಕ್ಷ್ಮಿಯು ಧೃತಿ, ತುಷ್ಟಿ, ಪುಷ್ಟಿಗಳೂ ಉಂಟಾಗುತ್ತವೆ. ಸರ್ವ ಗ್ರಹಗಳೂ ಸೌಮ್ಯ ವಾಗುತ್ತವೆ ಆದಿತ್ಯವಾರದಿಂದ ಮೊದಲು ಮಾಡಿಕೊಂಡು ದಿನಕ್ಕೊಂದೊಂದು ಮುಷ್ಟಿಯಂತೆ ಏಳು ದಿವಸಕ್ಕೂ ಒಂದೊಂದು ಹೆಚ್ಚಿಗೆಯಂತೆ ಅಕ್ಕಿಯ ಮುಷ್ಟಿ ಯನ್ನು ಹಾಕಬೇಕು. ಎಂದರೆ ಒಂದನೇ ದಿನ ಒಂದು, ಎರಡನೇ ದಿನ ಎರಡು, ಹೀಗೆ ಏಳನೇ ದಿನ ಏಳು ಹಿಡಿ. ಹೀಗೆ ಒಂದು ಜಾಗದಲ್ಲಿ ಹಾಕಬೇಕು. ಹೀಗೆ ಒಂದುವರ್ಷ ದವರೆಗೂ ಮಾಡಬೇಕು. ವಾರವಾರಕ್ಕೂ ಮೊದಲಿನಿಂದ ಶುರುಮಾಡಬೇಕು. ಒಂದು ವಾರವಾಗುತ್ತಲೂ ಅದನ್ನು ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಹೀಗೆ ಒಂದು ವರ್ಷದ ಪರ್ಯಂತ ಮಾಡಬೇಕು.

ಆದಿತ್ಯಂ ಚೈವ ತ್ಸಾವರ್ಣಂ ಕೃತ್ವಾ ಯತ್ನೇನ ಮಾನವಃ ।
ರಕ್ತವಸ್ತ್ರಯುಗಚ್ಛನ್ನಂ ಛತ್ರಿಕಾಂ ಪಾದುಕೇ ತಥಾ ॥ ೭೯ ॥

ಉಪಾನಹೌ ಚ ಪಾತವ್ಯೇ ಸ್ಥಾಪಯೇತ್ತಾಮ್ರಭಾಜನೇ ।
ಘೃತೇನ ಶ್ನಪನಂ ಕೃತ್ವಾ ಸಂಪೂರ್ಣಾಂಗಂ ದ್ವಿಜಾತಯೇ ॥ ೮೦ ॥

ದಾಪಯೇತ್ಕೃತ್ಯವಿದುಷೇ ಬ್ರಾಹ್ಮಣಾಯ ವಿಶೇಷತಃ ।
ಏವಂ ಕೃತೇ ಫಲಂ ತಸ್ಯ ಭವೇದಾರೋಗ್ಯಮುತ್ತಮಂ ॥ ೮೧ ॥

ದ್ರವ್ಯಸಂಪತ್ಸಮಗ್ರಾಪ್ತಿರಿತಿ ಪೌರಾಣಿಕೀ ಕ್ರಿಯಾ ।
ಅವಿಸಂವಾದಿನೀ ಚೇಯಂ ಶಾಂತಿಪುಷ್ಟಿಪ್ರದಾ ನೃಣಾಂ ॥ ೮೨ ॥

ತದ್ವಚ್ಚಿತ್ರಾಸು ಸಂಗೃಹ್ಯ ಸೋಮವಾರಂ ವಿಚಕ್ಷಣಃ ।
ರಾತ್ರಿಭಕ್ಷಃ ಕ್ಷಿಪೇದಷ್ಟೌ ಸೌಮವಾರಾನ್ಪ್ರಯತ್ನತಃ ॥ ೮೩ ॥

ಪ್ರತ್ಯೇಕಂ ಬ್ರಾಹ್ಮಣಾ ಭೋಜ್ಯಾ ಯಥಾಶಕ್ತಿ ವಿಚಕ್ಷಣಾಃ ।
ನವಮೇ ತು ತತಃ ಪೂರ್ಣೇ ಕುರ್ಯಾದ್ಬ್ರಾಹ್ಮಣಭೋಜನಂ ॥ ೮೪ ॥

---

೭೯-೮೨. ಚಿನ್ನದಲ್ಲಿ ಆದಿತ್ಯನ ಪ್ರತಿಮೆಯನ್ನು ಮಾಡಿಸಿ ಕೆಂಪುಬಟ್ಟೆಯಿಂದ ಹೊದ್ದಿಸಿ, ಛತ್ರಿ, ಪಾದುಕೆ ಜೋಡುಗಳ ಸಹಿತ ತಾಮ್ರದ ಪಾತ್ರೆಯಲ್ಲಿಡಬೇಕು. ಬ್ರಾಹ್ಮಣನನ್ನು ಕರೆದು ಅವನಿಗೆ ಅಭ್ಯಂಜನ ಸ್ನಾನವನ್ನು ಮಾಡಿಸಿ ಅದೆಲ್ಲವನ್ನೂ ಆ ಬ್ರಾಹ್ಮಣನಿಗೆ ದಾನವಾಗಿ ಕೊಡಬೇಕು. ಹೀಗೆ ಮಾಡಿದರೆ ಫಲವೂ ಬರುವುದಲ್ಲದೆ ಉತ್ತಮವಾದ ಆರೋಗ್ಯವೂ ದ್ರವ್ಯಾಗಮನವೂ ಉಂಟಾಗುತ್ತವೆಂದು ಪುರಾಣದ ಕಥೆ. ಮತ್ತು ಪುರಾಣದ ರೀತಿ. ಶಾಂತಿ ಪುಷ್ಟಿ ಇವುಗಳು ಬರುತ್ತವೆಂಬುದು ನಿರ್ವಿವಾದದ ಮಾತು.

೮೩-೮೪. ಹಾಗೆಯೇ ಚಿತ್ತಾ ನಕ್ಷತ್ರ ಸೋಮವಾರ ರಾತ್ರಿ ಭೋಜನಮಾಡಿ ಒಂದೊಂದು ಮುಷ್ಟಿಯನ್ನು ಹೆಚ್ಚುಮಾಡುತ್ತ ಎಂಟು ಸೋಮವಾರಗಳವರೆಗೂ ಅಕ್ಕಿಯನ್ನು ಹಾಕಬೇಕು. ಬ್ರಾಹ್ಮಣರನ್ನು ಪ್ರತ್ಯೇಕವಾಗಿ ಒಂದೊಂದು ಸೋಮವಾರದಲ್ಲೂ ಯಥಾಶಕ್ತಿ ಭೋಜನಮಾಡಿಸಿ ಒಂಭತ್ತನೇ ವಾರದಲ್ಲಿ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿಸಬೇಕು.

ವಸ್ತ್ರಯುಗ್ಮಂ ಚ ದಾತವ್ಯಂ ತತಃ ಸೋಮಂ ಪ್ರದಾಪಯೇತ್ ।
ಕಾಂಸ್ಯಭಾಜನಸಂಸ್ಥಂ ತು ಕ್ಷೀರಸಂಪೂರಿತಂ ತತಃ ॥ ೮೫ ॥

ತದ್ವಚ್ಛತ್ರಂ ಪಾದುಕೇ ಚ ತಥೋಪಾನತ್ಸಮನ್ವಿತಂ ।
ಸಂಪೂರ್ಣಾಂಗಾಯ ದಾತವ್ಯಂ ಬ್ರಾಹ್ಮಣಾಯ ವಿಶೇಷತಃ ॥ ೮೬ ॥

ಸ್ವಾತ್ಯಾಮಂಗಾರಕಂ ಪೂಜ್ಯ ಕ್ಷಪಯೇನ್ನಕ್ತಭೋಜನೈಃ ।
ಅಷ್ಟಾವೇವ ಚ ಯಾವಚ್ಚ ಕುರ್ಯಾದ್ಬ್ರಾಹ್ಮಣಭೋಜನಂ ॥ ೮೭ ॥

ಅಂಗಾರಕಂ ಚ ಸೌವರ್ಣಂ ಸ್ಥಾಪಿತಂ ತಾಮ್ರಭಾಜನೇ ।
ದಾಪಯೇದ್ಬ್ರಾಹ್ಮಣಾಯಾಥ ಸಂಪೂರ್ಣಾಂಗಾಯ ಚೈವ ಹಿ ॥ ೮೮ ॥

ನಕ್ಷತ್ರಾನುಕ್ರಮೇಣೈವ ಕ್ಷಪೇನ್ನಕ್ತಾನಿ ಸಪ್ತ ವೈ ।
ಅಷ್ಟಮೇ ತು ಕ್ರಮಾತ್ಖೇಟಾನ್ ಸೌವರ್ಣಾನ್ದಾಪಯೇದ್ಬುಧಃ ॥ ೮೯ ॥

---

೮೫-೮೬. ಒಂದು ಜೊತೆ ವಸ್ತ್ರವನ್ನೂ ಕೊಡಬೇಕು. ಕಂಚಿನಪಾತ್ರೆಯಲ್ಲಿ ಹಾಲನ್ನು ತುಂಬಿ ಅದನ್ನೂ ಛತ್ರಿ, ಪಾದುಕೆ, ಜೋಡುಗಳನ್ನೂ ಆ ಪ್ರತಿಮೆಯನ್ನೂ ಅಂಗಹೀನನಲ್ಲದವನಿಗೆ ಕೊಡಬೇಕು.

೮೭. ಸ್ವಾತಿನಕ್ಷತ್ರದ ಮಂಗಳವಾರದಲ್ಲಿ ಅಂಗಾರಕ ಪ್ರತಿಮೆಯನ್ನು ಮಾಡಿಸಿ ಆ ದಿನ ರಾತ್ರಿ ಉಪವಾಸವನ್ನೂ ಆಮೇಲೆ ಊಟಗಳನ್ನೂ ಹಿಂದೆ ಹೇಳಿದಂತೆ ಮಾಡಬೇಕು. ಈ ರೀತಿ ಎಂಟು ವಾರಗಳು ಮಾಡಬೇಕು. ಬ್ರಾಹ್ಮಣ ಭೋಜನವನ್ನು ಹಿಂದಿನ ವಾರಗಳಂತೆ ಮಾಡಿಸಬೇಕು.

೮೮. ಆ ಅಂಗಾರಕ ಪ್ರತಿಮೆಯನ್ನು ತಾಮ್ರದ ಪಾತ್ರೆಯಲ್ಲಿಟ್ಟು ಛತ್ರ ಚಾಮರಾದಿಗಳಿಂದ ಕೂಡಿದ ಅದನ್ನು ಊನನಲ್ಲದ ಬ್ರಾಹ್ಮಣನಿಗೆ ಕೊಡಬೇಕು.

೮೯. ಹೀಗೆ ನಕ್ಷತ್ರಾನುಕ್ರಮದಿಂದ ಉಪವಾಸಾದಿಗಳನ್ನು ಮಾಡಿ ಆಯಾ ಗ್ರಹಗಳನ್ನು ಅವುಗಳಿಗೆ ಉಕ್ತವಾದ ಲೋಹಗಳಲ್ಲಿ ಮಾಡಿಸಿ ಹಿಂದೆ ಹೇಳಿದಂತೆ ದಾನಗಳನ್ನೂ ಈ ಪ್ರತಿಮೆಗಳನ್ನೂ ಎಂಟನೆಯ ವಾರದಲ್ಲಿ ಕೊಟ್ಟು ಬ್ರಾಹ್ಮಣಭೋಜನ ಮಾಡಿಸಬೇಕು.

ಅಗ್ನಿಕಾರ್ಯಂ ಚ ಕುರ್ವೀತ ಯಥಾದೃಷ್ಟಂ ವಿಧಾನತಃ ।
ಏವಂ ಕೃತೇ ಭವೇದ್ಯದ್ವೈ ತನ್ನಿಬೋಧ ನರಾಧಿಪ ॥ ೯೦ ॥

ಅಸೌಮ್ಯಾಶ್ಚ ಗ್ರಹಾಸ್ಸರ್ವೇ ಸೌಮ್ಯರೂಪಾ ಭವಂತಿ ಹಿ ।
ಸರ್ವೇ ರೋಗಾವಿನಶ್ಯಂತಿ ತುಷ್ಟಿಮಾಯಾಂತಿ ದೇವತಾಃ ॥ ೯೧ ॥

ನ ವಿರುಧ್ಯಂತಿ ತಂ ನಾಗಾಃ ಪಿತರಸ್ತರ್ಪಿತಾಸ್ತಥಾ ।
ದುಸ್ಸ್ವಪ್ನನಾಶೋ ಭವತಿ ಶೃಣ್ವತಾಂ ಪಠತಾಂ ತಥಾ ॥ ೯೨ ॥

ಯದಿ ಭೌಮೋ ರವಿಸುತೋ ಭಾಸ್ಕರೋ ರಾಹುಣಾ ಸಹ ।
ಕೇತುಶ್ಚ ಮೂರ್ಧ್ನಿ ತಿಷ್ಠಂತಿ ರೌದ್ರಾಃ ಪೀಡಾಕರಾ ಗ್ರಹಾ ॥ ೯೩ ॥

ಅನೇನ ಕೃತಮಾತ್ರೇಣ ಸಸೌಭಾಗ್ಯಾ ಭವಂತಿ ಹಿ ।
ಯ ಏವಂ ಕುರುತೇ ರಾಜನ್ಸದಾ ಭಕ್ತಿಸಮನ್ವಿತಃ ॥ ೯೪ ॥

ತಸ್ಯ ಸಾನುಗ್ರಹಾಸ್ಸರ್ವೇ ಶಾಂತಿಂ ಗಚ್ಛಂತಿ ನಾನ್ಯಥಾ ।
ಶನೈಶ್ಚರಂ ರಾಹುಕೇತೂ ಲೋಹಪಾತ್ರೇಷು ವಿನ್ಯಸೇತಃ ॥ ೯೫ ॥

---

೯೦. ಆಮೇಲೆ ಹೋಮಾದಿಗಳನ್ನು ಆಯಾ ವಿಧಿಗೆ ತಕ್ಕಂತೆ ಮಾಡಬೇಕು. ಹೀಗೆ ಮಾಡಿದರೆ ಏನಾಗುತ್ತದೆಂಬುದನ್ನು ಹೇಳುತ್ತೇನೆ, ಕೇಳು.

೯೧. ಕ್ರೂರವಾಗಿರುವ ಗ್ರಹಗಳೆಲ್ಲಾ ಸೌಮ್ಯವಾಗುತ್ತವೆ ರೋಗಗಳೆಲ್ಲಾ ಪರಿಹಾರವಾಗುತ್ತವೆ. ದೇವತೆಗಳೂ ತೃಪ್ತರಾಗುತ್ತಾರೆ.

೯೨. ಸರ್ಪಗಳೂ ವಿರೋಧರಾಗುವುದಿಲ್ಲ. ಪಿತೃಗಳೂ ತೃಪ್ತರಾಗುತ್ತಾರೆ. ಹೇಳುವವರಿಗೂ ಕೇಳುವವರಿಗೂ ದುಸ್ಸ್ವಪ್ನಗಳು ನಾಶವಾಗುತ್ತವೆ.

೯೩. ಅಂಗಾರಕ, ಶನಿ, ಸೂರ್ಯ, ರಾಹು, ಕೇತು, ಈ ಕ್ರೂರ ಗ್ರಹಗಳೂ ಉಚ್ಚರಾಗುತ್ತಾರೆ.

೯೪-೯೫. ಇದನ್ನು ನೋಡಿದ ಮಾತ್ರದಿಂದ ಸೌಭಾಗ್ಯ ಬರುತ್ತದೆ. ಯಾವನು ಭಕ್ತಿಯಿಂದ ಸದಾ ಕಾಲದಲ್ಲೂ ಹೀಗೆ ಮಾಡುತ್ತಾನೋ ಅವನಲ್ಲಿ ಗ್ರಹರೆಲ್ಲರೂ ಶಾಂತರಾಗಿ ಅನುಗ್ರಹವುಳ್ಳವರಾಗುತ್ತಾರೆ. ಶನಿ, ರಾಹು, ಕೇತುಗಳನ್ನು ಕಬ್ಬಿಣದ ಪಾತ್ರೆಯಲ್ಲಿಡಬೇಕು.

ಲೋಹೇನ ಕಾರಯೇಚ್ಚೈನಾನ್ಬ್ರಾಹ್ಮಣೇಭ್ಯಶ್ಚ ದಾಪಯೇತ್ ।
ಕೃಷ್ಣಂ ವಸ್ತ್ರಯುಗಂ ದೇಯಮೇತೇಷಾಂ ಪ್ರೀಣನಾಯ ವೈ ॥ ೯೬ ॥

ಸೌವರ್ಣಾಂಗಾಶ್ಚ ದಾತವ್ಯಾಃ ಶಾಂತಿಶ್ರೀವಿಜಯೇಪ್ಸುಭಿಃ ।
ವ್ರತಾಂತೇ ಸರ್ವ ಏತೇ ಹಿ ಗ್ರಹಾಸ್ಸೌವರ್ಣಕಾ ನೃಪ ॥ ೯೭ ॥

ದಾತವ್ಯಾಶ್ಶಾಂತಿಮಿಚ್ಛದ್ಭಿರ್ವ್ರತಾಂತೇ ದ್ವಿಜಭೋಜನಂ ।
ಯಥಾಶಕ್ತಿ ದಕ್ಷಿಣಾ ಚ ಗ್ರಹಾಣಾಂ ಪ್ರೀತಯೇ ತಥಾ ॥ ೯೮ ॥

ಅಲ್ಪಾಯಾಸೇನ ರಾಜೇಂದ್ರ ಸರ್ವಾನ್ಕಾಮಾನವಾಪ್ನುಯಾತ್ ।
ಶಂಕರಾಜ್ಜ್ಞಾನಮನ್ವಿಚ್ಛೇದಾರೋಗ್ಯಂ ಭಾಸ್ಕರಾತ್ತಥಾ ॥ ೯೯ ॥

ಹುತಾಶನಾದ್ಧನಂ ಹಿಚ್ಛೇದ್ಗತಿಮಿಚ್ಛೇಜ್ಜನಾರ್ದನಾತ್ ।
ಬ್ರಾಹ್ಮ್ಯಂ ಪಿತಾಮಹಾಚ್ಚೈವ ಸರ್ವಜಂತುಪ್ರಶಾಂತಿದಂ ॥ ೧೦೦ ॥

॥ ಭೀಷ್ಮ ಉವಾಚ ॥

ಯಸ್ತ್ವಯಾ ಕಥಿತೋ ಯಜ್ಞೋ ಯಜ್ವನಾಂ ತು ಫಲಂ ಮಹತ್ ।
ತಥಾಯುಷಸ್ಸ್ವಲ್ಪತಯಾ ಅನ್ಯೈಃ ಪ್ರಾಪ್ತುಂ ನ ಶಕ್ಯತೇ ॥ ೧೦೧ ॥

---

೯೬. ಕಬ್ಬಿಣದ ಪಾತ್ರೆಯಲ್ಲಿಟ್ಟು ಬ್ರಾಹ್ಮಣರಿಗೆ ದಾನಮಾಡಬೇಕು. ಇವುಗಳ ಪ್ರೀತಿಗೋಸ್ಕರ ಕಪ್ಪು ಬಟ್ಟೆಗಳನ್ನು ಕೊಡಬೇಕು.

೯೭-೯೮. ಶಾಂತಿ ಶ್ರೀ ವಿಜಯಾಪೇಕ್ಷಿಗಳು ಚಿನ್ನದವುಗಳನ್ನು ಮಾಡಿಸಿಕೊಡಬೇಕು. ವ್ರತದ ಕೊನೆಯಲ್ಲಿ ಸುವರ್ಣದ ಈ ಗ್ರಹಗಳನ್ನು ದಾನ ಮಾಡಬೇಕು. ಬ್ರಾಹ್ಮಣರಿಗೆ ಭೋಜನಮಾಡಿಸಿದರೆ ಶಾಂತಿಯಾಗುತ್ತದೆ. ಗ್ರಹಗಳ ಪ್ರೀತಿಗೋಸ್ಕರ ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು.

೯೯-೧೦೦. ಸ್ವಲ್ಪವೇ ತೊಂದರೆಯಿಂದ ಎಲ್ಲಾ ಇಷ್ಟಗಳನ್ನೂ ಹೊಂದಬಹುದು ಜ್ಞಾನಾಪೇಕ್ಷಿಯು ಶಂಕರನನ್ನೂ, ಆರೋಗ್ಯಕಾಂಕ್ಷಿಯು ಭಾಸ್ಕರನನ್ನೂ, ಧನಾಪೇಕ್ಷಿಯು ಅಗ್ನಿಯನ್ನೂ, ಮೋಕ್ಷಾಪೇಕ್ಷಿಯು ಜನಾರ್ದನನನ್ನೂ ಬ್ರಾಹ್ಮಣತೇಜೋಕಾಂಕ್ಷಿಯು ಬ್ರಹ್ಮನನ್ನೂ ಪೂಜಿಸಬೇಕು.

೧೦೧. ಭೀಷ್ಮನು ಹೇಳಿದನು– ನೀನು ಹೇಳಿದ ಯಜ್ಞಗಳು ಮಾಡುವವರಿಗೆ ಬಹುವಾದ ಫಲವನ್ನು ಕೊಡುತ್ತವೆ. ಆದರೆ ಆಯುಸ್ಸು ಸ್ವಲ್ಪವಾದುದರಿಂದ ಎಲ್ಲರೂ ಎಲ್ಲವನ್ನೂ ಮಾಡಲು ಅಸಾಧ್ಯ.

ಸ್ವಲ್ಪಾಯಾಸೇನ ಯತ್ಪುಣ್ಯಂ ಸಂವತ್ಸರಮುಪೋಷಣಂ ।
ಭವೇತ್ತನ್ಮೇ ಮುನಿಶ್ರೇಷ್ಠ ಕಥಯಸ್ವ ಮಹಾಫಲಂ ॥ ೧೦೨ ॥

॥ ಪುಲಸ್ತ್ಯ ಉವಾಚ ॥

ಇದಮರ್ಥಂ ಮಹಾರಾಜಾ ಶ್ವೇತೋ ರಾಜಾಮಹಾಯಶಾಃ ।
ವಸಿಷ್ಠಂ ಪೃಷ್ಟವಾನ್ಪ್ರಶ್ನಂ ಕ್ಷುಧಯಾ ಪೀಡಿತೋ ಭೃಶಂ ॥ ೧೦೩ ॥

ಆಸೀದಿಳಾವೃತೇ ವರ್ಷೇ ಶ್ವೇತೋ ರಾಜಾ ಮಹಾಬಲಃ ।
ಸ ಮಹೀಂ ಸಕಲಾಂ ಜಿಗ್ಯೇ ಸಪ್ತದ್ವೀಪಾಂ ಸಪತ್ತನಾಂ ॥ ೧೦೪ ॥

ಬ್ರಹ್ಮಪುತ್ರೋ ವಸಿಷ್ಠಶ್ಚ ಆಸೀತ್ತಸ್ಯ ಪುರೋಹಿತಃ ।
ಸ ಕದಾಚಿನ್ನೃಪಶ್ರೇಷ್ಠೋ ಜಿತ್ವಾ ಪರಮಧಾರ್ಮಿಕಃ ॥ ೧೦೫ ॥

ಪುರೋಹಿತಮುವಾಚೇದಂ ವಸಿಷ್ಠಂ ಜಪತಾಂ ವರಂ ॥ ೧೦೬ ॥

॥ ಶ್ವೇತ ಉವಾಚ ॥

ಭಗವನ್ನಶ್ವಮೇಧಾನಾಂ ಸಹಸ್ರಂ ಕರ್ತುಮುತ್ಸಹೇ ।
ಸುವರ್ಣರೂಪ್ಯರತ್ನಾನಾಂ ದಾನಂ ಕರ್ತುಂ ದ್ವಿಜಾತಿಷು ॥ ೧೦೭ ॥

---

೧೦೨. ಸ್ವಲ್ಪಾಯಾಸದಿಂದ ಹೆಚ್ಚು ಪುಣ್ಯ ಬರುವಿಕೆಯನ್ನು ಸಂವತ್ಸರಕಾಲ ಉಪವಾಸ ಮಾಡುವಿಕೆಯನ್ನು ನನಗೆ ಹೇಳು.

೧೦೩. ಪುಲಸ್ತ್ಯನು ಹೇಳಿದನು– ಇದೇ ವಿಷಯವನ್ನು ಶ್ವೇತರಾಜನು ಹಸಿವುಳ್ಳವನಾಗಿ ವಸಿಷ್ಠನನ್ನು ಕೇಳಿದನು.

೧೦೪. ಇಳಾವರ್ಷದಲ್ಲಿ ಶ್ವೇತನೆಂಬ ರಾಜನು ಮಹಾಬಲಿಷ್ಠನಾಗಿ ಭೂಮಿಯೆಲ್ಲವನ್ನು ಜಯಿಸಿದನು.

೧೦೫-೧೦೬. ಬ್ರಹ್ಮಪುತ್ರನಾದ ವಸಿಷ್ಠನು ಅವನಿಗೆ ಪುರೋಹಿತನು. ಹೀಗೆ ಪ್ರಪಂಚವೆಲ್ಲವನ್ನೂ ಜಯಿಸಿ ಪರಮಧರ್ಮ ಮಾಡುತ್ತ ವಸಿಷ್ಠನನ್ನು ಕುರಿತು ಹೀಗೆ ಹೇಳಿದನು.

೧೦೭. ಶ್ವೇತನು ಹೇಳಿದನು– ಚಿನ್ನ, ಬೆಳ್ಳಿ ರತ್ನಗಳ ದಾನವನ್ನು ಮಾಡಬೇಕೆಂದು ನನಗೆ ಇಷ್ಟವಿರುವುದರಿಂದ ಅಶ್ವಮೇಧಗಳ ಒಂದು ಸಾವಿರವನ್ನು ಮಾಡಬೇಕು. ಹೀಗೆಂದು ಅಪೇಕ್ಷೆಯಿದೆ.

ಪೃಥಿವ್ಯಾಮನ್ನದಾನಂ ತು ದಾತುಂ ನೇಚ್ಛಾಮಿ ವೈ ಗುರೋ ।
ನಾನ್ನೇನ ಕಿಂಚಿದ್ದತ್ತೇನ ದತ್ತೇ ಹೇಮ್ನಿ ದ್ವಿಜೇ ಪ್ರಭೋ ॥ ೧೦೮ ॥

॥ ಪುಲಸ್ತ್ಯ ಉವಾಚ ॥

ನ ಕಿಂಚಿದ್ವಸ್ತ್ವಿತಿ ಜ್ಞಾತ್ವಾ ನ ದತ್ತಂ ತತ್ಕದಾಚನ ।
ರತ್ನವಸ್ತ್ರಮಲಂಕಾರಂ ಗ್ರಾಮಾಂಶ್ಚ ನಗರಾಣಿ ಚ ॥ ೧೦೯ ॥

ಅದದಾದ್ಬ್ರಾಹ್ಮಣೇಭ್ಯೋಽಸೌ ಶ್ವೇತೋ ರಾಜಾ ಮಹಾಯಶಾಃ ।
ನಾನ್ನಂ ಜಲಂ ತೇನ ರಾಜ್ಞಾ ದತ್ತಮಾಸೀತ್ಕದಾಚನ ॥ ೧೧೦ ॥

ತತೋಽಶ್ವಮೇಧೈರ್ಬಹುಭಿರ್ಯಜ್ವಾಸೌ ನೃಪಸತ್ತಮಃ ।
ಸ್ವರ್ಗಂ ಗತಃ ಪುಣ್ಯಜಿತಂ ತಪಸ್ತಪ್ತ್ವಾರ್ಬುದತ್ರಯಂ ॥ ೧೧೧ ॥

ಬ್ರಾಹ್ಮೇ ಸಲೋಕತಾಂ ಪ್ರಾಪ್ತಃ ಸರ್ವಾಲಂಕಾರಭೂಷಿತಃ ।
ನೃತ್ಯಂತ್ಯಪ್ಸರಸಸ್ತತ್ರ ಗಾಯಂತೇ ಸಿದ್ಧಯೋಷಿತಃ ॥ ೧೧೨ ॥

ತುಂಬುರುರ್ನಾರದಸ್ತತ್ರ ದ್ವಾವಪ್ಯನುಗತೌ ಸದಾ ।
ಅಗಾಯೇತಾಂ ಮಹಾಪ್ರಾಜ್ಞೌ ಮುನಯಶ್ಚ ತಪೋನ್ವಿತಾಃ ॥ ೧೧೩ ॥

---

೧೦೮. ಆದರೆ ಅನ್ನದಾನಮಾಡಲು ಮಾತ್ರ ನನಗೆ ಇಷ್ಟವಿಲ್ಲ. ಅನ್ನ ಹಾಕಿದುದರಿಂದ ಆಗತಾನೇ ತೃಪ್ತಿಯಾಗುತ್ತದೆ. ಸುವರ್ಣವನ್ನು ಕೊಟ್ಟರೆ ಬಹುದಿವಸ ತೃಪ್ತನಾಗಿರುತ್ತಾನೆ.

೧೦೯-೧೧೧. ಪುಲಸ್ತ್ಯನು ಹೇಳಿದನು- ಅದು ಅಲ್ಪ ವಸ್ತುವೆಂದು ತಿಳಿದು ಯಾವಾಗಲೂ ಅದನ್ನು ಕೊಡಲಿಲ್ಲ. ರತ್ನಗಳು, ವಸ್ತ್ರಗಳು, ಅಲಂಕಾರಗಳು, ಗ್ರಾಮ, ನಗರಗಳನ್ನು ಆತನು ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನಮಾಡಿದನು. ಅನ್ನ ನೀರುಗಳನ್ನು ಮಾತ್ರ ಯಾವಾಗಲೂ ಕೊಡಲೇ ಇಲ್ಲ. ಅನೇಕವಾದ ಅಶ್ವಮೇಧ ಯಾಗಗಳನ್ನು ಮಾಡಿ ಮೂರು ಅರ್ಬುದ ವರ್ಷಕಾಲ ತಪಸ್ಸುಮಾಡಿ ಸ್ವರ್ಗವನ್ನು ಹೊಂದಿದನು.

೧೧೨-೧೧೭. ಸರ್ವಾಲಂಕಾರಭೂಷಿತನಾಗಿ ಬ್ರಹ್ಮನ ಲೋಕವನ್ನು ಪಡೆದನು. ಅಲ್ಲಿ ಅಪ್ಸರ ಸ್ತ್ರೀಯರು ಕುಣಿಯುತ್ತಿರುತ್ತಾರೆ. ಸಿದ್ಧರು ಗಾನಮಾಡುತ್ತಿರುತ್ತಾರೆ. ತುಂಬುರು ನಾರದರೂ ಅದನ್ನು ಅನುಸರಿಸಿರುತ್ತಾರೆ. ತಪಸ್ವಿಗಳಾದ ಮುನಿಗಳೂ

ವೇದೋಕ್ತೈರ್ಮಂತ್ರೈಸ್ತುನ್ವಂತಿ ಅನೇಕಕ್ರತುಯಾಜಿನಂ ।
ಏವಂ ವಿಭವಯುಕ್ತಸ್ಯ ರಾಜ್ಞಸ್ತಸ್ಯ ಮಹಾತ್ಮನಃ ॥ ೧೧೪ ॥

ಕ್ಷುಧಯಾ ಪೀಡ್ಯತೇ ದೇಹಂ ತೃಷ್ಣಯಾ ಚ ವಿಶೇಷತಃ ।
ಸ ತಯಾ ಪೀಡ್ಯಮಾನಸ್ತು ಕ್ಷುಧಯಾ ರಾಜಸತ್ತಮಃ ॥ ೧೧೫ ॥

ವಿಮಾನೇನಾಪ್ಯಸೌ ಸ್ವರ್ಗಂ ತ್ಯಕ್ತ್ವಾಗಾದೃಕ್ಷಪರ್ವತಂ ।
ಯತ್ರಾತ್ಮಮೂರ್ತಿಸ್ತತ್ರಾಗಾತ್ಪುರಾ ದಗ್ಧಾ ಮಹಾವನೇ ॥ ೧೧೬ ॥

ತತ್ರಾಸ್ಥೀನಿ ಸ್ವಯಂ ಗೃಹ್ಯ ಲಿಹನ್ನಾಸ್ತೇ ಸ ಪಾರ್ಥಿವಃ ।
ಪುನರ್ವಿಮಾನಮಾರುಹ್ಯ ಯಯೌ ನಾಕಂ ನರಾಧಿಪಃ ॥ ೧೧೭ ॥

ಅಥ ಕಾಲೇನ ಮಹತಾ ಸ ರಾಜಾ ಸಂಶಿತವ್ರತಃ ।
ಸ್ವಾನ್ಯಸ್ಥೀನಿ ಲಿಹನ್ ದೃಷ್ಟೋ ವಸಿಷ್ಠೇನ ಪುರೋಧಸಾ ॥ ೧೧೮ ॥

ಉಕ್ತಶ್ಚ ಕಿಂ ನು ರಾಜೇಂದ್ರ ಸ್ವಾಸ್ಥಿಭಕ್ಷೋ ನರಾಧಿಪ ।
ಏವಮುಕ್ತಸ್ತತೋ ರಾಜಾ ವಸಿಷ್ಠೇನ ಮಹರ್ಷಿಣಾ ॥ ೧೧೯ ॥

---

ವೇದೋಕ್ತ ಮಂತ್ರಗಳಿಂದ ಈತನನ್ನು ಸ್ತೋತ್ರಮಾಡುತ್ತಾರೆ. ತುಂಬುರು ನಾರದರೂ ಈತನನ್ನು ಗಾನಮಾಡುತ್ತಾರೆ. ಈ ಶ್ವೇತನು ಇಷ್ಟು ವಿಭದಿಂದಿದ್ದಾಗ್ಯೂ ಹಸಿವು ಬಾಯಾರಿಕೆಗಳಿಂದ ಈತನ ದೇಹವು ಪೀಡಿಸಲ್ಪಡುತ್ತದೆ. ಹೀಗೆ ತೊಂದರೆಯುಂಟಾಗುತ್ತಿರಲು ಸ್ವರ್ಗವನ್ನು ಬಿಟ್ಟು ಋಕ್ಷ ಪರ್ವತಕ್ಕೆ ಬಂದನು. ಎಲ್ಲಿ ತನ್ನ ದೇಹವನ್ನು ಸುಟ್ಟಿದ್ದರೋ ಆ ಸ್ಮಶಾನಕ್ಕೆ ಹೋಗಿ ಅಲ್ಲಿರುವ ತನ್ನ ಮೂಳೆಗಳನ್ನು ಹಿಡಿದು ನೆಕ್ಕುತ್ತಿದ್ದನು. ಪುನಃ ವಿಮಾನದ ಮೇಲೆ ಕುಳಿತು ಸ್ವರ್ಗಕ್ಕೆ ಹೊರಟುಹೋದನು.

೧೧೮. ಹೀಗೆ ಕೆಲವು ಕಾಲ ಕಳೆಯಲು ಅನೇಕ ವ್ರತಗಳನ್ನು ಮಾಡಿದ ಈತನು ತನ್ನ ಮೂಳೆಗಳನ್ನು ನೆಕ್ಕುತ್ತಿರುವುದನ್ನು ವಸಿಷ್ಠನು ನೋಡಿದನು.

೧೧೯-೧೨೩. ಆ ವಸಿಷ್ಠನು ಏನಯ್ಯಾ ದೊರೆ ! ನಿನ್ನ ಮೂಳೆಗಳನ್ನೇಕೆ ತಿನ್ನುತ್ತಿ ? ಎಂದನು. ವಸಿಷ್ಠನು ಹೀಗೆ ಹೇಳಲು ಈತನು ಋಷಿಯನ್ನು ಕುರಿತು

ಉವಾಚ ವಚನಂ ಚೇದಂ ಶ್ವೇತೋ ರಾಜಾಥ ತಂ ಮುನಿಂ ।
ಭಗವಂಸ್ತ್ರುಟ್ಕ್ಷುಧಾರ್ತೋಽಹಮನ್ನದಾನಂ ಪುರಾ ಮಯಾ ॥ ೧೨೦ ॥

ನ ದತ್ತಂ ಮುನಿಶಾರ್ದೂಲ ತೇನ ಮಾಂ ಕ್ಷುತ್ಪ್ರಬಾಧ್ಯತೇ ।
ಏವಮುಕ್ತಸ್ತದಾ ರಾಜ್ಞಾ ವಸಿಷ್ಠೋ ಮುನಿಪುಂಗವಃ ॥ ೧೨೧ ॥

ಉವಾಚ ತಂ ನೃಪಂ ಭೂಯೋ ವಾಕ್ಯಮೇತನ್ಮಹಾಮುನಿಃ ।
ಕಿಂ ತೇ ಕರೋಮಿ ರಾಜೇಂದ್ರ ಕ್ಷುಧಿತಸ್ಯ ವಿಶೇಷತಃ ॥ ೧೨೨ ॥

ವಸ್ತು ಕಸ್ಯಾಪಿ ಕಿಂಚಿದ್ಧಿ ನಾದತ್ತಮುಪತಿಷ್ಠತಿ ।
ರತ್ನಹೇಮಪ್ರದಾನೇನ ಭೋಗವಾನ್ ಜಾಯತೇ ನರಃ ॥ ೧೨೩ ॥

ಅನ್ನದಾನಪ್ರದಾನೇನ ಸರ್ವಕಾಮೈಃ ಪ್ರದೀಪಿತಃ ।
ತನ್ನ ದತ್ತಂ ತ್ವಯಾ ರಾಜನ್ ಸ್ತೋಕಂ ಮತ್ವಾ ನರಾಧಿಪ ॥ ೧೨೪ ॥

॥ ಶ್ವೇತ ಉವಾಚ ॥

ಅದತ್ತಸ್ಯ ಚ ಸಂಭೂತಿರ್ಯಥಾ ಭವತಿ ಮೇ ಗುರೋ ।
ವಸಿಷ್ಠ ತ್ವತ್ಪ್ರಸಾದೇನ ತನ್ಮಮಾಚಕ್ಷ್ವ ಪೃಚ್ಛತಃ ॥ ೧೨೫ ॥

---

ತೆಂದನು. ಸ್ವಾಮಿ, ಹಸಿವು ಬಾಯಾರಿಕೆಗಳು ನನ್ನನ್ನು ಬಾಧಿಸುತ್ತವೆ, ನಾನು ಪೂರ್ವದಲ್ಲಿ ಅನ್ನದಾನ ಮಾಡಲಿಲ್ಲ. ಆದ್ದರಿಂದ ಹೀಗೆ ಮಾಡುತ್ತೇನೆ. ರಾಜನು ಹೀಗೆ ಹೇಳುತ್ತಿರಲು ಆತನನ್ನು ಕುರಿತು ಋಷಿಯು ಇಂತೆಂದನು. ನಾನೇನು ನಿನಗುಪಕಾರಮಾಡಲಿ ? ನಿನ್ನ ಹಸಿವಿಗೇನು ತಾನೇ ಮಾಡಲಿ ? ದಾನಮಾಡದ ವಸ್ತುವು ಖಂಡಿತವಾಗಿಯೂ ಆತನಿಗೆ ಸ್ವಲ್ಪವೂ ಸಿಕ್ಕುವುದಿಲ್ಲ. ರತ್ನಗಳು, ಚಿನ್ನ ಬೆಳ್ಳಿಗಳನ್ನು ಕೊಡುವುದರಿಂದ ಮನುಷ್ಯನು ಭೋಗಗಳನ್ನು ಅನುಭವಿಸುತ್ತಾನೆ ಅಷ್ಟೆ !

೧೨೪. ಅನ್ನದಾನಮಾಡಿದರೆ ಸರ್ವಕಾಮಗಳೂ ಲಭಿಸುತ್ತವೆ. ಅದು ಅಲ್ಪವೆಂದು ನೀನು ದಾನಮಾಡಲಿಲ್ಲ.

೧೨೫. ಶ್ವೇತನು ಹೇಳಿದನು- ದಾನಮಾಡದಿದ್ದರೂ ನನಗೆ ಅವುಗಳು ಒದಗುವಂತೆ ನೀನು ಮಾಡು.

॥ ವಸಿಷ್ಠ ಉವಾಚ ॥

ಅಸ್ತ್ಯೇಕಂ ಕಾರಣಂ ಯೇನ ಜಾಯತೇ ಸಾತ್ರ ಸಂಶಯಃ ।
ತಚ್ಛೃಣುಷ್ವ ನರವ್ಯಾಘ್ರ ಕಥ್ಯಮಾನಂ ಮಯಾ ತವ ॥ ೧೨೬ ॥

ಆಸೀದ್ರಾಜಾ ಪುರಾ ಕಲ್ಪೇ ವಿನೀತಾಶ್ವೇತಿ ಕೀರ್ತಿತಃ ।
ಸ ಚಾಶ್ವಮೇಧಮಾರೇಭೇ ಯಜ್ಞಂ ಕರ್ತುಂ ಪರಂ ನೃಪಃ ॥ ೧೨೭ ॥

ಯಜನಾಂತೇ ದ್ವಿಜೇಂದ್ರೇಭ್ಯೋ ದತ್ತಂ ಗೋಽಶ್ವಾದಿಯಾಚಿತಂ ।
ನಾನ್ನಂ ದತ್ತಂ ತೇನ ಕಿಂಚಿತ್ಸ್ವಲ್ಪಂ ಮತ್ವಾ ಯಥಾ ತ್ವಯಾ ॥ ೧೨೮ ॥

ತತಃ ಕಾಲೇನ ಮಹತಾ ಮೃತೋಽಸೌ ಜಾಹ್ನವೀತಟೇ ।
ಮಾಯಾಪುರ್ಯಾಂ ವಿನೀತಾಶ್ವಃ ಸಾರ್ವಭೌಮೋಽಭವನ್ನೃಪಃ ॥ ೧೨೯ ॥

ಸ್ವರ್ಗಂ ಚ ಗತವಾನ್ಸೋಽಪಿ ಯಥಾ ರಾಜಾ ಭವಾನ್ಪ್ರಭೋ ।
ಅಸಾವಪಿ ಕ್ಷುಧಾವಿಷ್ಟ ಏವಮೇವಾಗತೋಽಭವತ್ ॥ ೧೩೦ ॥

---

೧೨೬. ವಸಿಷ್ಠನು ಹೇಳಿದನು- ಕೊಡದಿದ್ದರೂ ಸಿಕ್ಕುವುದಕ್ಕೆ ಒಂದು ಉಪಾಯವಿದೆ. ಅದನ್ನು ಹೇಳುತ್ತೇನೆ. ಕೇಳು.

೧೨೭. ಹಿಂದಿನ ಕಲ್ಪದಲ್ಲಿ ವಿನಿತಾಶ್ವನೆಂಬ ರಾಜನಿದ್ದನು. ಅವನು ಉತ್ತಮವಾದ ಯಜ್ಞವನ್ನು ಮಾಡಬೇಕೆಂದು ಅಶ್ವಮೇಧವನ್ನಾರಂಭಿಸಿದನು.

೧೨೮. ಯಜ್ಞದ ಕೊನೆಯಲ್ಲಿ ಬ್ರಾಹ್ಮಣರಿಗೆ ಹಸು, ಕುದುರೆ, ಸುವರ್ಣ, ಮುಂತಾದುವುಗಳನ್ನು ಯಥೇಚ್ಛವಾಗಿ ಕೊಟ್ಟನು. ನಿನ್ನಂತೆ ಅನ್ನವು ಅಲ್ಪವಾದುದೆಂದು ಭಾವಿಸಿ ಅನ್ನದಾನ ಮಾಡಲಿಲ್ಲ.

೧೨೯. ಆತನು ಮಾಯಾಪುರಿಯಲ್ಲಿ ರಾಜನಾಗಿದ್ದನು. ಕೆಲವುಕಾಲದಮೇಲೆ ಗಂಗಾನದಿಯ ದಡದಲ್ಲಿ ಮೃತನಾದನು.

೧೩೦. ನಿನ್ನಂತೆ ಸ್ವರ್ಗವನ್ನು ಹೊಂದಿದನು. ಅವನೂ ಕೂಡ ಹಸಿವಿನಿಂದ ಕೂಡಿ ಹೀಗೆಯೇ ನಿನ್ನಂತೆ ಬಂದನು.

ಮರ್ತ್ಯಲೋಕೇ ನದೀತೀರೇ ಗಂಗಾಯಾಂ ನೀಲಪರ್ವತೇ ।
ವಿಮಾನೇನಾರ್ಕವರ್ಣೇನ ಭಾಸ್ವತಾ ದೇವವನ್ನೃಪ ॥ ೧೩೧ ॥

ದದರ್ಶ ತತ್ಸ್ವಕಂ ದೇಹಂ ತಥಾ ಸ್ವಂ ಚ ಪುರೋಹಿತಂ ।
ಹೋತಾರಂ ಬ್ರಾಹ್ಮಣಂ ನಾಮ ಯಜಂತಂ ಜಾಹ್ನವೀತಟೇ ॥ ೧೩೨ ॥

ತಂ ದೃಷ್ಟ್ವಾಸಾವಪಿ ಪುನಃ ಪರ್ಯಪೃಚ್ಛದ್ದ್ವಿಜೋತ್ತಮಂ ।
ಕ್ಷುಧಾಯಾಃ ಕಾರಣಂ ರಾಜನ್ ಸ ಹೋತಾರಮುವಾಚ ಹ ॥ ೧೩೩ ॥

ತಿಲಧೇನುಂ ಚ ವೈ ರಾಜನ್ ಘೃತಧೇನುಂ ಚ ಸತ್ತಮ ।
ಜಲಧೇನುಂ ಚ ಧೇನುಂ ಚ ರಸಧೇನುಂ ಚ ಪಾರ್ಥಿವ ॥ ೧೩೪ ॥

ದೇಹಿ ಶೀಘ್ರಂ ಯೇನ ಭವಾನ್ ತೃಟ್‌ಕ್ಷುಧಾವರ್ಜಿತೋ ದಿವಿ ।
ರಮೇತ ಯಾವದಾದಿತ್ಯಸ್ತಪತೇ ದಿವಿ ಚಂದ್ರಮಾಃ ॥ ೧೩೫ ॥

ಏವಮುಕ್ತಸ್ತತೋ ರಾಜಾ ತಂ ಪುನಃ ಪೃಷ್ಟವಾನಿದಂ ।
ತಿಲಧೇನುಸ್ಥಿತಿಂ ಬ್ರೂಹಿ ತಥಾ ಕೃತ್ವಾ ದದಾಮ್ಯಹಂ ॥ ೧೩೬ ॥

---

೧೩೧-೧೩೩. ಮನುಷ್ಯಲೋಕದ ಗಂಗಾನದಿಯ ನೀಲ ಪರ್ವತದ ದಡದಲ್ಲಿ ತನ್ನ ದೇಹವನ್ನು ನೋಡಿದನು. ಆಗ ಅವನು ಉತ್ತಮವಾದ ವಿಮಾನದಲ್ಲಿ ಸಂಚರಿಸುತ್ತಿದ್ದನು. ಅಲ್ಲಿ ತನ್ನ ಪುರೋಹಿತನೂ ಇದ್ದನು. ಆ ಗಂಗಾದಡದಲ್ಲಿ ಮಾಡುವ ಯಜ್ಞದಲ್ಲಿ ಹೋತೃವಾಗಿ ಹೋಮಮಾಡುತ್ತಲಿರುವ ತನ್ನ ಪುರೋಹಿತನನ್ನು ನೋಡಿ ಹೀಗೆಂದು ಕೇಳಿದನು. ನನಗೆ ಹಸಿವಾಗುವುದಕ್ಕೆ ಕಾರಣವೇನು? ಎನ್ನಲು ಹೋತೃವಾದ ಆತನು ಹೇಳಿದನು.

೧೩೪-೧೩೫. ತಿಲಧೇನು, ಘೃತಧೇನು, ಜಲಧೇನು, ಧೇನು, ರಸಧೇನುಗಳನ್ನು ನೀನು ದಾನಮಾಡಿದರೆ ಸೂರ್ಯಚಂದ್ರರಿರುವವರೆಗೂ ಹಸಿವು ಬಾಯಾರಿಕೆಗಳಿಲ್ಲದೆ ಸ್ವರ್ಗದಲ್ಲಿ ರಮಿಸುತ್ತೀಯೆ.

೧೩೬. ರಾಜನು ತಿಲಧೇನುವಿನ ರೀತಿಯನ್ನು ಹೇಳು, ಹಾಗೆ ಮಾಡಿಕೊಡುತ್ತೇನೆಂದನು.

॥ ಪುರೋಹಿತ ಉವಾಚ ॥

ವಿಧಾನಂ ತಿಲಧೇನೋಸ್ತು ತಚ್ಛೃಣುಷ್ವ ನರಾಧಿಪ ।
ಧೇನುಸ್ಸ್ಯಾತ್ ಷೋಡಶಾಢಕ್ಯಾ ಚತುರ್ಭಿರ್ವತ್ಸಕೋ ಭವೇತ್ ॥ ೧೩೭ ॥

ಇಕ್ಷುದಂಡಮಯಾಃ ಪಾದಾ ದಂತಾಃ ಪುಷ್ಪಮಯಾಶ್ಶುಭಾಃ ।
ನಾಸಾ ಗಂಧಮಯೀಃ ತಸ್ಯಾ ಜಿಹ್ವಾ ಗುಡಮಯೀ ತಥಾ ॥ ೧೩೮ ॥

ಪುಚ್ಛೇ ಸ್ರಕ್ಕಲ್ಪನೀಯಾ ಸ್ಯಾದ್ಘಂಟಾಭರಣಭೂಷಿತಾ ।
ಈದೃಶೀಂ ಕಲ್ಪಯಿತ್ವಾ ತು ಸ್ವರ್ಣಶೃಂಗೀ ತು ಕಲ್ಪಯೇತ್ ॥ ೧೩೯ ॥

ರೌಪ್ಯಖುರಾಂ ಕಾಂಸ್ಯದೇಹಾಂ ಪೂರ್ವಧೇನು ವಿಧಾನತಃ ।
ಕೃತ್ವಾ ತಾಂ ಬ್ರಾಹ್ಮಣಾಯಾಶು ದಾಪಯೇನ್ಮಂತ್ರತೋ ನೃಪ ॥ ೧೪೦ ॥

ಸ್ಥಿತಾಂ ಕೃಷ್ಣಾಜಿನೇ ಧೇನುಂ ವಾಸೋಭಿರ್ಗೋಪಿತಾಂ ಶುಭಾಂ ।
ಸೂತ್ರೇಣಾಸೂತ್ರಿತಾಂ ಕೃತ್ವಾ ಪಂಚರತ್ನಸಮನ್ವಿತಾಂ ॥ ೧೪೧ ॥

ಸರ್ವೌಷಧಿಸವಮಾಯುಕ್ತಾಂ ಮಂತ್ರಪೂತಾಂ ತು ದಾಪಯೇತ್ ।
ಅನ್ನಂ ಮೇ ಜಾಯತಾಂ ಸದ್ಯಃ ಪಾನಂ ಸರ್ವರಸಾಸ್ತಥಾ ॥ ೧೪೨ ॥

---

೧೩೭-೧೪೦. ಪುರೋಹಿತನು ಹೇಳಿದನು- ತಿಲಧೇನುವಿನ ರೀತಿಯನ್ನು ಹೇಳುತ್ತೇನೆ ಕೇಳು. ಹದಿನಾರು ಕೊಳಗ ಎಳ್ಳಿನಿಂದ ಮಾಡಿದರೆ ತಿಲಧೇನುವೆಂದೂ ನಾಲ್ಕು ಕೊಳಗದಿಂದ ಮಾಡಿದರೆ ವತ್ಸಕವೆಂದೂ ಎನ್ನಿಸಿಕೊಳ್ಳುತ್ತದೆ. ಅದಕ್ಕೆ ಕಬ್ಬಿನ ಕಾಲುಗಳು, ಹೂವಿನ ಹಲ್ಲುಗಳು, ಗಂಧದ ಮೂಗು, ಬೆಲ್ಲದ ನಾಲಿಗೆ, ಬಾಲವು ಹೂಮಾಲೆ, ಘಂಟೆ ಆಭರಣಗಳು ಇವುಗಳಿಂದ ಕೂಡಿಸಿ ಈ ರೀತಿ ಕಲ್ಪಿಸ ಬೇಕು. ಚಿನ್ನದ ಕೊಂಬು ಬೆಳ್ಳಿಯ ಗೊರಸು, ಕಂಚಿನ ದೇಹದಿಂದ ಕಲ್ಪಿಸಿ ಮಂತ್ರಿಸಿ ಬ್ರಾಹ್ಮಣನಿಗೆ ಕೊಡಬೇಕು.

೧೪೧-೧೪೪. ಇದನ್ನು ಕೃಷ್ಣಾಜಿನದಲ್ಲಿಟ್ಟು ಕಲ್ಪಿಸಬೇಕು ಬಟ್ಟೆಯಿಂದ ಹೊದ್ದಿಸಿರಬೇಕು. ನೂಲಿನಿಂದ ಕಟ್ಟಿರಬೇಕು. ಪಂಚರತ್ನಗಳನ್ನು ಹಾಕಿರಬೇಕು. ಸರ್ವೌಷಧಿಗಳಿಂದ ಕೂಡಿರುವ ಇದನ್ನು ಮಂತ್ರಿಸಿ ಬ್ರಾಹ್ಮಣನಿಗೆ ಕೊಡಬೇಕು. ನನಗೆ ಸದ್ಯದಲ್ಲೇ ಅನ್ನವು ಉಂಟಾಗಲಿ. ನೀರು ಸರ್ವ ರಸಗಳೂ ಉಂಟಾಗಲಿ. ಎಲ್ಲೈ ತಿಲ

ಕಾಮಾನ್ಸಂಪಾದಯಾಸ್ಮಾಕಂ ತಿಲಧೇನೋ ದ್ವಿಜೇಽರ್ಪಿತಾ ।
ಗೃಹ್ಣಾಮಿ ದೇವಿ ತ್ವಾಂ ಭಕ್ತ್ಯಾ ಕುಟುಂಬಾರ್ಥೇ ವಿಶೇಷತಃ ॥ ೧೪೩ ॥

ದೇಹಿ ಕಾಮಾನ್ಹಿತಾನ್ಸರ್ವಾನ್ ತಿಲಧೇನೋ ನಮೋಽಸ್ತುತೇ ।
ಏವಂ ವಿಧಾನತೋ ದತ್ತಾ ತಿಲಧೇನುರ್ನೃಪೋತ್ತಮ ॥ ೧೪೪ ॥

ಸರ್ವಕಾಮಸಮಾವಾಪ್ತಿಂ ಕುರುತೇ ನಾತ್ರ ಸಂಶಯಃ ।
ಜಲಧೇನುಸ್ತಥೈವೇಹ ಕುಂಭೈರೇವ ಪ್ರಕಲ್ಪಿತಾ ॥ ೧೪೫ ॥

ದತ್ತಾ ತು ವಿಧಿನಾಕಾಮಾನ್ಸದ್ಯಃ ಸರ್ವಾನ್ಪ್ರಯಚ್ಛತಿ ।
ತಥಾ ದೇನುಶತಂ ದತ್ತಂ ಪೂರ್ಣಿಮಾನಿಯಮೇನ ಹಿ ॥ ೧೪೬ ॥

ಸಾವಿತ್ರೀ ಇವ ವೈ ಸ್ವರ್ಗೇ ಸರ್ವಕಾಮಪ್ರದಾ ಭವೇತ್ ।
ಘೃತದೇನುಸ್ತಥಾ ದತ್ತಾ ವಿಧಾನೇನ ವಿಚಕ್ಷಣೈಃ ॥ ೧೪೭ ॥

ಸರ್ವಕಾಮಸಮಾವಾಪ್ತಿಂ ಕುರುತೇ ಕಾಂತಿದಾ ಭವೇತ್ ।
ರಸಧೇನಸ್ತಥಾ ದತ್ತಾ ಕಾರ್ತಿಕೇ ಮಾಸಿ ಪಾರ್ಥಿವ ॥ ೧೪೮ ॥

---

ಧೇನುವೇ ! ಸರ್ವ ಕಾಮುಗಳನ್ನೂ ಉಂಟುಮಾಡು. ಎಂದು ಹೇಳಬೇಕು. ಎಲೈ ತಿಲ ಧೇನುವೇ ದೇವಿ ! ನಿನ್ನನ್ನು ಭಕ್ತಿಯಿಂದ ಸ್ವೀಕರಿಸುತ್ತೇನೆ ಅದರಲ್ಲೂ ಕುಟುಂಬ ರಕ್ಷಣೆಗೋಸ್ಕರ ತೆಗೆದುಕೊಳ್ಳುತ್ತೇನೆ. ಬೇಕಾದ ಎಲ್ಲಾ ಕಾಮುಗಳನ್ನೂ ಕೊಡು. ನಿನಗೆ ನಮಸ್ಕಾರವು. ಎಂದು ತೆಗೆದುಕೊಳ್ಳುವವನು ಹೇಳಬೇಕು. ಈ ವಿಧಾನದಿಂದ ಕೊಟ್ಟ ತಿಲಧೇನುವು ಸರ್ವ ಇಷ್ಟವನ್ನೂ ಪೂರೈಸುತ್ತದೆ. ಸಂಶಯವಿಲ್ಲ. ಜಲಧೇನು ವೆಂಬುದೂ ಹಾಗೆಯೇ, ಕುಂಭಗಳಿಂದ ಮಾಡಬೇಕಾದುದು. ವಿಧಿವತ್ತಾಗಿ ಕೊಟ್ಟರೆ ಸರ್ವ ಕಾಮುಗಳನ್ನೂ ಕೊಡುತ್ತದೆ. ಹೀಗೆ ಪೂರ್ಣಿಮೆಯಲ್ಲಿ ಮೂರು ಧೇನುಗಳನ್ನೂ ಕೊಟ್ಟರೆ ಸಾವಿತ್ರಿಯು ಸರ್ವಕಾಮುಗಳನ್ನೂ ಕೊಡುವಂತೆ ಫಲಗಳನ್ನು ಸ್ವರ್ಗದಲ್ಲಿ ಕೊಡುತ್ತದೆ. ಘೃತಧೇನುವನ್ನು ವಿಧಿವತ್ತಾಗಿ ಕೊಟ್ಟರೆ ಸರ್ವ ಕಾಮುಗಳನ್ನೂ ಕೊಡು ತ್ತದೆ ಕಾಂತಿಯನ್ನೂ ಕೊಡುತ್ತದೆ. ಕಾರ್ತಿಕಮಾಸದಲ್ಲಿ ರಸಧೇನುವನ್ನು ಕೊಟ್ಟರೆ ಸರ್ವಕಾಮುಗಳನ್ನೂ ಕೊಡುತ್ತದೆ.

ಸರ್ವಾನ್ಕಾಮಾನ್ಪ್ರಯಚ್ಛೇತ್ತಾಂ ನಿತ್ಯಂ ಸಾ ಗತಿದಾ ಭವೇತ್ ।
ಏತತ್ತೇ ಸರ್ವಮಾಖ್ಯಾತಂ ಸಮಾಸಾದ್ಯ ಸುವಿಸ್ತರಂ ॥ ೧೪೯ ॥

ಆಹಾರಂ ಫಲಮುದ್ದಿಷ್ಟಂ ಬ್ರಹ್ಮಣಾ ಸರ್ವಕರ್ಮಣಾ ।
ತೃಷ್ಣಯಾ ಕ್ಷುಧಯಾ ಯದ್ವಾ ಪೀಡಿತೋ ರಾಜಸತ್ತಮ ॥ ೧೫೦ ॥

ತದ್ದಾನಂ ಕಾರ್ತಿಕೇ ಧೇಯಂ ಪೂರ್ವಂ ದೇಹಿ ನರಾಧಿಪ ।
ಬ್ರಹ್ಮಾಂಡಂ ಸರ್ವಸಂಪನ್ನಂ ಭೂತರತ್ನೌಷಧೀಯುತಂ ॥ ೧೫೧ ॥

ದೇವದಾನವಯಕ್ಷೈಶ್ಚ ಯುಕ್ತಮೇತತ್ಸದಾ ವಿಭೋ ।
ಏತತ್ತು ಸಕಲಂ ಕೃತ್ವಾ ಸರ್ವತೋ ರಜತಾನ್ವಿತಂ ॥ ೧೫೨ ॥

ಸುರತ್ನ ಚಂದ್ರಸೂರ್ಯಾಢ್ಯಂ ಕಾರ್ತಿಕೇ ದ್ವಾದಶೀದಿನೇ ।
ಅಥವಾ ಪಂಚದಶ್ಯಾಂ ತು ಕಾರ್ತಿಕಸ್ಯೈವ ನಾನ್ಯತಃ ॥ ೧೫೩ ॥

ಪುರೋಹಿತಾಯ ಗುರವೇ ದಾಪಯೇದ್ಭಕ್ತಿಮಾನ್ನರಃ ।
ಬ್ರಹ್ಮಾಂಡೋದರವರ್ತೀನಿ ಯಾನಿ ಭೂತಾನಿ ಪಾರ್ಥಿವ ॥ ೧೫೪ ॥

ತಾನಿ ದತ್ತಾನಿ ವೈ ತೇನ ಸಮಾಸಾತ್ಕಥಿತಂ ತವ ।
ತದ್ಯಜ್ಞೈರ್ಯಜತೋ ರಾಜನ್ ಸಮಾಪ್ತವರದಕ್ಷಿಣೈಃ ॥ ೧೫೫ ॥

---

೧೪೯-೧೫೬. ಸೂಕ್ಷ್ಮವಾಗಿ ವಿಸ್ತಾರವಾದ ವಿಷಯವನ್ನು ಹೇಳಿದ್ದೇನೆ. ಇದಕ್ಕೆ ಅಪಾರ ಫಲವುಂಟೆಂದು ಬ್ರಹ್ಮನೇ ಹೇಳಿದ್ದಾನೆ. ಹಸಿವು ಬಾಯಾರಿಕೆಗಳಿಂದ ಕೂಡಿದವನು. ಕಾರ್ತಿಕಮಾಸದಲ್ಲಿ ಆ ದಾನವನ್ನು ಮಾಡಬೇಕು. ನೀನು ಮೊದಲೇ ಆ ದಾನವನ್ನು ಮಾಡು. ಬ್ರಹ್ಮಾಂಡವು ಭೂತ, ರತ್ನ ಔಷಧಿ, ದೇವ, ದಾನವ, ಯಕ್ಷ ಇವರೆಲ್ಲರಿಂದಲೂ ಸದಾ ತುಂಬಿದೆ. ಇದೆಲ್ಲವನ್ನೂ ಸೇರಿಸಿ ಬೆಳ್ಳಿಯಿಂದ ಮಾಡಿಸಿ ಚಂದ್ರ ಸೂರ್ಯರನ್ನೂ ಮಾಡಿಸಿ ಕಾರ್ತಿಕ ದ್ವಾದಶಿ ಅಥವಾ ಹುಣ್ಣಿಮೆಗಳಲ್ಲಿ ಪುರೋಹಿತನಿಗೆ ಭಕ್ತಿಯಿಂದ ಕೊಡಬೇಕು. ಬ್ರಹ್ಮಾಂಡದಲ್ಲಿರುವ ಪ್ರಾಣಿಗಳ ತೀರ್ಥಗಳೆಲ್ಲವನ್ನು ಅವನು ದಾನ ಮಾಡಿದಂತಾಗುತ್ತದೆ. ಅದನ್ನು ಕೊಟ್ಟವನಿಗೆ, ಯಜ್ಞಮಾಡಿ

ಸರ್ವಂ ಫಲಂ ತತ್ಪಂಡಸ್ಯ ಬ್ರಹ್ಮಾಂಡಸ್ಯ ವಿಶೇಷತಃ ।
ಯಃ ಪುನಃ ಸಕಲಂ ಚೇದಂ ಬ್ರಹ್ಮಾಂಡಂ ಪ್ರದಿಶೇನ್ನರಃ ।
ತೇನ ದತ್ತಂ ಹುತಂ ಜಪ್ತಂ ಪಠಿತಂ ಕೀರ್ತಿತಂ ಭವೇತ್ ॥ ೧೫೬ ॥

॥ ರಾಜೋವಾಚ ॥

ವಿಧಿಂ ಬ್ರಹ್ಮಾಂಡದಾನಸ್ಯ ಕೃತ್ವಾ ತನ್ಮೋಕ್ಷಭಾಗ್ಭವೇತ್
ಕಾಲಂ ದೇಶಂ ವಿಪ್ರ ತೀರ್ಥಂ ಸರ್ವಂ ತ್ವಂ ವದ ಮೇಽನಘ ॥ ೧೫೭ ॥

ಕೃತೇನ ಯೇನ ಸರ್ವಸ್ಯ ಫಲಭಾಗೀ ಭವಾಮ್ಯಹಂ ।
ಕುತ್ಸಿತಸ್ಯಾಸ್ಯ ಭಾವಸ್ಯ ಕ್ಷಮಸ್ಸ್ಯಾ ದಚಿರಾಚ್ಚ ಮೇ ॥ ೧೫೮ ॥

॥ ವಸಿಷ್ಠ ಉವಾಚ ॥

ಏವಂ ಶ್ರುತ್ವಾ ತತೋ ರಾಜನ್ ಪುರೋಧಾಸ್ತಸ್ಯ ಸದ್ವಿಜಃ ॥ ೧೫೯ ॥

ಬ್ರಹ್ಮಾಂಡಂ ಕಾರಯೊಮಾಸ ಸೌವರ್ಣಂ ಸರ್ವಧಾತುಭಿಃ ।
ಯುತಂ ನಿಷ್ಕಸಹಸ್ರೇಣ ಪದ್ಮಂ ತತ್ರ ಹ್ಯಕಲ್ಪಯತ್ ॥ ೧೬೦ ॥

---

ಸಾಂಗವಾಗಿ ಯಥೋಕ್ತವಾದ ದಕ್ಷಿಣೆಗಳನ್ನು ಕೊಟ್ಟರೆಷ್ಟು ಫಲವೋ ಅಷ್ಟು ಬರುತ್ತದೆ. ಬ್ರಹ್ಮಾಂಡ ದಾನವು ಅಷ್ಟು ವಿಶೇಷವಾದುದು ಯಾವನು ಬ್ರಹ್ಮಾಂಡವನ್ನು ದಾನಮಾಡುತ್ತಾನೋ ಅವನು ಜಪ ಹೋಮ, ಪಠನಗಳನ್ನು ಮಾಡಿದಂತಾಗುತ್ತದೆ.

೧೫೭-೧೫೮. ರಾಜನು ಹೇಳಿದನು– ಬ್ರಹ್ಮಾಂಡದಾನದ ವಿಧಿಯನ್ನು ಅದಕ್ಕೆ ಕಾಲ, ದೇಶ, ತೀರ್ಥಗಳನ್ನು ನನಗೆ ಹೇಳು. ಅದನ್ನು ಮಾಡಿ ಅದೆಲ್ಲಕ್ಕೂ ಫಲಭಾಗಿಯಾಗುವಂತೆ ಹೇಳು. ಕೆಟ್ಟ ಸ್ಥಿತಿಯು ಹೋಗುವಂತೆ ಮಾಡು.

೧೫೯-೧೬೦. ವಸಿಷ್ಠನು ಹೇಳಿದನು– ಇದನ್ನು ಕೇಳಿ ಆ ಪುರೋಹಿತನು ಸರ್ವಧಾತುಗಳ ಜೊತೆಗೆ ಸಾವಿರ ನಿಷ್ಕಗಳನ್ನು ಸೇರಿಸಿ ಬ್ರಹ್ಮಾಂಡವನ್ನು ಮಾಡಿಸಿ ಪದ್ಮವನ್ನು ಅದರಲ್ಲಿ ಕಲ್ಪಿಸಿದನು.

ತತ್ರ ಬ್ರಹ್ಮಾ ತಸ್ಯ ಮಧ್ಯೇ ಪದ್ಮರಾಗೈರಲಂಕೃತಃ ।
ಸಾವಿತ್ರ್ಯಾ ಚೈವ ಗಾಯತ್ರ್ಯಾ ಋಷಿಭಿರ್ಮುನಿಭಿಸ್ಸಹ ॥ ೧೬೧ ॥

ನಾರದಾದ್ಯಾಸ್ಸುತಾಸ್ಸರ್ವ ಇಂದ್ರಾದ್ಯಾಶ್ಚ ದಿವೌಕಸಃ ।
ಸಾವರ್ಣವಿಗ್ರಹಾಸ್ಸರ್ವೇ ಬ್ರಹ್ಮಣಸ್ತು ಪುರಸ್ಸರಾಃ ॥ ೧೬೨ ॥

ವರಾಹರೂಪೀ ಭಗವಾನ್ ಲಕ್ಷ್ಮ್ಯಾ ಸಹ ಸನಾತನಃ ।
ನೀಲಂ ಮರಕತಂ ಚೈವ ಭೂಷಾಯಾಂ ತಸ್ಯ ಕಾರಯೇತ್ ॥ ೧೬೩ ॥

ಗೋಮೇದೈಸ್ತಸ್ಯ ವೈ ಶೋಭಾಂ ಕಾರಯೇತ ಚ ಬುದ್ಧಿಮಾನ್ ।
ಮೌಕ್ತಿಕೈಶ್ಚಾಪಿ ಸೋಮಸ್ಯ ಶೋಭಾಂ ವಜ್ರೈರ್ದಿವಾಕರೇ ॥ ೧೬೪ ॥

ಗ್ರಹಾಣಾಂ ಚೈವ ಸರ್ವೇಷಾಂ ಸುವರ್ಣಾನಿ ಚ ದಾಪಯೇತ್ ।
ಸ್ವರ್ಣಾತ್ಸಪ್ತಗುಣಂ ರೌಪ್ಯಂ ರೌಪ್ಯಾತ್ತಾಮ್ರಂ ತಥಾವಿಧಂ ॥ ೧೬೫ ॥

ತತಸ್ಸಪ್ತಗುಣಾಂ ಕಾರ್ಯಂ ಕಾಂಸ್ಯಂ ಸಪ್ತಗುಣಂ ತಥಾ ।
ಕಾಂಸ್ಯಾತ್ಸಪ್ತಗುಣಂ ಕಾರ್ಯಂ ತ್ರಪು ಚೈವ ನರಾಧಿಪ ॥ ೧೬೬ ॥

---

೧೬೧-೧೬೨. ಆದರ ಮಧ್ಯದಲ್ಲಿ ಪದ್ಮರಾಗದಿಂದಲಂಕರಿಸಿದ ಬ್ರಹ್ಮನನ್ನು ಕಲ್ಪಿಸಬೇಕು. ಸಾವಿತ್ರೀ, ಗಾಯತ್ರೀಯರೆಂಬ ಹೆಂಡತಿಯರೂ ಋಷಿಗಳೂ ನಾರದಾದಿಗಳಾದ ಮಕ್ಕಳೂ ಇಂದ್ರಾದಿ ದೇವತೆಗಳೂ ಇವರನ್ನು ಚಿನ್ನದಿಂದ ಮಾಡಿ ಬ್ರಹ್ಮನ ಬಳಿ ಇಡಬೇಕು.

೧೬೩. ವರಾಹ ಮೂರ್ತಿಯನ್ನೂ ಲಕ್ಷ್ಮಿಯನ್ನೂ ಚಿನ್ನದಿಂದ ಮಾಡಿಸಬೇಕು.ಆದರ ಒಡವೆಗೆ ನೀಲ, ಮರಕತಗಳನ್ನು ಸೇರಿಸಿರಬೇಕು.

೧೬೪. ಗೋಮೇದದ ಕಲ್ಲಿನಿಂದ ಆ ವಿಗ್ರಹಕ್ಕೆ ಕಾಂತಿ ಬರುವಂತೆ ಮಾಡಬೇಕು ಮುತ್ತಿನಿಂದ ಚಂದ್ರನಿಗೂ, ವಜ್ರದಿಂದ ಸೂರ್ಯನಿಗೂ, ಕಾಂತಿ ಬರುವಂತೆ ಮಾಡಬೇಕು.

೧೬೫-೧೬೮. ಗ್ರಹಗಳೆಲ್ಲವನ್ನೂ ಸುವರ್ಣದಿಂದಲೇ ಮಾಡಿಸಬೇಕು. ಚಿನ್ನ ವೆಷ್ಟುಬೇಕೋ ಆದರ ಏಳರಷ್ಟು ಬೆಳ್ಳಿ, ಬೆಳ್ಳಿಗಿಂತ ಏಳರಷ್ಟು ತಾಮ್ರ, ಆದಕ್ಕೆ ಏಳರಷ್ಟು ಕಂಚು, ಆದರೇಳರಷ್ಟು ತವರ, ಆದರ ಏಳರಷ್ಟು ಸೀಸ, ಸೀಸಕ್ಕಿಂತ ಏಳರಷ್ಟು

ತ್ರಪುಸಪ್ತಗುಣಂ ಸೀಸಂ ಸೀಸಾಲ್ಲೋಹಂ ಚ ಕಾರಯೇತ್ ।
ಸಪ್ತದ್ವೀಪಾಸ್ಸಮುದ್ರಾಶ್ಚ ಸಪ್ತ ವೈ ಕುಲಪರ್ವತಾಃ ॥ ೧೬೭ ॥

ಅನಯಾ ಸಂಖ್ಯಯಾ ಕೃತ್ವಾ ನಿಪುಣೈಶ್ಶಿಲ್ಪಿಭಿಸ್ತತಃ ।
ಪಾದಪಾದೀನಿ ಭೂತಾನಿ ರಾಜತಾನ್ಯೇವ ಕಾರಯೇತ್ ॥ ೧೬೮ ॥

ಆರಣ್ಯಾನಿ ಚ ಸತ್ತ್ವಾನಿ ಸೌವರ್ಣಾನಿ ಚ ಕಾರಯೇತ್ ।
ವೃಕ್ಷಾನ್ವನಸ್ಪತೀನ್ ಗುಲ್ಮತೃಣಪರ್ಣಾನಿ ವೀರುಧಃ ॥ ೧೬೯ ॥

ಸರ್ವಂ ಪ್ರಕಲ್ಪ್ಯ ವಿಧಿವತ್ತೀರ್ಥೇ ದೇಯಂ ವಿಚಕ್ಷಣೈಃ ।
ಕುರುಕ್ಷೇತ್ರೇ ಗಯಾಯಾಂ ಚ ಪ್ರಯಾಗೇಽಮರಕಂಟಕೇ ॥ ೧೭೦ ॥

ದ್ವಾರವತ್ಯಾಂ ಪ್ರಭಾಸೇ ಚ ಗಂಗಾದ್ವಾರೇ ಚ ಪುಷ್ಕರೇ ।
ತೀರ್ಥೇಷ್ವೇತೇಷು ವೈ ದೇಯಂ ಗ್ರಹಣೇ ಶಶಿಸೂರ್ಯಯೋಃ ॥ ೧೭೧ ॥

ದಿನಚ್ಛಿದ್ರೇಷು ಸರ್ವೇಷು ಅಯನೇ ದಕ್ಷಿಣೋತ್ತರೇ ।
ವ್ಯತೀಪಾತೇ ಬಹುಗುಣಂ ವಿಷುವೇ ಚ ವಿಶೇಷತಃ ॥ ೧೭೨ ॥

---

ಕಬ್ಬಿಣ, ಹೀಗೆ ಒಂದು ಸಿಕ್ಕದಿದ್ದರೆ ಅದರ ಹೆಚ್ಚಿನ ಮತ್ತೊಂದನ್ನು ತೆಗೆದುಕೊಳ್ಳ ಬೇಕು. ಸಪ್ತದ್ವೀಪಗಳು, ಸಪ್ತಸಮುದ್ರಗಳು, ಸಪ್ತಕುಲಪರ್ವತಗಳು ಇವುಗಳನ್ನೂ ಮೇಲೆ ಹೇಳಿದ ಸಂಖ್ಯೆಯಂತೆ ಮಾಡಬೇಕು. ಮರ ಪ್ರಾಣಿಗಳನ್ನೂ ಬೆಳ್ಳಿಯಿಂದಲೇ ಮಾಡಿಸಬೇಕು.

೧೬೯-೧೭೨. ಅರಣ್ಯದ ಪ್ರಾಣಿಗಳನ್ನು ಚಿನ್ನದಿಂದಲೇ ಮಾಡಿಸಬೇಕು. ವೃಕ್ಷಗಳು, ವನಸ್ಪತಿಗಳು, ಪೊದರುಗಳು ಹುಲ್ಲು, ಕಲ್ಲು ಬಳ್ಳಿಗಳನ್ನು ಮಾಡಿ ತೀರ್ಥ ಕ್ಷೇತ್ರಗಳಲ್ಲಿ ದಾನಮಾಡಬೇಕು. ಕುರುಕ್ಷೇತ್ರ, ಗಯೆ, ಪ್ರಯಾಗ, ಅಮರಕಂಟಕ, ದ್ವಾರವತಿ, ಪ್ರಭಾಸ, ಗಂಗಾದ್ವಾರ, ಪುಷ್ಕರ, ಈ ತೀರ್ಥಗಳಲ್ಲಿ ಕೊಡಬೇಕು. ಸೂರ್ಯ, ಚಂದ್ರ ಗ್ರಹಣ, ತಿಥಿಚ್ಛಿದ್ರ, ಕರ್ಕಾಟಕ, ಮಕರಸಂಕ್ರಮಣಗಳು ವ್ಯತೀ ಪಾತವಿಷುಗಳಲ್ಲಿ ಅಲ್ಲೇ ದಾನಮಾಡಿದರೆ ಬಹಳ ಹೆಚ್ಚು ಪುಣ್ಯ ಬರುತ್ತದೆ.

ದಾತವ್ಯಮೇತದ್ರಾಜೇಂದ್ರ ವಿಚಾರಂ ನೈವ ಕಾರಯೇತ್ ।
ಶಾಲಾಗ್ನಿಹೋತ್ರಿಣಂ ಕೃತ್ವಾ ಸುರೂಪಂ ಚ ಗುಣಾನ್ವಿತಂ ॥ ೧೭೩ ॥

ಸಪತ್ನೀಕಂ ಚ ಸಂಪೂಜ್ಯ ಭೂಷಯಿತ್ವಾ ಚ ಭೂಷಣೈಃ ।
ಪುರೋಹಿತಂ ಮುಖ್ಯತಮಂ ಕೃತ್ವಾನ್ಯೇ ಚ ತಥಾ ದ್ವಿಜಾಃ ॥ ೧೭೪ ॥

ಚತುರ್ವಿಂಶದ್ಗುಣೋಪೇತಾಃ ಸಪತ್ನಿಕಾ ನಿಮಂತ್ರಿತಾಃ ।
ಅಂಗುಳೀಯಾಸಿ ಚ ತಥಾ ಕರ್ಣವೇಷ್ಟಂ ಚ ದಾಪಯೇತ್ ॥ ೧೭೫ ॥

ಏವಂವಿಧಾಂಸ್ತು ತಾನ್ಪೂಜ್ಯ ತೇಷಾಮಗ್ರೇ ಸುಸಂಸ್ಥಿತಃ ।
ಅಷ್ಟಾಂಗಪ್ರಣಿಪಾತೇನ ಪ್ರಣಮ್ಯ ಚ ಪುನಃ ಪುನಃ ॥ ೧೭೬ ॥

ಪುರೋಹಿತಾಯ ಪುರತಃ ಕೃತ್ವಾ ವೈ ಕರಸಂಪುಟಂ ।
ಯೂಯಂ ವೈ ಬ್ರಾಹ್ಮಣಾಃ ಪ್ರೀತಾ ಮೈತ್ರತ್ವೇನಾನುಗೃಹ್ಣತ ॥ ೧೭೭ ॥

ಸೌಮುಖ್ಯೇನ ದ್ವಿಜಶ್ರೇಷ್ಠಾ ಭೂಯಃ ಪೂತತರಾಸ್ತ್ವಿಹ ।
ಭವತಾಂ ಪ್ರೀತಿಯೋಗೇನ ಸ್ವಯಂ ಪ್ರೀತಃ ಪಿತಾಮಹಃ ॥ ೧೭೮ ॥

---

೧೭೩-೧೭೪. ಎಲೈ ದೊರೆಯೆ ! ಇವನ್ನು ಯೋಚಿಸದೆ ದಾನಮಾಡಬೇಕು. ಆ ದಾನ ಕೊಡುವಾಗ ಶಾಲೆಯನ್ನು ಕಲ್ಪಿಸಬೇಕು. ಅದರಲ್ಲಿ ಹೋಮಮಾಡುವವನು ಗುಣರೂಪುಗಳಿಂದ ಕೂಡಿದವನಾಗಿರಬೇಕು. ಮತ್ತು ಪತ್ನಿವಂತನಾಗಿರಬೇಕು. ಅವನಿಗೆ ಅಲಂಕಾರಮಾಡಿ ಪೂಜೆಮಾಡಿ ಪುರೋಹಿತನನ್ನಾಗಿ ಮಾಡಿಕೊಳ್ಳಬೇಕು. ಇನ್ನೂ ಇತರ ಬ್ರಾಹ್ಮಣರನ್ನೂ ಕರೆಯಬೇಕು.

೧೭೫. ಅವರು ಇಪ್ಪತ್ತನಾಲ್ಕು ಗುಣಗಳಿಂದ ಕೂಡಿದವರಾಗಿರಬೇಕು. ಮತ್ತು ಅವರ ಪತ್ನಿಯರನ್ನೂ ಕರೆದಿರಬೇಕು. ಉಂಗುರ ಕರ್ಣಾಭರಣಗಳನ್ನು ಕೊಡಬೇಕು.

೧೭೬-೧೭೭. ಈ ರೀತಿಯಾಗಿ ಅವರನ್ನು ಪೂಜಿಸಿ ಅವರಿಗೆ ಸಾಷ್ಟಾಂಗ ನಮಸ್ಕರಿಸಿ ಪುರೋಹಿತನನ್ನು ಮುಂದುಮಾಡಿಕೊಂಡು ಕೈಮುಗಿದುಕೊಂಡು ಹೀಗೆ ಹೇಳಬೇಕು. ಎಲೈ ಬ್ರಾಹ್ಮಣರೇ ! ನೀವು ಪ್ರೀತರಾಗಿ ಸ್ನೇಹದಿಂದ ಅನುಗ್ರಹಿಸಿರಿ.

೧೭೮. ಎಲೈ ಬ್ರಾಹ್ಮಣರೇ ! ನೀವು ಶ್ರೇಷ್ಠರು. ಪವಿತ್ರತಮರು. ನಿಮ್ಮ ಸುಮುಖತೆಯಿಂದ ಪಿತಾಮಹನು ಪ್ರೀತನಾಗಲಿ.

ಬ್ರಹ್ಮಾಂಡೇನ ತು ದತ್ತೇನ ತೋಷಂ ಯಾತು ಜನಾರ್ದನಃ ।
ಪಿನಾಕಪಾಣಿರ್ಭಗವಾನ್ ಶಕ್ರಶ್ಚ ತ್ರಿದಿವೇಶ್ವರಃ ॥ ೧೭೯ ॥

ಏತೇ ತೋಷಂ ಸಮಾಯಾಂತು ಅನುಧ್ಯಾನಾದ್ದ್ವಿಜೋತ್ತಮ ।
ಏವಂ ಸ್ತುತ್ವಾ ತತೋ ರಾಜಾ ಬ್ರಾಹ್ಮಣಾನ್ವೇದಪಾರಗಾನ್ ॥ ೧೮೦ ॥

ಬ್ರಹಾಂಡಂ ತು ಗುರೋಃ ಪ್ರಾದತ್ಸವಿಧಾನಃ ಪುನಃ ಕ್ಷಣಾತ್ ।
ಸರ್ವಕಾಮೈಸ್ತತಸ್ತುಷ್ಟೋ ಯಯೌ ಸ್ವರ್ಗಂ ನರಾಧಿಪಃ ॥ ೧೮೧ ॥

ತೇನೈವ ಗುರುಣಾ ತಚ್ಚ ವಿಭಕ್ತಂ ಬ್ರಾಹ್ಮಣೈಸ್ಸಹ ।
ದತ್ತಂ ತೇನಾಪಿ ಚಾನ್ಯೇಭ್ಯೋ ಬ್ರಹ್ಮಾಂಡಂ ಚ ನರಾಧಿಪ ॥ ೧೮೨ ॥

ಬ್ರಹ್ಮಾಂಡೇ ಭೂಮಿದಾನೇ ಚ ಗ್ರಾಹೇ ಚೈಕೋ ನ ವೈ ಭವೇತ್ ।
ಗೃಹ್ಣನ್ ದೋಷಮವಾಪ್ನೋತಿ ಬ್ರಹ್ಮಹತ್ಯಾಂ ನ ಸಂಶಯಃ ॥ ೧೮೩ ॥

ಸರ್ವೇಷಾಂ ಚೈವ ಪ್ರತ್ಯಕ್ಷಂ ದಾತವ್ಯಂ ಪರಿಕೀರ್ತ್ಯ ವೈ ।
ದೀಯಮಾನಂ ಚ ಪಶ್ಯಂತಿ ತೇಽಪಿ ಪೂತಾ ಭವಂತಿ ಹಿ ॥ ೧೮೪ ॥

---

೧೭೯-೧೮೧. ಈ ಬ್ರಹ್ಮಾಂಡ ದಾನದಿಂದ ಜನಾರ್ದನನೂ ಸಂತೋಷ ಹೊಂದಲಿ. ಈಶ್ವರನೂ ಇಂದ್ರನೂ ಕೂಡ ತಮ್ಮ ಅನುಗ್ರಹದಿಂದ ಸಂತೋಷ ಹೊಂದಲಿ. ಹೀಗೆ ಆ ರಾಜನು ವೇದಪಾರಗರಾದ ಬ್ರಾಹ್ಮಣರನ್ನು ಹೊಗಳಿ ಬ್ರಹ್ಮಾಂಡದಾನವನ್ನು ಗುರುವಿಗೆ ಕೊಟ್ಟನು. ಅನಂತರ ಆತನು ಎಲ್ಲ ವಿಧದಲ್ಲೂ ತೃಪ್ತಿಹೊಂದಿ ಸ್ವರ್ಗಕ್ಕೆ ಹೋದನು.

೧೮೨-೧೮೩. ಆ ಗುರುವೂ ಕೂಡ ಅದನ್ನು ಭಾಗಮಾಡಿ ಬ್ರಾಹ್ಮಣರಿಗೆ ಕೊಟ್ಟನು. ಬ್ರಹ್ಮಾಂಡದಾನದಲ್ಲೂ ಭೂಮಿ ದಾನದಲ್ಲಿಯೂ ತೆಗೆದುಕೊಳ್ಳುವವನು ಒಬ್ಬನಾಗಿರಬಾರದು. ಎಂದರೆ ಒಬ್ಬನಿಗೆ ಕೊಡಬಾರದು. ತೆಗೆದುಕೊಂಡರೆ ಬ್ರಹ್ಮಹತ್ಯೆ ದೋಷವು ಬರುತ್ತದೆ, ಸಂಶಯವಿಲ್ಲ.

೧೮೪. ಎಲ್ಲರ ಎದುರಿಗೂ ಹೇಳಿಕೊಡಬೇಕು. ದಾನಮಾಡುವುದನ್ನು ನೋಡುವವರೆಲ್ಲರೂ ಪೂತರಾಗುತ್ತಾರೆ.

ದರ್ಶನಾದೇವ ತೇ ಮುಕ್ತಾ ಭವಂತ್ಯೇವ ನ ಸಂಶಯಃ ॥
ಯಾ ಭೀಮದ್ವಾದಶೀ ಪ್ರೋಕ್ತಾ ಸ್ವರ್ಣಶೋಽಯಂ ಮೃಗಾಜಿನಂ ॥೧೮೫॥

ಏತಾನಿ ಕೃತ್ವಾ ಪಶ್ಯಂತು ದೃಷ್ಟೈರೇತೈಃ ಕ್ರಿಯಾಫಲಂ ।
ಅಯತ್ನಾದೇವ ಲಭ್ಯೇತ ಕರ್ತುಶ್ಚೈವ ಸಲೋಕತಾ ॥ ೧೮೬ ॥

ಸದಾ ಗಾವಃ ಪ್ರಣಮ್ಯಾಶ್ಚ ಮಂತ್ರೇಣಾನೇನ ಪಾರ್ಥಿವ ।
ನಮೋ ಗೋಭ್ಯಃ ಶ್ರೀಮತೀಭ್ಯಃ ಸೌರಭೇಯಿಭ್ಯ ಏವ ಚ ॥ ೧೮೭ ॥

ನಮೋ ಬ್ರಹ್ಮಸುತಾಭ್ಯಶ್ಚ ಪವಿತ್ರಾಭ್ಯೋ ನಮೋ ನಮಃ ।
ಮಂತ್ರಸ್ಯ ಚಾಸ್ಯ ಸ್ಮರಣಾದ್ಗೋದಾನಫಲಮಾಪ್ನುಯಾತ್ ॥ ೧೮೮ ॥

ತಸ್ಮಾತ್ತ್ವಮಪಿ ರಾಜೇಂದ್ರ ಪುಷ್ಕರೇ ತೀರ್ಥ ಉತ್ತಮೇ ।
ಕಾರ್ತಿಕ್ಯಾಂತು ವಿಶೇಷೇಣ ಗೋದಾನಫಲಮಾಪ್ಸ್ಯಸಿ ॥ ೧೮೯ ॥

ಯತ್ಕಿಂಚಿದ್ವಿದ್ಯತೇ ಪಾಪಂ ಸ್ತ್ರಿಯೋ ವಾ ಪುರುಷಸ್ಯ ವಾ ।
ಪುಷ್ಕರೇ ಸ್ನಾನಮಾತ್ರೇಣ ತದಶೇಷಂ ಪ್ರಣಶ್ಯತಿ ॥ ೧೯೦ ॥

---

೧೮೫-೧೮೬. ನೋಡುವುದರಿಂದಲೇ ಅವರೆಲ್ಲರೂ ಮುಕ್ತರಾಗುತ್ತಾರೆ. ಸಂಶಯವಿಲ್ಲ. ಭೀಮ ದ್ವಾದಶಿಯ ದಿನ, ಕೃಷ್ಣಾಜಿನವನ್ನು ಚಿನ್ನದಿಂದ ಮಾಡಿಸಿ ಮೇಲಿನವುಗಳನ್ನು ಸೇರಿಸಿ ದಾನಮಾಡಿದರೆ ಬಹು ಫಲ ಬರುತ್ತದೆ. ಹಾಗೆ ದಾನಮಾಡಿದವನಿಗಲ್ಲದೆ ಆ ಪದಾರ್ಥಗಳನ್ನು ಮಾಡಿದವನಿಗೂ ದಾನಿಗೆ ಬರತಕ್ಕ ಸ್ಥಾನವು ಬರುತ್ತದೆ.

೧೮೭-೧೮೮. ಎಲೈ ದೊರೆಯೇ! ನಮೋ ಗೋಭ್ಯ ಎಂಬ ಮಂತ್ರದಿಂದ ಗೋಗಳನ್ನು ನಮಸ್ಕರಿಸಬೇಕು. ಈ ಮಂತ್ರವನ್ನು ಸ್ಮರಿಸುವುದರಿಂದ ಗೋದಾನದ ಫಲವೂ ಬರುತ್ತದೆ.

೧೮೯. ಆದ್ದರಿಂದ ಪುಷ್ಕರದಲ್ಲಿ ಕಾರ್ತಿಕಮಾಸದಲ್ಲಿ ಸ್ಮರಿಸಿದರೆ ಹೆಚ್ಚಿನ ಗೋದಾನ ಫಲ ಬರುತ್ತದೆ.

೧೯೦. ಗಂಡಸರಿಗಾಗಲಿ ಹೆಂಗಸರಿಗಾಗಲಿ, ಪಾಪವಿದ್ದರೆ ಪುಷ್ಕರದಲ್ಲಿ ಸ್ನಾನ ಮಾಡಿದರೆ ಅದು ಹೋಗುತ್ತದೆ.

ಪೃಥಿವ್ಯಾಂ ಯಾನಿ ತೀರ್ಥಾನಿ ಆಸಮುದ್ರಾತ್ತು ಭಾರತ ।
ಪುಷ್ಕರೇ ತಾನ್ಯುಪಾಯಾಂತಿ ಕಾರ್ತಿಕ್ಯಾಂ ತು ವಿಶೇಷತಃ　　　॥ ೧೯೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಬ್ರಹ್ಮಾಂಡದಾನಂನಾಮ
॥ ಏಕತ್ರಿಂಶತ್ತಮೋಽಧ್ಯಾಯಃ ॥

---

೧೯೧. ಭೂಮಿಯಲ್ಲಿರುವ ತೀರ್ಥಗಳೆಲ್ಲವೂ ಪುಷ್ಕರಕ್ಕೆ ಬರುತ್ತವೆ. ಅದರಲ್ಲೂ ಕಾರ್ತಿಕಮಾಸದಲ್ಲಿ ಬಂದೇ ಬರುತ್ತವೆ

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಬ್ರಹ್ಮಾಂಡದಾನವೆಂಬ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ

## ॥ ದ್ವಾತ್ರಿಂಶೋಽಧ್ಯಾಯಃ ॥



॥ ಭೀಷ್ಮ ಉವಾಚ ॥

ಉಕ್ತಂ ಭಗವತಾ ಸರ್ವಂ ಪುರಾಣಾಶ್ರಯಸಂಯುತಂ ।
ತಥಾ ಶ್ವೇತೇನ ಬ್ರಹ್ಮಾಂಡಂ ಗುರವೇ ಪ್ರತಿಪಾದಿತಂ ॥ ೧ ॥

ಶ್ರುತ್ವೈತತ್ಕೌತುಕಂ ಜಾತಂ ಯಥಾ ತೇನಾಸ್ಥಿಲೇಹನಂ ।
ಕೃತಂ ಕ್ಷುಧಾಪನೋದಾರ್ಥ ಮನ್ನದಾನಾದ್ವಿನಾ ದ್ವಿಜ ॥ ೨ ॥

ತದಹಂ ಶ್ರೋತುಮಿಚ್ಛಾಮಿ ಪೃಥಿವ್ಯಾಂ ಯೇ ಚ ಪಾರ್ಥಿವಾಃ ।
ಅನ್ನದಾನಾದ್ದಿವಂ ಪ್ರಾಪ್ತಾಃ ಕ್ರತವಶ್ಚಾನ್ನಮೂಲಕಾಃ ॥ ೩ ॥

---

### ಮೂವತ್ತೆರಡನೆಯ ಅಧ್ಯಾಯವು

೧-೨. ಭೀಷ್ಮನು ಹೇಳಿದನು– ಎಲೈ ಸ್ವಾಮಿಯೇ ! ಪುರಾಣದ ಉತ್ತಮವಾದ ಕಥೆಗಳನ್ನು ನೀನು ಹೇಳಿದ್ದೀಯೆ. ಶ್ವೇತನು ಬ್ರಹ್ಮಾಂಡವನ್ನು ನಿರ್ಮಿಸಿ ಗುರುವಿಗೆ ಕೊಟ್ಟ ಬಗೆಯನ್ನು ಹೇಳಿದೆ. ಅವನು ಅನ್ನದಾನಮಾಡದಿರುವುದರಿಂದ ಹಸಿವಿನ ಅಡಗುವಿಕೆಗೆ ತನ್ನ ಮೂಳೆಯನ್ನು ಹಿಡಿದು ನೆಕ್ಕುತ್ತಿದ್ದುದನ್ನು ಕೇಳಿ ಆಶ್ಚರ್ಯವಾಗಿದೆ.

೩-೪. ಆದ್ದರಿಂದ ಒಂದು ವಿಷಯವನ್ನು ಕೇಳಬೇಕೆಂದಿದ್ದೇನೆ. ಯಾಗವೆಲ್ಲವೂ ಅನ್ನದಾನವನ್ನೇ ಪ್ರಧಾನವಾಗಿ ಉಳ್ಳುವು. ಯಾಗ ಮಾಡಿದವರೆಲ್ಲರೂ ಸ್ವರ್ಗವನ್ನು ಹೊಂದುತ್ತಾರೆ. ಈ ಶ್ವೇತನಿಗೆ ಆ ಬುದ್ಧಿ ಹುಟ್ಟದಿರಲು ಕಾರಣವೇನು ?

ಕಥಂ ತಸ್ಯ ಮತಿರ್ನಷ್ಟಾ ಶ್ವೇತಸ್ಯ ಚ ಮಹಾತ್ಮನಃ ।
ನ ದತ್ತಂ ತೇನಾನ್ನದಾನಮ್ಮಷಿಭಿರ್ವಾ ನ ದರ್ಶಿತಂ ॥ ೪ ॥

ಅಹೋ ಮಾಹಾತ್ಮ್ಯಮನ್ನಸ್ಯ ಇಹ ದತ್ತಸ್ಯ ಯತ್ಫಲಂ ।
ಪರತ್ರ ಭುಜ್ಯತೇ ಪುಂಭಿಃ ಸ್ವರ್ಗಶ್ಚಾಕ್ಷಯತಾಂ ವ್ರಜೇತ್ ॥ ೫ ॥

ಅನ್ನದಾನಂ ಪರಂ ವಿಪ್ರಾಃ ಕೀರ್ತಯಂತಿ ಸದೋದ್ಯತಾಃ ।
ಅನ್ನದಾನಾತ್ಸುರೇಂದ್ರೇಣ ತ್ರೈಲೋಕ್ಯಮಿಹ ಭುಜ್ಯತೇ ॥ ೬ ॥

ಶತಕ್ರತುರಿತಿ ಪ್ರೋಕ್ತಃ ಸರ್ವೈರೇವ ದ್ವಿಜೋತ್ತಮೈಃ ।
ತೇನಾವಸ್ಥಾಂ ತಾದೃಶೀಂ ತು ಪ್ರಾಪ್ತವಾಂಸ್ತ್ರಿದಶೇಶ್ವರಃ ॥ ೭ ॥

ದಾನಾದೇವ ಗತಃ ಸ್ವರ್ಗಂ ತ್ವತ್ತಃ ಸರ್ವಂ ಶ್ರುತಂ ಮಯಾ ।
ಅಪರಂ ಚೇತಿಹಾಸಂ ಮೇ ನಿವೃತ್ತಂ ಯದಿ ಕರ್ಹಿಚಿತ್ ॥
ಭೂಯೋಽಪಿ ಶ್ರೋತುಮಿಚ್ಛಾಮಿ ತನ್ಮೇ ವದ ಮಹಾಮುನೇ ॥ ೮ ॥

---

ಗುರುಗಳೇಕೆ ಹೇಳಲಿಲ್ಲ ? ಅವನೇಕೆ ಅನ್ನದಾನ ಮಾಡಲಿಲ್ಲ ? ಋಷಿಗಳೇಕೆ ಸುಮ್ಮ ನಿದ್ದರು ?

೫. ಅಹೋ ! ಅನ್ನದಾನದ ಮಹಿಮೆಯು ಬಹುವಾದುದು. ಈ ಲೋಕ ದಲ್ಲಿ ಅನ್ನದಾನಮಾಡಿದರೆ ಪರದಲ್ಲಿ ಅದನ್ನು ಅನುಭವಿಸುವುದಲ್ಲದೆ ಅಕ್ಷಯವಾದ ಸ್ವರ್ಗವನ್ನೂ ಹೊಂದುವನು.

೬. ಬ್ರಾಹ್ಮಣರು ಅನ್ನದಾನವು ಬಹು ಉತ್ತಮವಾದುದೆಂದು ಹೇಳುತ್ತಾರೆ. ಅನ್ನದಾನದಿಂದಲೇ ಇಂದ್ರನು ಮೂರು ಲೋಕಗಳನ್ನೂ ಅನುಭವಿಸುತ್ತಿದ್ದಾನೆ.

೭. ಅವನನ್ನು ಬ್ರಾಹ್ಮಣರೆಲ್ಲರೂ ಶತಕ್ರತುವೆಂಬ ದೊಡ್ಡ ಹೆಸರಿನಿಂದ ಕರೆ ಯುತ್ತಾರೆ. ಆ ಅನ್ನದಾನದಿಂದ ಈ ರೀತಿಯಾದ ಸ್ಥಿತಿಯು ಇಂದ್ರನಿಗೆ ಬಂದಿದೆ.

೮. ಅವನು ದಾನದಿಂದಲೇ ಸ್ವರ್ಗವನ್ನು ಹೊಂದಿದನೆಂಬುದನ್ನು ನಿನ್ನಿಂದ ಕೇಳಿದೆನು. ಬೇರೆಯ ಕಥೆಗಳು ಬೇಕೇ ಇಲ್ಲ. ಆದರೂ ಇನ್ನೂ ಇತಿಹಾಸಗಳನ್ನು ಕೇಳಬೇಕೆಂಬ ಕುತೂಹಲವಿದೆ. ಅದನ್ನು ನನಗೆ ದಯವಿಟ್ಟು ಹೇಳು.

॥ ಪುಲಸ್ತ್ಯ ಉವಾಚ ॥

ಏತದಾಖ್ಯಾನಕಂ ಪೂರ್ವಮಗಸ್ತ್ಯೇನ ಮಹರ್ಷಿಣಾ ।
ರಾಮಾಯ ಕಥಿತಂ ರಾಜಂಸ್ತತ್ತೇ ವಕ್ಷ್ಯಾಮಿ ಸಾಂಪ್ರತಂ ॥ ೯ ॥

॥ ಭೀಷ್ಮ ಉವಾಚ ॥

ಕಸ್ಮಿನ್ವಂಶೇ ಸಮುತ್ಪನ್ನೋ ರಾಜಾಸೌ ನೃಪಸತ್ತಮಃ ।
ಯಸ್ಯಾಗಸ್ತ್ಯೇನ ಗದಿತಶ್ಚೇತಿಹಾಸಃ ಪುರಾತನಃ ॥ ೧೦ ॥

॥ ಪುಲಸ್ತ್ಯ ಉವಾಚ ॥

ರಘುವಂಶೇ ಸಮುತ್ಪನ್ನೋ ರಾಮೋ ನಾಮ ಮಹಾಬಲಃ ।
ದೇವಕಾರ್ಯಂ ಕೃತಂ ತೇನ ಲಂಕಾಯಾಂ ರಾವಣೋ ಹತಃ ॥ ೧೧ ॥

ಪೃಥಿವೀರಾಜ್ಯಸಂಸ್ಥಸ್ಯ ಋಷಯೋಽಭ್ಯಾಗತಾ ಗೃಹೇ ।
ಪ್ರಾಪ್ತಾಸ್ತೇ ತು ಮಹಾತ್ಮನೋ ರಾಘವಸ್ಯ ನಿವೇಶನಂ ॥ ೧೨ ॥

---

೯. ಪುಲಸ್ತ್ಯನು ಹೇಳಿದನು– ಈ ಕಥೆಯನ್ನು ಪೂರ್ವದಲ್ಲಿ ಅಗಸ್ತ್ಯನು ರಾಮನಿಗೆ ಹೇಳಿದ್ದನು. ಅದನ್ನೇ ಈಗ ನಾನು ನಿನಗೆ ಹೇಳುತ್ತೇನೆ.

೧೦. ಭೀಷ್ಮನುಹೇಳಿದನು– ಈ ರಾಜನು ಯಾವ ವಂಶದಲ್ಲಿ ಹುಟ್ಟಿದವನು ? ಅವನಿಗೆ ಈ ಇತಿಹಾಸವನ್ನು ಅಗಸ್ತ್ಯನು ಹೇಳಿದನಷ್ಟೆ ?

೧೧. ಪುಲಸ್ತ್ಯನು ಹೇಳಿದನು– ಆ ರಾಮನು ರಘುವಂಶದಲ್ಲಿ ಹುಟ್ಟಿದವನು. ಅವನು ದೇವತೆಗಳ ಕೆಲಸವನ್ನು ಮಾಡಿದನು. ಯೇನೆಂದರೆ ಲಂಕೆಯಲ್ಲಿದ್ದ ರಾವಣನನ್ನು ಕೊಂದನು.

೧೨. ರಾವಣನನ್ನು ಕೊಂದು ಭೂಲೋಕದಲ್ಲಿ ಆ ರಾಮನು ರಾಜ್ಯಭಾರ ಮಾಡುತ್ತಿರಲು ಮಹಾತ್ಮರಾದ ಋಷಿಗಳು ಆತನ ಮನೆಗೆ ಬಂದರು.

ಪ್ರತೀಹಾರಸ್ತತಸ್ತೂರ್ಣಮಗಸ್ತ್ಯವಚನಾದ್ದ್ರುತಂ ।
ಆವೇದಯಾಮಾಸ ರಾಮಮೃಷೀನ್ಪ್ರಾಪ್ತಾಂಸ್ತ್ವರಾನ್ವಿತಾನ್ ॥
ದೃಷ್ಟ್ವಾ ರಾಮಂ ದ್ವಾರಪಾಲಃ ಪೂರ್ಣಚಂದ್ರಮಿವೋದಿತಂ ॥ ೧೩ ॥

॥ ದ್ವಾರಪಾಲ ಉವಾಚ ॥

ಕೌಸಲ್ಯಾಮಾತರ್ಭದ್ರಂ ತೇ ಸುಪ್ರಭಾತಾದ್ಯ ಶರ್ವರೀ ।
ದ್ರಷ್ಟುಮಭ್ಯುದಯಂ ತೇಽದ್ಯ ಸಂಪ್ರಾಪ್ತೋ ರಘುನಂಧನ ॥ ೧೪ ॥

ಅಗಸ್ತ್ಯ ಋಷಿಭಿಃ ಸಾರ್ಧಂ ದ್ವಾರಿ ತಿಷ್ಠತಿ ತೇ ನೃಪ ॥ ೧೫ ॥

॥ ಪುಲಸ್ತ್ಯ ಉವಾಚ ॥

ಶ್ರುತ್ವಾ ಪ್ರಾಪ್ತಾನ್ಮುನೀನ್ರಾಮಸ್ತಾನ್ ಭಾಸ್ಕರಸಮದ್ಯುತೀನ್ ।
ಪ್ರಾಹ ವಾಕ್ಯಂ ತದಾ ದ್ವಾಸ್ಥಂ ಪ್ರವೇಶಯ ತ್ವರಾನ್ವಿತಃ ॥ ೧೬ ॥

ಕಿಮರ್ಥಂ ತೇ ತ್ವಯಾ ದ್ವಾರೇ ನಿರುದ್ಧಾ ಮುನಿಸತ್ತಮಾಃ ।
ರಾಮವಾಕ್ಯಾನ್ಮುನೀಂಸ್ತಾಂಸ್ತು ಪ್ರಾವೇಶಯದ್ಯಥಾಸುಖಂ ॥ ೧೭ ॥

---

೧೩. ಅಗಸ್ತ್ಯನ ಮಾತಿನಂತೆ ಪ್ರತೀಹಾರಿಯು ಜಾಗ್ರತೆಯಾಗಿ ಬಂದು ಚಂದ್ರನಂತೆ ಇರುವ ರಾಮನನ್ನು ನೋಡಿ ಋಷಿಗಳು ತ್ವರೆಯಿಂದ ಬಂದಿರುವುವನ್ನು ತಿಳಿಸಿದನು.

೧೪-೧೫. ದ್ವಾರಪಾಲನು ಹೇಳಿದನು– ಎಲೈ ಕೌಸಲ್ಯೆಯ ಮಗನೇ ! ನಿನಗೆ ಮಂಗಳವಾಗಲಿ, ಈದಿನ ನಿನಗೆ ಸುಪ್ರಭಾತವು. ಎಲೈ ! ರಘುನಂದನನೇ ನಿನ್ನ ಏಳಿಗೆಯನ್ನು ನೋಡಲು ಅಗಸ್ತ್ಯನು ಋಷಿಗಳೊಡನೆ ಬಂದು ಬಾಗಿಲಿನಲ್ಲಿ ನಿಂತಿದ್ದಾನೆ.

೧೬. ಪುಲಸ್ತ್ಯನು ಹೇಳಿದನು ಸೂರ್ಯನಂತೆ ತೇಜಸ್ಸುಳ್ಳ ಆ ಮುನಿಗಳು ಬಂದಿರುವುದನ್ನು ರಾಮನು ಕೇಳಿದ ಕೂಡಲೆ ಜಾಗ್ರತೆಯಾಗಿ ಕರೆದುಕೊಂಡು ಬಾ, ಎಂದು ಬಾಗಿಲು ಕಾಯುವವನಿಗೆ ಹೇಳಿದನು.

೧೭. ನೀನೇಕೆ ಅವರನ್ನು ಬಾಗಿಲಿನಲ್ಲಿ ತಡೆದೆ ? ಎನ್ನಲು ರಾಮನ ಮಾತಿನಂತೆ ಅವರನ್ನು ಒಳಗೆ ಕರೆತಂದನು.

ದೃಷ್ಟ್ವಾ ಚ ತಾನ್ಮುನೀನ್ ಪ್ರಾಪ್ತಾನ್ ಪ್ರತ್ಯುತ್ಥಾಯ ಕೃತಾಂಜಲಿಃ ।
ರಾಮೋಽಭಿವಾದ್ಯ ಪ್ರಣತ ಆಸನೇಷು ನ್ಯವೇಶಯತ್ ॥ ೧೮ ॥

ತೇ ತು ಕಾಂಚನಚಿತ್ರೇಷು ಸ್ವಾಸ್ತೀರ್ಣೇಷು ಸುಖೇಷು ಚ ।
ಕುಶೋತ್ತರೇಷು ಚಾಸೀನಾ ಆಸೇನಷ್ವೃಷಿ ಸತ್ತಮಾಃ ॥ ೧೯ ॥

ಪಾದ್ಯಾಮಾಚಮನೀಯಂ ಚ ದತ್ವಾ ಚಾರ್ಘ್ಯಂ ಪುರೋಹಿತಃ ।
ರಾಮೇಣ ಕುಶಲಂ ಪೃಷ್ಟ್ವಾ ಋಷಯಃ ಸರ್ವ ಏವ ತೇ ॥ ೨೦ ॥

ಮಹರ್ಷಯೋ ವೇದವಿದ ಇದಂ ವಚನಮಬ್ರುವನ್ ॥ ೨೧ ॥

॥ ಋಷಯ ಊಚುಃ ॥

ಕುಶಲಂ ತೇ ಮಹಾಬಾಹೋ ಸರ್ವತ್ರ ರಘುನಂದನ ।
ತ್ವಾಂ ತು ದಿಷ್ಟ್ಯಾ ಕುಶಲಿನಂ ಪಶ್ಯಾಮೋ ಹತಶಾತ್ರವಂ ॥ ೨೨ ॥

---

೧೮. ಆ ಮುನಿಗಳು ಬರಲು ರಾಮನು ಅವರನ್ನು ಎದುರುಗೊಂಡು ಕೈ ಮುಗಿದುಕೊಂಡು ನಮಸ್ಕರಿಸಿ ಆಸನಗಳಲ್ಲಿ ಕೂರಿಸಿದನು.

೧೯. ಆ ಋಷಿಗಳು ಚಿನ್ನದ ಕೆತ್ತನೆಯಿಂದ ಅಲಂಕರಿಸಿರುವ ಸುಖವಾಗಿ ಕುಳಿತುಕೊಳ್ಳುವಂತೆ ಹಾಸಿರುವ ದರ್ಭೆಗಳನ್ನು ಉತ್ತರಾಗ್ರವಾಗಿ ಹಾಕಿರುವ ಆಸನಗಳಲ್ಲಿ ಕುಳಿತುಕೊಂಡರು.

೨೦-೨೧. ಹೀಗೆ ಇವರು ಕೂತುಕೊಳ್ಳಲು ಪುರೋಹಿತನು ಇವರಿಗೆ ಪಾದ್ಯವನ್ನೂ ಆಚಮನೀಯವನ್ನೂ ಕೊಟ್ಟನು. ರಾಮನು ಎಲ್ಲರನ್ನೂ ಕುಶಲವನ್ನು ಕೇಳಿದನು. ಅನಂತರ ವೇದವಿತ್ತುಗಳಾದ ಋಷಿಗಳು ಅವನನ್ನು ಕುರಿತು ಇಂತೆಂದರು.

೨೨. ಋಷಿಗಳು ಹೇಳಿದರು– ಎಲೈ ಮಹಾಬಾಹುವೇ ನಿನಗೆ ಎಲ್ಲಾ ವಿಷಯದಲ್ಲಿಯೂ ಕುಶಲವೆ? ಶತ್ರುಗಳನ್ನು ಕೊಂದು ಕುಶಲಿಯಾಗಿರುವ ನಿನ್ನನ್ನು ನೋಡಿದುದು ಬಹು ಸಂತೋಷವು.

ಹೃತಾ ಕುಲಾಂತಪಾಪೇನ ರಾವಣೇನ ದುರಾತ್ಮನಾ ।
ಪತ್ನೀ ತೇ ರಘುಶಾರ್ದೂಲ ತಸ್ಯಾ ಏವೌಜಸಾ ಮೃತಃ ॥ ೨೩ ॥

ಅಸಹಾಯೇನ ಚೈಕೇನ ತ್ವಯಾ ರಾಮ ರಣೇ ಹತಃ ।
ಯಾದೃಶಂ ತೇ ಕೃತಂ ಕರ್ಮ ತಸ್ಯ ಕರ್ತಾ ನ ವಿದ್ಯತೇ ॥ ೨೪ ॥

ಇಹ ಸಂಭಾಷಿತುಂ ಪ್ರಾಪ್ತಾ ದೃಷ್ಟ್ವಾ ಪೂತಾಶ್ಚ ಸಾಂಪ್ರತಂ ।
ದರ್ಶನಾತ್ತವ ರಾಜೇಂದ್ರ ಸರ್ವೇ ಜಾತಾಸ್ತಪಸ್ವಿನಃ ॥ ೨೫ ॥

ರಾವಣಸ್ಯ ವಧಾಚ್ಚತ್ರೋಃ ಕೃತಮಶ್ರುಪ್ರಮಾರ್ಜನಂ ।
ದತ್ತಾ ಚೇಯಂ ತ್ವಯಾ ವೀರ ಸರ್ವಸ್ಯಾಭಯದಕ್ಷಿಣಾ ॥ ೨೬ ॥

ದಿಷ್ಟ್ಯಾ ವರ್ಧಸಿ ಕಾಕುತ್ಸ್ಥ ಜಯೇನಾಮಿತವಿಕ್ರಮ ।
ದೃಷ್ಟಃ ಸಂಭಾಷಿತಶ್ಚಾಸಿ ಯಾಸ್ಯಾಮಶ್ಚಾಶ್ರಮಾನ್ ಸ್ವಕಾನ್ ॥ ೨೭ ॥

---

೨೩. ಕುಲಕ್ಕೆ ಕಳಂಕಪ್ರಾಯನಾದ ಪಾಪಿಯೂ ದುರಾತ್ಮನೂ ಆದ ರಾವಣನು ನಿನ್ನ ಹೆಂಡತಿಯನ್ನು ಕದ್ದುಕೊಂಡು ಹೋದನು. ಆದರೆ ಅವಳ ಶಕ್ತಿಯಿಂದಲೇ ಸತ್ತನು.

೨೪. ಮತ್ತೊಬ್ಬರ ಸಹಾಯವಿಲ್ಲದೆ ನೀನು ಅವನನ್ನು ಯುದ್ಧದಲ್ಲಿ ಕೊಂದೆ. ನೀನು ಮಾಡಿದ ಕೆಲಸಕ್ಕೆ ಸಮವಾದ ಕೆಲಸ ಮಾಡಿದವನು ಇಲ್ಲವೇ ಇಲ್ಲ.

೨೫. ನಿನ್ನೊಡನೆ ಮಾತನಾಡಲು ಬಂದೆವು. ನೋಡಿದೆವು, ಈಗ ಪವಿತ್ರರಾದೆವು. ನಿನ್ನ ದರ್ಶನವಾದಮೇಲೆ ನಾವೆಲ್ಲರೂ ತಪಸ್ವಿಗಳಾದೆವು.

೨೬. ಎಲೈ ವೀರನೇ ! ಶತ್ರುವಾದ ರಾವಣನ ವಧೆಯಿಂದ ಎಲ್ಲರ ಕಣ್ಣೀರನ್ನು ಒರಸಿದೆ. ಎಲ್ಲರಿಗೂ ಅಭಯವನ್ನುಂಟುಮಾಡಿದೆ.

೨೭. ಎಲೈ ಕಾಕುಸ್ಥರೇ ! ನೀನು ಜಯದಿಂದ ಏಳಿಗೆ ಹೊಂದುತ್ತಿದ್ದೀಯೆ. ನಿನ್ನನ್ನು ನೋಡಿದೆವು. ಮಾತನಾಡಿಸಿದೆವು. ಇನ್ನು ನಮ್ಮ ನಮ್ಮ ಆಶ್ರಮಗಳಿಗೆ ಹೋಗುತ್ತೇವೆ.

ಅರಣ್ಯೇ ತೇ ಪ್ರವಿಷ್ಟಸ್ಯ ಮಯಾ ಚೇಂದ್ರ ಶರಾಸನಂ ।
ಅರ್ಪಿತಂ ಚಾಕ್ಷಯೌ ತೂಣೌ ಕವಚಂ ಚ ಪರಂತಪ ।
ಭೂಯೋಽಸ್ಯಾಗಮನಂ ಕಾರ್ಯಮಾಶ್ರಮೇ ಮೇ ರಘೂದ್ವಹ ॥ ೨೮ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತ್ವಾ ತು ತೇ ಸರ್ವೇ ಮುನಯೋಽನ್ತರ್ಹಿತಾಸ್ತದಾ ।
ಗತೇಷು ಮುನಿಮುಖ್ಯೇಷು ರಾಮೋ ಧರ್ಮಭೃತಾಂ ವರಃ ॥ ೨೯ ॥

ಚಿಂತಯಾಮಾಸ ತತ್ಕಾರ್ಯಂ ಕಿಂ ತು ಮೇ ಮುನಿನಾ ಸ್ತುತಂ ।
ಭೂಯೋಽಸ್ಯಾಗಮನಂ ಕಾರ್ಯಮಾಶ್ರಮೇ ರಘುನಂದನ ॥ ೩೦ ॥

ಅವಶ್ಯಮೇವ ಗಂತವ್ಯಂ ಮಯಾಗಸ್ತ್ಯಸ್ಯ ಸಂನಿಧೌ ।
ಶ್ರೋತವ್ಯಂ ದೇವಗುಹ್ಯಂ ತು ಕಾರ್ಯಮನ್ಯಚ್ಚ ಯದ್ವದೇತ್ ॥ ೩೧ ।

ಏವಂ ಚಿಂತಯತಸ್ತಸ್ಯ ರಾಮಸ್ಯಾಮಿತತೇಜಸಃ ।
ಕರಿಷ್ಯೇ ನಿಯಮಂ ಧರ್ಮಂ ಧರ್ಮೋ ಹಿ ಪರಮಾ ಗತಿಃ ॥ ೩೨ ॥

---

೨೮. ನೀನು ಆರಣ್ಯಕ್ಕೆ ಬಂದ ಒಡನೆಯೇ ನಾನು ಇಂದ್ರ ಧನುಸ್ಸನ್ನೂ. ಅಕ್ಷಯ ಬಾಣಗಳ ಬತ್ತಳಿಕೆಯನ್ನೂ ಕವಚವನ್ನೂ ಕೊಟ್ಟೆನು. ಮತ್ತೆ ನೀನು ನನ್ನ ಆಶ್ರಮಕ್ಕೆ ಬರಬೇಕು.

೨೯-೩೦. ಪುಲಸ್ತ್ಯನು ಹೇಳಿದನು– ಆ ಋಷಿಗಳೆಲ್ಲರೂ ಇಂತೆಂದು ಹೇಳ ಹೊರಟುಹೋದರು. ಅವರು ಹೋದ ಮೇಲೆ ಧರ್ಮವಂತನಾದ ರಾಮನು ಆ ಋಷಿಗಳು ನನ್ನನ್ನು ಸ್ತೋತ್ರಮಾಡಿ ಮತ್ತೆ ಆಶ್ರಮಕ್ಕೆ ಬರಬೇಕೆಂದು ಹೋದರಲ್ಲಾ ! ಅದು ಏನಿರಬಹುದೆಂದು ಚಿಂತಿಸಿದನು.

೩೧. ನಾನು ಅವಶ್ಯಕವಾಗಿಯೂ ಅಗಸ್ತ್ಯನ ಬಳಿಗೆ ಹೋಗಬೇಕು. ದೇವತೆಗಳ ಗುಟ್ಟನ್ನು ತಿಳಿಯುವುದಲ್ಲದೆ ಆತನು ಮತ್ತೆ ಏನನ್ನು ಹೇಳಿದರೂ ಕೇಳಬೇಕು.

೩೨. ಈ ರೀತಿ ಯೋಚಿಸಿ ಧರ್ಮಗಳನ್ನು ಮಾಡುತ್ತೇನೆ. ಧರ್ಮವೇ ಪರಮಗತಿಯು. ಎಂದು ತಿಳದನು.

ಸ ತು ವರ್ಷ ಸಹಸ್ರಾಣಿ ದಶ ರಾಜ್ಯಮಕಾರಯತ್ ।
ದದತೋ ಜುಹ್ವತಶ್ಚೈವ ಜಗ್ಮುಸ್ತಾನ್ಯೇಕವರ್ಷವತ್ ॥ ೩೩ ॥

ಪ್ರಜಾಃ ಪಾಲಯತಸ್ತಸ್ಯ ರಾಘವಸ್ಯ ಮಹಾತ್ಮನಃ ।
ಏಕಸ್ಮಿನ್ನೇವ ದಿವಸೇ ವೃದ್ಧೋ ಜಾನಪದೋ ದ್ವಿಜಃ ॥ ೩೪ ॥

ಮೃತಂ ಪುತ್ರಮುಪಾದಾಯ ರಾಜದ್ವಾರಮುಪಾಗತಃ ।
ಉವಾಚ ವಿವಿಧಾ ವಾಚಃ ಸ್ನೇಹಾಕ್ಷರಸಮನ್ವಿತಾಃ ॥ ೩೫ ॥

॥ ಬ್ರಾಹ್ಮಣ ಉವಾಚ ॥

ದುಷ್ಕೃತಂ ಕಿಂ ತು ಮೇ ಪುತ್ರ ಪೂರ್ವದೇಹಾಂತರೇ ಕೃತಂ ।
ತ್ವಾಮೇಕಪುತ್ರಂ ಯದಹಂ ಪಶ್ಯಾಮಿ ನಿಧನಂ ಗತಂ ॥ ೩೬ ॥

ಅಪ್ರಾಪ್ತಯೌವನಂ ಬಾಲಂ ಪಂಚವರ್ಷಂ ಗತಾಯುಷಂ ।
ಅಕಾಲೇ ಕಾಲಮಾಪನ್ನಂ ದುಃಖಾಯ ಮಮ ಪುತ್ರಕ ॥ ೩೭ ॥

---

೩೩. ಆ ರಾಮನು ಹತ್ತುಸಾವಿರವರ್ಷಗಳವರೆಗೂ ರಾಜ್ಯಭಾರವನ್ನು ಮಾಡಿದನು. ದಾನಮಾಡುತ್ತ ಹೋಮಮಾಡುತ್ತ ಇರುವ ಆತನಿಗೆ ಆ ಹತ್ತುಸಾವಿರವರ್ಷಗಳೂ ಒಂದೇ ವರ್ಷದಂತೆ ಕಳೆದುವು.

೩೪-೩೫. ಮಹಾತ್ಮನಾದ ರಾಮನು ಹೀಗೆ ಪ್ರಜೆಗಳನ್ನು ಕಾಪಾಡುತ್ತ ದಾನಧರ್ಮ ಮಾಡುತ್ತಿರಲು ಒಂದು ದಿನ ಒಬ್ಬ ಆ ದೇಶದ ಮುದುಕನು ಸತ್ತುಹೋಗಿರುವ ಮಗನ ಶವವನ್ನು ತೆಗೆದುಕೊಂಡು ಅರಮನೆಯ ಬಾಗಿಲಿಗೆ ಬಂದು ಅಳುವಿನಿಂದ ಇಂತೆಂದನು.

೩೬-೩೭ ಬ್ರಾಹ್ಮಣನು ಹೇಳಿದನು–ಎಲೈ ಮಗನೆ! ನಾನು ಪೂರ್ವಜನ್ಮದಲ್ಲಿ ಯಾವ ಪಾಪವನ್ನು ಮಾಡಿದ್ದೆನು ? ನೀನು ನನಗೆ ಒಬ್ಬನೇ ಮಗನು. ಅಂತಹ ಒಬ್ಬ ಮಗನು ಸತ್ತುಹೋದುದನ್ನು ನೋಡಬೇಕಾಗಿದೆಯಲ್ಲ ? ನಿನಗಿನ್ನೂ ಯೌವನ ಬರಲಿಲ್ಲ. ಐದುವರ್ಷದವನು. ಕಾಲವಲ್ಲದ ಕಾಲದಲ್ಲಿ ಸತ್ತುಹೋಗಿ ನನಗೆ ಬಹು ದುಃಖವನ್ನುಂಟುಮಾಡಿದೆ.

ಅಕೃತ್ವಾ ಪಿತೃಕಾರ್ಯಾಣಿ ಗತೋ ವೈವಸ್ವತಕ್ಷಯಂ ।
ರಾಮಸ್ಯ ದುಷ್ಕೃತಂ ವ್ಯಕ್ತಂ ಯೇನ ತೇ ಮೃತ್ಯುರಾಗತಃ ॥ ೩೮ ॥

ಬಾಲವಧ್ಯಾ ಬ್ರಹ್ಮವಧ್ಯಾ ಸ್ತ್ರೀವಧ್ಯಾ ಚೈವ ರಾಘವ ।
ಪ್ರವೇಕ್ಷ್ಯತಿ ನ ಸಂದೇಹಃ ಸಭಾರ್ಯೇ ತು ಮೃತೇ ಮಯಿ ॥ ೩೯ ॥

॥ ಪುಲಸ್ತ್ಯ ಉವಾಚ ॥

ಶುಶ್ರಾವ ರಾಘವಃ ಸರ್ವಂ ದುಃಖಶೋಕಸಮನ್ವಿತಂ ।
ನಿವಾರ್ಯ ತಂ ದ್ವಿಜಂ ರಾಮೋ ವಸಿಷ್ಠಂ ವಾಕ್ಯಮಬ್ರವೀತ್ ॥ ೪೦ ॥

॥ ಶ್ರೀರಾಮ ಉವಾಚ ॥

ಕಿಂ ಮಯಾದ್ಯ ಚ ಕರ್ತವ್ಯಂ ಕಾರ್ಯಮೇವಂ ವಿಧೇಸ್ಥಿತೇ ।
ಕಿಂ ಪ್ರಾಣಾನ್ವಾ ಜುಹೋಮ್ಯಗ್ನೌ ಪರ್ವತಾದ್ವಾ ಪತೇ ಮಹೀಂ ।
ಕಥಂ ಶುದ್ಧಿಮಹಂ ಯಾಮಿ ಶ್ರುತ್ವಾ ಬ್ರಾಹ್ಮಣಭಾಷಿತಂ ॥ ೪೧ ॥

---

೩೮. ಪಿತೃಕಾರ್ಯಗಳನ್ನು ಮಾಡದೆ ಯಮಲೋಕವನ್ನು ಸೇರಿದೆಯಲ್ಲ. ನಿನಗೆ ಮೃತ್ಯುವು ಬಂದುದರಿಂದ ರಾಮನು ಪಾಪಮಾಡಿದ್ದಾನೆಂದು ಇದರಿಂದ ವ್ಯಕ್ತವಾಯಿತು.

೩೯. ಈ ದುಃಖವನ್ನು ತಡೆಯಲಾರದೆ ಮುದುಕನಾದ ನಾನೂ ನನ್ನ ಹೆಂಡತಿಯೂ ಪ್ರಾಣಬಿಡುವೆವು. ಆಗ ಬಾಲವಧ್ಯೆ, ಸ್ತ್ರೀವಧ್ಯೆ, ಬ್ರಹ್ಮವಧ್ಯೆ ಮೂರೂ ಕೂಡ ಎಲೈ ರಾಮನೆ ! ನಿನ್ನನ್ನು ಸೇರುವುದು ಖಂಡಿತ.

೪೦. ಪುಲಸ್ತ್ಯನು ಹೇಳಿದನು- ರಾಮನು ಈ ದುಃಖದಿಂದ ಅಳುತ್ತಿದ್ದ ಪೆಲ್ಲವನ್ನೂ ಕೇಳಿ ಅವನನ್ನು ಸಮಾಧಾನಪಡಿಸಿದನು. ಮತ್ತು ವಸಿಷ್ಠನನ್ನು ಕುರಿತು ಇಂತೆಂದನು.

೪೧. ಶ್ರೀರಾಮನು ಹೇಳಿದನು- ನಾನು ಈಗೇನು ಮಾಡಲಿ ? ಈ ರೀತಿಯಾದ ಸಮಯದಲ್ಲಿ ನಾನು ಬೆಂಕಿಯಲ್ಲಿ ಬಿದ್ದು ಪ್ರಾಣಗಳನ್ನು ಬಿಡಲಿ ? ನಾನು ಈ ಬ್ರಾಹ್ಮಣನ ಮಾತನ್ನು ಕೇಳಿ ಹೇಗೆ ಶುದ್ಧಿಯನ್ನು ಹೊಂದಲಿ.

॥ ಪುಲಸ್ತ್ಯ ಉವಾಚ ॥

ವಸಿಷ್ಠಸ್ಯಾಗ್ರತಃ ಸ್ಥಿತ್ವಾ ರಾಜ್ಞೋ ದೀನಸ್ಯ ನಾರದಃ ।
ಪ್ರತ್ಯುವಾಚ ಮುನಿರ್ವಾಕ್ಯಮೃಷೀಣಾಂ ಸಂನಿಧೌ ತದಾ ॥ ೪೨ ॥

॥ ನಾರದ ಉವಾಚ ॥

ಶೃಣು ರಾಮ ಯಥಾಕಾಲಂ ಪ್ರಾಪ್ತಂ ವೈ ಕಾಲಸಂಕ್ಷಯಂ ।
ಪುರಾ ಕೃತಯುಗೇ ರಾಮ ಸರ್ವತೋ ಬ್ರಾಹ್ಮಣೋತ್ತರಂ ॥ ೪೩ ॥

ಅಬ್ರಾಹ್ಮಣೋ ನ ವೈ ಕಶ್ಚಿತ್ತಪಸ್ವೀ ಚೈವ ರಾಘವ ।
ಅಮೃತವಸ್ತದಾ ಸರ್ವೇ ಜಾಯಂತೇ ಚಿರಜೀವಿನಃ ॥ ೪೪ ॥

ತ್ರೇತಾಯುಗೇ ಪುನಃ ಪ್ರಾಪ್ತೇ ಬ್ರಹ್ಮಕ್ಷತ್ರಮನುತ್ತಮಂ ।
ಅಧರ್ಮೋ ದ್ವಾಪರೇ ತೇಷಾಂ ವೈಶ್ಯಾನ್ ಶೂದ್ರಾಂಸ್ತಥಾವಿಶತ್ ॥ ೪೫ ॥

ಏವಂ ನಿರಂತರಂ ಜುಷ್ಟಮುದ್ಭೂತಮನೃತಂ ಪುನಃ ।
ಅಧರ್ಮಸ್ಯ ತ್ರಯಃ ಪಾದಾ ಏಕೋ ಧರ್ಮಸ್ಯ ಚಾಗತಃ ॥ ೪೬ ॥

---

೪೨. ಪುಲಸ್ತ್ಯನು ಹೇಳಿದನು– ಆಗ ನಾರದನು ವಸಿಷ್ಠರ ಎದುರಿಗೆ ನಿಂತು ಋಷಿಗಳೆದುರಿಗೆ ರಾಮನನ್ನು ಕುರಿತಿಂತೆಂದನು.

೪೩-೪೪. ನಾರದನು ಹೇಳಿದನು– ರಾಮನೆ! ಕೇಳು, ಕಾಲವು ಕಳೆಯುತ್ತ ಬಂದಿರುವುದು. ಕೃತಯುಗದಲ್ಲಿ ಬ್ರಾಹ್ಮಣರೇ ಮೇಲಿನವರಾಗಿದ್ದರು. ಬ್ರಾಹ್ಮಣನಲ್ಲದವನೊಬ್ಬನೂ ತಪಸ್ವಿಯಾಗಿರಲಿಲ್ಲ. ಆದ್ದರಿಂದ ಆಗ ಎಲ್ಲರೂ ಮರಣವನ್ನು ಹೊಂದದೆ ಚಿರಜೀವಿಗಳಾಗುತ್ತಿದ್ದರು.

೪೫. ತ್ರೇತಾಯುಗದಲ್ಲಿ ಬ್ರಾಹ್ಮಣರು, ಕ್ಷತ್ರಿಯರು ಉತ್ತಮರಾಗಿ ತಪಸ್ಸು ಮಾಡುತ್ತಿದ್ದರು. ಮಿಕ್ಕವರಿಗೆ ನಿಷೇಧವಿದ್ದಿತು. ದ್ವಾಪರದಲ್ಲಿ ಅಧರ್ಮವು ವೈಶ್ಯ ಶೂದ್ರರನ್ನು ಹೊಂದಿತು.

೪೬. ಹೀಗೆ ಅವರು ಯಾವಾಗಲೂ ಇರುತ್ತಿರಲು ಅನೃತವು ಆಗ ಹುಟ್ಟಿತು. ಧರ್ಮಕ್ಕೆ ಇದ್ದ ನಾಲ್ಕು ಕಾಲುಗಳಲ್ಲಿ ಒಂದು ಹೋಗಿ, ಅಧರ್ಮದ ನಾಲ್ಕು-ಕಾಲುಗಳಲ್ಲಿ ಒಂದು ಬಂದು ಧರ್ಮಕ್ಕೆ ಸೇರಿಕೊಂಡಿತು. ಅಧರ್ಮವು ಮೂರು ಕಾಲುಗಳನ್ನು ಹೊಂದಿತು.

ತತಃ ಸರ್ವೇ ಭೃಶಂ ತ್ರಸ್ತಾ ವರ್ಣಾ ಬ್ರಾಹ್ಮಣ ಪೂರ್ವಕಾಃ ।
ಭೂಯಃ ಪಾದಸ್ತ್ವಧರ್ಮಸ್ಯ ದ್ವಿತೀಯಃ ಸಮುಪದ್ಯತ ॥ ೪೭ ॥

ತಸ್ಮಿನ್ ದ್ವಾಪರಸಂಜ್ಞೇ ತು ವರ್ತಮಾನೇ ಯುಗಕ್ಷಯೇ ।
ಅಧರ್ಮಶ್ಚಾನೃತಂ ಚೈವ ವವೃಧಾತೇ ನರರ್ಷಭ ॥ ೪೮ ॥

ತಸ್ಮಿಂದ್ವಾಪರಸಂಜ್ಞೇ ತು ತಪೋ ವೈಶ್ಯಂ ಸಮಾವಿಶತ್ ।
ಯುಗತ್ರಯಸ್ಯ ವೈಧರ್ಮ್ಯಂ ಧರ್ಮಸ್ಯ ಪ್ರತಿಪಿಷ್ಯತಿ ॥ ೪೯ ॥

ನ ಶೂದ್ರೋ ಲಭತೇ ಕರ್ತುಂ ತಪ ಉಗ್ರಂ ನರರ್ಷಭ ।
ಭವಿತಾ ಶೂದ್ರಯೋನ್ಯಾಂ ತು ತಪಶ್ಚರ್ಯಾ ಕಲೌ ಯುಗೇ ॥ ೫೦ ॥

ಸ ತೇ ವಿಷಯ ಪರ್ಯಂತೇ ರಾಜಾನ್ನುಗ್ರತರಂ ತಪಃ ।
ಶೂದ್ರಸ್ತಪತಿ ದುರ್ಬುದ್ಧಿಸ್ತೇನ ಬಾಲವಧಃ ಕೃತಃ ॥ ೫೧ ॥

ಯೋ ಹ್ಯಧರ್ಮಮಕಾರ್ಯಂ ವಾ ವಿಷಯೇ ಪಾರ್ಥಿವಸ್ಯ ಹಿ ।
ಕುರುತೇ ರಾಜಶಾರ್ದೂಲ ಪುರೇ ವಾ ದುರ್ಮತಿರ್ನರಃ ॥ ೫೨ ॥

---

೪೭. ಆಗ ಬ್ರಾಹ್ಮಣ ಪೂರ್ವಕವಾದ ವರ್ಣಗಳು ಬಹುವಾಗಿ ಹೆದರಿದುವು. ಏಕೆಂದರೆ ಅಧರ್ಮಕ್ಕಿದ್ದ ಒಂದು ಕಾಲಿನ ಜೊತೆಗೆ ಮತ್ತೊಂದು ಕಾಲು ಬರುವು ದೆಂದು ಹೆದರಿದರು.

೪೮-೪೯. ದ್ವಾಪರಯುಗದಲ್ಲಿ ತಪಸ್ಸು ವೈಶ್ಯನನ್ನು ಸೇರಿತು. ಆಗ ಮೂರು ಯುಗಗಳ ಧರ್ಮದ ವ್ಯತ್ಯಾಸವೂ ಕಂಡು ಬಂದಿತು.

೫೦. ಆದ್ದರಿಂದ ಈ ಯುಗದಲ್ಲಿ ಶೂದ್ರನು ಉಗ್ರವಾದ ತಪಸ್ಸನ್ನು ಮಾಡಲು ಅಧಿಕಾರವಿಲ್ಲ. ಶೂದ್ರನು ಕಲಿಯುಗದಲ್ಲಿ ಮಾತ್ರ ತಪಸ್ಸು ಮಾಡಬಹುದು.

೫೧. ಅಂತಹ ಶೂದ್ರನು ನಿನ್ನ ದೇಶದಲ್ಲಿ ಉಗ್ರವಾದ ತಪಸ್ಸನ್ನು ಮಾಡುತ್ತಿ ರುವನು. ಆದ್ದರಿಂದ ಈ ಬಾಲಕನು ಸತ್ತಿರುವನು.

೫೨-೫೩. ಯಾವ ರಾಜನ ದೇಶದಲ್ಲಿ ಯಾವನು ಅಕಾರ್ಯವನ್ನಾಗಲಿ ಅಧ ರ್ಮವನ್ನಾಗಲಿ ಮಾಡುವನೋ ಆ ಮನುಷ್ಯನು ನರಕವನ್ನು ಚರಾಚರಗಳಿರುವವ

ಕ್ಷಿಪ್ರಂ ಸ ನರಕಂ ಯಾತಿ ಯಾವದ್ಧಾಭೂತಸಂಪ್ಲವಂ ।
ಚತುರ್ಥಂ ತಸ್ಯ ಪಾಪಸ್ಯ ಭಾಗಮಶ್ನಾತಿ ಪಾರ್ಥಿವಃ ॥ ೫೩ ॥

ಸ ತ್ವಂ ಪುರುಷಶಾರ್ದೂಲ ಗಚ್ಛಸ್ವ ವಿಷಯಂ ಸ್ವಕಂ ।
ದುಷ್ಕೃತಂ ಯತ್ರ ಪಶ್ಯೇಥಾಸ್ತತ್ರ ಯತ್ನಂ ಸಮಾಚರ ॥ ೫೪ ॥

ಏವಂ ತೇ ಧರ್ಮವೃದ್ಧಿಶ್ಚ ಬಲಾಯುರ್ವರ್ಧನಂ ತಥಾ ।
ಭವಿಷ್ಯತಿ ನರಶ್ರೇಷ್ಠ ಬಾಲಸ್ಯಾಸ್ಯ ಚ ಜೀವನಂ ॥ ೫೫ ॥

॥ ಪುಲಸ್ತ್ಯ ಉವಾಚ ॥

ನಾರದೇನೈವ ಮುಕ್ತೇ ತು ಸಾಶ್ಚರ್ಯೋ ರಘುನಂದನಃ ।
ಪ್ರಹರ್ಷಮತುಲಂ ಲೇಭೇ ಲಕ್ಷ್ಮಣಂ ಚೇದಮಬ್ರವೀತ್ ॥ ೫೬ ॥

॥ ಶ್ರೀರಾಮ ಉವಾಚ ॥

ಗಚ್ಛ ಸೌಮ್ಯ ದ್ವಿಜಶ್ರೇಷ್ಠಂ ಸಮಾಶ್ವಾಸಯ ಲಕ್ಷ್ಮಣ ।
ಬಾಲಸ್ಯ ಚ ಶರೀರಂ ತ್ವಂ ತೈಲದ್ರೋಣ್ಯಾಂ ನಿಧಾಪಯ ॥ ೫೭ ॥

---

ರೆಗೂ ಹೊಂದುವನು. ಮತ್ತು ಆ ದೇಶದ ರಾಜನಿಗೆ ಅವನು ತನ್ನ ಪಾಪದಲ್ಲಿ ನಾಲ್ಕನೆಯ ಒಂದಂಶವನ್ನು ಕೊಡುವನು

೫೪. ಆದ್ದರಿಂದ ಎಲೈ ಪುರುಷಶ್ರೇಷ್ಠನೇ! ನಿನ್ನ ದೇಶದಲ್ಲಿ ಹೋಗಿ ನೋಡು. ಅಲ್ಲಿ ಎಲ್ಲಿಯೋ ಪಾಪ ಕೆಲಸವು ಕಂಡು ಬರುವುದು. ಅವಕ್ಕೆ ಯತ್ನ ವನ್ನು ಮಾಡು.

೫೫. ಹೀಗೆ ನೋಡಿ ಸರಿಮಾಡಿದರೆ ನಿನಗೆ ಧರ್ಮವು ಹೆಚ್ಚುತ್ತದೆ. ಬಲವು ಹೆಚ್ಚುತ್ತದೆ. ಈ ಹುಡುಗನೂ ಬದುಕುತ್ತಾನೆ.

೫೬. ಪುಲಸ್ತ್ಯನು ಹೇಳಿದನು- ನಾರದನು ಹೀಗೆ ಹೇಳಲು ರಾಮನು ಆಶ್ಚರ್ಯವಟ್ಟು ಸಂತೋಷಗೊಂಡು ಲಕ್ಷ್ಮಣನನ್ನು ಕುರಿತು ಇಂತೆಂದನು.

೫೭. ಶ್ರೀರಾಮನು ಹೇಳಿದನು- ಎಲೈ ಲಕ್ಷ್ಮಣನೇ! ಹೋಗು ಆ ಬ್ರಾಹ್ಮಣನನ್ನು ಸಮಾಧಾನಪಡಿಸು. ಆ ಮಗುವಿನ ಶರೀರವನ್ನು ಎಣ್ಣೆಯ ದೋಣಿಯಲ್ಲಿರಿಸಿಸು.

ಗಂಧೈಶ್ಚ ಪರಮೋದಾರೈಸ್ತೈಲೈಶ್ಚ ಸೂಸುಗಂಧಿಭಿಃ ।
ಯಥಾ ನ ಶೀರ್ಯತೇ ಬಾಲಸ್ತಥಾ ಸೌಮ್ಯ ವಿಧೀಯತಾಂ ॥ ೫೮ ॥

ಯಥಾ ಶರೀರಂ ಗುಪ್ತಂ ಸ್ಯಾದ್ಬಾಲಸ್ಯಾದುಷ್ಟಕರ್ಮಣಃ ।
ವಿಪತ್ತಿಃ ಪರಿಭೇದೋ ವಾ ನ ಭವೇತ್ತತ್ತಥಾ ಕುರು ॥ ೫೯ ॥

॥ ಪುಲಸ್ತ್ಯ ಉವಾಚ ॥

ತಥಾ ಸಂದಿಸಶ್ಯ ಸೌಮಿತ್ರಿಂ ಲಕ್ಷ್ಮಣಂ ಶುಭಲಕ್ಷಣಂ ।
ಮನಸಾ ಪುಷ್ಪಕಂ ದಧ್ಯೌ ತ್ವಮಾಗಚ್ಛೇರ್ಮಹಾಶಯಶಃ ॥ ೬೦ ॥

ಇಂಗಿತಂ ತತ್ತು ವಿಜ್ಞಾಯ ಕಾಮಗಂ ಹೇಮಭೂಷಿತಂ ।
ಆಜಗಾಮ ಮುಹೂರ್ತೇನ ಸಮೀಪಂ ರಾಘವಸ್ಯ ತು ॥ ೬೧ ॥

ಸೋಽಬ್ರವೀತ್ಪ್ರಾಂಜಲಿರ್ವಾಕ್ಯಮಯಸ್ಮಿ ನರಾಧಿಪ ।
ವಶೇ ತವ ಮಹಾಬಾಹೋ ಕಿಂಕರಃ ಸಮುಪಸ್ಥಿತಃ ॥ ೬೨ ॥

---

೫೮. ಗಂಧದಿಂದಲೂ ಸುಗಂಧ ದ್ರವ್ಯದಿಂದಲೂ ಕೂಡಿರುವ ತೈಲಗಳಿಂದಲೂ ಬಚ್ಚಿಟ್ಟು ಆ ಹುಡುಗನ ಶರೀರವು ನಾಶವಾಗದಂತೆ ಮಾಡು.

೫೯. ಈ ಯೋಗ್ಯನಾದ ಬಾಲಕನ ಶರೀರವು ಗುಟ್ಟಾಗಿರುವಂತೆಯೂ ಅದಕ್ಕೆ ವಿಪತ್ತು ಸಂಭವಿಸದಂತೆಯೂ, ಇತರರಿಂದ ತೊಂದರೆ ಬಾರದಂತೆಯೂ ಮಾಡು.

೬೦. ಪುಲಸ್ತ್ಯನು ಹೇಳಿದನು-- ಲಕ್ಷ್ಮಣನಿಗೆ ಅಪ್ಪಣೆಮಾಡಿ ಮನಸ್ಸಿನಲ್ಲಿಯೇ ಪುಷ್ಪಕವನ್ನು ಬಾ, ಎಂದು ಧ್ಯಾನಿಸಿದನು.

೬೧. ಆ ರಾಮನ ಅಭಿಪ್ರಾಯವನ್ನು ತಿಳಿದು ಇಷ್ಟಬಂದಂತೆ ಹೋಗುವ ಚಿನ್ನದಿಂದ ಅಲಂಕೃತವಾದ ಆ ವಿಮಾನವು ಕ್ಷಣಕಾಲದಲ್ಲಿಯೇ ರಾಮನ ಬಳಿಗೆ ಬಂದಿತು.

೬೨. ಆ ಪುಷ್ಪಕವು ವಿನಯದಿಂದ ಎಲೈ ಧೊರೆಯೇ,! ಇಗೋ ಬಂದಿರುವೆನು. ನಿನ್ನ ಅಧೀನದಲ್ಲಿರುವ ಆಳಾದ ನಾನು ಬಂದಿದ್ದೇನೆ, ಎಂದಿತು.

ಭಾಷಿತಂ ಸುಚಿರಂ ಶ್ರುತ್ವಾ ಪುಷ್ಪಕಸ್ಯ ನರಾಧಿಪಃ ।
ಅಭಿವಾದ್ಯ ಮಹರ್ಷಿಂ ತಂ ವಿಮಾನಂ ಸೋಽಧ್ಯರೋಹತ ॥ ೬೩ ॥

ಧನುರ್ಗೃಹೀತ್ವಾ ತೂಣೌ ಚ ಖಡ್ಗಂ ಚಾಪಿ ಮಹಾಪ್ರಭಂ ।
ನಿಕ್ಷಿಪ್ಯ ನಗರೇ ವೀರೌ ಸೌಮಿತ್ರಿಭರತಾವುಭೌ ॥ ೬೪ ॥

ಯಯೌ ಪ್ರತೀಚೀಂ ತ್ವರಿತೋ ವಿಚಿನ್ವನ್ ಸುಸಮಾಹಿತಃ ।
ಉತ್ತರಾಮಗಮಚ್ಚಾಪಿ ದಿಶಂ ಹಿಮವದಾಶ್ರಿತಾಂ ॥ ೬೫ ॥

ಪೂರ್ವಾಮಪಿ ದಿಶಂ ಗತ್ವಾ ಅಥಾಪಶ್ಯನ್ನರಾಧಿಪ ।
ಸರ್ವಾನ್ ಶುದ್ಧಸಮಾಚಾರಾನಾದರ್ಶಮಿವ ನಿರ್ಮಲಾನ್ ॥ ೬೬ ॥

ತತೋ ದಿಶಂ ಸಮಾಕ್ರಾಮದ್ದಕ್ಷಿಣಾಂ ರಘುನಂದನಃ ।
ಶೈಲಸ್ಯ ದಕ್ಷಿಣೇ ಪಾರ್ಶ್ವೇ ದದರ್ಶ ಸುಮಹತ್ಸರಃ ॥ ೬೭ ॥

ತಸ್ಮಿನ್ಸರಸಿ ತಪ್ಯಂತಂ ತಾಪಸಂ ಸುಮಹತ್ತಪಃ ।
ದದರ್ಶ ರಾಘವೋ ಭೀಮಂಲಂಬಮಾನಮಧೋಮುಖಂ ॥ ೬೮ ॥

---

೬೩. ಆ ರಾಮನು ಆ ಪುಷ್ಪಕದ ಮಾತನ್ನು ಕೇಳಿ ಬಹು ಹೊತ್ತು ಆಲೋಚಿಸಿ, ಆ ಋಷಿಯನ್ನು ನಮಸ್ಕರಿಸಿ ವಿಮಾನವನ್ನು ಹತ್ತಿದನು.

೬೪. ಆಗ ರಾಮನು ಧನಸ್ಸು, ಬತ್ತಳಿಕೆಗಳು, ಕಾಂತಿಯುಳ್ಳ ಕತ್ತಿ, ಇವುಗಳನ್ನು ತೆಗೆದುಕೊಂಡು ಲಕ್ಷ್ಮಣ, ಭರತರನ್ನು ರಾಷ್ಟ್ರದಲ್ಲಿ ರಕ್ಷಕರನ್ನಾಗಿ ಇಟ್ಟನು.

೬೫. ಆಗ ರಾಮನು ಅವನನ್ನು ಹುಡುಕುತ್ತಾ ಪಶ್ಚಿಮಕ್ಕೆ ಹೊರಟು ಅನಂತರ ಉತ್ತರಕ್ಕೆ ಹೊರಟು ಹಿಮವಂತನಕಡೆ ಹೋದನು.

೬೬. ಅಲ್ಲಿ ಪೂರ್ವಕ್ಕೆ ತಿರುಗಿ ಅಲ್ಲಿ ಶುದ್ಧವಾದ ಆಚಾರವುಳ್ಳ ನಿರ್ಮಲವಾದ ಋಷಿಗಳನ್ನು ನೋಡಿದನು.

೬೭. ಅನಂತರ ಶ್ರೀರಾಮನು ಹಿಮವತ್ಪರ್ವತದ ದಕ್ಷಿಣಕ್ಕೆ ಹೋದನು. ಅಲ್ಲಿ ಒಂದು ಸರೋವರವನ್ನು ಕಂಡನು.

೬೮. ಆ ಸರೋವರದ ಸಮೀಪದಲ್ಲಿ ತಲೆಕೆಳಗುಮಾಡಿ ನಿಂತು ತಪಸ್ಸು ಮಾಡುತ್ತಿರುವ ಒಬ್ಬ ತಾಪಸನನ್ನು ನೋಡಿದನು.

ತಮುಪಾಗಮ್ಯ ಕಾಕುತ್‌ಸ್ಥಸ್ತಸ್ಯಮಾನಂ ತು ತಾಪಸಂ ।
ಉವಾಚ ರಾಘವೋ ವಾಕ್ಯಂ ಧನ್ಯಸ್ತ್ವಮಮರಪ್ರಭ ॥ ೬೯ ॥

ಕಸ್ಯಾಂ ಯೋನೌ ತಪೋವೃದ್ಧಿರ್ವರ್ತತೇ ದೃಢನಿಶ್ಚಯ ।
ಅಹಂ ದಾಶರಥೀ ರಾಮಃ ಪೃಚ್ಛಾಮಿ ತ್ವಾಂ ಕುತೂಹಲಾತ್ ॥ ೭೦ ॥

ಕೋಽರ್ಥೋ ವ್ಯವಸಿತಸ್ತುಭ್ಯಂ ಸ್ವರ್ಗಲೋಕಪರಿಗ್ರಹೇ ।
ಕಿಮರ್ಥಂ ತಪ್ಯಸೇ ವಾ ತ್ವಂ ಶ್ರೋತುಮಿಚ್ಛಾಮಿ ತಾಪಸ ॥ ೭೧ ॥

ಬ್ರಾಹ್ಮಣೋ ವಾಸಿ ಭದ್ರಂ ತೇ ಕ್ಷತ್ರಿಯೋ ವಾಥ ದುರ್ಜಯಃ ।
ವೈಶ್ಯಸ್ತೃತೀಯವರ್ಣೋ ವಾ ಶೂದ್ರೋ ವಾ ಸತ್ಯಮುಚ್ಯತಾಂ ॥ ೭೨ ॥

ತಪಃ ಸತ್ಯಾತ್ಮಕಂ ನಿತ್ಯಂ ಸ್ವರ್ಗಲೋಕಪರಿಗ್ರಹೇ ।
ಸಾತ್ವಿಕಂ ರಾಜಸಂ ಚೈವ ತಚ್ಚ ಶಕ್ತ್ಯಾತ್ಮಕಂ ತಪಃ ॥ ೭೩ ॥

---

೬೯-೭೦. ರಾಮನು, ತಪಸ್ಸು ಮಾಡುತ್ತಿರುವ ಆ ತಾಪಸನ ಬಳಿಗೆ ಹೋಗಿ ಇತೆಂದನು. ಎಲೈ ಅಮರರಂತಿರುವ ತಾಪಸನೆ! ನೀನು ಧನ್ಯನು, ಎಲ್ಲಾ ವಿಷಯವನ್ನು ಚೆನ್ನಾಗಿ ಪರಿಶೀಲಿಸಿರುವ ತಾಪಸನೆ! ತಪಸ್ಸನ್ನು ಯಾವ ಜಾತಿಯ.ವರು ಮಾಡಿದರೆ ವೃದ್ಧಿಯಾಗುತ್ತದೆ? ತಿಳಿದಿದ್ದೀಯಾ? ನಾನು ದಶರಥನ ಮಗನಾದ ರಾಮನು. ತಿಳಿದುಕೊಳ್ಳಬೇಕೆಂಬ ಆಸೆಯಿಂದ ಕೇಳುತ್ತಿದ್ದೇನೆ.

೭೧. ಸ್ವರ್ಗಲೋಕದನ್ನು ಹೊಂದುವುದಕ್ಕೆ ಯಾವ ರೀತಿಯ ದಾರಿಯನ್ನು ಹಿಡಿದಿದ್ದೀಯೆ? ನೀನು ಏತಕ್ಕೆ ತಪಸ್ಸು ಮಾಡುತ್ತಿದ್ದೀಯೆ? ನನಗೆ ಕೇಳಬೇಕೆಂದೆನಿಸುತ್ತದೆ.

೭೨. ನೀನು ಬ್ರಾಹ್ಮಣನಾದರೆ ನಿನಗೆ ಮಂಗಳವಾಗಲಿ. ಅಥವಾ ಬಾಹುಬಲದಿಂದ ಶೋಭಿಸುವ ಕ್ಷತ್ರಿಯನೋ? ಇಲ್ಲವೇ ಮೂರನೆಯ ವರ್ಣವಾದ ವೈಶ್ಯನೋ? ಇವು ಒಂದೂ ಅಲ್ಲದ ಶೂದ್ರನೋ? ನಿಶ್ಚಯವಾದ ವಿಷಯವನ್ನು ಹೇಳು.

೭೩. ಸ್ವಗಕಲೋಕವನ್ನು ಕೊಡುವ ತಪಸ್ಸು ಸತ್ಯಾತ್ಮಕವಾದುದು. ಶಕ್ತಿಯನ್ನು ಒಳಗೊಂಡಿರುವ ಆ ತಪಸ್ಸು ಸಾತ್ವಿಕವೆಂದೂ ರಾಜಸವೆಂದೂ ಎರಡು ಬಗೆ.

ಜಗದುಪಕಾರಹೇತೋಃ ಸೃಷ್ಟಂ ಚೈವ ವಿರಂಚಿನಾ ।
ರೌದ್ರಂ ಕ್ಷತ್ರಿಯತೇಜಸ್ತು ತತ್ತುರಾಜಸಮುಚ್ಯತೇ ॥ ೭೪ ॥

ಪರಸ್ಯೋತ್ಸಾದನಾರ್ಥಾಯ ತಚ್ಚಾಸುರಮುದಾಹೃತಂ ।
ಅಂಗಾನಿ ನಿಹ್ನುತೇ ಯೋ ವಾ ಅಸೃಗ್ದಿಗ್ಧಾನಿ ಭಾಗಶಃ ॥ ೭೫ ॥

ಯಶ್ಚಾಗ್ನಿಂ ಸಾಧಯೇದ್ವಾಪಿ ಸಿದ್ಧಿಂ ವಾಂ ಮೃತ್ಯುಮೇವ ವಾ ।
ಆಸುರೋ ಹ್ಯೇಷ ತೇ ಭಾವೋ ನ ಚ ಮೇ ತ್ವಂ ದ್ವಿಜೋ ಮತಃ ॥ ೭೬ ॥

ಸತ್ಯಂ ತೇ ವದತಃ ಸಿದ್ಧಿರನೃತೇ ನಾಸ್ತಿ ಜೀವಿತಂ ।
ತಸ್ಯ ತದ್ವಚನಂ ಶ್ರುತ್ವಾ ರಾಮಸ್ಯಾಕ್ಲಿಷ್ಟಕರ್ಮಣಃ ।
ಅವಾಕ್ಶಿರಾಸ್ತಥಾಭೂತೋ ವಾಕ್ಯಮೇತದುವಾಚ ಹ ॥ ೭೭ ॥

---

೭೪. ಈ ರೀತಿ ಎರಡು ಬಗೆಯ ತಪಸ್ಸುಗಳು ಜಗತ್ತಿನ ಉಪಕಾರಕ್ಕೋಸ್ಕರ ಬ್ರಹ್ಮನಿಂದ ಸೃಷ್ಟವಾಗಿವೆ. ಕ್ಷತ್ರಿಯನ ತೇಜಸ್ಸು ರೌದ್ರವೆನಿಸಿಕೊಳ್ಳುತ್ತದೆ. ಅದೇ ರಾಜಸಗುಣದಿಂದ ಕೂಡಿದುದು.

೭೫. ಒಬ್ಬರನ್ನೊಬ್ಬರು ನಾಶಮಾಡಬೇಕೆಂಬ ಬುದ್ಧಿಯಿಂದ ಮಾಡುವ ತಪಸ್ಸು ಅಸುರನೆಂದೆನಿಸಿಕೊಳ್ಳುತ್ತದೆ. ಅದರಲ್ಲಿ ರಕ್ತದಿಂದ ಕೂಡಿದ ಅಂಗಗಳನ್ನು ಚೂರುಚೂರಾಗಿ ಹೋಮಮಾಡುತ್ತಾನೆ.

೭೬ ಯಾವನು, ಹೊಂದಿದರೆ ಸಿದ್ಧಿಯನ್ನು ಹೊಂದಬೇಕು, ಇಲ್ಲವಾದರೆ ಸಾಯಬೇಕೆಂದು ತಪಸ್ಸು ಮಾಡುವನೋ ಅದು ಅಸುರ ತಪಸ್ಸು. ನೀನು ಮಾಡುವ ರೀತಿಯನ್ನು ನೋಡಿದರೆ ಅಸುರ ರೀತಿಯಿಂದ ಕೂಡಿದೆ. ಆದ್ದರಿಂದ ನೀನು ದ್ವಿಜನಲ್ಲವೆಂದು ನನಗೆ ತೋರುತ್ತದೆ.

೭೭. ನೀನು ನಿಶ್ಚಯವನ್ನು ಹೇಳಿದರೆ ನಿನಗೆ ತಪಸ್ಸು ಸಿದ್ಧಿಸುತ್ತದೆ. ಸುಳ್ಳು ಹೇಳಿದರೆ ಬದುಕುವುದಿಲ್ಲ. ಒಳ್ಳೆಯ ಕೆಲಸದಲ್ಲಿ ನಿರತನಾದ ರಾಮನ ಆ ಮಾತನ್ನು ಕೇಳಿ ತಲೆಕೆಳಗಾಗಿದ್ದ ಆ ತಾಪಸನು ಇಂತೆಂದನು.

॥ ಶೂದ್ರತಾಪಸ ಉವಾಚ ॥

ಸ್ವಾಗತಂ ತೇ ನೃಪಶ್ರೇಷ್ಠ ಚಿರಾದ್ದೃಷ್ಟೋಽಸಿ ರಾಘವ ।
ಪುತ್ರಭೂತೋಽಸ್ಮಿ ತೇ ಚಾಹಂ ಪಿತೃಭೂತೋಽಸಿ ಮೇಽನಘ ॥ ೭೮ ॥

ಅಥವಾ ನೈತದೇವಂ ಹಿ ಸರ್ವೇಷಾಂ ನೃಪತಿಃ ಪಿತಾ ।
ಸ ತ್ವಮರ್ಚಾರ್ಹೋಽಸಿ ರಾಜಸ್ತ್ವಯಂ ತೇ ವಿಷಯೇ ತಪಃ ॥ ೭೯ ॥

ಚರಾಮಸ್ತತ್ರ ಭಾಗೋಽಸ್ತಿ ಪೂರ್ವಂ ಸೃಷ್ಟಃ ಸ್ವಯಂಭುವಾ ।
ನ ಧನ್ಯಾಃ ಸ್ಮ ವಯಂ ರಾಮ ಧನ್ಯಸ್ತ್ವಮಸಿ ಪಾರ್ಥಿವ ॥ ೮೦ ॥

ಯಸ್ಯ ತೇ ವಿಷಯೇ ಹ್ಯೇವಂ ಸಿದ್ಧಿಮಿಚ್ಛಂತಿ ತಾಪಸಾಃ ।
ತಪಸಾ ತ್ವಂ ಮದೀಯೇನ ಸಿದ್ಧಿಮಾಪ್ನುಹಿ ರಾಘವ ॥ ೮೧ ॥

ಯದೇತದ್ಭವತಾ ಪ್ರೋಕ್ತಂ ಯೇನ ಕಸ್ಯಾಂ ತು ತೇ ತಪಃ ।
ಶೂದ್ರಯೋನ್ಯಾಂ ಪ್ರಸೂತೋಽಹಂ ತಪ ಉಗ್ರಂ ಸಮಾಸ್ಥಿತಃ ॥ ೮೨ ॥

---

೭೮. ಶೂದ್ರತಾಪಸನು ಹೇಳಿದನು– ಎಲೈ ರಾಜಶ್ರೇಷ್ಠನೆ! ನಿನಗೆ ಸ್ವಾಗತವೆ! ಬಹುದಿನದ ಮೇಲೆ ನೋಡಿದಂತಾಯಿತು. ನಿನಗೆ ನಾನು ಮಗನಾಗಿದ್ದೇನೆ. ನನಗೆ ನೀನು ತಂದೆಯಾಗಿದ್ದೀಯೆ.

೭೯-೮೦. ಹಾಗೆ ಸಾಕ್ಷಾತ್ತಾಗಿ ತಂದೆಯಲ್ಲದಿದ್ದರೂ ರಾಜನು ಎಲ್ಲರಿಗೂ ತಂದೆ ಆದ್ದರಿಂದ ನೀನು ಪೂಜಾರ್ಹನು. ನಾನು ನಿನ್ನ ದೇಶದಲ್ಲಿದ್ದುಕೊಂಡು ತಪಸ್ಸನ್ನು ಮಾಡುತ್ತಿದ್ದೇನೆ. ನಿನಗೂ ಕೂಡ ಈ ತಪಸ್ಸಿನಲ್ಲಿ ಭಾಗವಿದೆ. ಬ್ರಹ್ಮನು ಪೂರ್ವದಲ್ಲಿಯೆ ಹಾಗೆ ನಿರ್ಮಿಸಿದ್ದಾನೆ. ಎಲೈ ರಾಮನೇ ನಾನು ಧನ್ಯನಲ್ಲ. ನೀನೇ ಧನ್ಯನು.

೮೧. ಯಾವ ನಿನ್ನ ದೇಶದಲ್ಲಿ ತವಸ್ವಿಗಳು ಈ ರೀತಿ ತಪಸ್ಸು ಮಾಡಿ ಸಿದ್ಧಿಯನ್ನು ಹೊಂದುತ್ತಾರೆಯೋ ಅವನೇ ಧನ್ಯನು. ನನ್ನ ತಪಸ್ಸಿನಿಂದ ಎಲೈ ರಾಘವನೇ ನೀನೇ ಸಿದ್ಧಿಯನ್ನು ಹೊಂದು.

೮೨. ನೀನು ಯಾವ ಜಾತಿಯಲ್ಲಿ ಹುಟ್ಟಿ ತಪಸ್ಸು ಮಾಡುತ್ತಿದ್ದೀಯೆ? ಎಂದು ಕೇಳಿದೆಯಷ್ಟೆ? ನಾನು ಶೂದ್ರಯೋನಿಯಲ್ಲಿ ಹುಟ್ಟಿದವನು. ಉಗ್ರವಾದ ತಪಸ್ಸನ್ನು ಮಾಡುತ್ತಿದ್ದೇನೆ.

ದೇವ ತ್ವಾಂ ಪ್ರಾರ್ಥಯೇ ರಾಮ ಸ್ವಶರೀರೇಣ ರಾಘವ ।
ನ ಮಿಥ್ಯಾಹಂ ವದೇ ಭೂಪ ದೇವಲೋಕಚಿಕೀರ್ಷಯಾ ।
ಶೂದ್ರಂ ಮಾಂ ವಿದ್ಧಿ ಕಾಕುತ್‌ಸ್ಥ ಶಂಬೂಕಂ ನಾಮ ನಾಮತಃ ॥ ೮೩ ॥

॥ ಪುಲಸ್ತ್ಯ ಉವಾಚ ॥

ಭಾಷತಸ್ತಸ್ಯ ಕಾಕುತ್‌ಸ್ಥಃ ಖಡ್ಗಂ ಚ ರುಚಿರಪ್ರಭಂ ।
ನಿಷ್ಕೃಷ್ಯ ಕೋಶಾದ್ವಿಮಲಂ ಶಿರಶ್ಚಿಚ್ಛೇದ ರಾಘವಃ ॥ ೮೪ ॥

ತಸ್ಮಿನ್ ಶೂದ್ರೇ ಹತೇ ದೇವಾಃ ಸೇಂದ್ರಾಶ್ಚಾಗ್ನಿಪುರೋಗಮಾಃ ।
ಸಾಧು ಸಾಧ್ವಿತಿ ಕಾಕುತ್‌ಸ್ಥಂ ಪ್ರಶಶಂಸ ಮುಹುರ್ಮುಹುಃ ॥ ೮೫ ॥

ಪುಷ್ಪವೃಷ್ಟಿಶ್ಚ ಮಹತೀ ದಿವ್ಯಾನಾಂ ಸುಸುಗಂಧಿನೀ ।
ಆಕಾಶಾದ್ವಾಯುಮುಕ್ತಾನಾಂ ರಾಘವಂ ಸರ್ವತೋಽಕಿರತ್ ।
ಸುಪ್ರೀತಾಶ್ಚಾಬ್ರುವನ್‌ದೇವಾ ರಾಮಂ ವಾಕ್ಯವಿದಾಂ ವರಂ ॥ ೮೬ ॥

---

೮೩. ಎಲೈ ರಾಮನೇ, ! ನನ್ನ ದೇಹದಿಂದ ಶಪಿಸಿ ಹೇಳುತ್ತೇನೆ. ನಾನು ದೇವಲೋಕವನ್ನು ಹೊಂದಬೇಕೆಂಬಾಸೆಯಿಂದ ಸುಳ್ಳನ್ನು ಹೇಳುವುದಿಲ್ಲ. ಎಲೈ ಕಾಕುಸ್ಥನೆ ! ನಾನು ಶೂದ್ರನು ನನ್ನ ಹೆಸರು ಶಂಬೂಕನು.

೮೪. ಪುಲಸ್ತ್ಯನು ಹೇಳಿದನು- ಅವನು ಹೀಗೆ ಹೇಳುತ್ತಿರಲು ಕಾಂತಿಮತ್ತಾದ ಕತ್ತಿಯನ್ನು ಒರೆಯಿಂದೆಳೆದು ಅವನ ತಲೆಯನ್ನು ಕತ್ತರಿಸಿದನು.

೮೫. ರಾಮನು ಆ ಶೂದ್ರನನ್ನು ಕೊಲ್ಲಲು ಇಂದ್ರಾಗ್ನಿಗಳೇ ಮುಂತಾದ ದೇವತೆಗಳು ಸಾಧು ಸಾಧು ಎಂಬುದಾಗಿ ಬಾರಿ ಬಾರಿಗೂ ಹೊಗಳಿದರು.

೮೬. ಆಗ ದೇವತೆಗಳು ದಿವ್ಯವಾದ ಸುಗಂಧವುಳ್ಳ ಪುಷ್ಪಕವೃಷ್ಟಿಯನ್ನು ಸುರಿಸಿದರು. ಅದನ್ನು ಆಕಾಶದಿಂದ ವಾಯುವು ರಾಮನ ಮೇಲೆ ಚೆಲ್ಲಿತು. ಪ್ರೀತಿಗೊಂಡ ದೇವತೆಗಳು ರಾಮನನ್ನು ಕುರಿತು ಇಂತೆಂದರು.

॥ ದೇವಾ ಊಚುಃ ॥

ಸುರಕಾರ್ಯಮಿದಂ ಸೌಮ್ಯ ಕೃತಂ ತೇ ರಘುನಂದನ ।
ಗೃಹಾಣ ಚ ವರಂ ರಾಮ ಯದೀಚ್ಛಸಿ ಮಹಾವ್ರತ ॥ ೮೭ ॥

॥ ಪುಲಸ್ತ್ಯ ಉವಾಚ ॥

ಉವಾಚ ಪ್ರಾಂಜಲೀರ್ವಾಕ್ಯಂ ಸಹಸ್ರಾಕ್ಷಂ ಪುರಂದರಂ ॥ ೮೮ ॥

॥ ಶ್ರೀರಾಮ ಉವಾಚ ॥

ಯದಿ ದೇವಾಃ ಪ್ರಸನ್ನಾ ಮೇ ವರಾಹೋರ್ಽಹಂ ಯದಿ ವಾಪ್ಯಹಂ ।
ಕರ್ಮಣಾ ಮೇ ಯದಿ ಪ್ರೀತಾ ದ್ವಿಜಪುತ್ರಃ ಸ ಜೀವತು ॥ ೮೯ ॥

ವರಮೇತದ್ಧಿ ಭವತಾಂ ಕಾಂಕ್ಷಿತಂ ಪಶ್ಚಿಮಂ ಹಿ ಮೇ ।
ಮಮಾಪರಾಧಾದ್ಬಾಲೋಽಸೌ ಬ್ರಾಹ್ಮಣಸ್ಯೈಕಪುತ್ರಕಃ ॥ ೯೦ ॥

ಅಪ್ರಾಪ್ತಕಾಲಃ ಕಾಲೇನ ನೀತೋ ವೈವಸ್ವತಕ್ಷಯಂ ।
ಸ ಸಂಜೀವತು ಭದ್ರಂ ವೋ ನಾನೃತೀ ಸ್ಯಾಮಹಂ ಸುರಾಃ ॥ ೯೧ ॥

---

೮೭. ದೇವತೆಗಳು ಹೇಳಿದರು- ಎಲೈ ರಘುನಂದನನಾದ ರಾಮನೇ ! ಇದು ದೇವತೆಗಳ ಕಾರ್ಯವು ನೀನು ಅದನ್ನು ನೆರವೇರಿಸಿದೆ. ನೀನು ಬೇಕಾದ ವರಗಳನ್ನು ಕೇಳಿಕೋ ಕೊಡುತ್ತೇವೆ.

೮೮. ಪುಲಸ್ತ್ಯನು ಹೇಳಿದನು–ಆಗ ರಾಮನು ಸಹಸ್ರಾಕ್ಷನಾದ ಇಂದ್ರನನ್ನು ಕುರಿತು ಇಂತೆಂದನು.

೮೯-೯೧. ಶ್ರೀರಾಮನುಹೇಳಿದನು- ದೇವತೆಗಳು ನನಗೆ ಪ್ರಸನ್ನರಾಗಿದ್ದರೆ, ನಾನು ವರಾರ್ಹನಾದರೆ, ನನ್ನ ಕೆಲಸದಿಂದ ನಿಮಗೆ ಪ್ರೀತಿಯುಂಟಾಗಿದ್ದರೆ, ಬ್ರಾಹ್ಮಣನ ಮಗನು ಬದುಕಲಿ. ಈ ವರವನ್ನೇ ನಾನು ನಿಮ್ಮಿಂದ ಅಪೇಕ್ಷಿಸುವುದು. ನನ್ನ ತಪ್ಪಿನಿಂದಲೇ ಆ ಬ್ರಾಹ್ಮಣನಿಗೆ ಒಬ್ಬನೇ ಮಗನಾದ, ಸಾವಿಗೆ ಅರ್ಹನಲ್ಲದ ಆ ಬಾಲಕನು ಸತ್ತಿರುವನು. ಅವನು ಬದುಕಲಿ, ನಿಮಗೆ ಮಂಗಳವಾಗಲಿ, ನನ್ನ ಮಾತು ಸುಳ್ಳಾಗಬಾರದು.

ದ್ವಿಜಸ್ಯ ಸಂಶ್ರುತೋ ಹ್ಯರ್ಥೋ ಜೀವಯಿಷ್ಯಾಮಿ ತೇ ಸುತಂ ।
ಮದೀಯೆನಾಯುಷಾ ಬಾಲಂ ಪಾದೇನಾರ್ಧೇನ ವಾ ಸುರಾಃ ॥ ೯೨ ॥

ಜೀವೇದಯಂ ವರೋ ಮಹ್ಯಂ ವರಕೋಟ್ಯಧಿಕೋ ವರಃ ॥ ೯೩ ॥

॥ ಪುಲಸ್ತ್ಯ ಉವಾಚ ॥

ರಾಘವಸ್ಯ ವಚಃ ಶ್ರುತ್ವಾ ಸರ್ವೇ ತೇ ವಿಬುಧೋತ್ತಮಾಃ ।
ಪ್ರತ್ಯೂಚುಸ್ತೇ ಮಹಾತ್ಮಾನಂ ಪ್ರೀತಾಃ ಪ್ರೀತಿಸಮನ್ವಿತಾಃ ॥ ೯೪ ॥

॥ ದೇವಾ ಊಚುಃ ॥

ನಿವೃತ್ತೋ ಭವ ಕಾಕುತ್‌ಸ್ಥ ಬ್ರಾಹ್ಮಣ ಸ್ಯೈಕತಪುತ್ರಕಃ ।
ಜೀವಿತಂ ಪ್ರಾಪ್ತವಾನ್ಭೂಯಃ ಸಮೇತಶ್ಚಾಪ್ತಬಂದುಭಿಃ ॥ ೯೫ ॥

ಯಸ್ಮಿನ್ಮುಹೂರ್ತೇ ಕಾಕುತ್‌ಸ್ಥ ಶೂದ್ರೋಽಯಂ ವಿನಿಪಾತಿತಃ ।
ತಸ್ಮಿನ್ಮುಹೂರ್ತೇ ಕಾಕುತ್‌ಸ್ಥ ಸ ಬಾಲೋ ಜೀವನಂ ಗತಃ ॥ ೯೬ ॥

---

೯೨-೯೩ ಆ ಬ್ರಾಹ್ಮಣನಿಗೆ ನಿನ್ನ ಮಗನನ್ನು ಬದುಕಿಸುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದೇನೆ. ಎಲೈ ದೇವತೆಗಳಿರಾ ! ನನ್ನ ಆಯುಸ್ಸನ್ನು ಕಾಲುಭಾಗವನ್ನಾಗಲಿ, ಅಥವಾ ಅರ್ಧಭಾಗವನ್ನೇ ಆಗಲಿ, ಮಾಡಿ ಕೊಟ್ಟು ಅವನನ್ನು ಬದುಕಿಸಿರಿ. ಅವನು ಬದುಕುವುದೇ ನನ್ನ ವರವು. ಇದೇ ನನಗೆ ಕೋಟಿವರಗಳಿಗಿಂತಲೂ ಅಧಿಕವಾದುದು.

೯೪. ಪುಲಸ್ತ್ಯನು ಹೇಳಿದನು– ಆ ದೇವತೆಗಳು ರಾಮನ ಈ ಮಾತನ್ನು ಕೇಳಿ ಪ್ರೀತಿಯಿಂದ ಅವನಿಗಿಂತೆಂದರು.

೯೫. ದೇವತೆಗಳು ಹೇಳಿದರು– ಎಲೈ ಕಾಕುಸ್ಥನೇ ! ನೀನು ಹಿಂತಿರುಗು. ಆ ಬ್ರಾಹ್ಮಣನ ಒಬ್ಬನೇ ಮಗನು ಮತ್ತೆ ಜೀವವನ್ನು ಹೊಂದಿ ಬಂಧುಗಳೊಡನೆ ಸೇರಿಕೊಂಡನು.

೭೬. ಎಲೈರಾಮನೇ ! ಯಾವ ಮುಃಹೂರ್ತದಲ್ಲಿ ನೀನು ಆ ತಾಪಸನನ್ನು ಕೊಂದೆಯೋ, ಅದೇ ಮುಹೂರ್ತದಲ್ಲಿಯೇ ಆ ಹುಡುಗನಿಗೆ ಪ್ರಾಣವು ಬಂದಿತು.

ಸ್ವಸ್ತಿ ಪ್ರಾಪ್ನುಹಿ ಭದ್ರಂ ತೇ ಸಾಧಯಾಮಃ ಪರಂತಪ ।
ಅಗಸ್ತ್ಯಸ್ಯಾಶ್ರಮಪದೇ ದ್ರಷ್ಟಾರಃ ಸ್ಮ ಮಹಾಮುನಿಂ ॥ ೯೭ ॥

॥ ಪುಲಸ್ತ್ಯ ಉವಾಚ ॥

ಸ ತಥೇತಿ ಪ್ರತಿಜ್ಞಾಯ ದೇವಾನಾಂ ರಘುನಂದನಃ ।
ಆರುರೋಹ ವಿಮಾನಂ ತಂ ಪುಷ್ಪಕಂ ಹೇಮಭೂಷಿತಂ ॥ ೯೮ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಶೂದ್ರವಧೋನಾಮ
॥ ದ್ವಾತ್ರಿಂಶತ್ತಮೋಽಧ್ಯಾಯಃ ॥

---

೯೭. ಎಲೈ ರಾಮನೇ ! ನಿನಗೆ ಒಳ್ಳೆಯದಾಗಲಿ. ನಾವು ಹೋಗುತ್ತೇವೆ. ಅಗಸ್ತ್ಯನ ಆಶ್ರಮಕ್ಕೆ ಹೋಗಿ ಆತನನ್ನು ನೋಡೋಣ.

೯೮. ಪುಲಸ್ತ್ಯನು ಹೇಳಿದನು- ರಾಮನು ಹಾಗೇ ಆಗಲೆಂದು ಹೇಳಿ ಉತ್ತಮವಾದ ತನ್ನ ವಿಮಾನವನ್ನು ಹತ್ತಿದನು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಶೂದ್ರವಧೆಯೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ತ್ರಯಸ್ತ್ರಿಂಶೋಽಧ್ಯಾಯಃ ॥



॥ ಪುಲಸ್ತ್ಯ ಉವಾಚ ॥

ತತೋ ದೇವಾಃ ಪ್ರಯಾತಾಸ್ತೇ ವಿಮಾನೈರ್ಬಹುಭಿಸ್ತದಾ ।
ರಾಮೋಽಪ್ಯನುಜಗಾಮಾಶು ಕುಂಭಯೋನೇಸ್ತಪೋವನಂ ॥ ೧ ॥

ಅಹಂ ಭಗವತಾ ತೇನ ಭೂಯೋಽಪ್ಯಾಗಮನಂ ಕೃಥಾಃ ।
ಏವಮುಕ್ತೋ ಯದಾ ಮಾಂ ಸ ಸಭಾಂ ದ್ರಷ್ಟುಂ ಸಮಾಗತಃ ॥ ೨ ॥

ತದಹಂ ದೇವತಾದೇಶಾತ್ಸ್ವಕಾರ್ಯಾರ್ಥೇ ಮಹಾಮುನಿಂ ।
ಪಶ್ಯಾಮಿ ತಂ ಮುನಿಂ ಗತ್ವಾ ದೇವದಾನವಪೂಜಿತಂ ॥ ೩ ॥

---

## ಮೂವತ್ತಮೂರನೆಯ ಅಧ್ಯಾಯವು

೧. ಪುಲಸ್ತ್ಯನು ಹೇಳಿದನು– ಅನಂತರ ದೇವತೆಗಳು ಬಹಳ ವಿಮಾನಗಳಲ್ಲಿ ಕುಳಿತು ಅಗಸ್ತ್ಯನ ಆಶ್ರಮಕ್ಕೆ ಹೋದರು. ರಾಮನು ಅವರನ್ನು ಅನುಸರಿಸಿ ಹೋದನು.

೨-೪. ಈ ಅಗಸ್ತ್ಯನು ನನ್ನ ಸಭೆಯನ್ನು ನೋಡುವುದಕ್ಕೆ ಬಂದಿದ್ದಾಗ ಪುನಃ ನನ್ನ ಆಶ್ರಮಕ್ಕೆ ಬಾ ಎಂದು ಹೇಳಿದ್ದನು. ಈಗ ನಾನು ದೇವತೆಗಳ ಅಪ್ಪಣೆಯಂತೆಯೂ ನನ್ನ ಕೆಲಸಕ್ಕೋಸ್ಕರವೂ ದೇವದಾನವ ಪೂಜಿತನಾದ ಆ ಅಗಸ್ತ್ಯ ಋಷಿಯನ್ನು ನೋಡುತ್ತೇನೆ. ಅವನು ನನ್ನನ್ನು ನೋಡಿದ ಕೂಡಲೆ ಉಪದೇಶವನ್ನು

ಉಪದೇಶಂ ತು ಮೇ ತುಷ್ಟಃ ಸ್ವಯಂ ದಾಸ್ಯತಿ ಸತ್ತಮಃ ।
ದುಃಖೀ ಯೇನ ಪುನರ್ಮರ್ತ್ಯೇ ನ ಭವಾಮಿ ಕದಾಚನ ॥ ೪ ॥

ಪಿತಾ ದಶರಥೋ ಮಹ್ಯಂ ಕೌಸಲ್ಯಾ ಜನನೀ ತಥಾ ।
ಸೂರ್ಯವಂಶಸಮುತ್ಪನ್ನಸ್ತಥಾಪ್ಯೇವಂ ಸದುಃಖಿತಃ ॥ ೫ ॥

ರಾಜ್ಯಕಾಲೇ ವನೇ ವಾಸೋ ಭಾರ್ಯಯಾ ಚಾನುಜೇನ ಚ ।
ಹರಣಂ ಚಾಪಿ ಭಾರ್ಯಾಯಾ ರಾವಣೇನ ಕೃತಂ ಮಮ ॥ ೬ ॥

ಅಸಹಾಯೇನ ತು ಮಯಾ ತೀರ್ತ್ವಾ ಸಾಗರಮುತ್ತಮಂ ।
ರುದ್ಧ್ವಾ ತು ತಾಂ ಪುರೀಂ ಸರ್ವಾಂ ಕೃತ್ವಾ ತಸ್ಯ ಕುಲಕ್ಷಯಂ ॥ ೭ ॥

ದೃಷ್ಟ್ವಾ ಸೀತಾಂ ಮಯಾ ತ್ಯಕ್ತಾಂ ತತ್ರಾಗತ್ಯ ಸುರಾಸ್ತಥಾ ।
ಶುದ್ಧಾಂ ತಾಂ ಮಾಂ ತಥೋಚುಸ್ತೇ ಯಥಾ ಸೀತಾ ಮಯಾಗೃಹಂ॥ ೮ ॥

---

ಕೊಡುವನು. ನಾನು ಮತ್ತೆ ಮನುಷ್ಯನಾಗಿ ಹುಟ್ಟಿ ದುಃಖಿಯಾಗದಂತೆ ಉಪದೇಶವನ್ನು ಕೇಳಿಕೊಳ್ಳುತ್ತೇನೆ.

೫. ನನ್ನ ತಂದೆ ಪ್ರಸಿದ್ಧನಾದ ದಶರಥನು. ತಾಯಿಯು ಕೌಸಲ್ಯೆಯು. ಹುಟ್ಟಿದುದೋ ಪ್ರಸಿದ್ಧವಾದ ಸೂರ್ಯವಂಶವಾಗಿರುವುದು. ಆದರೂ ಈ ರೀತಿ ದುಃಖಿಯಾಗಿರುವನಲ್ಲ ?

೬. ರಾಜ್ಯಭಾರ ಮಾಡುವ ಕಾಲದಲ್ಲಿ ಹೆಂಡತಿಯೊಡನೆಯೂ ತಮ್ಮನೊಡನೆಯೂ ವನವಾಸವು ಪ್ರಾಪ್ತವಾಯಿತು. ಆ ವನದಲ್ಲಿಯೂ ಕೂಡ ರಾವಣನು ನನ್ನ ಹೆಂಡತಿಯನ್ನು ಕದ್ದುಕೊಂಡು ಹೋದನು.

೭. ಸಹಾಯವಿಲ್ಲದಿರುವ ನಾನು ಸಮುದ್ರವನ್ನು ದಾಟಿ ಆ ಲಂಕೆಯನ್ನು ಆಕ್ರಮಿಸಿ ಅವನ ವಂಶವನ್ನೇ ನಾಶಮಾಡಿದೆನು.

೮-೯. ಅಲ್ಲಿ ಸೀತೆಯನ್ನು ನಾನು ಬಿಟ್ಟುಬಿಡಲು ದೇವತೆಗಳು ಅಲ್ಲಿಗೆ ಬಂದು ಆಕೆಯು ಶುದ್ಧಳೆಂದು ನನಗೆ ಹೇಳಿದರು. ಅನಂತರ ಮನೆಗೆ ಕರೆದುಕೊಂಡು

ಆನೀಥಾ ವೈ ಪ್ರೀತಿಯುತಾ ಲೋಕವಾಕ್ಯಾದ್ವಿಸರ್ಜಿತಾ ।
ವನೇ ವಸತಿ ಸಾ ದೇವೀ ಪುರೇ ಚಾಹಂ ವಸಾಮಿ ವೈ ॥ ೯ ॥

ಜಾತೋಽಹಮುತ್ತಮೇ ವಂಶೇ ಉತ್ತಮೋಽಹಂ ಧನುಷ್ಮತಾಂ ।
ಸ ಹಿ ಸಂದುಃಖಮಾಪನ್ನೋ ಯಸ್ಯಾಂತೋ ನೈವ ವಿದ್ಯತೇ ॥ ೧೦ ॥

ವಜ್ರಸಾರಸ್ಯ ಸಾರೇಣ ಧಾತ್ರಾಹಂ ನಿರ್ಮಿತೋ ಧ್ರುವಂ ।
ಇದಾನೀಂ ಬ್ರಾಹ್ಮಣಾದೇಶಾದ್ಭ್ರಮಮಾಣೋ ಧರಾತಲೇ ॥ ೧೧ ॥

ತಪಃಸ್ಥಿತಸ್ತು ಶೂದ್ರೋ ವೈ ಮಯಾ ಪಾಪೋ ನಿಪಾತಿತಃ ।
ದೇವವಾಕ್ಯಾಚ್ಚ ಮೇ ಭೂಯಃ ಪ್ರಾಣೋ ಮೇ ಹೃದಿ ಸಂಸ್ಥಿತಃ ॥ ೧೨ ॥

ಪಶ್ಯಾಮಿ ತಂ ಮುನಿಂ ವದ್ಯಂ ಜಗತೋಽಸ್ಯ ಹಿತೇ ಸ್ಥಿತಂ ।
ದೃಷ್ಟೇನ ಮೇ ಯಥಾ ದುಃಖಂ ನಾಶಮೇಷ್ಯತಿ ಸತ್ವರಂ ॥ ೧೩ ॥

ಉದಯೇನ ಸಹಸ್ರಾಂಶೋರ್ಹಿಮಂ ಯದ್ವದ್ವಿಲೀಯತೇ ।
ತದ್ವನ್ಮೇ ದುಃಖಸಂಘಾತಃ ಸರ್ವಥಾ ನಾಶಮೇಷ್ಯತಿ ॥ ೧೪ ॥

---

ಹೋದೆನು. ಅನಂತರ ಲೋಕದ ಅಪವಾದದಿಂದ ಮತ್ತೆ ಬಿಟ್ಟು ಬಿಟ್ಟೆನು. ಆಕೆಯು ಕಾಡಿನಲ್ಲಿ ವಾಸಮಾಡುತ್ತಿದ್ದಾಳೆ. ನಾನು ಊರಿನಲ್ಲಿ ಸುಖವಾಗಿದ್ದೇನೆ.

೧೦. ನಾನು ಉತ್ತಮಕುಲದಲ್ಲಿ ಹುಟ್ಟಿದ್ದೇನೆ. ಧನುರ್ಧಾರಿಗಳೊಳಗೆಲ್ಲಾ ಉತ್ತಮನು. ಅಂತಹ ನಾನು ಕೊನೆಗಾಣದ ದುಃಖವನ್ನು ಅನುಭವಿಸುತ್ತಿರುವೆನಲ್ಲಾ !

೧೧-೧೨. ವಜ್ರಸಾರದ ಸಾರಾಂಶದಿಂದ ನನ್ನನ್ನು ಬ್ರಹ್ಮನು ಸೃಷ್ಟಿಸಿರುವನು. ಈಗಲಾದರೋ ಆ ಬ್ರಾಹ್ಮಣನ ಮಾತಿನಂತೆ ಭೂಮಿಯಲ್ಲೆಲ್ಲಾ ಸುತ್ತುತ್ತ ತಪಸ್ಸು ಮಾಡುತ್ತಿದ್ದ ಆ ಪಾಪಿಯಾದ ಶೂದ್ರನನ್ನು ಕೊಂದೆನು. ಈಗಂತು ಈ ದೇವತೆಗಳ ಮಾತಿನಂತೆ ನನ್ನ ಪ್ರಾಣವು ಹೃದಯದಲ್ಲಿದೆ. ಅಷ್ಟೆ !

೧೩. ಜಗತ್ತಿನ ಹಿತದಲ್ಲಿ ಆಸಕ್ತನಾದ ಆ ಅಗಸ್ತ್ಯನನ್ನು ನೋಡುತ್ತೇನೆ. ಆತನನ್ನು ನೋಡಿದರೆ ಈ ನನ್ನ ದುಃಖವು ಜಾಗ್ರತೆ ಹೋಗುತ್ತದೆ.

೧೪. ಸೂರ್ಯನು ಉದಯಿಸುವುದರಿಂದ ಹಿಮವು ಕರಗಿ ಹೋಗುವಂತೆ ಆತನನ್ನು ನೋಡಿದರೆ ನನ್ನ ದುಃಖವು ನಾಶ ಹೊಂದುತ್ತದೆ.

ದೃಷ್ಟ್ವಾ ಚ ದೇವಾನ್ ಸಂಪ್ರಾಪ್ತಾನಗಸ್ತ್ಯೋ ಭಗವಾನೃಷಿಃ ।
ಅರ್ಘಮಾದಾಯ ಸುಪ್ರೀತಾನ್ ಸರ್ವಾಂಸ್ತಾನಭ್ಯಪೂಜಯೇತ್ ॥ ೧೫ ॥

ತೇಽಪಿ ಗೃಹ್ಯ ತತಃ ಪೂಜಾಂ ಸಂಭಾಷ್ಯ ಚ ಮಹಾಮುನಿಂ ।
ಜಗ್ಮುಸ್ತೇ ತ್ರಿದಶಾ ಹೃಷ್ಟಾ ನಾಕಪೃಷ್ಠಂ ಸಹಾನುಗಾಃ ॥ ೧೬ ॥

ಗತೇಷು ತೇಷು ಕಾಕುತ್ಸ್ಥಃ ಪುಷ್ಪಕಾದವರುಹ್ಯ ಚ ।
ಅಭಿವಾದಯಿತುಂ ಪ್ರಾಪ್ತಃ ಸೋಽಗಸ್ತ್ಯಮೃಷಿಸತ್ತಮಂ ॥ ೧೭ ॥

॥ ಶ್ರೀ ರಾಮ ಉವಾಚ ॥

ಸುತೋ ದಶರಥಸ್ಯಾಹಂ ಭವಂತಮಭಿವಾದಿತುಂ ।
ಆಗತೋ ವೈ ಮುನಿಶ್ರೇಷ್ಠ ಸೌಮ್ಯೇನೇಕ್ಷಸ್ವ ಚಕ್ಷುಷಾ ।
ನಿರ್ಧೂತಪಾಪಸ್ತ್ವ ದೃಷ್ಟ್ವಾ ಭವಾಮೀಹ ನ ಸಂಶಯಃ ॥ ೧೮ ॥

॥ ಪುಲಸ್ತ್ಯ ಉವಾಚ ॥

ಏತಾವದುಕ್ತ್ವಾ ಸ ಮುನಿಮಭಿವಾದ್ಯ ಪುನಃ ಪುನಃ ।
ಕುಶಲಂ ಶಿಷ್ಯವರ್ಗಸ್ಯ ಮೃಗಾಣಾಂ ಚ ವನಸ್ಯ ಚ ॥ ೧೯ ॥

ಭಗವನ್ ದರ್ಶನಾಕಾಂಕ್ಷೀ ಹತ್ವಾ ಶೂದ್ರಮಿಹಾಗತಃ ॥ ೨೦ ॥

---

೧೫. ದೇವತೆಗಳು ಅಗಸ್ತ್ಯನ ಆಶ್ರಮಕ್ಕೆ ಹೋಗಲು ಆ ಋಷಿಯು ಅರ್ಘ್ಯವನ್ನು ತೆಗೆದುಕೊಂಡು ಅವರನ್ನು ಪೂಜಿಸಿದನು.

೧೬. ಆ ದೇವತೆಗಳು ಆ ಋಷಿಯಿಂದ ಪೂಜೆಯನ್ನು ಸ್ವೀಕರಿಸಿ ಆ ಋಷಿಯನ್ನು ಗೌರವಿಸಿ ಸಂತೋಷದಿಂದ ಸ್ವರ್ಗಕ್ಕೆ ಹೊರಟುಹೋದರು.

೧೭. ಆ ದೇವತೆಗಳು ಅತ್ತ ಹೋಗಲು ರಾಮನು ಪುಷ್ಪಕದಿಂದಿಳಿದು ಆ ಋಷಿಗೆ ನಮಸ್ಕರಿಸಲು ಹೋದನು.

೧೮. ಶ್ರೀರಾಮನು ಹೇಳಿದನು–ನಾನು ದಶರಥನ ಮಗನು. ಮುನಿಶ್ರೇಷ್ಠನೇ! ನಿನ್ನನ್ನು ದರ್ಶನಮಾಡಲು ಬಂದಿದ್ದೇನೆ, ಸೌಮ್ಯವಾದ ದೃಷ್ಟಿಯಿಂದ ನೋಡು. ನಿನ್ನ ದರ್ಶನಮಾಡಿದರೆ ಪಾಪಗಳನ್ನೆಲ್ಲಾ ಕಳೆದುಕೊಳ್ಳುವೆನು. ಸಂಶಯವಿಲ್ಲ.

೧೯-೨೦. ಪುಲಸ್ತ್ಯನು ಹೇಳಿದನು– ಇದನ್ನು ಹೇಳಿ ಆ ಋಷಿಗೆ ಮತ್ತೆ ಮತ್ತೆ ನಮಸ್ಕರಿಸಿ ಶಿಷ್ಯರು ಮೃಗಗಳ ವನದ ಕುಶಲವನ್ನು ನೋಡಿಕೊಂಡು ಹೋಗಲು ಶೂದ್ರಕನನ್ನು ಕೊಂದು ಹಾಗೆಯೇ ಇಲ್ಲಿಗೆ ಬಂದೆನು.

॥ ಅಗಸ್ತ್ಯ ಉವಾಚ ॥

ಸ್ವಾಗತಂ ತೇ ರಘುಶ್ರೇಷ್ಠ ಜಗದ್ವಂದ್ಯ ಸನಾತನ ।
ದರ್ಶನಾತ್ತವ ಕಾಕುತ್‌ಸ್ಥ ಪೂತೋಽಹಂ ಮುನಿಭಿಃ ಸಹ ॥ ೨೧ ॥

ತ್ವತ್ಕೃತೇ ರಾಜಶಾರ್ದೂಲ ಗೃಹಾಣಾರ್ಘ್ಯಂ ಮಹಾದ್ಯುತೇ ।
ಸ್ವಾಗತಂ ತೇ ನರಶ್ರೇಷ್ಠ ದಿಷ್ಟ್ಯಾ ಪ್ರಾಪ್ತೋಽಸಿ ಶತ್ರುಹನ್ ॥ ೨೨ ॥

ತ್ವಂ ಹಿ ನಿತ್ಯಂ ಬಹುಮತೋ ಗುಣೈರ್ಬಹುಭಿರುತ್ತಮೈಃ ।
ಅತಸ್ತ್ವಂ ಪೂಜನೀಯಶ್ಚ ಮಮ ನಿತ್ಯಂ ಹೃದಿ ಸ್ಥಿತಃ ॥ ೨೩ ॥

ಸುರಾ ಹಿ ಕಥಯಂತಿ ತ್ವಾಂ ಶೂದ್ರಘಾತಿನಮಾಗತಂ ।
ಬ್ರಾಹ್ಮಣಸ್ಯ ಚ ಧರ್ಮೇಣ ತ್ವಯಾ ವೈ ಜೀವಿತಃ ಸುತಃ ॥ ೨೪ ॥

ಉಷ್ಯತಾಂ ಚೇಹ ಭಗವನ್ ಸಕಾಶೇ ಮಮ ರಾಘವ ।
ಪ್ರಭಾತೇ ಪುಷ್ಪಕೇನಾಸಿ ಗಂತಾಯೋಧ್ಯಾಂ ಮಹಾಮತೇ ॥ ೨೫ ॥

ಇದಂ ಚಾಭರಣಂ ಸೌಮ್ಯ ಸುಕೃತಂ ವಿಶ್ವಕರ್ಮಣಾ ।
ದಿವ್ಯಂ ದಿವ್ಯೇನ ವಪುಷಾ ದೀಪ್ಯಮಾನಂ ಸ್ವತೇಜಸಾ ॥ ೨೬ ॥

---

೨೧ ೨೨. ಅಗಸ್ತ್ಯನು ಹೇಳಿದನು—ರಘುಶ್ರೇಷ್ಠನೇ, ಸನಾತನೇ! ಜಗದ್ವಂದ್ಯನೆ ! ನಿನಗೆ ಸ್ವಾಗತವೇ ? ನಿನ್ನ ದರ್ಶನದಿಂದ ನಾನು ಋಷಿಗಳೊಡನೆ ನಾನು ಪವಿತ್ರನಾದೆ. ಇಗೋ ನಿನಗೋಸ್ಕರ ಅರ್ಘ್ಯವನ್ನು ತಂದಿದ್ದೇನೆ. ಸ್ವೀಕರಿಸು. ನಿನಗೆ ಸ್ವಾಗತವೇ? ಎಲೈ ಶತ್ರು ನಾಶಕನೇ ನೀನು ಬಂದಿರುವುದು ಬಹು ಸಂತೋಷವು.

೨೩. ನೀನು ಉತ್ತಮ ಗುಣಗಳಿಂದ ನನಗೆ ಬಹು ಇಷ್ಟವುಳ್ಳವನಾಗಿದ್ದೀಯೆ. ಆದ್ದರಿಂದ ನೀನು ಪೂಜಾರ್ಹನು. ನನ್ನ ಹೃದಯದಲ್ಲಿ ಯಾವಾಗಲೂ ಇದ್ದೀಯೆ.

೨೪. ದೇವತೆಗಳು ನೀನು ಶೂದ್ರಕನನ್ನು ಕೊಂದು ಇಲ್ಲಿಗೆ ಬರುತ್ತೀಯೆ ಎಂಬುದಾಗಿ ಹೇಳಿದರು. ದೀನು ಧರ್ಮದಿಂದ ಬ್ರಾಹ್ಮಣನ ಮಗನನ್ನು ಬದುಕಿಸಿದೆ.

೨೫. ಎಲೈ ರಾಘವನೆ ! ಈ ದಿವಸ ನನ್ನ ಬಳಿಯಲ್ಲಿಯೇ ಇರು. ಬೆಳಗಾಗುತ್ತಲೂ ಅಯೋಧ್ಯೆಗೆ ಪುಷ್ಪಕದಲ್ಲಿ ಹೋಗುವಿಯಂತೆ.

೨೬–೨೭. ಎಲೈ ರಾಘವನೇ! ಇಗೋ ಇದೊಂದು ಒಡವೆಯು. ವಿಶ್ವಕರ್ಮನು ಇದನ್ನು ಬಹಳ ಚೆನ್ನಾಗಿ ಮಾಡಿದ್ದಾನೆ. ಇದು ಉತ್ತಮವಾದುದು. ತನ್ನ ಶರೀರದ

ಪ್ರತಿಗೃಹ್ಣೀಷ್ವ ರಾಜೇಂದ್ರ ಮತ್ಪ್ರಿಯಂ ಕುರು ರಾಘವ ।
ಲಬ್ಧಸ್ಯ ಹಿ ಪುನರ್ದಾನೇ ಸುಮಹತ್ಫಲಮುಚ್ಯತೇ ॥ ೨೭ ॥

ತ್ವಂ ಹಿ ಶಕ್ತಃ ಪರಿತ್ರಾತುಂ ಸೇಂದ್ರಾನಪಿ ಸುರೋತ್ತಮಾನ್ ।
ತಸ್ಮಾತ್ಪ್ರದಾಸ್ಯೇ ವಿಧಿವತ್ಪ್ರತೀಚ್ಛಸ್ವ ನರರ್ಷಭ ॥ ೨೮ ॥

॥ ಪುಲಸ್ತ್ಯ ಉವಾಚ ॥

ಅಥೋವಾಚ ಮಹಾಬಾಹುರಿಕ್ಷ್ವಾಕೂಣಾಂ ಮಹಾರಥಃ ।
ಕೃತಾಂಜಲಿರ್ಮುನಿಶ್ರೇಷ್ಠಂ ಸ್ವಂ ಚ ಧರ್ಮಮನುಸ್ಮರನ್ ॥ ೨೯ ॥

॥ ಶ್ರೀ ರಾಮ ಉವಾಚ ॥

ಪ್ರತಿಗ್ರಹೋ ವೈ ಭಗವಂಸ್ತವ ಬ್ರಹ್ಮನ್ವಿಗರ್ಹಿತಃ ।
ಕ್ಷತ್ರಿಯೇಣ ಕಥಂ ವಿಪ್ರ ಪ್ರತಿಗ್ರಾಹ್ಯಂ ವಿಜಾನತಾ ॥ ೩೦ ॥

ಬ್ರಾಹ್ಮಣೇನ ಯಥಾ ದತ್ತಂ ತನ್ಮೇ ತ್ವಂ ವಕ್ತುಮರ್ಹಸಿ ।
ನ ಗೃಹೀ ಪುತ್ರವಾನಸ್ಮಿ ಸಮರ್ಥೋಽಸ್ಮಿ ಮಹಾಮುನೇ ॥ ೩೧ ॥

---

ಕಾಂತಿಯಿಂದ ಬೆಳಗುತ್ತಿದೆ. ಇದನ್ನು ತೆಗೆದುಕೋ. ನನಗೆ ಸಂತೋಷವನ್ನು ಉಂಟು ಮಾಡು ಚೆನ್ನಾಗಿರುವ ವ್ಮೈಯುಳ್ಳವರು ಇವನ್ನು ಹಾಕಿಕೊಂಡರೆ ಚೆನ್ನಾಗಿ ಕಾಣು ತ್ತಾರೆ. ಸಿಕ್ಕಿದುದನ್ನು ದಾನಮಾಡಿದರೆ ಬಹುವಾದ ಫಲವುಂಟೆಂದು ಹೇಳಿದ್ದಾರೆ.

೨೮. ಎಲೈ ರಾಘವನೇ! ಇಂದ್ರನೇ ಮುಂದಾಳಾದ ದೇವತೆಗಳನ್ನೆಲ್ಲಾ ಕಾಪಾಡಲು ಶಕ್ತನಾಗಿದ್ದೀಯೆ. ಆದ್ದರಿಂದ ವಿಧಿವತ್ತಾಗಿ ಕೊಡುತ್ತೇನೆ. ಇದನ್ನು ತೆಗೆದುಕೊ.

೨೯. ಪುಲಸ್ತ್ಯನು ಹೇಳಿದನು- ಇಕ್ಷ್ವಾಕು ವಂಶಸ್ಥನಾದ ರಾಘವನು ತನ್ನ ಕ್ಷತ್ರಿಯ ಧರ್ಮವನ್ನು ಜ್ಞಾಪಿಸಿಕೊಂಡು ಕೈಮುಗಿದುಕೊಂಡು ಇಂತೆಂದನು.

೩೦. ಶ್ರೀರಾಮನು ಹೇಳಿದನು– ಎಲೈ ಪೂಜ್ಯನೇ ! ನಿನ್ನಿಂದ ದಾನ ತೆಗೆದುಕೊಳ್ಳುವುದು ನಿಂದಿತವು. ನಾನು ಕ್ಷತ್ರಿಯನಾಗಿ ಧರ್ಮವನ್ನು ತಿಳಿದವನಾಗಿ ಹೇಗೆ ದಾನ ತೆಗೆದುಕೊಳ್ಳಲಿ ?

೩೧. ನಾನು ಗೃಹಸ್ಥನಲ್ಲ. ಮಕ್ಕಳೊಂದಿಗನಲ್ಲ. ಆದ್ದರಿಂದ ದಾನವನ್ನು ತೆಗೆದುಕೊಳ್ಳಲು ಸಮರ್ಥನಲ್ಲಾ. ಅಲ್ಲದೆ, ನೀನು ಬ್ರಾಹ್ಮಣನು. ನೀನು ಕೊಟ್ಟದ್ದನ್ನು ನಾನು ಹೇಗೆ ತೆಗೆದುಕೊಳ್ಳಲಿ ? ಹೇಳು.

ಆಪದಾ ನ ಚ ಕಷ್ಟಂ ಮೇ ಕಥಂ ಗೃಷ್ಣೇ ಪ್ರತಿಗ್ರಹಂ ।
ಭಾರ್ಯಾ ಮೇ ಸುಚಿರಂ ನಷ್ಟಾ ನ ಚಾನ್ಯಾ ಮಮ ವಿದ್ಯತೇ ॥ ೩೨ ॥

ಕೇವಲಂ ದೋಷಭಾಗೀ ಚ ಭವಾಮೀಹ ನ ಸಂಶಯಃ ।
ಕಷ್ಟಾಂ ಚೈವ ದಶಾಂ ಪ್ರಾಪ್ಯ ಕ್ಷತ್ರಿಯೋಽಪಿ ಪ್ರತಿಗ್ರಹಂ ॥ ೩೩ ॥

ಕುರ್ವನ್ನ ದೋಷಮಾಪ್ನೋತಿ ಮನುರೇವಾತ್ರ ಕಾರಣಂ ।
ವೃದ್ಧೌ ಚ ಮಾತಾಪಿತರೌ ಸಾಧ್ವೀ ಭಾರ್ಯಾ ಶಿಶುಃ ಸುತಃ ॥ ೩೪ ॥

ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್ ।
ನಾಹಂ ಗ್ರಹೀಷ್ಯೇ ಬ್ರಹ್ಮರ್ಷೇ ತ್ವಯಾ ದತ್ತಂ ಪ್ರತಿಗ್ರಹಂ ।
ನ ಚ ಮೇ ಭವತಾ ಕೋಪಃ ಕಾರ್ಯೋ ವೈ ಸುರಪೂಜಿತ ॥ ೩೫ ॥

॥ ಅಗಸ್ತ್ಯ ಉವಾಚ ॥

ನ ಚ ಪ್ರತಿಗ್ರಹೇ ದೋಷೋ ಗೃಹ್ಯತೇ ಪಾರ್ಥಿವೈರ್ನೃಪ ।
ಭವಾನ್ವೈ ತಾರಣೇ ಶಕ್ತ ಸ್ತ್ರೈಲೋಕ್ಯಸ್ಯಾಪಿ ರಾಘವ ॥ ೩೬ ॥

---

೩೨-೩೫. ನನಗೆ ಯಾವ ಆಪತ್ತುಗಳೂ ಬಂದಿಲ್ಲ ಕಷ್ಟಗಳೊದಗಿಲ್ಲ. ದಾನವನ್ನು ಹೇಗೆ ತೆಗೆದುಕೊಳ್ಳಲಿ ? ನನ್ನ ಹೆಂಡತಿಯು ನಾಶವಾಗಿ ಬಹು ದಿವಸವಾಯ್ತು. ಮತ್ತೊಬ್ಬಳನ್ನು ಮದುವೆಯಾಗಿಲ್ಲ ? ಇಂತಹ ನಾನು ದಾನ ತೆಗೆದುಕೊಂಡರೆ ದೋಷಕ್ಕೆ ಗುರಿಯಾಗುವೆನು. ಕ್ಷತ್ರಿಯನು ಕಷ್ಟ ಸ್ಥಿತಿಯನ್ನು ಹೊಂದಿದಾಗ ದಾನ ತೆಗೆದುಕೊಂಡರೆ ದೋಷವನ್ನು ಹೊಂದುವುದಿಲ್ಲವೆಂದು ಮನುವು ಹೇಳಿದ್ದಾನೆ. ಮುದುಕರಾದ ತಾಯಿ ತಂದೆಗಳನ್ನೂ, ಯೋಗ್ಯಳಾದ ಹೆಂಡತಿಯನ್ನೂ, ಚಿಕ್ಕ ಮಕ್ಕಳನ್ನೂ ಅನೇಕ ಕೆಟ್ಟಕೆಲಸಗಳನ್ನಾದರೂ ಮಾಡಿ ರಕ್ಷಿಸಬೇಕೆಂದು ಮನುವು ಹೇಳಿದ್ದಾನೆ ಎಲೈ ಬ್ರಹ್ಮರ್ಷಿಯೇ ! ನೀನು ಕೊಡುವ ದಾನವನ್ನು ನಾನು ತೆಗೆದುಕೊಳ್ಳುವುದಿಲ್ಲ. ಎಲೈ ಸುರಪೂಜಿತನೇ ನನ್ನ ಮೇಲೆ ಕೋಪಮಾಡಬೇಡ.

೩೬. ಅಗಸ್ತ್ಯನು ಹೇಳಿದನು- ಎಲೈ ಧೊರೆಯೆ ! ಧೊರೆಗಳು ದಾನ ತೆಗೆದುಕೊಂಡರೆ ದೋಷವಿಲ್ಲ. ನೀನು ಮೂರು ಲೋಕವನ್ನು ಕಾಪಾಡುವುದರಲ್ಲಿ ಶಕ್ತನು.

ತಾರಯ ಬ್ರಾಹ್ಮಣಂ ರಾಮ ವಿಶೇಷೇಣ ತಪಸ್ವಿನಂ ।
ತಸ್ಮಾತ್ಪ್ರದಾಸ್ಯೇ ವಿಧಿವತ್ಪ್ರತೀಚ್ಛಸ್ವ ನರಾಧಿಪ ॥ ೩೭ ॥

॥ ರಾಮ ಉವಾಚ ॥

ಕ್ಷತ್ರಿಯೇಣ ಕಥಂ ವಿಪ್ರ ಪ್ರತಿಗ್ರಾಹ್ಯಂ ವಿಜಾನತಾ ।
ಬ್ರಾಹ್ಮಣೇನ ಯಥಾ ದತ್ತಂ ತನ್ಮೇ ತ್ವಂ ವಕ್ತುಮರ್ಹಸಿ ॥ ೩೮ ॥

॥ ಅಗಸ್ತ್ಯ ಉವಾಚ ॥

ಆಸನ್ಕೃತಯುಗೇ ರಾಮ ಬ್ರಹ್ಮಭೂತೇ ಪುರಾತನೇ ।
ಅಪಾರ್ಥಿವಾಃ ಪ್ರಜಾಃ ಸರ್ವಾಃ ಪುರಾಣಂ ತು ಶತಕ್ರತುಂ ॥ ೩೯ ॥

ತಾಃ ಪ್ರಜಾ ದೇವದೇವೇಶಂ ಜಾರ್ಥಂ ಸಮುಪಾಗಮನ್ ।
ಸುರಾಣಾಂ ಸ್ಥೀಯತೇ ರಾಜಾ ದೇವದೇವಃ ಶತಕ್ರತುಃ ॥ ೪೦ ॥

ಶ್ರೇಯಸೇಽಸ್ಮಾಸು ಲೋಕೇಶ ಪಾರ್ಥಿವಂ ಕುರು ಸಾಂಪ್ರತಂ ।
ಯಸ್ಮಿನ್ಪೂಜಾಂ ಪ್ರಯುಂಜಾನಾಃ ಪುರುಷಾ ಭುಂಜತೇ ಮಹೀಂ ॥ ೪೧ ॥

---

೩೭. ಎಲೈ ರಾಮನೆ ! ಬ್ರಾಹ್ಮಣನಾದ ನನ್ನನ್ನು ಉದ್ಧಾರಮಾಡು. ಅಲ್ಲದೆ ನಾನು ತಪಸ್ವಿಯೂ ಆಗಿದ್ದೇನೆ. ಆದ್ದರಿಂದ ವಿಧಿವತ್ತಾಗಿ ಕೊಡುತ್ತೇನೆ ತೆಗೆದುಕೊ.

೩೮. ರಾಮನು ಹೇಳಿದನು– ವಿಷಯಗಳನ್ನೂ ತಿಳಿದೂ ಕೂಡ ಕ್ಷತ್ರಿಯನಾದ ನಾನು ಹೇಗೆ ದಾನವನ್ನು ತೆಗೆದುಕೊಳ್ಳಲಿ ! ಅದರಲ್ಲಿಯೂ ಬ್ರಾಹ್ಮಣನು ಕೊಟ್ಟಿದನ್ನು ಹೇಗೆ ತೆಗೆದುಕೊಳ್ಳಲಿ ? ಅದನ್ನು ನನಗೆ ಹೇಳು.

೩೯-೪೧. ಅಗಸ್ತ್ಯನು ಹೇಳಿದನು-- ಎಲೈ ರಾಮನೇ ! ಪೂರ್ವದಲ್ಲಿ ಕೃತಯುಗದಲ್ಲಿ ಹಿಂದಿನ ರಾಜನು ಬ್ರಹ್ಮನಲ್ಲಿ ಐಕ್ಯವಾಗಲು ಪ್ರಜೆಗಳೆಲ್ಲರೂ ರಾಜನಿಲ್ಲದವರಾಗಿ ನೂರು ಯಾಗಗಳನ್ನು ಮಾಡಿದ ಆದಿಪುರುಷನಾದ ದೇವದೇವನಾದ ಬ್ರಹ್ಮನ ಬಳಿಗೆ ರಾಜನಿಗೋಸ್ಕರ ಹೋದರು. ದೇವತೆಗಳಿಗೆ ರಾಜನಾಗಿ ಶತಕ್ರತುವಾದ ಇಂದ್ರನಿದ್ದಾನೆ. ನಮ್ಮಗಳಿಗೆ ಶ್ರೇಯಸ್ಸನ್ನುಂಟುಮಾಡಲು ಈಗ ಒಬ್ಬ ರಾಜನನ್ನು ಮಾಡು. ಅವನನ್ನು ಪೂಜೆಮಾಡುತ್ತ ಪ್ರಜೆಗಳು ಭೂಮಿಯ ಸುಖಗಳನ್ನು ಅನುಭವಿಸಲಿ.

ತತೋ ಬ್ರಹ್ಮಾ ಸುರಶ್ರೇಷ್ಠೋ ಲೋಕಪಾಲಾನ್ ಸವಾಸವಾನ್ ।
ಸಮಾಹೂಯಾಬ್ರವೀತ್ಸರ್ವಾಂಸ್ತೇಜೋಭಾಗೋಽತ್ರ ಯುಜ್ಯತಾಂ ॥ ೪೨ ॥

ತತೋ ದದುರ್ಲೋಕಪಾಲಾಶ್ಚತುರ್ಭಾಗಂ ಸ್ವತೇಜಸಾಂ ।
ಅಕ್ಷಯಶ್ಚ ತತೋ ಬ್ರಹ್ಮಾ ಯತೋ ಜಾತೋಽಕ್ಷಯೋ ನೃಪಃ ॥ ೪೩ ॥

ತಂ ಬ್ರಹ್ಮಾ ಲೋಕಪಾಲಾನಾಮಂಶಂ ಪುಂಸಾಮಯೋಜಯತ್ ।
ತತೋ ನೃಪಸ್ತದಾ ತಾಸಾಂ ಪ್ರಜಾನಾಂ ಕ್ಷೇಮಪಂಡಿತಃ ॥ ೪೪ ॥

ತತ್ರೈಂದ್ರೇಣ ತು ಭಾಗೇನ ಸರ್ವಾನಾಜ್ಞಾಪಯನ್ನೃಪ ।
ವಾರುಣೇನ ಚ ಭಾಗೇನ ಸರ್ವಾನ್ ಪುಷ್ಣಾತಿ ದೇಹಿನಃ ॥ ೪೫ ॥

ಕೌಬೇರೇಣ ತಥಾಂಶೇನ ಅರ್ಥಂ ದದಾತಿ ಯಾಚತೇ ।
ಯಸ್ತು ಯಾಮ್ಯೋ ನೃಪೋ ಭಾಗಸ್ತೇನ ಶಾಸ್ತಿ ಚ ವೈ ಪ್ರಜಾಃ ॥ ೪೬ ॥

---

೪೨. ಆಗ ಬ್ರಹ್ಮನು ಇಂದ್ರನೇ ಮುಂತಾದ ಲೋಕಪಾಲಕರನ್ನು ಕರೆದು. ನಿಮ್ಮ ತೇಜೋ ಭಾಗಗಳನ್ನು ರಾಜನಿಗೋಸ್ಕರ ಕೊಡಿರಿ. ಎಂದನು.

೪೩. ಆಗ ಲೋಕಪಾಲಕರು ತಮ್ಮ ತಮ್ಮ ತೇಜಸ್ಸಿನಿಂದ ಕಾಲು ಕಾಲು ಭಾಗಗಳನ್ನು ತೆಗೆದುಕೊಟ್ಟರು. ಬ್ರಹ್ಮನು ಅಕ್ಷಯವಾಗಿ ಕೊಟ್ಟನು. ಅದರಿಂದ ಅಕ್ಷಯನಾದ ರಾಜನು ಹುಟ್ಟಿದನು.

೪೪. ಬ್ರಹ್ಮನು ತನ್ನ ಅಕ್ಷಯದ ಭಾಗಕ್ಕೆ ಆ ಲೋಕಪಾಲಕರ ಅಂಶವನ್ನು ಸೇರಿಸಿದನು. ಆನಂತರ ಅದರಿಂದ ಉತ್ಪನ್ನನಾದ ರಾಜನು ಪ್ರಜೆಗಳ ಕ್ಷೇಮವನ್ನು ನೋಡುವವನಾದನು.

೪೫-೪೬. ಆ ರಾಜನು ತನ್ನಲ್ಲಿರುವ ಇಂದ್ರನ ಭಾಗದಿಂದ ಎಲ್ಲರಿಗೂ ಆಜ್ಞೆ ಕೊಡುತ್ತಾನೆ. ವರುಣನ ಭಾಗದಿಂದ ಎಲ್ಲರನ್ನು ಕಾಪಾಡುತ್ತಾನೆ. ಕುಬೇರನ ಭಾಗದಿಂದ ಯಾಚಕರಿಗೆ ಬೇಕಾದುದನ್ನು ಕೊಡುತ್ತಾನೆ. ಯಮನ ಭಾಗದಿಂದ ಎಲ್ಲರನ್ನು ಶಿಕ್ಷಿಸುತ್ತಾನೆ.

ತತ್ತ್ವಮೇಂದ್ರೇಣ ಭಾಗೇನ ನರೇಂದ್ರೋಽಸಿ ರಘೂತ್ತಮ ।
ಪ್ರತಿಗೃಹ್ಣೀಷ್ವಾಭರಣಂ ತಾರಣಾರ್ಥಂ ಮಮ ಪ್ರಭೋ ॥ ೪೭ ॥

॥ ಪುಲಸ್ತ್ಯ ಉವಾಚ ॥

ತತೋ ರಾಮಃ ಪ್ರಜಗ್ರಾಹ ಮುನಿಹಸ್ತಾನ್ಮಹಾತ್ಮನಃ ।
ದಿವ್ಯಮಾಭರಣಂ ಚಿತ್ರಂ ಪ್ರದೀಪ್ತಮಿವ ಭಾಸ್ಕರಂ ॥ ೪೮ ॥

ಸಪ್ರತಿಗೃಹ್ಯ ತತೋಽಗಸ್ತ್ಯಾದ್ರಾಘವಃ ಪರವೀರಹಾ ।
ನಿರೀಕ್ಷ್ಯ ಸುಚಿರಂ ಕಾಲಂ ವಿಚಾರ್ಯ ಚ ಪುನಃ ಪುನಃ ॥ ೪೯ ॥

ಮೌಕ್ತಿಕಾನಿ ವಿಚಿತ್ರಾಣಿ ಧಾತ್ರೀಫಲಸಮಾನಿ ಚ ।
ಜಾಂಬೂನದನಿಬದ್ಧಾನಿ ವಜ್ರವಿದ್ರುಮನೀಲಕೈಃ ॥ ೫೦ ॥

ಪದ್ಮರಾಗೈಃ ಸಗೋಮೇದೈರ್ವೈಡೂರ್ಯಪುಷ್ಪರಾಗಕೈಃ ।
ಸುನಿಬದ್ಧಂ ಸುವಿಭಕ್ತಂ ಸುಕೃತಂ ವಿಶ್ವಕರ್ಮಣಾ ॥ ೫೧ ॥

ದೃಷ್ಟ್ವಾ ಪ್ರೀತಿಸಮಾಯುಕ್ತೋ ಭೂಯಶ್ಚೇದಂ ವ್ಯಚಿಂತಯತ್ ।
ನೇದೃಶಾನಿ ಚ ರತ್ನಾನಿ ಮಯಾ ದೃಷ್ಟಾನಿ ಕಾನಿಚಿತ್ ॥ ೫೨ ॥

---

೪೭. ನೀನೂ ಕೂಡ ಇಂದ್ರನ ಭಾಗದಿಂದ ರಾಜನಾಗಿದ್ದೀಯೆ. ನಾನು ಕೊಡುವ ಆಭರಣವನ್ನು ಸ್ವೀಕರಿಸು. ನೀನು ಇದನ್ನು ತೆಗೆದುಕೊಂಡರೆ ನಾನು ಕೃತಾರ್ಥನಾಗುತ್ತೇನೆ.

೪೮. ಪುಲಸ್ತ್ಯನು ಹೇಳಿದನು– ಆಗ ರಾಮನು ಆ ಮಹಿಮನಾದ ಋಷಿಯ ಕೈಯ್ಯಿಂದ ಆ ಪ್ರಕಾಶಮಾನವಾದ ಆಭರಣವನ್ನು ಜ್ವಲಿಸುವ ಸೂರ್ಯನನ್ನು ತೆಗೆದು ಕೊಳ್ಳುವಂತೆ ತೆಗೆದುಕೊಂಡನು.

೪೯-೫೧. ರಾಘವನು ಅದನ್ನು ತೆಗೆದುಕೊಂಡು ನೋಡಿದನು ಅದನ್ನು ಬಹಳ ಹೊತ್ತು ನೋಡಿ ಬಹುವಾಗಿ ಯೋಚಿಸಿದನು. ಅದರಲ್ಲಿ ನೆಲ್ಲಿಕಾಯಿನ ದಪ್ಪ ವಿಚಿತ್ರವಾದ ಮುತ್ತುಗಳಿದ್ದುವು. ವಜ್ರ, ನೀಲ, ಕೆಂಪು, ಪದ್ಮರಾಗ, ಗೋಮೇದಕ, ವೈಡೂರ್ಯ, ಪುಷ್ಯರಾಗಗಳನ್ನು ಬಿಡಿಬಿಡಿಯಾಗಿ ಚಿನ್ನದಿಂದ ಕಟ್ಟಿದ್ದರು. ಇದನ್ನು ವಿಶ್ವಕರ್ಮನು ಬಹು ರಮ್ಯವಾಗಿ ಮಾಡಿದ್ದನು.

೫೨-೫೩. ಅದನ್ನು ನೋಡಿ ಮತ್ತೆ ಹೀಗೆಂದು ಯೋಚಿಸಿದನು. ಇಂತಹ ರತ್ನಗಳನ್ನು ನಾನು ನೋಡಿಯೇ ಇಲ್ಲ. ಒಂದು ಮತ್ತೊಂದರಿಂದ ಪ್ರಕಾಶಿಸುವಂತೆ

ಉಪಶೋಭಾನಿಬದ್ಧಾನಿ ಪೃಥ್ವೀಮೂಲ್ಯಸಮಾನಿ ಚ ।
ವಿಭೀಷಣಸ್ಯ ಲಂಕಾಯಾಂ ನ ದೃಷ್ಟಾನಿ ಮಯಾ ಪುರಾ ॥ ೫೩ ॥

ಇತಿ ಸಂಚಿಂತ್ಯ ಮನಸಾ ರಾಘವಸ್ತಮೃಷಿಂ ತತಃ ।
ಆಗಮಂ ತಸ್ಯ ದಿವ್ಯಸ್ಯ ದ್ರಷ್ಟುಂ ಸಮುಪಚಕ್ರಮೇ ॥ ೫೪ ॥

॥ ಶ್ರೀರಾಮ ಉವಾಚ ॥

ಅತ್ಯದ್ಭುತಮಿದಂ ಬ್ರಹ್ಮನ್ನಪ್ರಾಪ್ಯಂ ಚ ಮಹೀಕ್ಷಿತಾಂ ।
ಕಥಂ ಭಗವತಾ ಪ್ರಾಪ್ತಂ ಕುತೋ ವಾ ಕೇನ ನಿರ್ಮಿತಂ ॥ ೫೫ ॥

ಕುತೂಹಲಕೃತಾಚ್ಚೈವ ಪೃಚ್ಛಾಮಿ ತ್ವಾಂ ಮಹಾಮುನೇ ।
ಕರತಲೇ ಸ್ಥಿತಂ ರತ್ನಂ ಕರಮಧ್ಯೇ ಪ್ರಕಾಶತೇ ॥ ೫೬ ॥

ಅಧಮಂ ತದ್ವಿಜಾನೀಯಾತ್ಸರ್ವಶಾಸ್ತ್ರೇಷು ಗರ್ಹಿತಂ ।
ದಿಶಃ ಪ್ರಕಾಶತೇ ಯತ್ತನ್ಮಧ್ಯಮಂ ಮುನಿಸತ್ತಮ ॥ ೫೭ ॥

---

ಕಟ್ಟಲ್ಪಟ್ಟಿವೆ. ಇವು ಒಂದೊಂದೂ ಭೂಮಿಯ ಬೆಲೆಗೆ ಸಮವಾದುವು. ವಿಭೀಷಣನ ಲಂಕೆಯಲ್ಲಿಯೂ ನಾನು ಇಂತಹ ರತ್ನಗಳನ್ನು ನೋಡಿರಲಿಲ್ಲ.

೫೪ ರಾಮನು ಈ ರೀತಿ ಯೋಚಿಸಿ ಆ ಋಷಿಯನ್ನು ಕುರಿತು ಈ ಒಡವೆಯ ಬರುವಿಕೆಯನ್ನು ಕೇಳಲು ಮೊದಲುಮಾಡಿದನು.

೫೫. ಶ್ರೀರಾಮನು ಹೇಳಿದನು– ಎಲೈ ಋಷಿಯೆ ! ಇದು ಅದ್ಭುತವಾದುದು. ರಾಜರೂ ಕೂಡ ಹೊಂದಲಸಾಧ್ಯವಾದುದು. ನಿನಗೆ ಹೇಗೆ ಸಿಕ್ಕಿತು ? ಎಲ್ಲಿಯದು ? ಯಾರು ಮಾಡಿದರು ?

೫೬. ಎಲೈ ಋಷಿಯೆ ! ಇದರ ಸಂಬಂಧವಾದ ಕುತೂಹಲದಿಂದ ನಿನ್ನನ್ನು ಕೇಳುತ್ತೇನೆ. ಈ ರತ್ನವು ಬೆಟ್ಟಿನ ತುದಿಯಲ್ಲಿದ್ದರೂ ಕೈಯ್ಯಿನ ಮಧ್ಯದಲ್ಲಿ ಪ್ರಕಾಶವು ಬಿದ್ದಿದೆ.

೫೭-೫೯. ಯಾವ ರತ್ನದ ಕಾಂತಿಯು ಕೆಳಗಡೆ ಬೀಳುವುದೋ ಅದು ಅಧಮವು. ಇದನ್ನು ಎಲ್ಲಾ ಶಾಸ್ತ್ರಜ್ಞರೂ ನಿಂದಿಸಿದ್ದಾರೆ. ಕೈಯ್ಯಲ್ಲಿ ಹಿಡಿದಿದ್ದರೆ ಸುತ್ತಲೂ ಪ್ರಕಾಶಿಸಿದರೆ ಅದನ್ನು ಮಧ್ಯಮವೆಂದು ತಿಳಿಯಬೇಕು. ಯಾವುದರ

ಊರ್ಧ್ವಗಂ ಯಚ್ಚ ವಿಶಿಖಮುತ್ತಮಂ ತದುತಾಹೃತಂ ।
ಏತಾನ್ಯುತ್ತಮಜಾತೀನಿ ಋಷಿಭಿಃ ಕಥಿತಾನಿ ಚ ॥ ೫೮ ॥

ಆಶ್ಚರ್ಯಾಣಾಂ ಬಹೂನಾಂ ಚ ದಿವ್ಯಾನಾಂ ಭಗವಾನ್ನಿಧಿಃ ।
ಏವಂ ವದತಿ ಕಾಕುತ್ಸ್ಥೇ ಮುನಿರ್ವಾಕ್ಯಮಥಾಬ್ರವೀತ್ ॥ ೫೯ ॥

॥ ಅಗಸ್ತ್ಯ ಉವಾಚ ॥

ಶೃಣು ರಾಮ ಯಥಾ ವೃತ್ತಂ ಪುರಾ ತ್ರೇತಾಯುಗೇಽಭವತ್ ।
ದ್ವಾಪರೇ ಸಮನುಪ್ರಾಪ್ತೇ ವನೇ ಯದ್ದೃಷ್ಟವಾನಹಂ ॥ ೬೦ ॥

ಆಶ್ಚರ್ಯಂ ಸುಮಹಾಬಾಹೋ ನಿಬೋಧ ರಘುನಂದನ ।
ಪುರಾ ತ್ರೇತಾಯುಗೇ ಹ್ಯಾಸೀದರಣ್ಯಂ ಬಹುವಿಸ್ತರಂ ॥ ೬೧ ॥

ಸಮಂತಾದ್ಯೋಜನಶತಂ ಮೃಗಪಕ್ಷಿವಿವರ್ಜಿತಂ ।
ತಸ್ಮಿನ್ನಿಷ್ಪುರುಷೇಽರಣ್ಯೇ ಕುರ್ವಾಣಸ್ತಪ ಉತ್ತಮಂ ॥ ೬೨ ॥

ಅಹಮಾಕ್ರಮಿತುಂ ಸೌಮ್ಯ ತದರಣ್ಯಮುಪಾಗತಃ ।
ತಸ್ಯಾರಣ್ಯಸ್ಯ ರೂಪಂ ತು ನಿರ್ದೇಷ್ಟುಂ ನಾಸ್ತಿ ಕಃ ಪ್ರಭುಃ ॥ ೬೩ ॥

---

ಬೆಳಕು ಹರಡಿದಂತೆ ಮೇಲುಗಡೆಗೆ ಪ್ರಕಾಶವು ಹೊರಡುವುದೋ ಅದು ಉತ್ತಮವು. ಇವುಗಳು ಉತ್ತಮಜಾತಿಯವೆಂದು ಋಷಿಗಳು ಹೇಳಿದ್ದಾರೆ. ಸ್ವಾಮಿಯಾದ ನೀನು ಬಹು ಆಶ್ಚರ್ಯಗಳಿಗೆ ನಿಧಿಯು. ಎಂಬುದಾಗಿ ಶ್ರೀರಾಮನು ಹೇಳುತ್ತಿರಲು ಅಗಸ್ತ್ಯನು ರಾಮನನ್ನು ಕುರಿತು ಇಂತೆಂದನು.

೬೦-೬೫. ಅಗಸ್ತ್ಯನು ಹೇಳಿದನು– ಎಲೈ ರಾಮನೆ! ಪೂರ್ವದಲ್ಲಿ ತ್ರೇತಾ ಯುಗದಲ್ಲಿ ನಡೆದ ಒಂದು ವಿಷಯವನ್ನು ಕೇಳು. ಅದನ್ನು ದ್ವಾಪರಯುಗದಲ್ಲಿ ನಾನು ಕಂಡೆನು. ಎಲೈ ಮಹಾಬಾಹುವೆ! ಈ ಆಶ್ಚರ್ಯವನ್ನು ಕೇಳು. ಹಿಂದೆ ತ್ರೇತಾ ಯುಗದಲ್ಲಿ ಬಹು ವಿಸ್ತಾರವಾದ ಒಂದು ಅರಣ್ಯವಿದ್ದಿತು. ಅದು ನೂರು ಯೋಜನದ ಅಗಲವಿದ್ದಿತು. ಮೃಗಗಳಾಗಲಿ ಪಕ್ಷಿಗಳಾಗಲಿ ಅಲ್ಲಿರಲಿಲ್ಲ. ಆ ಜನವಿಲ್ಲದ ಅರಣ್ಯದಲ್ಲಿ ಚೆನ್ನಾಗಿ ತಪಸ್ಸು ಮಾಡಬೇಕೆಂದು ಆ ಸ್ಥಳವನ್ನು ಆಕ್ರಮಿಸಲು ಅಲ್ಲಿಗೆ ಹೋದೆನು. ಆ ಅರಣ್ಯದ ಸೌಂದರ್ಯವನ್ನು ವರ್ಣಿಸಲು ಯಾರಿಗೆ ತಾನೆ ಆದೀತು? ಹಣ್ಣು

**ಫಲಮೂಲೈಸ್ತಥಾ ಶಾಕೈರ್ಬಹುರೂಪೈಶ್ಚ ಕಾನನೈಃ ।**
**ತಸ್ಯಾರಣ್ಯಸ್ಯ ಮಧ್ಯೇ ತು ಸರೋ ಯೋಜನಮಾಯತಂ ॥ ೬೪ ॥**

**ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಂ ।**
**ತತ್ರಾಶ್ಚರ್ಯಂ ಮಯಾ ದೃಷ್ಟಂ ನಿಸ್ಸತ್ವಂ ಚೇಹ ಉತ್ತಮಂ ॥ ೬೫ ॥**

**ಸರಸ್ಯಭ್ಯಚರನ್ನೇಕೋ ಬಹುಪಕ್ಷಿಗಣಾವೃತಂ ।**
**ಸಮೀಪೇ ತಸ್ಯ ಸರಸೋ ದದರ್ಶಾಹಂ ಮಹಾಶ್ರಮಂ ॥ ೬೬ ॥**

**ಪುರಾಣಂ ಪುಣ್ಯಮತ್ಯರ್ಥಂ ತಪಸ್ವಿಜನವರ್ಜಿತಂ ।**
**ತತ್ರಾಹಮವಸಂ ರಾತ್ರಿಂ ನೈದಾಘೀಂ ಪುರುಷರ್ಷಭ ॥ ೬೭ ॥**

**ಪ್ರಭಾತೇ ಪುನರುತ್ಥಾಯ ಸರಸ್ತದುಪಚಕ್ರಮೇ ।**
**ಅಥಾಪಶ್ಯಂ ಬೃಹಚ್ಛಾವಂ ಸುಪುಷ್ಟಮಜರಂ ಕ್ವಚಿತ್ ॥ ೬೮ ॥**

---

ಗೆಡ್ಡೆ ಕಾಯಿಗಳು ಇವೇ ಮುಂತಾದುವುಗಳಿಂದ ಆ ಕಾಡು ಕೂಡಿದ್ದಿತು. ಆ ಕಾಡಿನ ಮಧ್ಯದಲ್ಲಿ ಒಂದು ಸರೋವರವಿರುವುದು. ಅದು ಒಂದು ಯೋಜನದ ಅಗಲವಿರುವುದು. ಅಲ್ಲಿ ಹಂಸ, ಬಕ, ಚಕ್ರವಾಕವೇ ಮುಂತಾದುವುಗಳು ಇದ್ದುವು. ಅಲ್ಲಿ ಒಂದು ಆಶ್ಚರ್ಯವನ್ನು ನೋಡಿದೆನು. ಉತ್ತಮವಾದ ಪ್ರಾಣವಿಲ್ಲದ ಒಂದು ಹೆಣವು ಅಲ್ಲಿ ಬಿದ್ದಿದ್ದಿತು.

೬೬. ಆ ಕಾಡಿನ ಮಧ್ಯದ ಸರೋವರದ ಹತ್ತಿರ ನಾನೊಬ್ಬನೇ ಸುತ್ತುತ್ತ ಬಹು ಪಕ್ಷಿಗಳಿಂದ ಕೂಡಿದ ಆ ಸರೋವರದ ಹತ್ತಿರ ಒಂದು ಆಶ್ರಮವನ್ನು ಕಂಡೆನು.

೬೭. ಬಹು ಹಳದಾದ ಪುಣ್ಯಕರವಾದ ತಪಸ್ವಿ ಜನಗಳಿಲ್ಲದ ಆ ಜಾಗದಲ್ಲಿ ಆ ಬೇಸಿಗೆಯ ಒಂದು ರಾತ್ರಿಯಲ್ಲಿ ಅಲ್ಲಿಯೇ ಇದ್ದೆನು.

೬೮. ಬೆಳಗ್ಗೆ ಎದ್ದು ಆ ಸರೋವರದ ಸಮೀಪದಲ್ಲಿ ಸುತ್ತುತ್ತಿರುವಾಗ ಒಂದು ದೊಡ್ಡ ಹೆಣವನ್ನು ಕಂಡೆನು. ಅದು ಒಳ್ಳೆ ಮೈಬಂದು ಕೊಬ್ಬಿದುದಾಗಿಯೂ ಕೆಟ್ಟಿಲ್ಲದೆಯೂ ಇದ್ದಿತು.

ತಿಷ್ಠಂತಂ ಪರಯಾ ಲಕ್ಷ್ಮ್ಯಾ ಸರಸೋ ನಾತಿದೂರತಃ ।
ತದರ್ಥಂ ಚಿಂತಯಾನೋಽಹಂ ಮುಹೂರ್ತಮಿವ ರಾಘವ ॥ ೬೯ ॥

ತಿಷ್ಠತಸ್ತು ಶರೀರಸ್ಯ ಕಿಮಿದಂ ತ್ವಿತಿ ಚಿಂತಯನ್ ।
ಅಶರಣ್ಯೇ ವನೇ ತಸ್ಮಿನ್ನಿದಮೇಕಂ ಮಹತ್ಸರಃ ॥ ೭೦ ॥

ಅಸ್ಯ ತೀರಗತಃ ಪ್ರಾಣೀ ಕೋಽಪ್ಯೇಷ ಪುರುಷರ್ಷಭ ।
ಮುನಿರ್ವಾ ಪಾರ್ಥಿವೋ ವಾಪಿ ಕ್ವ ಮುನಿಃ ಪಾರ್ಥಿವೋಽಪಿ ವಾ ॥ ೭೧ ॥

ಅಥವಾ ಪಾರ್ಥಿವಸ್ಯಾಪಿ ವನೇ ವೈ ಸಂಭವಃ ಕುತಃ ।
ಅತೀತೇಽಹನಿ ರಾತ್ರೌ ವಾ ಪ್ರಾತರ್ವಾ ಮ್ರಿಯತೇ ಯದಿ ॥ ೭೨ ॥

ಪದಂ ದೃಷ್ಟಂ ನ ಚಾನ್ಯಸ್ಯ ಮಯಾತ್ರ ಭ್ರಮತಾ ವನೇ ।
ಕ ಏಷ ಕಥಂ ವೈ ಮೃತ್ಯುಃ ಕಥಂ ಪ್ರಾಪ್ತೋ ಮಹಾವನಂ ॥ ೭೩ ॥

ಅವಶ್ಯಂ ತು ಮಯಾ ಜ್ಞೇಯಃ ಸರ್ವಸ್ಯಾಸ್ಯ ವಿನಿಶ್ಚಯಃ ।
ಯಾವದೇವಂ ಸ್ಥಿತಶ್ಚಾಹಂ ಚಿಂತಯಾನೋ ರಘೂತ್ತಮ ॥ ೭೪ ॥

---

೬೯. ಅದು ಸರೋವರದ ಹತ್ತಿರ ಬಿದ್ದಿದ್ದಿತು. ಮತ್ತು ಕಾಂತಿಯಿಂದ ಕೂಡಿದ್ದಿತು. ಅದನ್ನು ನೋಡಿ ಇದೇಕೆ ಹೀಗಿರುವುದೆಂದು ಯೋಚಿಸುತ್ತಾ ಸ್ವಲ್ಪ ಹೊತ್ತಿದ್ದೆನು.

೭೦-೭೧. ಆ ಶರೀರದ ಬಳಿ ನಿಂತು ಇದೇನೆಂದು ಯೋಚಿಸುತ್ತಿದ್ದೆನು. ಯಾರೂ ಇಲ್ಲದ ಈ ಮಹಾಕಾಡಿನಲ್ಲಿ ಇದೊಂದು ದೊಡ್ಡ ಸರೋವರವಿದೆ. ಇದರ ದಡದಲ್ಲಿ ಯಾವನೋ ಒಬ್ಬನು ಪ್ರಾಣಬಿಟ್ಟಿದ್ದಾನೆ. ಇವನು ಒಬ್ಬ ಋಷಿಯೋ ರಾಜನೋ ಆಗಿರಬೇಕು. ಇಲ್ಲಿ ಮುನಿಯು ಬರಲು ಕಾರಣವಿಲ್ಲ. ಬಹುಶಃ ರಾಜನೇ ಇರಬೇಕು.

೭೨-೭೩. ಒಂದು ವೇಳೆ ರಾಜನಾದರೂ ಇಲ್ಲಿಗೆ ಏಕೆ ಬಂದಿರಬೇಕು ? ನಿನ್ನೆಯಾಗಲಿ ಬೆಳಗ್ಗೆಯಾಗಲಿ ಸತ್ತಿದ್ದರೆ ನಾನು ಕಾಡಿನಲ್ಲಿ ಸುತ್ತುತ್ತಿದ್ದಾಗ ಈತನ ಹೆಜ್ಜೆಯ ಗುರುತನ್ನೇ ಕಾಣಲಿಲ್ಲವಲ್ಲ ? ಇವನಾರು ? ಹೇಗೆ ಸತ್ತನು ? ಇಲ್ಲಿಗೆ ಹೇಗೆ ಬಂದನು ?

೭೪. ನಾನು ಇದರ ವಿಷಯವನ್ನೆಲ್ಲಾ ನಿಶ್ಚಯವಾಗಿ ತಿಳಿಯಬೇಕು. ಎಂದು ದೃಢಮಾಡಿಕೊಂಡು ಆ ಸರೋವರದ ಬಳಿ ಯೋಚಿಸುತ್ತಾ ನಿಂತಿದ್ದೆನು.

**ಅಥಾಪಶ್ಯಂ ಮುಹುರ್ತಾತ್ತು ದಿವ್ಯಮದ್ಭುತದರ್ಶನಂ ।**
**ವಿಮಾನಂ ಪರಮೋದಾರಂ ಹಂಸಯುಕ್ತಂ ಮನೋಜವಂ　　॥ ೭೫ ॥**

**ತತ್ರೋಪರಿ ಸಹಸ್ರಂ ತು ವಿಮಾನೇಽಪ್ಸರಸಾಂ ನೃಪ ।**
**ಗಂಧರ್ವಾಣಾಂ ತು ತತ್ರಸ್ಥಂ ರಮಯಂತಿ ವರಂ ನರಂ　　॥ ೭೬ ॥**

**ಗಾಯಂತಿ ದಿವ್ಯಗೇಯಾನಿ ವಾದಯಂತಿ ತಥಾಪರೇ ।**
**ಅಥಾಪಶ್ಯಂ ನರಂ ತಸ್ಮಾದ್ವಿಮಾನಾದವರುಹ್ಯ ತು　　॥ ೭೭ ॥**

**ಸ್ವಮಾಸಂ ಭಕ್ಷಮಾಣಂ ತಂ ಸ್ನಾತ್ವಾ ರಘುಕುಲೋದ್ವಹ ।**
**ತತೋ ಭುಕ್ತ್ವಾ ಯಥಾಕಾಮಂ ಸ ಮಾಂಸಂ ಬಹುಪೀವರಂ　　॥ ೭೮ ॥**

**ಅವತೀರ್ಯ ಸರಃ ಶೀಘ್ರಂ ದೃಷ್ಟ್ವಾರೋಹದ್ದಿವಂ ಪುನಃ ।**
**ತಮಹಂ ದೇವಸಂಕಾಶಮಾರೋಹಂತಂ ಶ್ರಿಯಾನ್ವಿತಂ　　॥ ೭೯ ॥**

**ಭೋ ಭೋಃ ಸ್ವರ್ಗಿನ್ಮಹಾಭಾಗ ಪೃಚ್ಛಾಮಿ ತ್ವಾಂ ಕಥಂ ತ್ವಿದಂ ।**
**ಜುಗುಪ್ಸಿತಂ ತವಾಹಾರಂ ಗತಿಶ್ಚೇಯಂ ತವೋತ್ತಮಾ　　॥ ೮೦ ॥**

---

೭೫. ಆಮೇಲೆ ಒಂದು ಗಳಿಗೆಯಲ್ಲಿ ದಿವ್ಯವಾದ ಚೆನ್ನಾಗಿರುವ, ವಿಶಾಲವಾದ ಹಂಸಗಳಿಂದ ಕೂಡಿದ ಮನೋವೇಗವುಳ್ಳ ಒಂದು ವಿಮಾನವನ್ನು ನೋಡಿದೆನು.

೭೬. ಆ ವಿಮಾನದೊಳಗೆ ಸಾವಿರಜನ ಅಪ್ಸರಸ್ತ್ರೀಯರೂ ಅನೇಕಜನ ಗಂಧರ್ವರೂ ಇದ್ದುಕೊಂಡು ಅದರಲ್ಲಿರುವ ಮನುಷ್ಯನನ್ನು ಸಂತೋಷಪಡಿಸುತ್ತಿದ್ದರು.

೭೭-೮೦. ಆ ವಿಮಾನದಲ್ಲಿ ಕೆಲವರು ಗಾನಮಾಡುತ್ತಲೂ ಕೆಲವರು ವಾದ್ಯಗಳನ್ನು ನುಡಿಸುತ್ತಲೂ ಇದ್ದರು. ಅನಂತರ ಆ ವಿಮಾನದಿಂದ ಒಬ್ಬ ಮನುಷ್ಯನು ಕೆಳಕ್ಕೆ ಇಳಿದು ಆ ಸರೋವರದಲ್ಲಿ ಸ್ನಾನಮಾಡಿ ತನ್ನ ಮಾಂಸವನ್ನು ತಿನ್ನುತ್ತಿದ್ದುದನ್ನು ನೋಡಿದೆನು. ಅವನು ಆ ಕೊಬ್ಬಿರುವ ಹೆಣದ ಮಾಂಸವನ್ನು ಬೇಕಾದಷ್ಟು ತಿಂದು ಸರೋವರಕ್ಕೆ ಇಳಿದು ಸ್ನಾನಮಾಡಿ ಮತ್ತೆ ವಿಮಾನವನ್ನು ಹತ್ತಿದನು. ದೇವತೆಗಳಂತಿರುವ ಕಾಂತಿಯಿಂದ ಕೂಡಿದ ವಿಮಾನವನ್ನು ಹತ್ತಿದ ಆತನನ್ನು ನೋಡಿ ಅಯ್ಯಾ ಸ್ವರ್ಗದ ಪುಣ್ಯವಂತನೇ ! ನಿನ್ನ ಆಹಾರವನ್ನು ನೋಡಿದರೆ ಅಸಹ್ಯಕರವಾದುದು. ನಿನ್ನ ಪ್ರಯಾಣವನ್ನು ನೋಡಿದರೆ ಉತ್ತಮಸ್ಥಾನಕ್ಕೆ ಸೇರಿದುದು. ಇದೇಕೆ ? ಎಂದು ಕೇಳುತ್ತೇನೆ.

ಯದಿ ಗುಹ್ಯಂ ನ ಚೈತತ್ತೇ ಕಥಯಾಸ್ಮದ್ವಿಧೇ ಭವಾನ್ ।
ಕಾಮತಃ ಶ್ರೋತುಮಿಚ್ಛಾಮಿ ಕಿಮೇತತ್ಪರಮಂ ವಚಃ ॥ ೮೧ ॥

ಕೋ ಭವಾನ್ದೇವಸಂಕಾಶ ಆಹಾರಸ್ತು ವಿಗರ್ಹಿತಃ ।
ತ್ವಯಾ ತು ಭುಜ್ಯತೇ ಸೌಮ್ಯ ಕಿಮರ್ಥಂ ಕ್ವ ಚ ವರ್ತಸೇ ॥ ೮೨ ॥

ಕಸ್ಮಾಯಮೀಶ್ವರೋ ಭಾವೋ ಶಾವತ್ವೇನ ವಿನಿರ್ಮಿತಃ ।
ಆಹಾರಂ ಚ ಕಥಂ ನಿಂದ್ಯಂ ಶ್ರೋ ಮಿಚ್ಛಾಮಿ ತತ್ತ್ವತಃ ॥ ೮೩ ॥

ಶ್ರುತ್ವಾ ತು ಭಾಷಿತಂ ವಾಕ್ಯಂ ಮನೋರಮಂ ಶುಭಾಕ್ಷರಂ ।
ಪ್ರಾಂಜಲಿಃ ಪ್ರತ್ಯುವಾಚೇದಂ ಸ ಸ್ವರ್ಗೀ ರಘುನಂದನ ॥ ೮೪ ॥

॥ ಶ್ವೇತ ಉವಾಚ ॥

ಶೃಣು ಮೇಽದ್ಯ ಯಥಾವೃತ್ತಂ ಮಮೇದಂ ಸುಖದುಃಖಂ ।
ಧರ್ಮೋ ಹಿ ದುರತಿಕ್ರಮ್ಯಃ ಶೃಣು ಯತ್ಪೃಚ್ಛಸೇ ದ್ವಿಜ ॥ ೮೫ ॥

---

೮೧. ಇದೇನೂ ಗುಟ್ಟಿಲ್ಲದಿದ್ದರೆ ನಮ್ಮಂತಹವರಿಗೆ ತಿಳಿಸು. ಆಸೆಯಿಂದ ಕೇಳಬೇಕೆಂದಿದ್ದೇನೆ. ಈ ವಿಷಯವನ್ನು ಹೇಳು.

೮೨. ದೇವತೆಗಳಂತಿರುವ ನೀನಾರು? ಈ ನಿಂದ್ಯವಾದ ಆಹಾರವನ್ನೇಕೆ ತಿನ್ನುತ್ತೀಯೆ? ಎಲ್ಲಿದ್ದೀಯೆ?

೮೩. ಈ ಉತ್ತಮವಾದ ಈಶ್ವರರೂಪವನ್ನು ಹೊಂದಿ ಈ ಶವದಂತೆ ಇದು ನಿರ್ಮಿತವಾಗಿರಲು ಕಾರಣವೇನು? ಈ ನಿಂದ್ಯವಾದ ಶವರೂಪವಾದ ಆಹಾರವು ನಿನಗೆ ನಿರ್ಮಾಣವಾಗಲು ಕಾರಣವೇನು? ಸರಿಯಾಗಿ ಕೇಳಬೇಕೆಂದಿದ್ದೇನೆ? ಹೇಳು.

೮೪. ಮನೋಹರವಾದ ಶುಭವನ್ನುಂಟುಮಾಡುವ ಈ ಮಾತುಗಳನ್ನು ಕೇಳಿ ಆ ಸ್ವರ್ಗದ ಮನುಷ್ಯನು ಕೈ ಮುಗಿದುಕೊಂಡು ಇಂತೆಂದನು.

೮೫. ಶ್ವೇತನು ಹೇಳಿದನು– ಎಲೈ ಬ್ರಾಹ್ಮಣನೆ! ನನಗೆ ಸುಖದುಃಖಗಳನ್ನುಂಟುಮಾಡುವ ಚರಿತ್ರೆಯನ್ನು ಕ್ರಮವಾಗಿ ಕೇಳು. ಧರ್ಮವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ.

ಪುರಾ ವೈದರ್ಭಕೋ ರಾಜಾ ಪಿತಾ ಮೇ ಹಿ ಮಹಾಯಶಾಃ ।
ವಸುದೇವ ಇತಿ ಖ್ಯಾತಸ್ತ್ರಿಷು ಲೋಕೇಷು ಧಾರ್ಮಿಕಃ ॥ ೮೬ ॥

ತಸ್ಯ ಪುತ್ರದ್ವಯಂ ಬ್ರಹ್ಮನ್ ದ್ವಾಭ್ಯಾಂ ಸ್ತ್ರೀಭ್ಯಾಮಜಾಯತ ।
ಅಹಂ ಶ್ವೇತ ಇತಿ ಖ್ಯಾತೋ ಯವೀಯಾನ್ ಸುರಥೋಽಭವತ್ ॥ ೮೭ ॥

ಪಿತರ್ಯುಪರತೇ ತಸ್ಮಿನ್ ಪೌರಾ ಮಾಮಭ್ಯಷೇಚಯನ್ ।
ತತ್ರಾಹಂ ಕಾರಯನ್ರಾಜ್ಯಂ ಧರ್ಮೇಣ ಸುಸಮಾಹಿತಃ ॥ ೮೮ ॥

ಏವಂ ವರ್ಷಸಹಸ್ರಾಣಿ ಬಹೂನಿ ಸಮುಪಾವ್ರಜನ್ ।
ರಾಜ್ಯಂ ಕಾರಯತೇ ಮಹ್ಯಂ ಪ್ರಜಾಶ್ಚ ಪರಿಪಾಲಯನ್ ॥ ೮೯ ॥

ಸೋಽಹಂ ನಿಮಿತ್ತೇ ಕಸ್ಮಿಂಶ್ಚಿದ್ವೈರಾಗ್ಯೇಣ ದ್ವಿಜೋತ್ತಮ ।
ಮರಣಂ ಹೃದಯೇ ಕೃತ್ವಾ ತಪೋವನಮುಪಾಗಮಂ ॥ ೯೦ ॥

ಸೋಽಹಂ ವನಮಿದಂ ಪ್ರಾಪ್ಯ ಭೃಶಂ ಪಕ್ಷಿವಿವರ್ಜಿತಂ ।
ಪ್ರವಿಷ್ಟಸ್ತಪ ಆಸ್ಥಾತುಮಸ್ಯೈವ ಸರಸೋಽನ್ತಿಕೇ ॥ ೯೧ ॥

---

೮೬. ಪೂರ್ವದಲ್ಲಿ ಮಹಾ ಯಶಸ್ವಿಯಾದ ವಿದರ್ಭರಾಜನೊಬ್ಬನಿದ್ದನು. ಅವನೇ ನನ್ನ ತಂದೆಯು. ಅವನ ಹೆಸರು ವಸುದೇವನು. ಬಹು ಧರ್ಮಿಷ್ಠನು ಮೂರು ಲೋಕದಲ್ಲಿಯೂ ಪ್ರಸಿದ್ಧಿಯನ್ನು ಹೊಂದಿದ್ದನು.

೮೭. ಅವನಿಗೆ ಇಬ್ಬರು ಹೆಂಡಿರು. ಒಬ್ಬೊಬ್ಬರಿಗೂ ಒಂದೊಂದು ಗಂಡು ಮಗುವಾಯಿತು. ಅವರಲ್ಲಿ ನಾನೇ ದೊಡ್ಡವನಾದ ಶ್ವೇತನು. ಸುರಥನು ಕಿರಿಯವನು.

೮೮. ತಂದೆಯು ಸಾಯುತ್ತಲೂ ಪ್ರಜೆಗಳು ನನಗೆ ಪಟ್ಟಕಟ್ಟಿದರು. ನಾನೂ ಕೂಡ ಧರ್ಮದಿಂದ ರಾಜ್ಯಭಾರಮಾಡುತ್ತಲಿದ್ದೆನು.

೮೯-೯೦. ಪ್ರಜೆಗಳನ್ನು ಕಾಪಾಡುತ್ತ ರಾಜ್ಯಭಾರಮಾಡುತ್ತಿರಲು ಬಹು ವರ್ಷಗಳು ಕಳೆದುವು ಯಾವುದೋ ಕಾರಣದಿಂದ ವೈರಾಗ್ಯವು ಹುಟ್ಟಿತು. ಮರಣ ವನ್ನು ಸಿದ್ಧಮಾಡಿಕೊಂಡು ಕಾಡಿನಲ್ಲಿ ತಪೋವನಕ್ಕೆ ಹೋದೆನು

೯೧. ನಾನು ಪಶುಪಕ್ಷಿಗಳು ಇಲ್ಲದಿರುವ ಈ ವನಕ್ಕೆ ಬಂದು ಈ ಕೊಳದ ಹತ್ತಿರ ತಪಸ್ಸು ಮಾಡಲು ಬಂದೆನು.

ರಾಜ್ಯೇಽಭಿಷಿಚ್ಯ ಸುರಥಂ ವಿಹರಂತಂ ಮಹಾರಥಂ ।
ಇದಂ ಸರಃ ಸಮಾಶ್ರಿತ್ಯ ತಪಸ್ತಪ್ತಂ ಸುದಾರುಣಂ ॥ ೯೨ ॥

ಸೋಽಹಂ ವರ್ಷಸಹಸ್ರಾಣಿ ಹ್ಯಶೀತಿಸ್ತಪ್ತವಾನ್ವನೇ ।
ಶುಭಂ ತು ಭುವನಂ ಪ್ರಾಪ್ತೋ ಬ್ರಹ್ಮಲೋಕಮನುತ್ತಮಂ ॥ ೯೩ ॥

ಸ್ವರ್ಗಸ್ಥಸ್ಯ ಚ ಮೇ ಬ್ರಹ್ಮನ್ ಕ್ಷುತ್ಪಿಪಾಸೇ ದ್ವಿಜೋತ್ತಮ ।
ಅಬಾಧೇತಾಂ ಭೃಶಂ ಚಾಹಮಭವಂ ವ್ಯಥಿತೇಂದ್ರಿಯಃ ॥ ೯೪ ॥

ತತಸ್ತ್ರಿಭುವನಶ್ರೇಷ್ಠಮವೋಚಂ ವೈ ಪಿತಾಮಹಂ ।
ಭಗವನ್ ಸ್ವರ್ಗ ಲೋಕೋಽಯಂ ಕ್ಷುತ್ಪಿಪಾಸಾವಿವರ್ಜಿತಃ ॥ ೯೫ ॥

ಕಸ್ಯೇಯಂ ಕರ್ಮಣಃ ಪ್ರಾಪ್ತಿಃ ಕ್ಷುತ್ಪಿಪಾಸೇ ಯತೋ ಹಿ ಮೇ ।
ಆಹಾರಃ ಕಶ್ಚ ಮೇ ದೇವ ಬ್ರೂಹಿ ತ್ವಂ ಶ್ರೀಪಿತಾಮಹ ॥ ೯೬ ॥

ತತಃ ಪಿತಾಮಹಃ ಪ್ರಾಹ ಚಿರಂ ಧ್ಯಾತ್ವಾ ಮಹಾಮುನೇ ।
ಮಾಮುವಾಚ ತದಾ ವಾಕ್ಯಂ ನಾಸ್ತಿ ಭೋಜ್ಯಂ ಸ್ವದೇಹಜಂ ॥ ೯೭ ॥

---

೯೨. ಮಹಾರಥನಾದ ನನ್ನ ತಮ್ಮನಾದ ಸುರಥನನ್ನು ರಾಜ್ಯದಲ್ಲಿ ಅಭಿಷೇಕ ಮಾಡಿದೆನು. ಈ ಸರೋವರದಬಳಿಗೆ ಬಂದು ಉಗ್ರವಾದ ತಪಸ್ಸನ್ನು ಮಾಡುತ್ತಿದ್ದೆನು.

೯೩. ಇಲ್ಲಿ ನಾನು ಎಂಭತ್ತುಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿ ಈ ಶುಭವಾದ ಬ್ರಹ್ಮಲೋಕವನ್ನು ಹೊಂದಿದೆನು.

೯೪. ನಾನು ಸ್ವರ್ಗವನ್ನು ಹೊಂದಿದರೂ ಹಸಿವು ಬಾಯಾರಿಕೆಗಳು ನನ್ನನ್ನು ಬಂಧಿಸುತ್ತಿದ್ದುವು. ಆದರಿಂದ ನನಗೆ ಬಹು ದುಃಖವಾಯಿತು.

೯೫. ಆಗ ಮೂರು ಲೋಕಕ್ಕೂ ಶ್ರೇಷ್ಠನಾದ ಬ್ರಹ್ಮನನ್ನು ಕುರಿತು ಇಂತೆಂದನು. ಎಲೈ ಭಗವಂತನೆ! ಈ ಸ್ವರ್ಗಲೋಕವು ಹಸಿವು ಬಾಯಾರಿಕೆಗಳನ್ನುಂಟು ಮಾಡದಿರಬೇಕು.

೯೬. ನನಗೆ ಈ ಹಸಿವು ಬಾಯಾರಿಕೆಗಳಿವೆಯಲ್ಲ; ಇದು ಯಾವ ಕರ್ಮದ ಫಲವು ? ನನಗೆ ಆಹಾರ ಯಾವುದು ? ಎಲೈ ಪಿತಾಮಹನೆ ನನಗೆ ಹೇಳು.

೯೭-೯೮. ಆಗ ಬ್ರಹ್ಮನು ಬಹು ಹೊತ್ತು ಯೋಚಿಸಿ ಇಂತೆಂದನು. ಅಯ್ಯಾ ನಿನ್ನ ದೇಹದಿಂದ ಉತ್ಪನ್ನವಾದ ನಿನ್ನ ಮಾಂಸವು ಹೊರತಾಗಿ ಬೇರೆ ಆಹಾರವು ನಿನ

ಋತೇ ಸ್ವಾನಿ ಚ ಮಾಂಸಾನಿ ತಾನಿ ಭಕ್ಷಯ ನಿತ್ಯಶಃ ।
ಸ್ವಶರೀರಂ ಹಿ ತೇ ಪುಷ್ಟಂ ಕುರ್ವತಾ ತಪ ಉತ್ತಮಂ ॥ ೯೮ ॥

ನಾದತ್ತಂ ಜಾಯತೇ ತಾತ ಕಿಂಚಿದತ್ರ ಮಹೀತಲೇ ।
ಅಪಿ ಚೇದ್ಭಿಕ್ಷಮಾಣಾಯ ಭಿಕ್ಷಾಪಿ ಪ್ರಾಣಿನೇ ಪುರಾ ॥ ೯೯ ॥

ನ ಹಿ ದತ್ತಾ ಗೃಹೇ ಭ್ರಾಂತ್ಯಾ ಮೋಹಾದತಿಥಯೇ ತಥಾ ।
ತೇನ ಸ್ವರ್ಗಗತಸ್ಯಾಪಿ ಕ್ಷುತ್ಪಿಪಾಸೇ ತವಾಧುನಾ ॥ ೧೦೦ ॥

ಸ ತ್ವಂ ಪ್ರಪುಷ್ಟಮಾಹಾರೈಃ ಸ್ವಶರೀರ ಮನುತ್ತಮಂ ।
ಭಕ್ಷಯಸ್ವ ಚ ರಾಜೇಂದ್ರ ಸಾ ತೇ ತೃಪ್ತಿರ್ಭವಿಷ್ಯತಿ ॥ ೧೦೧ ॥

ಏವಮುಕ್ತಸ್ತತೋ ದೇವಂ ಬ್ರಾಹ್ಮಣಮಹಮುಕ್ತವಾನ್ ।
ಭಕ್ಷಿತೇ ಚ ಸ್ವಕೇ ದೇಹೇ ಪುನರನ್ಯನ್ನ ಮೇ ವಿಭೋ ॥ ೧೦೨ ॥

ಕ್ಷುಧಾನಿರ್ಧಾರಣಂ ದೇವ ದೇಹಸ್ಯಾಸ್ಯ ವಿಲೋಕನೇ ।
ವದ ಮೇ ಚಾಕ್ಷಯಂ ದೇವ ತೃಪ್ತಿರ್ಮೇ ಜಾಯತೇ ಯಥಾ ॥ ೧೦೩ ॥

---

ಗಿಲ್ಲ. ಅದನ್ನೇ ನಿತ್ಯವೂ ತಿನ್ನು ನೀನು ಉತ್ತಮವಾದ ತಪಸ್ಸನ್ನು ಮಾಡುತ್ತಿದ್ದಾಗ ನಿನ್ನ ದೇಹವು ಕೊಬ್ಬಿ ಬೆಳೆದಿತ್ತು.

೯೯-೧೦೦. "ಅಪ್ಪ! ಭೂಮಿಯಲ್ಲಿ ನಾವು ಕೊಡದಿದ್ದುದು ಇಲ್ಲಿ ಸಿಕ್ಕುವುದಿಲ್ಲ. ನೀನು ರಾಜ್ಯದಲ್ಲಿರುವಾಗಲೂ ಮನೆಗೆ ಭಿಕ್ಷೆಗೆ ಬಂದ ಭಿಕ್ಷುಕರಿಗೆ ಅಜ್ಞಾನದಿಂದಾದರೂ ಒಂದು ಹಿಡಿ ಭಿಕ್ಷವನ್ನು ಹಾಕಲಿಲ್ಲ. ಅದರಿಂದಲೇ ಸ್ವರ್ಗಕ್ಕೆ ಬಂದರೂ ಈ ಹಸಿವು ಬಾಯಾರಿಕೆಗಳು ನಿನಗೆ ತಪ್ಪಲಿಲ್ಲವು.

೧೦೧. ಆದ್ದರಿಂದ ನೀನು ಕೊಬ್ಬಿದ ಉತ್ತಮವಾದ ನಿನ್ನ ಶರೀರವನ್ನು ತಿನ್ನು ಹೋಗು. ಅದರಿಂದ ನಿನಗೆ ತೃಪ್ತಿಯಾಗುತ್ತದೆ.

೧೦೨-೧೦೩. ಬ್ರಹ್ಮನು ಹೀಗೆನ್ನಲು ಆಗ ನಾನು ಬ್ರಹ್ಮನನ್ನು ಕುರಿತು ಇಂತೆಂದನು. ಎಲೈ ಬ್ರಹ್ಮನೇ! ನನ್ನ ಶರೀರವನ್ನು ನಾನು ತಿಂದುಬಿಟ್ಟರೆ ಬೇರೊಂದಿಲ್ಲ. ಆದ್ದರಿಂದ ಆ ದೇಹವನ್ನು ನೋಡುವುದರಿಂದಲೇ ನನಗೆ ಹಸಿವು ಅಡಗುವಂತೆಯೂ ತೃಪ್ತಿಯಾಗುವಂತೆಯೂ ಮಾಡು.

ತತೋಽಬ್ರವೀತ್ಪುನರ್ಬ್ರಹ್ಮಾ ದೇಹಸ್ತೇ ತ್ವಕ್ಷಯಃ ಕೃತಃ ।
ಭಕ್ಷಯಿತ್ವಾಮೃತರಸಂ ಯಾ ತೇ ತೃಪ್ತಿರ್ಭವಿಷ್ಯತಿ ॥ ೧೦೪ ॥

ದಿನೇ ದಿನೇ ತು ವೈ ಶ್ಲಾಘ್ಯಾ ತವ ಶ್ವೇತ ಭವಿಷ್ಯತಿ ।
ಯಾವದ್ವರ್ಷಶತಂ ಪೂರ್ಣಂ ಸ್ವಮಾಂಸಂ ಸ್ವಾದತೋ ನೃಪ ॥ ೧೦೫ ॥

ಯದಾ ತ್ವಗಸ್ತ್ಯಸ್ತೇ ಶ್ವೇತ ಕಾನನಂ ಸುಮಹತ್ತರಂ ।
ಆಗಮಿಷ್ಯತಿ ದುರ್ಧರ್ಷಂ ತದಾ ಕೃಚ್ಛ್ರಾದ್ವಿಮೋಕ್ಷ್ಯಸೇ ॥ ೧೦೬ ॥

ಸ ಹಿ ತಾರಯಿತುಂ ಶಕ್ತಃ ಸೇಂದ್ರಾನಪಿ ಸುರಾಸುರಾನ್ ।
ಆಹಾರಂ ಕುತ್ಸಿತಂ ಚೇದಂ ರಾಜರ್ಷೇ ಕಿಂ ಪುನಸ್ತವ ॥ ೧೦೭ ॥

ಸುರಕಾರ್ಯಂ ಮಹತ್ತೇನ ಪುಷ್ಕರಸ್ಥಮಹಾತ್ಮನಾ ।
ಉದಧಿಂ ನಿರ್ಜಲಂ ಕೃತ್ವಾ ದಾನವಾಶ್ಚ ವಿನಾಶಿತಾಃ ॥ ೧೦೮ ॥

ವಿಂಧ್ಯಶ್ಚಾದಿತ್ಯನಿದ್ವೇಷೀ ವರ್ಧಮಾನೋ ನಿವಾರಿತಃ ।
ನಮಮಾನಾ ಮಹೀ ಚೈಷಾ ಗುರುತ್ವೇನಾವಲಂಬಿತಾ ॥ ೧೦೯ ॥

---

೧೦೪-೧೦೬. ಆಗ ಬ್ರಹ್ಮನು ಹೇಳಿದನು. ನಿನ್ನ ದೇಹವು ನಾಶವಾಗದೆ ಹೆಚ್ಚುವಂತೆ ಮಾಡಿದ್ದೇನೆ. ಅಮೃತರಸವನ್ನು ಕುಡಿದರೆ ಯಾವ ರೀತಿಯಾದ ತೃಪ್ತಿಯುಂಟಾಗುವುದೋ ಇದನ್ನು ತಿಂದರೆ ದಿನ ದಿನಕ್ಕೂ ನಿನಗೆ ಅಂತಹ ತೃಪ್ತಿಯುಂಟಾಗುತ್ತದೆ. ಈ ರಿತಿ ನಿನ್ನ ಮಾಂಸವನ್ನು ತಿನ್ನುವ ನಿನಗೆ ನೂರು ವರ್ಷಗಳು ತುಂಬುವ ಹೊತ್ತಿಗೆ ಈ ಕಾಡಿಗೆ ಅಗಸ್ತ್ಯನು ಬರುವನು. ಆಗ ಈ ಕಷ್ಟದಿಂದ ನೀನು ಪಾರಾಗುತ್ತೀಯೆ.

೧೦೭. ಅಗಸ್ತ್ಯನು ಇಂದ್ರನೇ ಮುಂತಾದ ದೇವದಾನವರನ್ನು ಉದ್ಧಾರ ಮಾಡಲು ಶಕ್ತನು. ಈ ನಿನ್ನ ಕೆಟ್ಟ ಆಹಾರವನ್ನು ತಪ್ಪಿಸುವುದು ಅವನಿಗೊಂದು ಲೆಕ್ಕದಲ್ಲಿಯೇ ಇಲ್ಲ.

೧೦೮-೧೧೬. ಆತನು ಪುಷ್ಕರದಲ್ಲಿರುವಾಗ್ಗೆ ದೇವತೆಗಳಿಗೆ ಬಹು ಕೆಲಸಗಳನ್ನು ಮಾಡಿಕೊಟ್ಟನು. ಸಮುದ್ರದ ನೀರನ್ನೆಲ್ಲಾ ಕುಡಿದು ದಾನವರನ್ನು ಕೊಲ್ಲಿಸಿದನು. ಸೂರ್ಯನನ್ನು ದ್ವೇಷಿಸಿ ಬೆಳೆಯುತ್ತಿದ್ದ ವಿಂಧ್ಯಪರ್ವತವನ್ನು ನಿವಾರಿಸಿದನು. ಭೂಮಿಯು ಭಾರವಿಲ್ಲದೆ ಹಗುರವಾಗಿ ಹಾರಾಡುತ್ತಿರಲು ತಾನು ಭಾರವನ್ನು ಹಾಕಿ

ದಕ್ಷಿಣಾ ದಿಗ್ದಿವಂ ಯಾತಾ ತ್ರೈಲೋಕ್ಯಂ ವಿಷಮಂ ಸ್ಥಿತಂ ।
ಮಯಾ ಗತ್ವಾ ಸುರೈಃ ಸಾರ್ಧಂ ಪ್ರೇಷಿತೋ ದಕ್ಷಿಣಾಂ ದಿಶಂ ॥ ೧೧೦ ॥

ಸಮಾಂ ಕುರು ಮಹಾಭಾಗ ಗುರುತ್ವೇ ಚ ಜಗತ್ಸಮಂ ।
ಏವಂ ಚ ತೇನ ಮುನಿನಾ ಸ್ಥಿತ್ವಾ ಸರ್ವಾ ಧರಾ ಸಮಾ ॥ ೧೧೧ ॥

ಕೃತಾ ರಾಜೇಂದ್ರ ಮುನಿನಾ ಏವಮದ್ಯಾಪಿ ದೃಶ್ಯತೇ ।
ಸೋಽಹಂ ಭಗವತಃ ಶ್ರುತ್ವಾ ದೇವದೇವಸ್ಯ ಭಾಷಿತಂ ॥ ೧೧೨ ॥

ಭುಂಜೇ ಬೀಭತ್ಸಮಾಹಾರಂ ಸ್ವಶರೀರಮನುತ್ತಮಂ ।
ಪೂರ್ಣಂ ವರ್ಷಶತಂ ಚಾದ್ಯ ಭೋಜನಂ ಕುತ್ಸಿತಂ ಚ ಮೇ ॥ ೧೧೩ ॥

ಕ್ಷಯಂ ನಾಭ್ಯೇತಿ ತದ್ವಿಪ್ರ ತೃಪ್ತಿಶ್ಚಾಪಿ ಮಮೋತ್ತಮಾ ।
ತಂ ಮುನಿಂ ಕೃಚ್ಛ್ರಸಂತಪ್ತಶ್ಚಿಂತಯಾನೋ ದಿವಾನಿಶಂ ॥ ೧೧೪ ॥

ಕದಾ ವೈ ದರ್ಶನಂ ಮಹ್ಯಂ ಸ ಮುನಿರ್ದಾಸ್ಯತೇ ವನೇ ।
ಏವಂ ಮೇ ಚಿಂತಯಾನಸ್ಯ ಗತಂ ವರ್ಷಶತಂ ತ್ವಿಹ ॥ ೧೧೫ ॥

ಸೋಽಗಸ್ತ್ಯೋ ಹಿ ಗತಿರ್ಬ್ರಹ್ಮನ್ ಮುನಿರ್ಮೇ ಭವಿತಾ ಧ್ರುವಂ ।
ನ ಗತಿರ್ಭವಿತಾ ಮಹ್ಯಂ ಕುಂಭಯೋನಿಮೃತೇ ದ್ವಿಜಂ ॥ ೧೧೬ ॥

---

ಹಿಡಿದನು. ಈ ಭೂಮಿಯು ಭಾರವಿಲ್ಲದೆ ದಕ್ಷಿಣದಿಕ್ಕಿನಲ್ಲಿ ಮೇಲಕ್ಕೆ ಎದ್ದುಬಿಟ್ಟಿತು ಆಗ ಮೂರು ಲೋಕಗಳು ಏರುಪೇರಾದುವು. ಆಗ ನಾನು ದೇವತೆಗಳೊಡನೆ ಹೋಗಿ ಆತನನ್ನು ದಕ್ಷಿಣದಿಕ್ಕಿಗೆ ಕಳುಹಿದೆನು. ಎಲೈ ಮಹಾನುಭಾವನೆ ! ಭಾರವನ್ನು ಹೇರುವುದರಿಂದ ಭೂಮಿಯನ್ನು ಸಮವಾಗಿ ನಿಲ್ಲಿಸು, ಎಂದೆನು. ಆಗ ಆತನು ಅಲ್ಲಿಗೆ ಹೋಗಿ ನಿಂತು ಸಮವಾಗಿ ನಿಲ್ಲುವಂತೆ ಮಾಡಿದನು. ಈಗಲೂ ಅದು ಹಾಗೆಯೇ ಇದೆ. ಆ ನಾನು ದೇವದೇವನಾದ ಆ ಸ್ವಾಮಿಯ ಮಾತನ್ನು ಕೇಳಿ ಈ ಅಸಹ್ಯವಾದ ನನ್ನ ಶರೀರದ ಆಹಾರವನ್ನು ತಿನ್ನುತ್ತಿದ್ದೇನೆ ನಾನು ತಿನ್ನುತ್ತ ಒಂದು ನೂರು ವರ್ಷಗಳೂ ಪೂರ್ಣವಾದುವು. ಆದರೂ ಅದು ನಾಶವಾಗಲಿಲ್ಲ. ನನಗೆ ಉತ್ತಮವಾದ ತೃಪ್ತಿಯುಂಟಾಗುತ್ತಿದೆ. ಬಹು ಕಷ್ಟಪಡುತ್ತ ಹಗಲೂ ರಾತ್ರಿಯೂ ದುಃಖಿಸುತ್ತ ಆ ಮುನಿಯನ್ನೇ ಚಿಂತಿಸುತ್ತಿದ್ದೇನೆ. ಅಯ್ಯಾ ಬ್ರಾಹ್ಮಣನೆ ! ಆ ಅಗಸ್ತ್ಯನೇ ನನಗೆ ಖಂಡಿತವಾಗಿಯೂ ಗತಿಯು. ಆ ಅಗಸ್ತ್ಯನನ್ನು ಬಿಟ್ಟು ನನಗೆ ಗತಿಯು ಬೇರೆ ಇಲ್ಲವೇ ಇಲ್ಲ.

ಶ್ರುತ್ವೇತ್ಥಂ ಭಾಷಿತಂ ರಾಮ ದೃಷ್ಟ್ವಾ್ಽಹಾರಂ ಚ ಕುತ್ಸಿತಂ ।
ಕೃಪಯಾ ಪರಯಾ ಯುಕ್ತಸ್ತಂ ಪರಂ ಸ್ವರ್ಗವಾಸಿನಂ ॥ ೧೧೭ ॥

ಕರೋಮ್ಯೇನಂ ಸುಧಾಭಕ್ತಂ ನಾಶಯಾಮಿ ಚ ಕುತ್ಸಿತಂ ।
ಭೂಯೋಽಪ್ಯಾಚೇ ನೃಪಂ ವಾಕ್ಯಮಗಸ್ತ್ಯಃ ಕಿಂ ಕರಿಷ್ಯತಿ ॥ ೧೧೮ ॥

ಅಹಮೇತತ್ಕುತ್ಸಿತಂ ತೇ ನಾಶಯಾಮಿ ಮಹಾಮತೇ ।
ಈಪ್ಸಿತಂ ಪ್ರಾರ್ಥಯಸ್ವಾಸ್ಮಾನ್ಮನಃ ಪ್ರೀತಿಕರಂ ಪರಂ ॥ ೧೧೯ ॥

ಸ ಸ್ವರ್ಗೀ ಮಾಂ ತದಾ ಪ್ರಾಹ ಕಥಂ ಬ್ರಹ್ಮವಚೋಽನ್ಯಥಾ ।
ಕರ್ತುಂ ಮುನೇ ಮಯಾ ಶಕ್ಯಂ ನ ಚಾನ್ಯಸ್ತಾರಯಿಷ್ಯತಿ ॥ ೧೨೦ ॥

ಋತೇ ವೈ ಕುಂಭಯೋನಿಂ ತಂ ಮೈತ್ರಾವರುಣಸಂಭವಂ ।
ಅಪ್ಯಹೋಽಪಿ ಮಯಾ ಬ್ರಹ್ಮನ್ ಗಮಿಷ್ಯೇ ತು ಪಿತಾಮಹಂ ॥ ೧೨೧ ॥

ಏವಂ ಬ್ರುವಾಣಂ ತಂ ಶ್ವೇತಮುಕ್ತವಾನಹಮಸ್ಮಿ ತಂ ।
ಆಗತಸ್ತವ ಭಾಗ್ಯೇನ ತಾರಯಿಷ್ಯೇ ನ ಸಂಶಯಃ ॥ ೧೨೨ ॥

---

೧೧೭-೧೧೯. ಎಲೈ ರಾಮನೆ! ಅವನ ಈ ಮಾತನ್ನು ಈ ಕುತ್ಸಿತವಾದ ಆಹಾರವನ್ನೂ ನೋಡಿ ದಯೆಹುಟ್ಟಿ ಆ ಸ್ವರ್ಗವಾಸಿಯು ಈ ಕೆಟ್ಟ ಆಹಾರವನ್ನು ಬಿಡುವಂತೆಯೂ ಅಮೃತವನ್ನು ಕುಡಿಯುವಂತೆಯೂ ಮಾಡಬೇಕು ಎಂದು ಕೊಂಡೆನು. ಆಗ ಆ ರಾಜನನ್ನು ಕುರಿತು ನಾನು ಅಗಸ್ತ್ಯನೇನು ಮಾಡಬಲ್ಲನು ? ನಾನೇನೆ ನಿನ್ನ ಈ ಕೆಟ್ಟ ಸ್ಥಿತಿಯನ್ನು ಹಾಳುಮಾಡುತ್ತೇನೆ. ನಿನ್ನ ಮನಸ್ಸಿಗೆ ಪ್ರೀತಿಕರವಾದ ವಿಷಯವನ್ನು ಕೇಳಿಕೋ ಎಂದೆನು.

೧೨೦-೧೨೧. ಆಗ ಆ ಸ್ವರ್ಗವಾಸಿಯು ಎಲೈ ಮುನಿಯೇ ! ಬ್ರಹ್ಮನಮಾತನ್ನು ಬೇರೆ ವಿಧವಾಗಿ ಮಾಡಲು ಮತ್ತೊಬ್ಬನಿಗೆ ಸಾಧ್ಯವಿದೆಯೆ ? ಆ ಕುಂಭಯೋನಿಯಾದ ಅಗಸ್ತ್ಯನನ್ನು ಹೊರತು ಯಾರ ಕೈಯಲ್ಲೂ ಆಗುವುದಿಲ್ಲ. ಅಯ್ಯಾ ! ನಾನು ಹೋಗುತ್ತೇನೆ. ಬ್ರಹ್ಮನಬಳಿಗೆ ಹೋಗಬೇಕು.

೧೨೨. ಹೀಗೆನ್ನುತ್ತಿರುವ ಆ ಶ್ವೇತನನ್ನು ಕುರಿತು ಅಯ್ಯಾ ! ಆ ಅಗಸ್ತ್ಯನೇ ನಾನು. ನಿನ್ನ ಭಾಗ್ಯದಿಂದ ಬಂದಿದ್ದೇನೆ. ನಿನ್ನನ್ನು ಉದ್ಧಾರಮಾಡುತ್ತೇನೆ, ಸಂಶಯವಿಲ್ಲ, ಎಂದೆನು.

ತತಃ ಸ್ವರ್ಗೀ ತು ಮಾಂ ಜ್ಞಾತ್ವಾ ದಂಡವತ್ಪತಿತೋಽಗ್ರತಃ ।
ತಮುತ್ಥಾಪ್ಯ ತದಾ ರಾಮಾಬ್ರವಂ ಕಿಂ ತೇ ಕರೋಮ್ಯಹಂ ॥ ೧೨೩ ॥

॥ ರಾಜೋವಾಚ ॥

ಆಹಾರಾತ್ಕುತ್ಸಿತಾದ್ಬ್ರಹ್ಮಂಸ್ತಾರಯಸ್ವಾದ್ಯ ದುಷ್ಕೃತಾತ್ ।
ಯೇನ ಲೋಕೋಽಕ್ಷಯಃ ಸ್ವರ್ಗೋ ಭವಿತಾ ತ್ವತ್ಕೃತಾನ್ಮಮ ॥ ೧೨೪ ॥

ತತಃ ಪ್ರತಿಗ್ರಹೋ ದತ್ತೋ ಜಗದ್ವಂದ್ಯ ನಮೋಽಸ್ತು ತೇ ।
ಭವಾನ್ಮಾಮನುಗೃಹ್ಣಾತು ಪ್ರತೀಚ್ಛತು ಪ್ರತಿಗ್ರಹಂ ॥ ೧೨೫ ॥

ಇದಮಾಭರಣಂ ಸೌಮ್ಯ ತಾರಣಾರ್ಥಂ ದ್ವಿಜೋತ್ತಮ ।
ಬ್ರಹ್ಮರ್ಷೇ ಪ್ರತಿಗೃಹ್ಣೀಷ್ವ ಪ್ರಸಾದಂ ಕರ್ತುಮರ್ಹಸಿ ॥ ೧೨೬ ॥

ಇಹ ಗಾವಃ ಸುವರ್ಣಂ ಚ ಧನಂ ವಸ್ತ್ರಮನುತ್ತಮಂ ।
ಭಕ್ಷ್ಯಂ ಭೋಜ್ಯಂ ಚ ವಿಪ್ರರ್ಷೇ ದದಾಮ್ಯಾಭರಣಂ ತವ ॥ ೧೨೭ ॥

ಸರ್ವಾನ್ ಕಾಮಾನ್ ಪ್ರಯಚ್ಛಾಮಿ ಸರ್ವಾನ್ ಭೋಗಾಂಶ್ಚ ತೇ ದ್ವಿಜ ।
ತಾರಣೇ ತು ಭವಾನ್ ಮಹ್ಯಂ ಪ್ರಸಾದಂ ಕರ್ತುಮರ್ಹಸಿ ॥ ೧೨೮ ॥

---

೧೨೩. ನನ್ನನ್ನು ತಿಳಿದು ಆ ಸ್ವರ್ಗಿಯು ದಂಡ ಪ್ರಣಾಮವನ್ನು ಮಾಡಿದನು. ಅವನನ್ನು ಎಬ್ಬಿಸಿ ನಿನಗೇನು ಮಾಡಬೇಕೆಂದನು.

೧೨೪. ರಾಜನು ಹೇಳಿದನು– ಎಲೈ ಬ್ರಾಹ್ಮಣನೇ ! ಈ ಕುತ್ಸಿತವಾದ ಆಹಾರದಿಂದ ತಪ್ಪಿಸಿ ಕಾಪಾಡು. ಅದರಿಂದಲೂ ನಿನ್ನ ದಯೆಯಿಂದಲೂ ಅಕ್ಷಯವಾದ ಸ್ವರ್ಗವು ಬರಲಿ.

೧೨೫. ಅನಂತರ ಆತನು ಈ ದಾನವನ್ನು ಕೊಟ್ಟನು. ಎಲೈ ಜಗದ್ವಂಧ್ಯನಾದ ಅಗಸ್ತ್ಯನೇ ! ನಿನಗೆ ನಮಸ್ಕಾರವು. ನೀನು ಇದನ್ನು ತೆಗೆದುಕೊಂಡು ನನಗೆ ಅನುಗ್ರಹ ಮಾಡು.

೧೨೬-೧೨೮. ಎಲೈ ಬ್ರಾಹ್ಮಣನೆ ! ನನ್ನನ್ನು ಉದ್ಧರಿಸಲು ಈ ಆಭರಣವನ್ನು ತೆಗೆದುಕೊ, ನನಗೆ ಅನುಗ್ರಹ ಮಾಡು. ಇದೇ ಗೋವು, ಇದೇ ಸುವರ್ಣವು, ಇದೇ ಧನವು, ಇದೇ ವಸ್ತ್ರವು, ಇದೇ ಭಕ್ಷ್ಯವು, ಭೋಜ್ಯವು, ಈ ಆಭರಣವನ್ನು ನಿನಗೆ ಕೊಡುತ್ತೇನೆ. ಸರ್ವಕಾಮಗಳನ್ನೂ, ಸರ್ವ ಭೋಗಗಳನ್ನೂ, ನಿನಗೆ ಕೊಡುತ್ತೇನೆ. ನನ್ನನ್ನು ಉದ್ಧರಿಸುವ ಕೃಪೆಯನ್ನು ಮಾಡು.

ತಸ್ಯಾಹಂ ಸ್ವರ್ಗಿಣೋ ವಾಕ್ಯಂ ಶ್ರುತ್ವಾ ದುಃಖಸಮನ್ವಿತಂ ।
ಕಾರಣಾಯ ಮತಿಂ ಕೃತ್ವಾ ನ ಲೋಭಾದ್ರಘುನಂದನ ॥ ೧೨೯ ॥

ಗೃಹೀತೇ ಭೂಷಣೇ ರಾಮ ಮಮ ಹಸ್ತಸ್ಥಿತೇ ತದಾ ।
ಮಾನುಷಃ ಪೌರ್ವಿಕೋ ದೇಹಸ್ತದಾಭೂತ್ತಸ್ಯ ಭೂಪತೇ ॥ ೧೩೦ ॥

ಪ್ರನಷ್ಟೇನ ಶರೀರೇಣ ರಾಜರ್ಷಿಃ ಪರಯಾ ಮುದಾ ।
ಮಯೋಕ್ತೋಽಸೌ ವಿಮಾನೇನ ಜಗಾಮ ತ್ರಿದಿವಂ ಪುನಃ ॥ ೧೩೧ ॥

ತೇನ ಮೇ ಶಕ್ರತುಲ್ಯೇನ ದತ್ತಮಾಭರಣಂ ಶುಭಂ ।
ತಸ್ಮಿನ್ನಿಮಿತ್ತೇ ಕಾಕುತ್‌ಸ್ಥ ದತ್ತಮದ್ಭುತಕರ್ಮಣಾ ।
ಶ್ವೇತೋ ವೈದರ್ಭಕೋ ರಾಜಾ ತದಾಭೂದ್ಗತಕಲ್ಮಷಃ ॥ ೧೩೨ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ರಾಮಾಗಸ್ತ್ಯಸಂವಾದೋ
॥ ನಾಮ ತ್ರಯಸ್ತ್ರಿಂಶೋಽಧ್ಯಾಯಃ ॥

---

೧೨೯-೧೩೧. ಆ ಸ್ವರ್ಗಿಯ ದುಃಖದಿಂದ ಕೂಡಿದ ಆ ಮಾತನ್ನು ಕೇಳಿ ಅವನನ್ನು ಉದ್ಧರಿಸಲು ಈ ಬುದ್ಧಿಯನ್ನು ಮಾಡಿದೆನು ಆಸೆಯಿಂದಲ್ಲ. ಆಗ ಇದು ನನ್ನ ಕೈಯ್ಯಲ್ಲಿದ್ದಿತು. ಈ ಭೂಷಣವನ್ನು ನಾನು ತೆಗೆದುಕೊಳ್ಳಲು ಅದು ನನ್ನ ಕೈಯಲ್ಲಿರುವಾಗಲೇ ಆ ರಾಜನಿಗೆ ಹಿಂದಿನ ಮನುಷ್ಯನ ದೇಹವೇ ಬಂದಿತು. ಆಗ ನಾನು ಎಲೈ ರಾಜರ್ಷಿಯೇ ನೀನು ಈ ಶರೀರವನ್ನು ಕಳೆದುಕೊಂಡು ವಿಮಾನದಿಂದ ಸ್ವರ್ಗಕ್ಕೆ ಹೋಗೆನ್ನಲು ಅವನು ಹಾಗೆಯೇ ಹೋದನು.

೧೩೨. ಇಂದ್ರನಿಗೆ ಸಮನಾದ ಆ ಶ್ವೇತನು ನನಗೆ ಈ ಆಭರಣವನ್ನು ಕೊಟ್ಟನು. ಅದಕ್ಕೋಸ್ಕರ ನಾನು ಆತನಿಂದ ತೆಗೆದುಕೊಂಡೆನು. ಆಗ ಶ್ವೇತನು ಪಾಪವನ್ನು ಕಳೆದುಕೊಂಡನು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ರಾಮ ಅಗಸ್ತ್ಯಸಂವಾದವೆಂಬ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಚತುಸ್ತ್ರಿಂಶೋಽಧ್ಯಾಯಃ ॥



॥ ಪುಲಸ್ತ್ಯ ಉವಾಚ ॥

ತದದ್ಭುತತಮಂ ವಾಕ್ಯಂ ಶ್ರುತ್ವಾಗಸ್ತ್ಯಸ್ಯ ರಾಘವಃ ।
ಗೌರವಾದ್ವಿಸ್ಮಯಾಚ್ಚಾಪಿ ಭೂಯಃ ಪ್ರಷ್ಟುಂ ಪ್ರಚಕ್ರಮೇ ॥ ೧ ॥

॥ ಶ್ರೀ ರಾಮ ಉವಾಚ ॥

ಭಗವಂಸ್ತದ್ವನಂ ಘೋರಂ ಯತ್ರಾಸೌ ದತ್ತವಾಂಸ್ತವ ।
ಶ್ವೇತೋ ವೈದರ್ಭಕೋ ರಾಜಾ ತದದ್ಭುತಮಭೂತ್ಕಥಂ ॥ ೨ ॥

ವಿಷಮಂ ತದ್ವನಂ ರಾಜಾ ಶೂನ್ಯಂ ಮೃಗವಿವರ್ಜಿತಂ ।
ಪ್ರವಿಷ್ಟಸ್ತಪ ಆಸ್ಥಾತುಂ ಕಥಂ ವದ ಮಹಾಮುನೇ ॥ ೩ ॥

---

## ಮೂವತ್ತನಾಲ್ಕನೆಯ ಅಧ್ಯಾಯವು

೧. ಪುಲಸ್ತ್ಯನು ಹೇಳಿದನು– ರಾಘವನು ಅಗಸ್ತ್ಯನ ಈ ಅದ್ಭುತವಾದ ಮಾತನ್ನು ಕೇಳಿ ಗೌರವದಿಂದಲೂ ಆಶ್ಚರ್ಯದಿಂದಲೂ ಮತ್ತೂ ಕೇಳುವುದಕ್ಕ ಮೊದಲುಮಾಡಿದನು.

೨. ಶ್ರೀರಾಮನು ಹೇಳಿದನು– ಎಲೈ ಅಗಸ್ತ್ಯನೆ! ಶ್ವೇತನು ಈ ಹಾರವನ್ನು ನಿನಗೆ ಕೊಟ್ಟ ಆ ವನವು ಅಷ್ಟು ಘೋರವಾಗಿಯೂ ಅದ್ಭುತವಾಗಿಯೂ ಆಗಲು ಕಾರಣವೇನು ?

೩. ಆ ರಾಜನು ವಿಷಮವೂ ಘೋರವೂ ಶೂನ್ಯವೂ ಮೃಗಗಳಿಂದ ಬಿಡಲ್ಪಟ್ಟುದೂ ಆದ ಆ ಕಾಡಿಗೇಕೆ ತಪಸ್ಸು ಮಾಡಲು ಹೋದನು ?

ಸಮಂತಾದ್ಯೋಜನಶತಂ ನಿರ್ಮನುಷ್ಯಮಭೂತ್ಕಥಂ ।
ಭವಾ೯ ಕಥಂ ಪ್ರವಿಷ್ಟೋಽಸೌ ಯೇನ ಕಾರ್ಯೇಣ ತದ್ವದ ॥ ೪ ॥

॥ ಅಗಸ್ತ್ಯ ಉವಾಚ ॥

ಪುರಾ ಕೃತಯುಗೇ ರಾಜ೯ ಮನುರ್ದಂಡಧರಃ ಪ್ರಭುಃ ।
ತಸ್ಯ ಪುತ್ರೋಽಥ ನಾಮ್ನಾಸೀದಿಕ್ಷ್ವಾಕೂ ರುಚಿರದ್ಯುತಿಃ ॥ ೫ ॥

ತಂ ಪುತ್ರಂ ಪೂರ್ವಜಂ ರಾಜ್ಯೇ ನಿಕ್ಷಿಪ್ಯ ಭುವಿ ಸಮ್ಮತಂ ।
ಪೃಥಿವ್ಯಾಂ ರಾಜವಂಶ್ಯಾನಾಂ ಭವ ರಾಜೇತ್ಯುವಾಚ ಹ ॥ ೬ ॥

ತಥೇತಿ ಚ ಪ್ರತಿಜ್ಞಾತಂ ಪಿತುಃ ಪುತ್ರೇಣ ರಾಘವ ।
ತತಃ ಪರಮಸಂಹೃಷ್ಟಃ ಪುನಸ್ತಂ ಪ್ರತ್ಯಭಾಷತ ॥ ೭ ॥

॥ ಮನುರುವಾಚ ॥

ಪ್ರೀತೋಽಸ್ಮಿ ಪರಮೋದಾರಕರ್ಮಣಾ ತೇ ನ ಸಂಶಯಃ ।
ದಂಡೇನ ಚ ಪ್ರಜಾ ರಕ್ಷ ನ ಚ ದಂಡಮಕಾರಣಂ ॥ ೮ ॥

---

೪. ಆ ವನವು ಸುತ್ತಲೂ ನೂರು ಯೋಜನಗಳವರೆಗೆ ಮನುಷ್ಯ ಸಂಚಾರವಿಲ್ಲದಂತೆ ಆಗಲು ಕಾರಣವೇನು ? ನೀನು ಯಾವ ಕೆಲಸಕ್ಕೋಸ್ಕರ ಅಲ್ಲಿ ಹೋದೆ ? ಅದನ್ನು ಹೇಳು ?

೫. ಅಗಸ್ತ್ಯನು ಹೇಳಿದನು- ಎಲೈ ರಾಮನೆ ! ಪೂರ್ವದಲ್ಲಿ ಮನುವೆಂಬ ರಾಜನು ರಾಜ್ಯವಾಳುತ್ತಿದ್ದನು. ಅವನಿಗೆ ಇಕ್ಷ್ವಾಕುವೆಂಬ ಮನೋಹರನಾದ ಒಬ್ಬ ಮಗನಿದ್ದನು.

೬. ಹಿರಿಯಮಗನಾದ ಆತನನ್ನು ರಾಜ್ಯದಲ್ಲಿ ಪಟ್ಟಕಟ್ಟಿ ಭೂಮಿಯಲ್ಲಿರುವ ರಾಜರ ವಂಶಕ್ಕೆ ನೀನು ರಾಜನಾಗು. ಎಂದು ಹೇಳಿದನು.

೭. ಎಲೈ ರಾಘವನೇ ! ತಂದೆಗೆ ಮಗನು ಹಾಗೆಯೇ ಆಗಲೆಂದು ಹೇಳಿದನು. ಆಗ ಸಂತೋಷಗೊಂಡ ಮನುವು ಮತ್ತೆ ಮಗನಿಗೆ ಇಂತೆಂದನು.

೮. ಮನುವು ಹೇಳಿದನು- ಅಯ್ಯಾ ! ನಿನ್ನ ಈ ಕೆಲಸದಿಂದ ನನಗೆ ಸಂತೋಷವಾಯಿತು. ಸಂಶಯವಿಲ್ಲ. ಶಿಕ್ಷೆಯಿಂದ ಪ್ರಜೆಗಳನ್ನು ರಕ್ಷಿಸು, ಆ ಶಿಕ್ಷೆಯು ಕಾರಣವುಳ್ಳದ್ದಾಗಿರಬೇಕು.

ಅಪರಾಧಿಷು ಯೋ ದಂಡಃ ಪಾತ್ಯತೇ ಮಾನವೈರಿಹ ।
ಸ ದಂಡೋ ವಿಧಿವನ್ಮುಕ್ತಃ ಸ್ವರ್ಗಂ ನಯತಿ ಪಾರ್ಥಿವಂ ॥ ೯ ॥

ತಸ್ಮಾದ್ದಂಡೇ ಮಹಾಬಾಹೋ ಯತ್ನವಾನ್ಭವ ಪುತ್ರಕ ।
ಧರ್ಮಸ್ತೇ ಪರಮೋ ಲೋಕೇ ಕೃತ ಏವಂ ಭವಿಷ್ಯತಿ ॥ ೧೦ ॥

॥ ಅಗಸ್ತ್ಯ ಉವಾಚ ॥

ಇತಿ ತಂ ಬಹು ಸಂದಿಶ್ಯ ಮನುಃ ಪುತ್ರಂ ಸಮಾಧಿನಾ ।
ಜಗಾಮ ತ್ರಿದಿವಂ ಹೃಷ್ಟೋ ಬ್ರಹ್ಮಲೋಕಮನುತ್ತಮಂ ॥ ೧೧ ॥

ಜನಯಿಷ್ಯೇ ಕಥಂ ಪುತ್ರಾನಿತಿ ಚಿಂತಾಪರೋಽಭವತ್ ।
ಕರ್ಮಭಿರ್ಬಹುರೂಪೈಸ್ತು ತೈಸ್ತೈರ್ಮನುಸುತೋಽಭವತ್ ॥ ೧೨ ॥

ತೋಷಯಾಮಾಸ ಪುತ್ರೇಣ ಸ ತು ದೇವಸುತೋಪಮಃ ।
ಸರ್ವೇಷಾಮುತ್ತಮಸ್ತೇಷಾಂ ಕನೀಯಾನ್ ರಘುನಂದನ ॥ ೧೩ ॥

ಶೂರಶ್ಚ ಕೃತವಿದ್ಯಶ್ಚ ಗುರುಶ್ಚ ಜನಪೂಜಯಾ ।
ನಾಮ ತಸ್ಯ ಚ ದಂಡೇತಿ ಪಿತಾ ಚಕ್ರೇ ತು ಬುದ್ಧಿಮಾನ್ ॥ ೧೪ ॥

---

೯. ಅಪರಾಧಿಗಳನ್ನು ಸರಿಯಾಗಿ ಶಿಕ್ಷಿಸಬೇಕು. ಶಾಸ್ತ್ರ ಸಮ್ಮತವಾದ ಆ ಶಿಕ್ಷೆಯಿಂದ ರಾಜನು ಸ್ವರ್ಗವನ್ನು ಹೊಂದುವನು.

೧೦. ಆದ್ದರಿಂದ ಎಲೈ, ಮಹಾಬಾಹುವೆ ! ಶಿಕ್ಷೆಯಲ್ಲಿ ಸರಿಯಾಗಿ ಪ್ರವರ್ತಿಸು. ಹಾಗೆ ಮಾಡಿದರೆ ಲೋಕದಲ್ಲಿ ನೀನು ಉತ್ತಮವಾದ ಧರ್ಮವನ್ನು ಆಚರಿಸಿದಂತೆ ಆಗುತ್ತದೆ.

೧೧. ಆಗಸ್ತ್ಯನು ಹೇಳಿದನು– ಮನುವು ಮಗನಿಗೆ ಇವೇ ಮುಂತಾದ ಬುದ್ಧಿವಾದಗಳನ್ನು ಹೇಳಿ ಸಂತೋಷದಿಂದ ಬ್ರಹ್ಮಲೋಕಕ್ಕೆ ಹೋದನು

೧೨-೧೩. ಅನಂತರ ಆ ಇಕ್ಷ್ವಾಕುವು ಮಕ್ಕಳಾಗದಿರಲು ಬಹುವಾದ ವ್ರತಗಳಿಂದ ಮಗನನ್ನು ಪಡೆದನು. ಆ ಮಗನೂ ಕೂಡ ದೊಡ್ಡವನಾಗುತ್ತ ತನ್ನ ಕೃತ್ಯಗಳಿಂದ ತಂದೆಯನ್ನು ಸಂತೋಷಪಡಿಸಿದನು. ಅವನು ಚಿಕ್ಕವನಾದರೂ ಎಲ್ಲರಿಗೂ ಕರ್ಮದಿಂದಲೂ ಗುಣದಿಂದಲೂ ದೊಡ್ಡವನಾದನು.

೧೪-೧೫. ಅವನು ಶೂರನೂ, ವಿದ್ಯಾವಂತನೂ ಆದನು. ಜನಗಳನ್ನು ಗೌರವಿಸುವುದರಿಂದ ತಂದೆಯು ಸಂತೋಷಪಟ್ಟನು. ತಂದೆಯು ಅವನಿಗೆ ದಂಡನು ಎಂದು

ಭವಿಷ್ಯದಂಡಪತನಂ ಶರೀರೇ ತಸ್ಯ ವೀಕ್ಷ್ಯ ಚ ।
ಸಂಪಶ್ಯಮಾನಸ್ತಂ ದೋಷಂ ಘೋರಂ ಪುತ್ರಸ್ಯ ರಾಘವ ॥ ೧೫ ॥

ವಿಂಧ್ಯಸ್ಯ ಶೃಂಗಯೋರ್ಮಧ್ಯೇ ಪುರಮಸ್ಯ ದದೌ ಪ್ರಭುಃ ।
ಸ ದಂಡಸ್ತತ್ರ ರಾಜಾಭೂದ್ರಮ್ಯೇ ಪರ್ವತಮೂರ್ಧನಿ ॥ ೧೬ ॥

ಪುರಂ ಚಾಪ್ರತಿಮಂ ತೇನ ನಿವೇಶಾಯ ತಥಾ ಕೃತಂ ।
ನಾಮ ತಸ್ಯ ಪುರಸ್ಯಾಥ ಮಧುಮತ್ತ ಇತಿ ಸ್ವಯಂ ॥ ೧೭ ॥

ತಥಾ ದೇಶೇನ ಸಂಪನ್ನಃ ಶೂರೋ ವಾಸಮಥಾಕರೋತ್ ।
ಏವಂ ಸ ರಾಜಾ ತದ್ರಾಜ್ಯಂ ಚಕಾರ ಸಪುರೋಹಿತಃ ॥ ೧೮ ॥

ಪ್ರಹೃಷ್ಟಮನುಜಾಕೀರ್ಣಂ ದೇವರಾಜೋ ಯಥಾ ದಿವಿ ।
ತತಃ ಸ ದಂಡಃ ಕಾಕುತ್ಸ್ಥ ಬಹುವರ್ಷಗಣಾಯುತಂ ॥ ೧೯ ॥

ಅಕಾರಯತ ಧರ್ಮಾತ್ಮಾ ರಾಜ್ಯಂ ನಿಹತಕಂಟಕಂ ।
ಅಥ ಕಾಲೇ ತು ಕಸ್ಮಿಂಶ್ಚಿದ್ರಾಜಾ ಭಾರ್ಗವಮಾಶ್ರಮಂ ॥ ೨೦ ॥

---

ಹೆಸರಿಟ್ಟನು. ಆದರೆ ಮುಂದೆ ಅವನಿಗೆ ಬರುವ ಶಿಕ್ಷೆಯನ್ನು ನೋಡಿ ಅವನಲ್ಲಿ ಅದೊಂದು ದೋಷವೆಂದು ಯೋಚಿಸುತ್ತಿದ್ದನು.

೧೬. ಆ ದೋಷವನ್ನು ನೋಡಿ ಅವನಿಗೆ ವಿಂಧ್ಯಪರ್ವತದ ಎರಡು ಕೋಡುಗಲ್ಲುಗಳ ಮಧ್ಯದಲ್ಲಿ ಒಂದು ಊರನ್ನು ಮಾಡಿಕೊಟ್ಟನು. ಆ ದಂಡನು ಆ ಮನೋಹರವಾದ ಪರ್ವತದ ಶಿಖರದಲ್ಲಿಯೇ ರಾಜ್ಯವಾಳುತ್ತಿದ್ದನು.

೧೭-೨೩. ಉತ್ತಮವಾದ ಊರನ್ನು ಆತನಿರುವುದಕ್ಕೆ ಮಾಡಿಕೊಂಡು ಅದಕ್ಕೆ ಮಧುಮತ್ತವೆಂದು ಹೆಸರಿಟ್ಟನು. ಆ ರೀತಿಯಾಗಿ ಕಟ್ಟಿಕೊಂಡು ಅಲ್ಲಿ ವಾಸಮಾಡುತ್ತಲಿದ್ದನು. ಈ ರೀತಿಯಾಗಿ ಆ ದಂಡರಾಜನು ಪುರೋಹಿತನೊಡನೆ ಸಂತೋಷದಿಂದ ಕೂಡಿದ ಜನರುಳ್ಳ ಆ ರಾಜ್ಯವನ್ನು ಇಂದ್ರನು ಸ್ವರ್ಗವನ್ನು ಆಳುವಂತೆ ತೊಂದರೆಯಿಲ್ಲದ ರಾಜ್ಯವನ್ನು ಬಹು ವರ್ಷಗಳವರೆಗೂ ಆಳಿದನು. ಕೆಲವು ಕಾಲ ಕಳೆದ ಮೇಲೆ ಆ ದಂಡರಾಜನು ಶುಕ್ರನ ಆಶ್ರಮಕ್ಕೆ ಹೋದನು. ಆಗ ಚೈತ್ರಮಾಸವಾಗಿದ್ದು

ರಮಣೀಯಮುಪಾಕ್ರಾಮುಚ್ಚೈತ್ರಮಾಸೇ ಮನೋರಮೇ ।
ತತ್ರ ಭಾರ್ಗವಕನ್ಯಾಂ ತು ರೂಪೇಣಾಪ್ರತಿಮಾಂ ಭುವಿ ॥ ೨೦ ॥

ವಿಚರಂತೀಂ ವನೋದ್ದೇಶೇ ದಂಡೋಽಪಶ್ಯದನುತ್ತಮಾಂ ।
ಉತ್ತುಂಗಪೀವರೀಂ ಶ್ಯಾಮಾಂ ಚಂದ್ರಬಿಂಬಸಮಾನನಾಂ ॥ ೨೨ ॥

ಸುನಾಸಾಂ ಚಾರುಸರ್ವಾಂಗೀಂ ಪೀನೋನ್ನತಪಯೋಧರಾಂ ।
ಮಧ್ಯೇ ಕ್ಷಾಮಾಂ ಚ ವಿಸ್ತೀರ್ಣಾಂ ದೃಷ್ಟ್ವಾ ಯಾ ಕುರುತೇ ಮುದಂ ॥ ೨೩ ॥

ಏಕವಸ್ತ್ರಾಂ ವನೇ ಚೈಕಾಂ ಪ್ರಥಮೇ ಯೌವನೇ ಸ್ಥಿತಾಂ ।
ಸ ತಾಂ ದೃಷ್ಟ್ವಾ ತ್ವಧರ್ಮೇಣ ಅನಂಗಶರಪೀಡಿತಃ ।
ಅಭಿಗಮ್ಯ ಸ ವೈ ರಾಜಾ ಕನ್ಯಾಂ ವಚನಮಬ್ರವೀತ್ ॥ ೨೪ ॥

॥ ದಂಡ ಉವಾಚ ॥

ಕುತಸ್ತ್ವಮಸಿ ಸುಶ್ರೋಣಿ ಕಸ್ಯ ಚಾಸಿ ಸುಶೋಭನೇ ।
ಪೀಡಿತೋಽಹಮನಂಗೇನ ಪೃಚ್ಛಾಮಿ ತ್ವಾಂ ಸುಶೋಭನೇ ॥ ೨೫ ॥

---

ಆ ಆಶ್ರಮವು ಬಹು ಮನೋಹರವಾಗಿದ್ದಿತು. ಅಲ್ಲಿ ಆ ಶುಕ್ರನ ಮಗಳು ಸಂಚರಿಸುತ್ತಿದ್ದಳು. ಆಕೆಯು ರೂಪದಲ್ಲಿ ಬಹು ಸುಂದರಿಯಾಗಿದ್ದಳು. ಈ ದಂಡನು ಆಕೆಯನ್ನು ಅಲ್ಲಿ ನೋಡಿದನು. ಎತ್ತರವಾಗಿ ದಪ್ಪವಾಗಿ ಯೌವನವತಿಯಾಗಿದ್ದಳು. ಚಂದ್ರನಂತೆ ಮುಖವಿದ್ದಿತು, ಮೂಗು ಎಸಳಾಗಿದ್ದಿತು, ಅವಯವಗಳು ಚೆನ್ನಾಗಿದ್ದುವು, ಸ್ತನಗಳು ದಪ್ಪವಾಗಿಯೂ, ಎತ್ತರವಾಗಿಯೂ ಇದ್ದುವು. ಸೊಂಟವು ಸಣ್ಣನಾಗಿದ್ದು ಜಘನಗಳು ವಿಸ್ತಾರವಾಗಿದ್ದುವು, ಈಕೆಯನ್ನು ನೋಡಿದರೆ ಎಲ್ಲರೂ ಕಾಮಲಾಲಸರಾಗುವಂತಿದ್ದರು.

೨೪. ಅವಳು ಒಂದೇ ಬಟ್ಟೆಯನ್ನುಟ್ಟಿದ್ದಳು, ಒಬ್ಬಂಟಿಗಳಾಗಿದ್ದಳು, ಪ್ರಥಮಯೌವನದಲ್ಲಿದ್ದಳು, ಹೀಗಿರುವ ಈಕೆಯನ್ನು ನೋಡಿ ಕಾಮಬಾಧೆಗೊಳಗಾಗಿ ಈ ರಾಜನು, ಅಧರ್ಮದಿಂದ ಆಕೆಯ ಬಳಿಗೆ ಹೋಗಿ ಇಂತೆಂದನು.

೨೫. ದಂಡನು ಹೇಳಿದನು– ಎಲೈ ಸುಶ್ರೋಣಿಯೇ ! ನೀನೆಲ್ಲಿಂದ ಬಂದೆ ! ಯಾರ ಮಗಳು, ನಾನು ಮನ್ಮಥಬಾಣದಿಂದ ತೊಂದರೆಪಡುತ್ತಿರುವುದರಿಂದ ನಿನ್ನನ್ನು ಕೇಳುತ್ತೇನೆ.

ಮಮ ತ್ವಯಾ ಹೃತಂ ಚಿತ್ತಂ ದರ್ಶನಾದೇವ ಸುಂದರಿ ।
ಇದಂ ವಯಸ್ತೇ ಪ್ರಥಿತಂ ಮುನೀನಾಂ ಚಿತ್ತಹಾರಕಂ ॥ ೨೬ ॥

ಯದ್ಯಹಂ ನ ಲಭೇ ಭೋಕ್ತುಂ ಮೃತಂ ಮಾಮವಧಾರಯ ।
ತ್ವಯತ್ತಾ ಮಮ ಪ್ರಾಣಾ ಮಾಂ ಜೀವಯ ಸುಲೋಚನೇ ।
ದಾಸೋಽಸ್ಮಿ ತೇ ವರಾರೋಹೇ ಭಕ್ತಂ ಮಾಂ ಭಜ ಸುಂದರಿ ॥ ೨೭ ॥

॥ ಅಗಸ್ತ್ಯ ಉವಾಚ ॥

ತಸ್ಯೈವಂ ತು ಬ್ರುವಾಣಸ್ಯ ಮದೋನ್ಮತ್ತಸ್ಯ ಕಾಮಿನಃ ।
ಭಾರ್ಗವೀ ಪ್ರತ್ಯುವಾಚೇದಂ ವಚಃ ಸವಿನಯಂ ನೃಪಂ ॥ ೨೮ ॥

॥ ಅರಜೋವಾಚ ॥

ಮಾಂ ಭಾರ್ಗವಸುತಾಂ ವಿದ್ಧಿ ಶುಕ್ರಸ್ಯಾಕ್ಲಿಷ್ಟಕರ್ಮಣಃ ।
ಅರಜಾಂ ನಾಮ ರಾಜೇಂದ್ರ ಜ್ಯೇಷ್ಠಾಮಾಶ್ರಮವಾಸಿನಃ ॥ ೨೯ ॥

ಶುಕ್ರಃ ಪಿತಾ ಮೇ ರಾಜೇಂದ್ರ ತ್ವಂ ಚ ಶಿಷ್ಯೋ ಮಹಾತ್ಮನಃ ।
ಧರ್ಮತೋ ಭಗಿನೀ ತೇಽಹಂ ಭವಾಮಿ ನೃಪಸತ್ತಮ ॥ ೩೦ ॥

---

೨೬. ಎಲೈ ಸುಂದರಿಯೆ ! ನಿನ್ನನ್ನು ನೋಡಿದಾಗಿನಿಂದ ನೀನು ನನ್ನ ಮನಸ್ಸನ್ನು ಅಪಹರಿಸಿದ್ದೀಯೆ. ನಿನ್ನ ವಯಸ್ಸು ಮುನಿಗಳ ಮನಸ್ಸನ್ನೂ ಅಪಹರಿಸುತ್ತದೆ.

೨೭. ನಾನು ನಿನ್ನನ್ನು ಅನುಭವಿಸಲಾಗದಿದ್ದರೆ ನಾನು ಸತ್ತಂತೆಯೇ ತಿಳಿ. ನನ್ನ ಪ್ರಾಣಗಳು ನಿನ್ನ ಅಧೀನವಾಗಿವೆ. ಎಲೈ ಸುಲೋಚನೆಯೇ ! ನನ್ನನ್ನು ಬದುಕಿಸು ಎಲೈ, ವರಾರೋಹೆಯೆ ! ನಿನಗೆ ನಾನು ದಾಸನಾಗಿದ್ದೇನೆ. ಭಕ್ತನಾದ ನನ್ನನ್ನು ಹೊಂದು.

೨೮. ಅಗಸ್ತ್ಯನು ಹೇಳಿದನು- ಮದೋನ್ಮತ್ತನಾಗಿ ಕಾಮಿಯಾಗಿ ಈ ರೀತಿ ಹೇಳುತ್ತಿರುವ ಆತನನ್ನು ಕುರಿತು ಈ ಶುಕ್ರನ ಮಗಳು ಇಂತೆಂದಳು.

೨೯. ಅರಜೆಯು ಹೇಳಿದಳು– ನಾನು ಸತ್ಕರ್ಮಿಯಾದ ಶುಕ್ರನ ಮಗಳು. ನನ್ನ ಹೆಸರು ಅರಜೆಯು. ಆಶ್ರಮದಲ್ಲಿರುವವರಿಗೆ ನಾನು ದೊಡ್ಡವಳು.

೩೦. ನನ್ನ ತಂದೆಯು ಶುಕ್ರನು. ನೀನು ಆ ಮಹಾತ್ಮನಿಗೆ ಶಿಷ್ಯನು. ಆದ್ದರಿಂದ ಧರ್ಮದ ರೀತಿಯಾಗಿ ನಿನಗೆ ನಾನು ಸೋದರಿಯು.

ಏವಂವಿಧಂ ಹಿ ಮಾಂ ವಕ್ತುಂ ನ ತ್ವಮರ್ಹಸಿ ಪಾರ್ಥಿವ ।
ಅನ್ಯೇಭ್ಯೋಽಪಿ ಸುದುಷ್ಟೇಭ್ಯೋ ರಕ್ಷ್ಯಾಹಂ ಚ ಸದಾ ತ್ವಯಾ ॥ ೩೧ ॥

ಕ್ರೋಧನೋ ಮೇ ಪಿತಾ ರೌದ್ರೋ ಭಸ್ಮತ್ವಂ ತ್ವಾಂ ನಯೇತ್ ।
ಅಥವಾ ರಾಜಧರ್ಮೇ ವಾ ಸಂಬಂಧಂ ಕುರುಷೇ ಬಲಾತ್ ॥ ೩೨ ॥

ಪಿತರಂ ಮೇ ಯಾಚಯಸ್ವ ಧರ್ಮದೃಷ್ಟೇನ ಕರ್ಮಣಾ ।
ವರಯಸ್ವ ನೃಪಶ್ರೇಷ್ಠ ಪಿತರಂ ಮೇ ಮಹಾದ್ಯುತಿಂ ॥ ೩೩ ॥

ಅನ್ಯಥಾ ವಿಪುಲಂ ದುಃಖಂ ಭವೇದ್ಘೋರಾಭಿಸಂಜ್ಞಿತಂ ।
ಕ್ರುದ್ಧೋ ಹಿ ಮೇ ಪಿತಾ ಸರ್ವಂ ತ್ರೈಲೋಕ್ಯಮಪಿ ನಿರ್ದಹೇತ್ ॥ ೩೪ ॥

॥ ಅಗಸ್ತ್ಯ ಉವಾಚ ॥

ತತಸ್ತು ತಂ ಮಹಾಘೋರಂ ಶ್ರುತ್ವಾ ದಂಡಃ ಸುದಾರುಣಂ ।
ಪ್ರತ್ಯುವಾಚ ಮದೋನ್ಮತ್ತಃ ಶಿರಸಾಭಿನತಃ ಪುನಃ ॥ ೩೫ ॥

---

೩೧. ಈ ರೀತಿಯಾದ ನನ್ನನ್ನು ಕುರಿತು ನೀನು ಹೀಗೆ ಹೇಳಬಾರದು. ನೀನು ನನ್ನನ್ನು ಇತರರ ತೊಂದರೆಯಿಂದಲೂ ಕೂಡ ರಕ್ಷಿಸಬೇಕು.

೩೨-೩೩. ನೀನು ರಾಜನೆಂಬ ಹೆಮ್ಮೆಯಿಂದ ಬಲಾತ್ಕಾರಪಡಿಸಿ ಸಂಬಂಧವನ್ನು ಮಾಡಿದರೆ ಕೋಪಗೊಂಡ ನನ್ನ ತಂದೆಯು ನಿನ್ನನ್ನು ಬೂದಿಯನ್ನಾಗಿ ಮಾಡಿಬಿಟ್ಟಾನು. ಅವನು ಬಹು ಕೋಪಿ, ಕೆಟ್ಟವನು, ಆದ್ದರಿಂದ ಧರ್ಮದ ರೀತಿಯಿಂದ ನನ್ನ ತಂದೆಯನ್ನು ಯಾಚಿಸು.

೩೪. ಹಾಗಿಲ್ಲದಿದ್ದರೆ ಅಪಾರವಾದ ಘೋರವಾದ ದುಃಖವು ಪ್ರಾಪ್ತವಾಗುವುದು. ಕೋಪಗೊಂಡರೆ ನನ್ನ ತಂದೆಯು ಮೂರು ಲೋಕವನ್ನೂ ಸುಟ್ಟಾನು.

೩೫. ಅಗಸ್ತ್ಯನು ಹೇಳಿದನು- ಅನಂತರ ಕೋಪಿಯಾದ ಆ ಶುಕ್ರನ ಹೆಸರನ್ನು ಕೇಳಿದರೂ ಮದೋನ್ಮತ್ತನಾದ ಆ ದಂಡನು ನಮಸ್ಕರಿಸಿ ಮತ್ತೆ ಆಕೆಗೆ ಇಂತೆಂದನು.

॥ ದಂಡ ಉವಾಚ ॥

ಪ್ರಸಾದಂ ಕುರು ಸುಶ್ರೋಣಿ ಕಾಮೋನ್ಮತ್ತಸ್ಯ ಭಾಮಿನಿ ।
ತ್ವಯಾ ರುದ್ಧಾ ಮಮ ಪ್ರಾಣಾ ವಿಶೀರ್ಯಂತೇ ಶುಭಾನನೇ ॥ ೩೬ ॥

ತ್ವಾಂ ಪ್ರಾಪ್ಯ ವಾ ವಧೋ ಮೇಽಸ್ತು ವಧಾದ್ವಾಪಿ ಮಹತ್ತರಂ ।
ಭಕ್ತಂ ಭಜಸ್ವ ಮಾಂ ಭೀರು ಭಕ್ತೋಽಹಂ ತ್ವಯಿ ಸುಂದರಿ ॥ ೩೭ ॥

॥ ಅಗಸ್ತ್ಯ ಉವಾಚ ॥

ಏವಮುಕ್ತ್ವಾ ತು ತಾಂ ಕನ್ಯಾಂ ಬಲಾತ್ಸಂಗೃಹ್ಯ ಬಾಹುನಾ ।
ಅತೀತೇ ವಾಕ್ಪಥೇ ತೇನ ವಿವಸ್ತ್ರಾ ಸಾ ತಥಾ ಕೃತಾ ॥ ೩೮ ॥

ವೃಥಮಂಗೇ ಸಮಾಶ್ಲಿಷ್ಯಾ ಮುಖಂ ಚೈವ ಮುಖೇ ಕೃತಂ ।
ವಿಸ್ಫುರಂತೀಂ ಯಥಾಕಾಮಂ ಮೈಥುನಾಯೋಪಚಕ್ರಮೇ ॥ ೩೯ ॥

ತಮನರ್ಥಂ ಮಹಾಘೋರಂ ದಂಡಃ ಕೃತ್ವಾ ಸುದಾರುಣಂ ।
ನಗರಂ ಸ್ವಂ ಜಗಾಮಾಶು ಮಧುಮತ್ತಮನುತ್ತಮಂ ॥ ೪೦ ॥

---

೩೬. ದಂಡನು ಹೇಳಿದನು- ಭಾಮಿನಿಯೆ! ಕಾಮೋನ್ಮತ್ತನಾದ ನನಗೆ ಅನುಗ್ರಹಿಸು. ನಿನ್ನಿಂದಲೇ ಈ ಪ್ರಾಣಗಳು ಹಿಡಿಯಲ್ಪಟ್ಟಿವೆ. ನೀನೊಲ್ಲದಿದ್ದರೆ ಅವು ಹೋಗುತ್ತವೆ.

೩೭. ಎಲೈ, ವಧುವೆ! ನಿನ್ನನ್ನು ನಾನು ಹೊಂದಿದ ಮೇಲೆ ವಧೆಯಲ್ಲದಿದ್ದರೆ ಅದಕ್ಕಿಂತಲೂ ಮೇಲಿನ ಶಿಕ್ಷೆಯಾದರೂ ಆಗಲಿ. ಭಕ್ತನಾದ ನನ್ನನ್ನು ಹೊಂದು. ಎಲೈ ಸುಂದರಿಯೆ ! ನಿನಗೆ ನಾನು ಭಕ್ತನಾಗಿದ್ದೇನೆ.

೩೮. ಅಗಸ್ತ್ಯನು ಹೇಳಿದನು- ಹೀಗೆಂದು ಹೇಳಿ ಆಕೆಯನ್ನು ತೋಳಿನಿಂದ ಗಟ್ಟಿಯಾಗಿ ಬಲಾತ್ಕಾರದಿಂದ ಹಿಡಿದುಕೊಂಡು ಬಾಯಲ್ಲಿ ಹೇಳಬಾರದಂತೆ ಬಟ್ಟೆಯನ್ನು ಬಿಚ್ಚಿ ಬೆತ್ತಲೆಯನ್ನಾಗಿ ಮಾಡಿಬಿಟ್ಟನು.

೩೯. ಅವಯವಗಳನ್ನು ಗಟ್ಟಿಯಾಗಿ ತಬ್ಬಿಕೊಂಡು ಮುಖದಲ್ಲಿ ಮುಖವನ್ನಿಟ್ಟು ನಡುಗುತ್ತಿರುವ ಆಕೆಯನ್ನು ಹಿಡಿದುಕೊಂಡು ಮೈಥುನಕ್ಕೆ ಮೊದಲುಮಾಡಿದನು.

೪೦. ಆ ಘೋರವಾದ ಅನರ್ಥಕಾರಿಯಾದ ಕೆಲಸವನ್ನು ಮಾಡಿ ದಂಡನು ಉತ್ತಮವಾದ ತನ್ನ ಮಧುಮತ್ತವೆಂಬ ನಗರಕ್ಕೆ ಹೊರಟುಹೋದನು.

ಭಾರ್ಗವೀ ರುದತೀ ದೀನಾ ಅಶ್ರಮಸ್ಯಾನಿದೂರತಃ ।
ಪ್ರತ್ಯೇಯಾಯ ಸಮುದ್ವಿಗ್ನಾ ಪಿತರಂ ದೇವಸಂಮಿತಂ ॥ ೪೧ ॥

ಸ ಮುಹೂರ್ತಾದುಪಸ್ಪೃಶ್ಯ ದೇವರ್ಷಿರಮಿತಪ್ರಭಃ ।
ಸ್ವಮಾಶ್ರಮಂ ಶಿಷ್ಯವೃತಃ ಕ್ಷುಧಾರ್ತಃ ಸಂನ್ಯವರ್ತತ ॥ ೪೨ ॥

ಸೋಽಪಶ್ಯದರಜಾಂ ದೀನಾಂ ರಜಸಾ ಸಮಭಿಪ್ಲುತಾಂ ।
ಅಪಶ್ಯದ್ಘನಸಂಯುಕ್ತಾಂ ಜ್ಯೋತ್ಸ್ನಾಮಿವ ಚ ರಂಜಿತಾಂ ॥ ೪೩ ॥

ತಸ್ಯ ರೋಷಃ ಸಮಭವತ್ ಕ್ಷುಧಾರ್ತಸ್ಯ ಮಹಾತ್ಮನಃ ।
ನಿರ್ದಹನ್ನಿವ ಲೋಕಾಂಸ್ತ್ರೀನ್ ಸ್ವಶಿಷ್ಯಾನ್ ಸಮುವಾಚ ಹ ॥ ೪೪ ॥

॥ ಭಾರ್ಗವ ಉವಾಚ ॥

ಪಶ್ಯಧ್ವಂ ವಿಪರೀತಸ್ಯ ದಂಡಸ್ಯಾದೀರ್ಘದರ್ಶಿನಃ ।
ವಿಪತ್ತಿಂ ಘೋರಸಂಕಾಶಾಂ ದೀಪ್ತಾಮಗ್ನಿಶಿಖಾಮಿವ ॥ ೪೫ ॥

ಕ್ಷಯಂ ತ್ವಧರ್ಮತಃ ಪ್ರಾಪ್ತಃ ಸಾನುಗಸ್ತು ನ ಸಂಶಯಃ ।
ಯಸ್ತು ದೀಪ್ತಹುತಾಶಸ್ಯ ಅರ್ಚಿಃ ಸಂಸ್ಪೃಷ್ಟವಾನಿಹ ॥ ೪೬ ॥

---

೪೧. ಈ ಭಾರ್ಗವನ ಮಗಳು ದೀನಳಾಗಿ ಅಳುತ್ತಾ ಆಶ್ರಮಕ್ಕೆ ಸ್ವಲ್ಪದೂರದಲ್ಲಿ ಬರುತ್ತಿದ್ದ ದೇವಸಮನಾದ ತಂದೆಯ ಬಳಿಗೆ ಎದುರಾಗಿ ಹೋದಳು

೪೨. ದೇವರ್ಷಿಯಾದ ಶಕ್ತನಾದ ಆ ಶುಕ್ರನು ಸ್ನಾನಮಾಡಿಕೊಂಡು ಹಸಿವಿನಿಂದ ಕೂಡಿ ಶಿಷ್ಯರೊಡನೆ ತನ್ನ ಆಶ್ರಮಕ್ಕೆ ಹಿಂತಿರುಗಿ ಬರುತ್ತಿದ್ದನು.

೪೩. ದೀನಳಾಗಿ ಧೂಳಿನಿಂದ ಮಲಿನಳಾಗಿದ್ದ ಆಕೆಯನ್ನು ಶುಕ್ರನು ಬೆಳಗುತ್ತಿರುವ ಚಂದ್ರನು ಮೋಡದಿಂದ ಮುಚ್ಚಿಕೊಂಡಿರುವಂತೆ ಕಂಡನು.

೪೪. ಹಸಿವುಗೊಂಡ ಆ ಮಹಾಮುನಿಗೆ ಕೋಪವು ಬಂದಿತು. ಆಗ ಮೂರು ಲೋಕಗಳನ್ನು ಸುಡುವನಂತೆ ಶಿಷ್ಯರನ್ನು ಕುರಿತು ಇಂತೆಂದನು.

೪೫-೪೬. ಭಾರ್ಗವನು ಹೇಳಿದನು- ನೋಡಿರಯ್ಯಾ ! ಮುಂದಾಲೋಚನೆಯಿಲ್ಲದ ಅಯೋಗ್ಯನಾದ ದಂಡನ ಘೋರವಾದ ವಿಪತ್ತುಗಳನ್ನು ನೋಡಿ. ಜ್ವಲಿಸುತ್ತಿರುವ ಬೆಂಕಿಯ ಶಿಖೆಯನ್ನು ಮುಟ್ಟಿದರೆ ಬರುವಂತೆ ಒಂದಿದೆ. ಅವನು ತನ್ನ ಜತೆಯರೊಡನೆ ಅಧರ್ಮದಿಂದ ನಾಶವನ್ನು ಹೊಂದುವನು. ಆ ದಂಡನು ಉರಿಯುತ್ತಿರುವ

ಯಸ್ಮಾತ್ಸ ಕೃತವಾನ್ ಪಾಪಮೀದೃಶಂ ಘೋರಸಮ್ಮಿತಂ ।
ತಸ್ಮಾತ್ಪ್ರಾಪ್ಸ್ಯತಿ ದುರ್ಮೇಧಾಃ ಪಾಂಶುವರ್ಷಮನುತ್ತಮಂ ॥ ೪೭ ॥

ಕುರಾಜಾ ದೇಶಸಂಯುಕ್ತಃ ಸಭೃತ್ಯಬಲವಾಹನಃ ।
ಪಾಪಕರ್ಮಸಮಾಚಾರೋ ವಧಂ ಪ್ರಾಪ್ಸ್ಯತಿ ದುರ್ಮತಿಃ ॥ ೪೮ ॥

ಸಮಂತಾದ್ಯೋಜನಶತೇ ವಿಷಯೇ ಚಾಸ್ಯ ದುರ್ಮತೇಃ ।
ವರ್ಷತೇ ಪಾಂಸುವರ್ಷೇಣ ಮಹತಾ ಪಾಕಶಾಸನಃ ॥ ೪೯ ॥

ಸರ್ವಸತ್ವಾನಿ ಯಾನೀಹ ಜಂಗಮಸ್ಥಾವರಾಣಿ ಚ ।
ಸರ್ವೇಷಾಂ ಪಾಂಸುವರ್ಷೇಣ ಕ್ಷಯಃ ಕ್ಷಿಪ್ರಂ ಭವಿಷ್ಯತಿ ॥ ೫೦ ॥

ದಂಡಸ್ಯ ವಿಷಯೋ ಯಾವತ್ತಾವದುಪನಾಶ್ರಮಂ ।
ಪಾಂಸುವರ್ಷಮಿವಾಕಸ್ಮಾತ್ಸಪ್ತರಾತ್ರಂ ಭವಿಷ್ಯತಿ ॥ ೫೧ ॥

---

ಬೆಂಕಿಯ ಜ್ವಾಲೆಯನ್ನು ಮುಟ್ಟಿದನು. ಈ ರೀತಿಯಾದ ಘೋರವಾದ ಪಾಪವನ್ನು ಮಾಡಿರುವುದರಿಂದ ಈ ದುಷ್ಟಬುದ್ಧಿಯು ಬಹುವಾದ ಧೂಳಿನ ಮಳೆಯನ್ನು ಹೊಂದುತ್ತಾನೆ.

೪೮. ಈ ಅಯೋಗ್ಯನಾದ ರಾಜನು ದೇಶ, ಆಳು, ಸೈನ್ಯ, ವಾಹನಗಳೊಡನೆ ವಧೆಯನ್ನು ಹೊಂದುತ್ತಾನೆ.

೪೯. ಈತನ ರಾಜ್ಯದ ಸುತ್ತಲೂ ನೂರು ಯೋಜನಗಳ ಸುತ್ತಳತೆಯಲ್ಲಿ ಇಂದ್ರನು ಧೂಳಿನ ಮಳೆಯನ್ನು ಸುರಿಸುತ್ತಾನೆ.

೫೦. ಇಲ್ಲಿರತಕ್ಕ ಸ್ಥಾವರಜಂಗಮಗಳಾದ ಎಲ್ಲಾ ಪ್ರಾಣಿಗಳೂ ಈ ಧೂಳಿನ ಮಳೆಯಿಂದ ಜಾಗ್ರತೆಯಾಗಿ ನಾಶವಾಗುತ್ತವೆ.

೫೧. ದಂಡನ ದೇಶವು ಎಲ್ಲಿಯವರೆಗಿರುವುದೋ ಅಲ್ಲಿಯವರೆಗೂ ಇರುವ ವನ, ಉಪವನ, ಆಶ್ರಮಗಳೆಲ್ಲವೂ ಅನಿರೀಕ್ಷಿತವಾಗಿ ಏಳುದಿನ ಬರುವ ಧೂಳಿನಮಳೆಯಿಂದ ನಾಶವಾಗುತ್ತವೆ.

॥ ಅಗಸ್ತ್ಯ ಉವಾಚ ॥

ಇತ್ಯುಕ್ತ್ವಾ ಕ್ರೋಧಸಂತಪ್ತಸ್ತಮಾಶ್ರಮನಿವಾಸಿನಂ ।
ಜನೋ ಜನಪದಸ್ಯಾಂತೇ ನೀಯತಾಮಿತ್ಯುವಾಚ ಹ ॥ ೫೨ ॥

ಉಕ್ತಮಾತ್ರೇ ಉಶನಸಾ ಆಶ್ರಮಾವಾಸಥೋ ಜನಃ ।
ಕ್ಷಿಪ್ರಂ ತು ವಿಷಯಾತ್ತಸ್ಮಾತ್ಸ್ಥಾನಂ ಚಕ್ರೇ ಸ ಬಾಹ್ಯತಃ ।
ಸ ತಥೋಕ್ತ್ವಾ ಮುನಿಜನ ಮರಜಾಮಿದಮಬ್ರವೀತ್ ॥ ೫೩ ॥

॥ ಭಾರ್ಗವ ಉವಾಚ ॥

ಆಶ್ರಮೇ ತ್ವಂ ಸುದುರ್ಮೇಧೇ ವಸ ಚೇಹ ಸಮಾಹಿತಾ ।
ಇದಂ ಯೋಜನಪರ್ಯಂತಂ ಸರಃ ಸುರುಚಿರಪ್ರಭಂ ॥ ೫೪ ॥

ಅರಜೇ ವಿರಜಾ ಭೂತ್ವಾ ಕಾಲಮತ್ರ ಸಮಾಃ ಶತಂ ॥ ೫೫ ॥

॥ ಅಗಸ್ತ್ಯ ಉವಾಚ ॥

ಶ್ರುತ್ವಾ ನಿಯೋಗಂ ತಸ್ಯರ್ಷೇರರಜಾ ಭಾರ್ಗವೀ ತದಾ ।
ತಥೇತಿ ಪಿತರಂ ಪ್ರಾಹ ಭಾರ್ಗವಂ ಭೃಶದುಃಖಿತಾ ॥ ೫೬ ॥

---

೫೨. ಅಗಸ್ತ್ಯನು ಹೇಳಿದನು- ಕೋಪದಿಂದ ಕೂಡಿ ಹೀಗೆಂದು ಹೇಳಿ ಈ ನಮ್ಮ ಆಶ್ರಮದ ಜನಗಳನ್ನು ಜಾಗ್ರತೆಯಾಗಿ ಎಲ್ಲೆಯ ಕೊನೆಗೆ ಕರೆದೊಯ್ಯಿರೆಂದು ಹೇಳಿದನು.

೫೩. ಉಶನನು ಇಂತೆಂದು ಹೇಳಲು ಆಶ್ರಮವಾಸಿಗಳಾದ ಜನರು ಜಾಗ್ರತೆಯಾಗಿ ದಂಡನ ರಾಜ್ಯದಿಂದ ಹೋದರು. ಅನಂತರ ಶುಕ್ರನು ಅರಜೆಯನ್ನು ಕುರಿತು ಇಂತೆಂದನು.

೫೪–೫೫. ಭಾರ್ಗವನು ಹೇಳಿದನು- ಎಲೈ ದುಷ್ಟಳೇ ! ನೀನು ಈ ಆಶ್ರಮದಲ್ಲಿ ನಿಯಮದಿಂದಿರು. ಇಲ್ಲಿರುವ ಈ ಸರೋವರವು ಪ್ರಕಾಶಮಾನವಾಗಿ ಯೋಜನದಗಲವಿರುವುದು. ಇಲ್ಲಿ ನೀನು ಪಾಪವನ್ನು ಕಳೆದುಕೊಳ್ಳುತ್ತ ನೂರು ವರ್ಷಗಳವರೆಗೆ ಇರು.

೫೬. ಅಗಸ್ತ್ಯನು ಹೇಳಿದನು- ಅರಜೆಯು ತಂದೆಯ ಮಾತನ್ನು ಕೇಳಿ ಬಹು ದುಃಖಗೊಂಡು ಹಾಗೆ ಆಗಲಿ, ಎಂದಳು.

ಇತ್ಯುಕ್ತ್ವಾ ಭಾರ್ಗವೋ ನಾಸಂ ತಸ್ಮಾದನ್ಯಮುಪಾಕ್ರಮತ್ ।
ಸಪ್ತಾಹೇ ಭಸ್ಮಸಾದ್ಭೂತಂ ಯಥೋಕ್ತಂ ಬ್ರಹ್ಮವಾದಿನಾ ॥ ೫೭ ॥

ತಸ್ಯ ದಂಡಸ್ಯ ವಿಷಯೋ ವಿಂಧ್ಯಶೈಲಸ್ಯ ಸಾನುಷು ।
ಶಪ್ತೋ ಹ್ಯುಶನಸಾ ರಾಮ ತಸ್ಮಿನ್ನೈಧಾರ್ಮಿಕೇ ಕೃತೇ ॥ ೫೮ ॥

ತತಃ ಪ್ರಭೃತಿ ಕಾಕುತ್‌ಸ್ಥ ದಂಡಕಾರಣ್ಯ ಮುಚ್ಯತೇ ।
ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ಪೃಚ್ಛಸಿ ರಾಘವ ॥ ೫೯ ॥

ಸಂಧ್ಯಾಮುಪಾಸಿತುಂ ರಾಮ ಸಮಯೋ ಹ್ಯತಿವರ್ತತೇ ।
ಏತೇ ಮಹರ್ಷಯೋ ರಾಮ ಪೂರ್ಣಕುಂಭಾಃ ಸಮಂತತಃ ॥ ೬೦ ॥

ಕೃತೋದಕಾ ನರವ್ಯಾಘ್ರ ಪೂಜಯಂತಿ ದಿವಾಕರಂ ।
ಸರ್ವೈ ಋಷಿಭಿರಭ್ಯಸ್ತೈಃ ಸ್ತೋತ್ರೈರ್ಬ್ರಹ್ಮಾದಿಭಿಃ ಕೃತೈಃ ।
ರವಿರಸ್ತಂ ಗತೋ ರಾಮ ಗತ್ವೋದಕಮುಪಸ್ಪೃಶ ॥ ೬೧ ॥

---

೫೭. ಹೀಗೆಂದು ಹೇಳಿ ಆ ಶುಕ್ರನು ಬೇರೆ ಕಡೆಗೆ ಹೊರಟು ಹೋದನು. ಏಳು ದಿನಗಳಲ್ಲಿ ಆ ಬ್ರಹ್ಮವಾದಿಯಾದ ಶುಕ್ರನು ಹೇಳಿದಂತೆ ಎಲ್ಲವೂ ಧೂಳಿನ ಮಳೆಯಿಂದ ನಾಶವಾಯಿತು.

೫೮-೬೧. ವಿಂಧ್ಯಶೈಲದ ತಪ್ಪಲು ಪ್ರದೇಶದ ಆ ದಂಡನ ದೇಶವು ಶುಕ್ರನಿಂದ ಶಾಪವನ್ನು ಹೊಂದಿ ಈ ರೀತಿಧರ್ಮದಿಂದ ವರ್ಜಿತವಾಯಿತು. ಅದು ಮೊದಲುಗೊಂಡು ಇದನ್ನು ದಂಡಕಾರಣ್ಯವೆಂದು ಎನ್ನುತ್ತಾರೆ. ಎಲೈ ರಾಮನೆ! ನೀನು ನನ್ನನ್ನು ಕೇಳಿದೆಯಲ್ಲ, ಅದನ್ನು ಹೇಳಿದುದಾಯಿತು. ಸಂಧ್ಯಾವಂದನೆಯನ್ನು ಮಾಡಲು ಕಾಲವು ಮೀರುತ್ತದೆ. ಈ ಋಷಿಗಳು ಕೈಯ್ಯಲ್ಲಿ ಪೂರ್ಣಕುಂಭಗಳನ್ನು ಹಿಡಿದುಕೊಂಡು ಅರ್ಘ್ಯಪನ್ನು ಕೊಟ್ಟು ಸೂರ್ಯನನ್ನು ಪೂಜಿಸಿ ಬ್ರಹ್ಮಾದಿಗಳು ಮಾಡಿರುವ ತಾವು ಅಭ್ಯಸಿಸಿರುವ ಸ್ತೋತ್ರಗಳಿಂದ ಸೂರ್ಯನನ್ನು ಸ್ತೋತ್ರಮಾಡುತ್ತಿದ್ದಾರೆ. ಎಲೈ ರಾಮನೇ! ಸೂರ್ಯನು ಅಸ್ತಂಗತನಾದನು. ಹೋಗಿ ಸಂಧ್ಯಾವಂದನಾದಿಗಳನ್ನು ಮಾಡು.

॥ ಪುಲಸ್ತ್ಯ ಉವಾಚ ॥

ಋಷೇರ್ವಚನಮಾದಾಯ ರಾಮಃ ಸಂಧ್ಯಾಮುಪಾಸಿತುಂ ।
ಉಪಚಕ್ರಾಮ ತತ್ಪುಣ್ಯಂ ಸ ಸರೋ ರಘುನಂದನಃ ॥ ೬೨ ॥

ಅಥ ತಸ್ಮಿನ್ ವನೋದ್ದೇಶೇ ರಮ್ಯೇ ಪಾದಪಶೋಭಿತೇ ।
ನದೀತೀರೇ ಗಿರಿವರೇ ಕೋಕಿಲಾತಮಂಡಿತೇ ॥ ೬೩ ॥

ನಾನಾಪಕ್ಷಿರವೋದ್ಯಾನೇ ನಾನಾಮೃಗಸಮಾಕುಲೇ ।
ಸಿಂಹವ್ಯಾಘ್ರಸಮಾಕೀರ್ಣೇ ನಾನಾದ್ವಿಜಸಮಾವೃತೇ ॥ ೬೪ ॥

ಗೃಧ್ರೋಲೂಕೌ ಪ್ರವಸಿತೌ ಬಹೂನ್ ವರ್ಷಗಣಾನಪಿ ।
ಅಥೋಲೂಕಸ್ಯ ಭವನಂ ಗೃಧ್ರಃ ಪಾಪವಿನಿಶ್ಚಯಃ ॥ ೬೫ ॥

ಮಮೇದಮಿತಿ ಕೃತ್ವಾಸೌ ಕಲಹಂ ತೇನ ಚಾಕರೋತ್ ।
ರಾಜಾ ಸರ್ವಸ್ಯ ಲೋಕಸ್ಯ ರಾಮೋ ರಾಜೀವಲೋಚನಃ ॥ ೬೬ ॥

ತಂ ಪ್ರಪದ್ಯಾವಹೇ ಶೀಘ್ರಂ ಕಸ್ಯೈತದ್ಭವನಂ ಭವೇತ್ ।
ಗೃಧ್ರೋಲೂಕೌ ಪ್ರಪದ್ಯೇತಾಂ ಜಾತಮೋಹಾವಮರ್ಷಣೌ ॥ ೬೭ ॥

---

೬೨ ಪುಲಸ್ತ್ಯನು ಹೇಳಿದನು– ರಾಮನು ಋಷಿಯ ಅಪ್ಪಣೆಯಂತೆ ಸಂಧ್ಯಾವಂದನೆಯನ್ನು ಮಾಡಲು ಪುಣ್ಯಪ್ರದವಾದ ಆ ಸರೋವರಕ್ಕೆ ಹೋದನು.

೬೩–೬೭. ಅನಂತರ ಮರಗಳಿಂದ ಶೋಭಿತವಾದ, ಅನೇಕ ಕೋಕಿಲೆಗಳು ವಾಸಿಸುವ ಬಗೆಬಗೆಯ ಪಕ್ಷಿಗಳ ಧ್ವನಿಯಿಂದ ಕೂಡಿದ, ನಾನಾ ಮೃಗಗಳುಳ್ಳ, ಸಿಂಹ ಹುಲಿಗಳಿಂದ ಕೂಡಿದ, ಆ ನದಿಯ ದಡದಲ್ಲಿರುವ, ಆ ಪರ್ವತ ಪ್ರದೇಶದಲ್ಲಿ ಒಂದು ಹದ್ದೂ ಒಂದು ಗೂಬೆಯೂ ಅನೇಕ ವರ್ಷಗಳಿಂದ ವಾಸಿಸುತ್ತಿದ್ದುವು. ಹೀಗಿರಲು ಆ ಹದ್ದು ಮನಸ್ಸಿನಲ್ಲಿ ದುರಭಿಪ್ರಾಯವನ್ನು ಹೊಂದಿ ಗೂಬೆಯ ಮನೆಯನ್ನು ನನ್ನದೆಂದು ಹೇಳುತ್ತಾ ಜಗಳವಾಡಿತು. ರಾಜೀವಲೋಚನನಾದ ರಾಮನು ಲೋಕಕ್ಕೆಲ್ಲಾ ರಾಜನು. ಅವನ ಬಳಿಗೆ ಹೋಗೋಣ. ಈ ಮನೆ ಯಾರದಾದೀತು ? ನೋಡೋಣ. ಎಂದು ಆ ಗೂಬೆ ಹದ್ದುಗಳು ಕೋಪದಿಂದಲೂ ಹೊಟ್ಟೆಕಿಚ್ಚಿನಿಂದಲೂ ಜಗಳವಾಡುತ್ತ ರಾಮನ ಬಳಿಗೆ ಬಂದುವು.

ರಾಮಂ ಪ್ರಪದ್ಯ ತೌ ಶೀಘ್ರಂ ಕಲಿವ್ಯಾಕುಲಚೇತಸೌ ।
ತೌ ಪರಸ್ಪರವಿದ್ವೇಷೌ ಸ್ಪೃಶತಶ್ಚರಣೌ ತದಾ ।
ಅಥ ದೃಷ್ಟ್ವಾ ನರೇಂದ್ರಂ ತಂ ಗೃಧ್ರೋ ವಚನಮಬ್ರವೀತ್ ॥ ೬೮ ॥

॥ ಗೃಧ್ರ ಉವಾಚ ॥

ಸುರಾಣಾಮಸುರಾಣಾಂ ಚ ತ್ವಂ ಪ್ರಧಾನೋ ಮತೋ ಮಮ ।
ಬೃಹಸ್ಪತೇಶ್ಚ ಶುಕ್ರಶ್ಚ ತ್ವಂ ವಿಶಿಷ್ಟೋ ಮಹಾದ್ಯುತೇ ॥ ೬೯ ॥

ಪರಾವರಜ್ಞೋ ಭೂತಾನಾಂ ಮರ್ತ್ಯೇ ಚಂದ್ರ ಇವಾಪರಃ ।
ದುರ್ನಿರೀಕ್ಷ್ಯೋ ಯಥಾ ಸೂರ್ಯೋ ಹಿಮವಾನಿವ ಗೌರವೇ ॥ ೭೦ ॥

ಸಾಗರಶ್ಚಾಸಿ ಗಾಂಭೀರ್ಯೇ ಲೋಕಪಾಲೋಪಮೋ ಯುಧಿ ।
ಕ್ಷಾಂತ್ಯಾಂ ಧರಣ್ಯಾ ತುಲ್ಯೋಽಸಿ ಶೀಘ್ರತ್ವೇ ಹ್ಯನಿಲೋಪಮಃ ॥ ೭೧ ॥

ಗುರುಸ್ತ್ವಂ ಸರ್ವಸಂಪನ್ನೋ ವಿಷ್ಣುರೂಪೋಽಸಿ ರಾಘವ ।
ಅಮರ್ಷೀ ದುರ್ಜಯೋ ಜೇತಾ ಸರ್ವಾಸ್ತ್ರವಿಧಿಪಾರಗಃ ॥ ೭೨ ॥

---

೬೮. ಜಗಳದಿಂದ ಕೂಡಿದ ಮನಸ್ಸುಳ್ಳ ಅವೆರಡೂ ಒಂದಕ್ಕೊಂದಕ್ಕೆ ದ್ವೇಷ ಪಟ್ಟುಕೊಂಡು ಜಾಗ್ರತೆಯಾಗಿ ರಾಮನ ಬಳಿಗೆ ಬಂದು ನಮಸ್ಕರಿಸಿದುವು. ಆಗ ಹದ್ದು ಆ ರಾಮನನ್ನು ಕುರಿತು ಇಂತೆಂದಿತು.

೬೯. ಗೃಧ್ರನು ಹೇಳಿದನು– ಎಲೈ ರಾಮಚಂದ್ರನೇ ! ನೀನು ದೇವತೆಗಳಿಗೂ, ದಾನವರಿಗೂ ಕೂಡ ಮುಖ್ಯನು. ಎಂದು ನನಗೆ ಗೊತ್ತು. ಬೃಹಸ್ಪತಿ ಶುಕ್ರರಿಗಿಂತಲೂ ನೀನು ಬುದ್ಧಿವಂತನೆಂದೂ ನಾನು ಬಲ್ಲೆ.

೭೦-೭೨. ಪ್ರಾಣಿಗಳ ಹಿಂದುಮುಂದನ್ನು ನೀನು ಬಲ್ಲೆ. ಮನುಷ್ಯರಲ್ಲಿ ಬೇರೆಯ ಚಂದ್ರನಂತೆಯೇ ಇದ್ದೀಯೆ. ಸೂರ್ಯನಂತೆ ನಿನ್ನ ತೇಜಸ್ಸನ್ನು ನೋಡಲು ಶಕ್ಯವಿಲ್ಲ. ಗೌರವದಲ್ಲಿ ಹಿಮವಂತನಂತಿದ್ದೀಯೆ. ಗಾಂಭೀರ್ಯದಲ್ಲಿ ಸಮುದ್ರದಂತೆಯೂ ಯುದ್ಧದಲ್ಲಿ ಇಂದ್ರನಂತೆಯೂ, ಕ್ಷಮೆಯಲ್ಲಿ ಭೂಮಿಯಂತೆಯೂ ,ವೇಗದಲ್ಲಿ ವಾಯುವಿನಂತೆಯೂ ಇದ್ದೀಯೆ. ನೀನು ಗುರುವು. ಎಲ್ಲಾ ಗುಣಗಳಿಂದ ಕೂಡಿದ ವಿಷ್ಣುವೇ ಆಗಿದ್ದೀಯೆ. ನಿನಗೆ ಹೊಟ್ಟೆಗಿಚ್ಚಿಲ್ಲ. ಇತರರು ನಿನ್ನನ್ನು ಜಯಿಸಲಸಾಧ್ಯವು. ನೀನೆಲ್ಲರನ್ನೂ ಜಯಿಸುತ್ತೀಯೆ. ಎಲ್ಲಾ ಅಸ್ತ್ರಗಳನ್ನೂ ಬಲ್ಲವನಾಗಿದ್ದೀಯೆ.

ಶೃಣು ತ್ವಂ ಮಮ ದೇವೇಶ ವಿಜ್ಞಾಪ್ಯಂ ನರಪುಂಗವ ।
ಮಯಾಲಯಂ ಪೂರ್ವಕೃತಂ ಬಾಹುವೀರ್ಯೇಣ ವೈ ಪ್ರಭೋ ॥ ೭೩ ॥

ಉಲೂಕೋ ಹರತೇ ರಾಜಂಸ್ತ್ವತ್ಸಮೀಪೇ ವಿಶೇಷತಃ ।
ಈದೃಶೋಽಯಂ ದುರಾಚಾರಸ್ತ್ವದಾಜ್ಞಾಲೋಪಕೋ ನೃಪ ।
ಪ್ರಾಣಾಂತಕೇನ ದಂಡೇನ ಏನಂ ಶಾಸಿತುಮರ್ಹಸಿ ॥ ೭೪ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತೇ ತು ಗೃಧ್ರೇಣ ಉಲೂಕೋ ವಾಕ್ಯಮಬ್ರವೀತ್ ॥ ೭೫ ॥

॥ ಉಲೂಕ ಉವಾಚ ॥

ಶೃಣು ದೇವ ಮಮ ಜ್ಞಾಪ್ಯಮೇಕಚಿತ್ತೋ ನರಾಧಿಪ ।
ಸೋಮಾಚ್ಛತಕ್ರತೋಃ ಸೂರ್ಯಾದ್ಧನದಾಚ್ಚ ಯಮಾತ್ತಥಾ ॥ ೭೬ ॥

ಜಾಯತೇ ವೈ ನೃಪೋ ರಾಮ ಕಿಂಚಿದ್ಭವತಿ ಮಾನುಷಃ ।
ತ್ವಂ ತು ಸರ್ವಮಯೋ ದೇವ ನಾರಾಯಣ ಇವಾಪರಃ ॥ ೭೭ ॥

---

೭೩-೭೪. ಎಲೈ ದೇವದೇವನೆ! ನಾನು ವಿಜ್ಞಾಪಿಸುವುದನ್ನು ಲಾಲಿಸು. ನಾನು ನನ್ನ ಭುಜಬಲದಿಂದ ಒಂದು ಮನೆಯನ್ನು ಹಿಂದೆಯೇ ಮಾಡಿಕೊಂಡಿರುವೆನು. ಈ ಗೂಬೆಯು ಅದನ್ನು ಅಪಹರಿಸುತ್ತದೆ. ಅದರಲ್ಲಿಯೂ ನೀನು ರಾಜ್ಯಭಾರ ಮಾಡುವಾಗ, ಈ ಗೂಬೆಯು ಇಂತಹ ದುರಾಚಾರಿಯಾಗಿ ನಿನ್ನ ಅಪ್ಪಣೆಯನ್ನು ತಿರಸ್ಕರಿಸುತ್ತದೆ. ಆದ್ದರಿಂದ ಇದರ ಪ್ರಾಣವನ್ನು ನಾಶಮಾಡುವ ಶಿಕ್ಷೆಯನ್ನು ಕೊಟ್ಟು ಕೊಲ್ಲಿಸು. ಎಂದಿತು.

೭೫. ಪುಲಸ್ತ್ಯನು ಹೇಳಿದನು- ಹದ್ದು ಹೀಗೆ ಹೇಳುತ್ತಲೂ ಆ ಗೂಬೆಯು ಇಂತೆಂದಿತು.

೭೬-೭೭. ಗೂಬೆಯು ಹೇಳಿತು- ಎಲೈ ದೇವನೆ! ಒಂದೇ ಮನಸ್ಸಿನಿಂದ ನಾನು ಹೇಳುವುದನ್ನು ಕೇಳು. ಚಂದ್ರ, ಇಂದ್ರ, ಸೂರ್ಯ, ಕುಬೇರ, ಯಮ ಇವರುಗಳ ಭಾಗದಿಂದ ರಾಜನು ಹುಟ್ಟುತ್ತಾನೆ. ಮನುಷ್ಯತ್ವವು ಎಲ್ಲಿಯೋ ಸ್ವಲ್ಪ ಮಟ್ಟಿಗಿರುತ್ತದೆ. ನೀನಾದರೋ ಎಲ್ಲರಿಂದಲೂ ಕೂಡಿದ ದೇವನು. ಬೇರೊಬ್ಬ ನಾದ ನಾರಾಯಣನಂತಿದ್ದೀಯೆ.

ಪ್ರೋಚ್ಯತೇ ಸೌಮ್ಯತಾ ರಾಜನ್ ಸಮ್ಯಕ್ಕಾಲೇ ವಿಚಾರಿತೇ ।
ಸಮ್ಯಕ್ಚರಸಿ ಮಾನುಷ್ಯೇ ತೇನ ಸೋಮೋಪಮೋ ಭವಾನ್ ॥ ೭೮ ॥

ದೋಷೇ ದಂಡಃ ಪ್ರಜಾನಾಥ ದಾನೇ ಪಾಪಭಯಾಪಹಃ ।
ದಾತಾಪಹರ್ತಾ ಗೋಪ್ತಾ ಚ ತೇನೇಂದ್ರ ಇವ ನೋ ಭವಾನ್ ॥ ೭೯ ॥

ಅಧೃಷ್ಯಃ ಸರ್ವಯೋಧೇಷು ತೇಜಸಾ ಚಾನಲೋ ಭವಾನ್ ।
ಅಭೀಕ್ಷ್ಣಂ ತಪಸೇ ಪಾಪಾನ್ ತೇನ ತ್ವಂ ರಾಮ ಭಾಸ್ಕರಃ ॥ ೮೦ ॥

ಸಾಕ್ಷಾದ್ವಿತ್ತೇಶತುಲ್ಯೋಽಸಿ ಅಥವಾ ಧನದಾಧಿಕಃ ।
ವಿತ್ತಾಯತ್ತಾ ತು ಪತ್ನೀ ಶ್ರೀ ನಿತ್ಯಂ ತೇ ರಾಜಸತ್ತಮ ॥ ೮೧ ॥

ಧನದಸ್ಯ ತು ಕೋಷೇಣ ಧನದಸ್ತೇನ ವೈ ಭವಾನ್ ।
ಸಮಃ ಸರ್ವೇಷು ಭೂತೇಷು ಸ್ಥಾವರೇಷು ಚರೇಷು ಚ ॥ ೮೨ ॥

ಶತ್ರೌ ಮಿತ್ರೇ ಚ ತೇ ದೃಷ್ಟಿಃ ಸಮಂತಾದ್ಯಾತಿ ರಾಘವ ।
ಧರ್ಮೇಣ ಶಾಸನಂ ನಿತ್ಯಂ ವ್ಯವಹಾರವಿಧಿಕ್ರಮಾತ್ ॥ ೮೩ ॥

---

೭೮. ಎಲೈ ರಾಜನೇ ! ಕಾಲಾನುಗುಣವಾಗಿ ವಿಚಾರಿಸಲು ಮನುಷ್ಯರಲ್ಲಿ ಎಲ್ಲರಲ್ಲಿಯೂ ಒಂದೇ ರೀತಿಯಿರುವುದರಿಂದ ನೀನು ಸೋಮನಂತಿದ್ದೀಯೆ.

೭೯. ದೋಷವಿದ್ದರೆ ದಂಡಿಸುತ್ತೀಯೆ, ದಾನ ತೆಗೆದುಕೊಂಡರೆ ಪಾಪದ ಭಯವನ್ನು ಹಾಳುಮಾಡುತ್ತೀಯೆ. ಕೊಡತಕ್ಕವನೂ ತೆಗೆದುಕೊಳ್ಳತಕ್ಕವನೂ ಕಾಪಾಡತಕ್ಕವನೂ ನೀನಾಗಿರುವುದರಿಂದ ನೀನು ನಮಗೆ ಇಂದ್ರನಂತಿದ್ದೀಯೆ.

೮೦. ಭಟರಲ್ಲಿ ನೀನು ಹೆದರದವನು, ತೇಜಸ್ಸಿನಲ್ಲಿ ಅಗ್ನಿಗೆ ಸಮಾನನಾಗಿದ್ದೀಯೆ. ಪಾಪಿಗಳನ್ನು ಪದೇ ಪದೇ ಶಿಕ್ಷಿಸುತ್ತೀಯೆ. ಆದ್ದರಿಂದ ನೀನು ಸೂರ್ಯನು.

೮೧. ಪ್ರತ್ಯಕ್ಷನಾದ ಕುಬೇರನ ಸಮನಾಗಿದ್ದೀಯೆ. ಅಥವಾ ಅವನಿಗಿಂತಲೂ ಹೆಚ್ಚಿನವನೇ. ಏಕೆಂದರೆ ನಿನ್ನ ಹೆಂಡತಿಯಾದ ಲಕ್ಷ್ಮಿಯು ಯಾವಾಗಲೂ ನಿನ್ನ ಮನಸ್ಸನ್ನು ಅನುಸರಿಸಿ ನಡೆಯುತ್ತಾಳೆ.

೮೨-೮೩. ಕುಬೇರನಿಗಿರುವಷ್ಟು ಹಣವೂ ನಿನ್ನ ಕೋಶದಲ್ಲಿರುವುದರಿಂದ ನೀನು ಕುಬೇರನಿಗೆ ಸಮನು. ಸ್ಥಾವರಜಂಗಮಾತ್ಮಕವಾದ ಎಲ್ಲ ಪ್ರಾಣಿಗಳಲ್ಲಿಯೂ ನಿನ್ನ ದೃಷ್ಟಿಯು ಒಂದೇ ಸಮನಾಗಿ ಇರುತ್ತದೆ. ವ್ಯವಹಾರಕ್ಕೆ ತಕ್ಕಂತೆ ಧರ್ಮ

ಯಸ್ಯ ರುಷ್ಯಸಿ ವೈ ರಾಮ ಮೃತ್ಯುಸ್ತಸ್ಯಾಭಿಧೀಯತೇ ।
ಗೀಯಸೇ ತೇನ ವೈ ರಾಜನ್ ಯಮ ಇತ್ಯಭಿವಿಶ್ರುತಃ ॥ ೮೪ ॥

ಯಶ್ಚೈಷ ಮಾನುಷೋ ಭಾವೋ ಭವತೋ ನೃಪಸತ್ತಮ ।
ಅನೃಶಂಸ್ಯಪರೋ ರಾಜಾ ಸರ್ವೇಷು ಕೃಪಯಾನ್ವಿತಃ ॥ ೮೫ ॥

ದುರ್ಬಲಸ್ಯ ತ್ವನಾಥಸ್ಯ ರಾಜಾ ಭವತಿ ವೈ ಬಲಂ ।
ಅಚಕ್ಷುಷೋ ಭವೇಚ್ಚಕ್ಷುರಗತೌ ಚ ಗತಿರ್ಭವೇತ್ ॥ ೮೬ ॥

ಅಸ್ಮಾಕಮಪಿ ನಾಥಸ್ತ್ವಂ ಶ್ರೂಯತಾಂ ಮಮ ಧಾರ್ಮಿಕ ।
ಭವತಾ ತನ್ನ ಮಂತವ್ಯಂ ಯಥೈತೇ ಕಿಲ ಪಕ್ಷಿಣಃ ॥ ೮೭ ॥

ಯೋಽಸ್ಮನ್ನಾಥಃ ಸ ಪಕ್ಷೀಂದ್ರೋ ಭವತ್ಯೈವ ವಿನಿರ್ಮಿತಃ ।
ಅಸ್ವಾಮ್ಯಂ ದೇವ ನಾಸ್ಮಾಕಂ ಸನ್ನಿಧೌ ಭವತಃ ಪ್ರಭೋ ॥ ೮೮ ॥

---

ವನ್ನು ಅನುಸರಿಸಿ ಶಿಕ್ಷೆಯನ್ನು ವಿಧಿಸುತ್ತೀಯೆ. ಎಲೈ ರಾಮನೇ ! ನೀನು ಯಾರ ಮೇಲೆ ಕೋಪಗೊಳ್ಳುವೆಯೋ ಅವನಿಗೆ ಮೃತ್ಯುವು ಒದಗಿತೆಂದೇ ಹೇಳಬೇಕು. ಆದ್ದರಿಂದಲೇ ನಿನ್ನನ್ನು ಯಮನೆಂದು ಹೇಳುತ್ತಾರೆ.

೮೫. ಎಲೈ ರಾಮನೇ ! ನಿನ್ನಲ್ಲಿರುವ ಮನುಷ್ಯಭಾವವು ಘಾತುಕತನವಿಲ್ಲದೆ ಇರುವಂತಹುದು. ಎಲ್ಲರಲ್ಲಿಯೂ ಅದರಿಂದ ಕೃಪೆಯುಳ್ಳವನಾಗಿರುತ್ತೀಯೆ.

೮೬. ರಾಜನು ಬಲವಿಲ್ಲದವನಿಗೂ, ಅನಾಥನಿಗೂ ಬಲವಾಗಿರುತ್ತಾನೆ. ಕಣ್ಣಿಲ್ಲದವನಿಗೆ ಕಣ್ಣೂ, ಗಮನವಿಲ್ಲದವನಿಗೆ ಗಮನ ಕೊಡುವವನೂ ಆಗಿದ್ದಾನೆ

೮೭. ನಮಗೂ ಕೂಡ ನೀನು ಸ್ವಾಮಿಯು. ಎಲೈ ಸ್ವಾಮಿಯೆ ! ಇವು ಪಕ್ಷಿಗಳು. ಇವಕ್ಕೂ ನನಗೂ ಸಂಬಂಧವಿಲ್ಲವೆಂದು ತಿಳಿಯಬೇಡ ಕೇಳು.

೮೮. ಪಕ್ಷಿ ಸ್ವಾಮಿಯಾದ ನಮ್ಮ ಒಡೆಯನನ್ನು ನೀನೇ ಸೃಷ್ಟಿ ಮಾಡಿದ್ದೀಯೆ ನೀನು ಹತ್ತಿರವಿರುವಾಗ ನಮಗೆ ಧೊರೆಯಿಲ್ಲದೆ ಹೋಗುವುದೆಂದರೇನು ?

ಭವತ್ಯೈವ ಕೃತಃ ಪೂರ್ವಂ ಭೂತಗ್ರಾಮಶ್ಚತುರ್ವಿಧಃ ।
ಮಮಾಲಯಂ ಪ್ರವಿಷ್ಟಸ್ತು ಗೃಧ್ರೋ ಮಾಂ ಬಾಧತೇ ನೃಪ ।
ತ್ವಂ ಹಿ ದೇವಮನುಷ್ಯೇಷು ಶಾಸ್ತಾ ವೈ ನರಪುಂಗವಃ ॥ ೮೯ ॥

॥ ಪುಲಸ್ತ್ಯ ಉವಾಚ ॥

ಏತಚ್ಛ್ರುತ್ವಾ ತು ವೈ ರಾಮಃ ಸಚಿವಾನಾಹ್ವಯತ್ಸ್ವಯಂ ।
ವಿಷ್ಟಿರ್ಜಯಂತೋ ವಿಜಯಃ ಸಿದ್ಧಾರ್ಥೋ ರಾಷ್ಟ್ರವರ್ಧನಃ ॥ ೯೦ ॥

ಅಶೋಕೋ ಧರ್ಮಪಾಲಶ್ಚ ಸುಮಂತಶ್ಚ ಮಹಾಬಲಃ ।
ಏತೇ ರಾಮಸ್ಯ ಸಚಿವಾ ರಾಜ್ಞೋ ದಶರಥಸ್ಯ ಚ ॥ ೯೧ ॥

ನೀತಿಯುಕ್ತಾ ಮಹಾತ್ಮಾನಃ ಸರ್ವಶಾಸ್ತ್ರವಿಶಾರದಾಃ ।
ಸುಶಾಂತಾಶ್ಚ ಕುಲೀನಾಶ್ಚ ನಯೇ ಮಂತ್ರೇ ಚ ಕೋವಿದಾಃ ॥ ೯೨ ॥

ತಾನಾಹೂಯ ಸ ಧರ್ಮಾತ್ಮಾ ಪುಷ್ಪಕಾದವರುಹ್ಯ ಚ ।
ಗೃಧ್ರೋಲೂಕೌ ವಿವದಂತೌ ಪೃಚ್ಛತಿ ಸ್ಮ ರಘೂತ್ತಮಃ ॥ ೯೩ ॥

---

೮೯. ಪೂರ್ವದಲ್ಲಿ ನಾಲ್ಕು ಬಗೆಯಾದ ಪ್ರಾಣಿಗಳನ್ನು ನೀನೇ ಸೃಷ್ಟಿಮಾಡಿದ್ದೀಯೆ. ನೀನೇನೇ ಮನುಷ್ಯರು, ದೇವತೆಗಳು ಇವರನ್ನು ರಕ್ಷಿಸುವ ರಾಜನು. ಈ ಹದ್ದು ನನ್ನ ಮನೆಯನ್ನು ಆಕ್ರಮಿಸಿಕೊಂಡು ನನಗೆ ತೊಂದರೆ ಕೊಡುತ್ತಿದೆ.

೯೦-೯೧. ಪುಲಸ್ತ್ಯನು ಹೇಳಿದನು– ಇದನ್ನು ಕೇಳಿ ರಾಮನು ಮಂತ್ರಿಗಳನ್ನು ಕರೆಸಿದನು. ವಿಷ್ಟಿ, ಜಯಂತ, ವಿಜಯ, ಸಿದ್ಧಾರ್ಥ, ರಾಷ್ಟ್ರವರ್ಧನ, ಅಶೋಕ, ಧರ್ಮಪಾಲ, ಸುಮನ್ತ್ರ ಇವರು ರಾಮನ ಮಂತ್ರಿಗಳು. ಇವರೇ ದಶರಥನಿಗೂ ಮಂತ್ರಿಗಳಾಗಿದ್ದರು.

೯೨. ಇವರು ನೀತಿವಂತರು, ಮಹಿಮವಂತರು, ಎಲ್ಲಾ ಶಾಸ್ತ್ರಗಳನ್ನೂ ಚೆನ್ನಾಗಿ ತಿಳಿದವರು, ಶಕ್ತಿಯುಳ್ಳವರು, ಒಳ್ಳೆಯ ಕುಲದಲ್ಲಿ ಹುಟ್ಟಿದವರು, ನೀತಿಯಲ್ಲಿಯೂ ಮಂತ್ರ ಶಕ್ತಿಯಲ್ಲಿಯೂ ನಿಪುಣರು.

೯೩. ಶ್ರೀರಾಮನು ಅವರೆಲ್ಲರನ್ನೂ ಕರೆದುಕೊಂಡು ಪುಷ್ಪಕದಿಂದಿಳಿದು ಜಗಳವಾಡುತ್ತಿರುವ ಆ ಹದ್ದು ಗೂಬೆಯನ್ನು ಪ್ರಶ್ನೆ ಮಾಡಿದನು.

॥ ಶ್ರೀ ರಾಮ ಉವಾಚ

ಕತಿ ವರ್ಷಾಣಿ ತೇ ಗೃಧ್ರ ತವೇದಂ ನಿಲಯಂ ಕೃತಂ ।
ಏತನ್ಮೇ ಕಾರಣಂ ಬ್ರೂಹಿ ಯದಿ ಜಾನಾಸಿ ತತ್ತ್ವತಃ ।
ಏತಚ್ಛ್ರುತ್ವಾತು ವೈ ಗೃಧ್ರೋ ಬಭಾಷೇ ರಾಘವಂ ಸ್ಥಿತಂ ॥ ೯೪ ॥

॥ ಗೃಧ್ರ ಉವಾಚ ॥

ಇಯಂ ವಸುಮತೀ ರಾಮ ಮನುಷ್ಯೈರೂರ್ಧ್ವಬಾಹುಭಿಃ ।
ಉತ್ಥಿತೈರಾವೃತಾ ಸರ್ವಾ ತದಾ ಪ್ರಭೃತಿ ಮೇ ಗೃಹಂ ॥
ಉಲೂಕಸ್ತ್ವಬ್ರವೀದ್ರಾಮಂ ಪಾದಪೈರುಪಶೋಭಿತಾ ।
ಯದೈವ ಪೃಥಿವೀ ರಾಜಂಸ್ತದಾ ಪ್ರಭೃತಿ ಮೇ ಗೃಹಂ ॥ ೯೫ ॥

॥ ಪುಲಸ್ತ್ಯ ಉವಾಚ ॥

ಏತಚ್ಛ್ರುತ್ವಾ ತು ರಾಮೋ ವೈ ಸಭಾಸದ ಉವಾಚ ಹ ॥ ೯೬ ॥

---

೯೪. ಶ್ರೀರಾಮನು ಹೇಳಿದನು- ಎಲೈ ಗೃಧ್ರನೇ ಎಷ್ಟು ವರ್ಷಗಳಿಂದ ನೀನು ಈ ಮನೆಯನ್ನು ಮಾಡಿಕೊಂಡಿದ್ದೀಯೆ? ನಿನಗೆ ಸರಿಯಾಗಿ ಗೊತ್ತಿದ್ದರೆ ಆ ಕಾರಣದ ಸಂಗಡ ಹೇಳು, ಎಂದನು. ಇದನ್ನು ಕೇಳಿ ಗೃಧ್ರವು ಇಂತೆಂದಿತು.

೯೫. ಎಲೈ ರಾಮನೇ ! ಈ ಭೂಮಿಯಲ್ಲಿ ಮೇಲುಮುಖವಾದ ಕೈಯುಳ್ಳವರೇ ಹುಟ್ಟಿ ಜೀವಿಸುತ್ತಿದ್ದರು. ಅವರೇ ಈ ಭೂಮಿಯಲ್ಲಿ ಎಲ್ಲಾ ಇದ್ದರು. ಆಗಿನಿಂದ ಇದು ನನ್ನ ಮನೆ. ಆಗ ಇದನ್ನು ಕೇಳಿದ ಗೂಬೆಯು ಎಲೈ ರಾಮನೇ ! ಭೂಮಿಯಲ್ಲಿ ಮರಗಳು ಹುಟ್ಟಿದಂದಿನಿಂದ ಇದು ನನ್ನ ಮನೆ ಎಂದಿತು.

೯೬. ಪುಲಸ್ತ್ಯನು ಹೇಳಿದನು- ರಾಮನು ಈ ಮಾತನ್ನು ಕೇಳಿ ಸಭೆಯುವರನ್ನು ಕುರಿತು ಇಂತೆಂದನು.

॥ ಶ್ರೀರಾಮ ಉವಾಚ ॥

ನ ಸಾ ಸಭಾ ಯತ್ರ ನ ಸಂತಿ ವೃದ್ಧಾ ।
ವೃದ್ಧಾ ನ ತೇ ಯೇ ನ ವದಂತಿ ಧರ್ಮಂ ॥
ನಾಸೌ ಹಿ ಧರ್ಮೋ ಯತ್ರ ನ ಸತ್ಯಮಸ್ತಿ ।
ನ ತತ್ಸತ್ಯಂ ಯಚ್ಛಲೇನೋಪಪನ್ನಮ್ ॥ ೯೭ ॥

ಯೇ ತು ಸಭ್ಯಾಃ ಸಭಾಂ ಗತ್ವಾ ತೂಷ್ಣೀಂ ಧ್ಯಾಯಂತ ಆಸತೇ ।
ಯಥಾಪ್ರಾಪ್ತಂ ನ ಬ್ರುವತೇ ಸರ್ವೇ ತೇಽನೃತವಾದಿನಃ ॥ ೯೮ ॥

ಜಾನನ್ನವಿಬ್ರುವನ್ ಪೃಷ್ಟಃ ಕಾಮಾತ್ಕ್ರೋಧಾತ್ತಥಾ ಭಯಾತ್ ।
ಸಹಸ್ರಂ ವಾರುಣಾನ್ ಪಾಶಾನಾತ್ಮನಿ ಪ್ರತಿಮುಂಚತಿ ॥ ೯೯ ॥

ತೇಷಾಂ ಸಂವತ್ಸರೇ ಪೂರ್ಣೇ ಪಾಶ ಏಕಃ ಪ್ರಮುಚ್ಯತೇ ।
ತಸ್ಮಾತ್ಸತ್ಯಂ ತು ವಕ್ತವ್ಯಂ ಜಾನತಾ ಸತ್ಯಮಂಜಸಾ ॥ ೧೦೦ ॥

---

೯೭ ಶ್ರೀರಾಮನು ಹೇಳಿದನು- ಧರ್ಮಾಧರ್ಮಗಳನ್ನು ಕೇಳಬೇಕಾದರೆ ಸಭೆಯನ್ನು ಕೇಳಬೇಕು. ಮುದುಕರಿಲ್ಲದಿದ್ದರೆ ಅದು ಸಭೆಯೆನ್ನಿಸಿಕೊಳ್ಳುವುದಿಲ್ಲ. ಸತ್ಯದಿಂದ ಕೂಡಿಲ್ಲದಿರುವುದು ಧರ್ಮವೆನಿಸಿಕೊಳ್ಳುವುದಿಲ್ಲ. ಆ ಸತ್ಯವು ವಂಚನೆಯಿಂದ ಕೂಡಿದ್ದರೆ ಅದು ಸತ್ಯವೇ ಅಲ್ಲ.

೯೮. ಯೋಗ್ಯರಾದವರು ಸಭಗೆ ಹೋಗಿ ನೋಡುತ್ತಾ, ಯೋಚಿಸುತ್ತಾ, ಕುಳಿತುಕೊಂಡು, ಬಂದ ವಿಷಯವನ್ನು ಸತ್ಯದ ರೀತಿಯಿಂದ ಹೇಳದಿದ್ದರೆ ಅವರೆಲ್ಲರೂ ಸುಳ್ಳುಗಾರರು.

೯೯. ವಿಷಯಗೊತ್ತಿದ್ದು ಅವನನ್ನು ಕೇಳಿದಾಗ ಹೇಳದಿದ್ದರೂ ಪಕ್ಷಪಾತದಿಂದಲೋ, ಕೋಪದಿಂದಲೋ, ಭಯದಿಂದಲೋ, ಹೇಳದಿದ್ದರೂ ಅವನ ಮೇಲೆ ವರುಣನ ಪಾಶ ಒಡನೆಯೇ ಬೀಳುತ್ತದೆ.

೧೦೦. ಒಂದು ವರ್ಷಕಾಲ ಕಳೆದ ಮೇಲೆ ಅವುಗಳಲ್ಲಿ ಒಂದು ಕಟ್ಟನ್ನು ಕಳೆದುಕೊಳ್ಳುತ್ತಾನೆ. ಆದ್ದರಿಂದ ಶೀಘ್ರವಾಗಿ ಸತ್ಯವನ್ನು ಹೇಳಬೇಕು.

ಏತಚ್ಛ್ರುತ್ವಾ ತು ಸಚಿವಾ ರಾಮಮೇವಾಬ್ರುವಂಸ್ತದಾ ।
ಉಲೂಕಃ ಶೋಭತೇ ರಾಜನ್ನ ತು ಗೃಧ್ರೋ ಮಹಾಮತೇ ॥ ೧೦೧ ॥

ತ್ವಂ ಪ್ರಮಾಣಂ ಮಹಾರಾಜ ರಾಜಾ ಹಿ ಪರಮಾ ಗತಿಃ ।
ರಾಜಮೂಲಾಃ ಪ್ರಜಾಃ ಸರ್ವಾ ರಾಜಾ ಧರ್ಮಃ ಸನಾತನಃ ॥ ೧೦೨ ॥

ಶಾಸ್ತಾ ರಾಜಾ ನೃಣಾಂ ಯೇಷಾಂ ನ ತೇ ಗಚ್ಛಂತಿ ದುರ್ಗತಿಂ ।
ವೈವಸ್ವತೇನ ಮುಕ್ತಾಶ್ಚ ಭವಂತಿ ಪುರುಷೋತ್ತಮಾಃ ॥ ೧೦೩ ॥

ಸಚಿವಾನಾಂ ವಚಃ ಶ್ರುತ್ವಾ ರಾಮೋ ವಚನಮಬ್ರವೀತ್ ।
ಶ್ರೂಯತಾಮಭಿದಾಸ್ಯಾಮಿ ಪುರಾಣಂ ಯದುದಾಹೃತಂ ॥ ೧೦೪ ॥

ದ್ಯೌಃ ಸಚಂದ್ರಾರ್ಕನಕ್ಷತ್ರಾ ಸಪರ್ವತಮಹೀದ್ರುಮಾಃ ।
ಸಲಿಲಾರ್ಣವಸಂಮಗ್ನಂ ತ್ರೈಲೋಕ್ಯಂ ಸಚರಾಚರಂ ॥ ೧೦೫ ॥

---

೧೦೧. ಇದನ್ನು ಕೇಳಿದ ಸಚಿವರು ರಾಮನನ್ನು ಕುರಿತು ಎಲೈ ರಾಜನೆ ! ಗೂಬೆಯು ಸರಿಯಾದ ರೀತಿಯಲ್ಲಿರುವಂತೆ ಕಾಣುತ್ತದೆ. ಹದ್ದಿನ ವಿಷಯವು ಸರಿಯಲ್ಲ.

೧೦೨. ಎಲೈ ರಾಜನೇ ! ನೀನೇ ವಿಷಯದಲ್ಲಿ ನಿರ್ಣಯಿಸುವವನು. ರಾಜನೆ ಕೊನೆಯ ಗತಿಯು. ಎಲ್ಲಾ ಪ್ರಜೆಗಳೂ ರಾಜನನ್ನೇ ಮೂಲಕಾರಣವಾಗಿ ಉಳ್ಳವರು. ರಾಜನೇ ಕೊನೆಯ ಧರ್ಮವೂ ಕೂಡ ಆಗಿರುತ್ತಾನೆ.

೧೦೩ ಆಳುವ ರಾಜನು ಯಾರಿಗಿದ್ದು ಆಳುತ್ತಿರುವನೋ ಅವರು ಕೆಟ್ಟಗತಿಯನ್ನು ಹೊಂದುವುದಿಲ್ಲ. ಅಂತಹವರನ್ನು ಯಮನು ಬಿಟ್ಟುಬಿಡುತ್ತಾನೆ.

೧೦೪. ಆಗ ರಾಮನು ಮಂತ್ರಿಗಳ ಮಾತನ್ನು ಕೇಳಿ ಇಂತೆಂದನು. ಎಲೈ ಮಂತ್ರಿಗಳಿರಾ, ಪುರಾಣದಲ್ಲಿ ಹೇಳಿರುವುದನ್ನು ಹೇಳುತ್ತೇನೆ. ಕೇಳಿರಿ.

೧೦೫ ಚಂದ್ರ, ಸೂರ್ಯ, ನಕ್ಷತ್ರಗಳೊಡನೆ ಆಕಾಶವೂ ಪರ್ವತ ಮರಗಳೊಡನೆ ಭೂಮಿಯೂ ನೀರಿನಲ್ಲಿ ಮುಳುಗಿತು. ಒಟ್ಟಿನಲ್ಲಿ ಚರಾಚರಗಳಿಂದ ಕೂಡಿದ ಮೂರು ಲೋಕವೇ ಮುಳುಗಿತು.

ಏಕಮೇವ ತದಾ ಹ್ಯಾಸೀತ್ಸರ್ವಮೇಕಮಿವಾಂಬರಂ ।
ಪುನರ್ಭೂಃ ಸಹ ಲಕ್ಷ್ಮ್ಯಾ ಚ ವಿಷ್ಣೋರ್ಜಠರಮಾವಿಶತ್ ॥ ೧೦೬ ॥

ತಾನಿ ಗೃಹ್ಯ ಮಹಾತೇಜಾಃ ಪ್ರವಿಶ್ಯ ಸಲಿಲಾರ್ಣವೇ ।
ಸುಪ್ತ್ವಾ ವಾರಿಕೃತಾತ್ಮಾ ಚ ಬಹುವರ್ಷಶತಾನಿ ಚ ॥ ೧೦೭ ॥

ವಿಷ್ಣೌ ಸುಪ್ತೇ ತತೋ ಬ್ರಹ್ಮಾ ವಿವೇಶ ಜಠರಂ ತತಃ ।
ಬಹುಸ್ರೋತಂ ಚ ತಂ ಜ್ಞಾತ್ವಾ ಮಹಾಯೋಗೀ ಸಮಾವಿಶತ್॥ ೧೦೮ ॥

ನಾಭ್ಯಾಂ ವಿಷ್ಣೋಃ ಸಮುತ್ಪನ್ನಂ ಪದ್ಮಂ ಹೇಮವಿಭೂಷಿತಂ ।
ಸ ತು ನಿರ್ಗಮ್ಯ ವೈ ಬ್ರಹ್ಮಾ ಯೋಗೀ ಭೂತ್ವಾ ಮಹಾಪ್ರಭುಃ ॥ ೧೦೯ ॥

ಸಿಸೃಕ್ಷುಃ ಪೃಥಿವೀಂ ವಾಯುಂ ಪರ್ವತಾಂಶ್ಚ ಮಹೀರುಹಾನ್ ।
ತದಂತರಾ ಪ್ರಜಾಃ ಸರ್ವಾ ಮನುಷ್ಯಾಂಶ್ಚ ಸರೀಸೃಪಾನ್ ॥ ೧೧೦ ॥

---

೧೦೬. ಆಗ ಅಂತರಿಕ್ಷವೊಂದೇ ಎಲ್ಲೆಲ್ಲಿಯೂ ಕಾಣುತ್ತ ನೀರೊಂದೇ ಇದ್ದಿತು ಭೂಮಿಯೂ ಲಕ್ಷ್ಮಿಯೂ ವಿಷ್ಣುವಿನ ಹೊಟ್ಟೆಯನ್ನು ಹೊಕ್ಕರು. ಅವನೊಬ್ಬನು ನಿಂತನು.

೧೦೭. ಅವರನ್ನು ಹೊಟ್ಟೆಯಲ್ಲಿಟ್ಟುಕೊಂಡು ಸಮುದ್ರದ ನೀರಿನಲ್ಲಿ ನೀರಿನಿಂದ ಆವರಿಸಲ್ಪಟ್ಟವನಾಗಿ ಆ ವಿಷ್ಣುವು ಅನೇಕ ವರ್ಷಗಳವರೆಗೆ ಮಲಗಿದ್ದನು.

೧೦೮. ವಿಷ್ಣುವು ಸಮುದ್ರದಲ್ಲಿ ಮಲಗಲು ಈ ಸಮುದ್ರವು ಬಹು ನೀರುಳ್ಳದ್ದನ್ನಾಗಿ ತಿಳಿದ ಆ ಬ್ರಹ್ಮನು ಯೋಗದಿಂದ ಆ ವಿಷ್ಣುವಿನ ಹೊಟ್ಟೆಯನ್ನು ಹೊಕ್ಕನು.

೧೦೯. ಆಗ ವಿಷ್ಣುವಿನ ಹೊಕ್ಕಳಿನಿಂದ ಒಂದು ಚಿನ್ನದ ಕಮಲವು ಹುಟ್ಟಿತು ಆಗ ಆ ಯೋಗಿಯಾದ ಬ್ರಹ್ಮನು ಆ ಕಮಲದಿಂದ ಹೊರಗೆ ಬಂದನು.

೧೧೦-೧೧೨. ಆಗ ಬ್ರಹ್ಮನು ಸೃಷ್ಟಿಮಾಡುವ ಇಚ್ಛೆಯಿಂದ ಭೂಮಿ. ವಾಯು ಪರ್ವತ, ಮರಗಳನ್ನೂ ಅದರೊಳಗೆ ಮನುಷ್ಯರು, ಹಾವುಗಳು, ಜರಾ ಎಂಬ ನಾಳ

ಜರಾಯುಜಾಂಡಜಾರ್ ಸರ್ವಾರ್ ಸಸರ್ಜ ಸ ಮಹಾತಪಾಃ ।
ತಸ್ಯ ಗಾತ್ರಸಮುತ್ಪನ್ನಃ ಕೈಟಭೋ ಮಧುನಾ ಸಹ ॥ ೧೧೧ ॥

ದಾನವೌ ತೌ ಮಹಾವೀರೌ ಘೋರೌ ಲಬ್ಧವರೌ ತದಾ ।
ದೃಷ್ಟ್ವಾ ಪ್ರಜಾಪತಿಂ ತತ್ರ ಕ್ರೋಧಾವಿಷ್ಟೌ ಬಭೂವತುಃ ॥ ೧೧೨ ॥

ವೇಗೇನ ಮಹತಾ ಭೋಕ್ತುಂ ಸ್ವಯಂಭುವಮಧಾವತಾಂ ।
ದೃಷ್ಟ್ವಾ ಸತ್ವಾನಿ ಸರ್ವಾಣಿ ನಿಸ್ಸರಂತಿ ಪೃಥಕ್‌ಪೃಥಕ್ ॥ ೧೧೩ ॥

ಬ್ರಹ್ಮಣಾ ಯೋದ್ಧುಕಾಮೌ ತೌ ವಿಷ್ಣುನಾ ತು ತದಾ ಹತೌ ।
ಬ್ರಹ್ಮಣಾ ಸಂಸ್ತುತೋ ವಿಷ್ಣುರ್ಹತ್ವಾ ತೌ ಮಧುಕೈಟಭೌ ॥ ೧೧೪ ॥

ಪೃಥಿವೀಂ ವರ್ಧಯಾಮಾಸ ಸ್ಥಿತ್ಯರ್ಥಂ ಮೇದಸಾ ತಯೋಃ ।
ಮೇದೋಗಂಧಾ ತು ಧರಣೀ ಮೇದಿನೀತ್ಯಭಿಧೀಯತೇ ॥ ೧೧೫ ॥

ತಸ್ಮಾನ್ನ ಗೃಧ್ರಸ್ಯ ಗೃಹಮುಲೂಕಸ್ಯ ತದಾಭವತ್ ।
ತಸ್ಮಾದ್ಗೃಧ್ರಸ್ತ್ವಸತ್ಯೋ ವೈ ಪಾಪಕರ್ಮಾ ಪರಾಲಯಂ ॥ ೧೧೬ ॥

---

ದಿಂತ ಬಂಧಿತರಾಗಿ ಹುಟ್ಟುವ ಮತ್ತು ಮೊಟ್ಟೆಯಿಂದ ಹುಟ್ಟುವ ಪ್ರಾಣಿಗಳನ್ನು ಸೃಷ್ಟಿಸಿದನು. ಆ ಬ್ರಹ್ಮನ ಶರೀರದಿಂದ ಕೈಟಭಮಧುವೆಂಬ ಇಬ್ಬರು ರಾಕ್ಷಸರು ಹುಟ್ಟಿದರು. ಅವರು ಮಹಾವೀರರು, ಕ್ರೂರಿಗಳು, ವರದಿಂದ ಮತ್ತರೂ ಆಗಿದ್ದರು. ಆಗ ಇವರಿಬ್ಬರೂ ಬ್ರಹ್ಮನನ್ನು ನೋಡಿ ಕೋಪಗೊಂಡರು.

೧೧೩. ಆಗ ಬಹು ವೇಗದಿಂದ ತಿನ್ನಬೇಕೆಂದು ಬ್ರಹ್ಮನ ಬಳಿಗೆ ಓಡಿ ಬರುತ್ತಿದ್ದರು. ಇದನ್ನು ನೋಡಿದ ಪ್ರಾಣಿಗಳೆಲ್ಲವೂ ಸಿಕ್ಕಿದ ಕಡೆಗೆ ಓಡುತ್ತಿದ್ದವು.

೧೧೪–೧೧೫. ಅವರು ಬ್ರಹ್ಮನೊಡನೆ ಯುದ್ಧಕ್ಕೆ ಬರಲು ಅವರನ್ನು ವಿಷ್ಣುವು ಕೊಂದನು. ಆಗ ಬ್ರಹ್ಮನು ವಿಷ್ಣುವನ್ನು ಕುರಿತು ಸ್ತೋತ್ರಮಾಡಲು ಅವನು ತಾನು ಕೊಂದ ಮಧುಕೈಟಭರ ತಲೆಯ ಮೆದುಳಿನಿಂದ ಈ ಭೂಮಿಯನ್ನು ಪ್ರಾಣಿಗಳೆಲ್ಲವೂ ಸರಿಯಾಗಿರುವುದಕ್ಕೆ ಹೆಚ್ಚಿಸಿದನು. ಮೇದಸ್ಸಿನ ವಾಸನೆಯುಳ್ಳ ಆ ಭೂಮಿಯು ಆಗಿನಿಂದ ಮೇದಿನೀ ಎನಿಸಿಕೊಂಡಿತು.

೧೧೬-೧೧೮ ಆದ್ದರಿಂದ ಇದು ಗೃಧ್ರನ ಮನೆಯಲ್ಲ. ಉಲೂಕನ ಮನೆಯೇ ಆಗಿದೆ. ಆದ್ದರಿಂದ ಗೃಧ್ರನು ಅಸತ್ಯವಾದಿ ಪಾಪಿ, ಇತರರ ಮನೆಯನ್ನು ಆಕ್ರಮಿಸಿ

ಸ್ತೇಯಂ ಕರೋತಿ ಪಾಪಾತ್ಮಾ ದಂಡನೀಯೋ ನ ಸಂಶಯಃ ।
ಅಥಾಶರೀರಿಣೀ ವಾಣೀ ಅಂತರಿಕ್ಷಾತ್ಪ್ರಭಾಷತೇ ॥ ೧೧೭ ॥

ಮಾ ವಧೀ ರಾಮ ಗೃಧ್ರಂ ತ್ವಂ ಪೂರ್ವಂ ದಗ್ಧಂ ತಪೋಬಲಾತ್ ।
ಕಾಲೇ ಗೌತಮದಗ್ಧೋಽಯಂ ಪ್ರಜಾನಾಥೋ ಜನೇಶ್ವರ ॥ ೧೧೮ ॥

ಬ್ರಹ್ಮದತ್ತಸ್ತು ನಾಮ್ನೈಷ ಶೂರಃ ಸತ್ಯವ್ರತಃ ಶುಚಿಃ ।
ಗೃಹಮಾಗತ್ಯ ವಿಪ್ರೋಽಸ್ಯ ಭೋಜನಂ ಪ್ರತ್ಯಯಾಚತ ॥ ೧೧೯ ॥

ಸಾಗ್ರಂ ವರ್ಷಶತಂ ಚೈಷ ಭುಕ್ತವಾನೃಷಿಸತ್ತಮಃ ।
ಬ್ರಹ್ಮದತ್ತಸ್ತು ವೈ ತಸ್ಯ ಪಾದ್ಯಮರ್ಘ್ಯಂ ಸ್ವಯಂ ತತಃ ॥ ೧೨೦ ॥

ಆತ್ಮನೈವಾಕರೋತ್ತಸ್ಯ ಭೋಜನಾರ್ಥಂ ಮಹಾದ್ಯುತೇ ।
ಸಮಾವಿಶ್ಯ ಗೃಹಂ ತಸ್ಯ ಆಹಾರೇ ತು ಮಹಾತ್ಮನಃ ॥ ೧೨೧ ॥

ಪೂರ್ಣಂ ಪಯೋಧರಂ ನಾರೀ ಹಸ್ತೇನಾಥ ಪರಾಮೃಶತ್ ।
ಅಥ ಕ್ರುದ್ಧೇನ ಮುನಿನಾ ಶಾಪೋ ದತ್ತೋಽಸ್ಯ ದಾರುಣಃ ॥ ೧೨೨ ॥

---

ಕೊಂಡಿರುವವನು ಆ ಪಾಪಿಯು ತನ್ನದನ್ನಾಗಿ ಮಾಡಿಕೊಳ್ಳಲು ಯತ್ನಿಸುತ್ತಿದ್ದಾನೆ. ಅವನಿಗೆ ಶಿಕ್ಷೆಯಾಗಬೇಕು ಸಂಶಯವಿಲ್ಲ ಎಂದನು ಆಗ ಬಂದ ಅಶರೀರ ವಾಕ್ಕು ಅಂತರಿಕ್ಷದಿಂದ ಇಂತು ಹೊರಟಿತು. ಎಲೈ ರಾಮನೇ! ಈ ಹದ್ದನ್ನು ನೀನು ಕೊಲ್ಲಬೇಡ. ಇದು ಹಿಂದೆಯೇ ತಪೋಬಲದಿಂದ ಸುಡಲ್ಪಟ್ಟಿದೆ. ಎಲೈ ರಾಮನೆ! ಹಿಂದೊಂದು ಸಾರಿ ಗೌತಮನ ತಪೋಬಲದಿಂದ ದಗ್ಧವಾಗಿದೆ.

೧೧೯. ಇವನ ಹೆಸರು ಬ್ರಹ್ಮದತ್ತನೆಂದು. ಶೂರನೂ, ಸತ್ಯವಾದಿಯೂ, ಆಗಿದ್ದನು. ಒಂದು ಸಾರಿ ಒಬ್ಬ ಬ್ರಾಹ್ಮಣನು ಬಂದು ಇವನನ್ನು ಭೋಜನವನ್ನು ಯಾಚಿಸಿದನು.

೧೨೦-೧೨೨. ಆ ಋಷಿಯು ಊಟಮಾಡಿ ಸಾವಿರ ವರ್ಷಗಳಾಗಿದ್ದುವು. ಅಂತಹ ಋಷಿಗೆ ಬ್ರಹ್ಮದತ್ತನು ತಾನೇ ಅರ್ಘ್ಯಪಾದ್ಯಗಳನ್ನು ಕೊಟ್ಟು ತಾನೇ ಊಟಕ್ಕೆ ಬೇಕಾದ ಅಡಿಗೆಗಳೆಲ್ಲವನ್ನೂ ಮಾಡಿದನು. ಆ ಋಷಿಯು ಊಟಕ್ಕೆ ಬಡಿಸುತ್ತಿದ್ದಾಗ ಹೆಂಡತಿಯ ದಪ್ಪನಾದ ಸ್ತನಗಳನ್ನು ಕೈಯಿಂದ ಮುಟ್ಟಿದನು. ಆಗ ಅದನ್ನು ನೋಡಿದ ಮುನಿಯು ಎಲೈ ರಾಜನೇ! ನೀನು ಹದ್ದಾಗೆಂದು ಶಾಪವನ್ನು ಕೊಟ್ಟನು.

ಗೃಧ್ರತ್ವಂ ಗಚ್ಛ ವೈ ರಾಜನ್ನಸೌ ಶಪ್ತೋ ಹ್ಯಥಾಬ್ರವೀತ್ ।
ಕೃಪಾಂ ಕುರು ಮಹಾಭಾಗ ಶಾಪೋದ್ಧಾರೋ ಭವಿಷ್ಯತಿ ॥ ೧೨೩ ॥

ದಯಾಲುಸ್ತದ್ವಚಃ ಶ್ರುತ್ವಾ ಪುನರಾಹ ನರಾಧಿಪಂ ।
ಉತ್ಪತ್ಸ್ಯತೇ ರಘುಕುಲೇ ರಾಮೋ ನಾಮ ಮಹಾಯಶಾಃ ॥ ೧೨೪ ॥

ಇಕ್ಷ್ವಾಕೂಣಾಂ ಮಹಾಭಾಗೋ ರಾಮೋ ರಾಜೀವಲೋಚನಃ ।
ತೇನ ದೃಷ್ಟೋಽಪಶಾಪಸ್ತ್ವಂ ಭವಿತಾ ನರಪುಂಗವ ॥ ೧೨೫ ॥

ದೃಷ್ಟೋ ರಾಮೇಣ ತಚ್ಛ್ರುತ್ವಾ ನರೇಂದ್ರಃ ಪೃಥಿವೀಪತಿಃ ।
ಗೃಧ್ರತ್ವಂ ತ್ಯಜ್ಯ ತಚ್ಛೀಘ್ರಂ ಗಂಧಮಾಲ್ಯಾನುಲೇಪನಃ ॥ ೧೨೬ ॥

ಪುರುಷೋ ದಿವ್ಯರೂಪೋಽಸೌ ಬಭಾಷೇ ತಂ ನರಾಧಿಪಂ ।
ಸಾಧು ರಾಘವ ಧರ್ಮಜ್ಞ ತ್ವತ್ಪ್ರಸಾದಾದಹಂ ವಿಭೋ ॥ ೧೨೭ ॥

ವಿಮುಕ್ತೋ ನರಕಾದ್ಘೋರಾದಪಾಪಸ್ತು ತ್ವಯಾ ಕೃತಃ ।
ವಿಸೃಜ್ಯ ಚ ತಥಾ ಗೃಧ್ರಂ ನರರೂಪೀ ಮಹೀಪತಿಃ ॥ ೧೨೮ ॥

---

ಅನಂತರ ಸ್ವಾಮಿ ! ನನ್ನಲ್ಲಿ ಕೃಪೆಮಾಡು. ಎಂದು ಕೇಳಿ ನನ್ನ ಶಾಪವು ಯಾವಾಗ ಕೊನೆಗಾಣುತ್ತದೆಂದು ಕೇಳಿದನು.

೧೨೪-೧೨೫. ಆ ದಯಾಳುವು ಅವನ ಮಾತನ್ನು ಕೇಳಿ ಮತ್ತೆ ಇಂತೆಂದನು. ರಘುವಿನ ವಂಶದಲ್ಲಿ ಮಹಾ ಯಶಸ್ಸುಳ್ಳ ರಾಮನೆಂಬುವನು ಹುಟ್ಟುತ್ತಾನೆ. ಅವನು ಇಕ್ಷ್ವಾಕು ಕುಲಕ್ಕೆ ಭೂಷಣನು. ಮಹಾ ಪುಣ್ಯಶಾಲಿಯು. ಅವನು ನಿನ್ನನ್ನು ನೋಡಿದಾಗ ನಿನ್ನ ಶಾಪವು ನಾಶಹೊಂದುತ್ತದೆ.

೧೨೬-೧೨೯. ಅದನ್ನು ಕೇಳಿದ ರಾಮನು ಆ ಗೃಧ್ರವನ್ನು ನೋಡಲು ಆ ಬ್ರಹ್ಮದತ್ತನು ತನ್ನ ಶಾಪದಿಂದ ಮುಕ್ತಿಯನ್ನು ಹೊಂದಿ ಗಂಧಮಾಲೆಗಳಿಂದಲಂಕೃತನಾಗಿ ದಿವ್ಯ ಪುರುಷನಾಗಿ ರಾಮನನ್ನು ಕುರಿತು ಇಂತೆಂದನು. ಎಲೈ ಧರ್ಮಜ್ಞನಾದ ರಾಮನೆ ಸಾಧು, ಎಲೈ ಪ್ರಭುವೆ! ನಿನ್ನ ಅನುಗ್ರದಿಂದ ನಾನು ಘೋರವಾದ ನರಕದಿಂದ ಪಾರಾದೆನು. ಪಾಪರಹಿತನನ್ನಾಗಿ ಮಾಡಿದೆ. ಎಂದನು. ಆಗ ಆ ಬ್ರಹ್ಮದತ್ತನು ಹೊರಡಲು ಇತ್ತ ಶ್ರೀರಾಮನು ಧರ್ಮವನ್ನು ಬಲ್ಲ ಉಲೂಕನನ್ನು ಕುರಿತು

ಉಲೂಕಂ ಪ್ರಾಪ ಧರ್ಮಜ್ಞಂ ಸ್ವಗೃಹಂ ವಿಶ ಕೌಶಿಕ ।
ಅಹಂ ಸಂಧ್ಯಾಮುಪಾಸಿತ್ವಾ ಗಮಿಷ್ಯೇ ಯತ್ರ ವೈ ಮುನಿಃ ॥ ೧೨೯ ॥

ಅಥೋದಕಮುಪಸ್ಪೃಶ್ಯ ಸಂಧ್ಯಾಂ ಕೃತ್ವಾ ತು ಪಶ್ಚಿಮಾಂ ।
ಆಶ್ರಮಂ ಪ್ರವಿಶದ್ರಾಮಃ ಕುಂಭಯೋನೇರ್ಮಹಾತ್ಮನಃ ॥ ೧೩೦ ॥

ತಸ್ಯಾಗಸ್ತ್ಯೋ ಬಹುಗುಣಂ ಫಲಮೂಲಂ ಚ ಸಾದರಂ ।
ರಸವಂತಿ ಚ ಶಾಕಾನಿ ಭೋಜನಾರ್ಥಮುಪಾಹರತ್ ॥ ೧೩೧ ॥

ಸ ಭುಕ್ತ್ವಾನ್ನರವ್ಯಾಘ್ರಸ್ತದನ್ನಮಮೃತೋಪಮಂ ।
ಪ್ರೀತಶ್ಚ ಪರಿತುಷ್ಟಶ್ಚ ತಾಂ ರಾತ್ರಿಂ ಸಮುಪಾವಿಶತ್ ॥ ೧೩೨ ॥

ಪ್ರಭಾತೇ ಕಲ್ಯಮುತ್ಥಾಯ ಕೃತ್ವಾಹ್ನಿಕಮರಿಂದಮಃ ।
ಋಷಿಂ ಸಮಭಿಚಕ್ರಾಮ ಗಮನಾಯ ರಘೂತ್ತಮಃ ॥ ೧೩೩ ॥

ಅಭಿವಾದ್ಯಾಬ್ರವೀದ್ರಾಮೋ ಮಹರ್ಷಿಂ ಕುಂಭಸಂಭವಂ ।
ಆಪೃಚ್ಛೇ ಚ ಸ ಮಾಂ ಬ್ರಹನ್ನನುಜ್ಞಾತುಂ ತ್ವಮರ್ಹಸಿ ॥ ೧೩೪ ॥

---

ಎಲೈ ಕೌಶಿಕನೇ ! ನೀನು ನಿನ್ನ ಮನೆಗೆ ಹೋಗು. ನಾನು ಸಂಧ್ಯಾವಂದನೆಯನ್ನು ಮಾಡಿಕೊಂಡು ಋಷಿಯ ಬಳಿಗೆ ಹೋಗುತ್ತೇನೆ. ಎಂದನು.

೧೩೦. ಇತ್ತ ರಾಮನು ಸ್ನಾನಮಾಡಿ ಸಂಧ್ಯಾವಂದನೆಯನ್ನು ಮಾಡಿಕೊಂಡು ಅಗಸ್ತ್ಯನ ಆಶ್ರಮಕ್ಕೆ ಹೋದನು.

೧೩೧. ಆ ರಾಮನಿಗೆ ಅಗಸ್ತ್ಯನು ಊಟಕ್ಕೋಸ್ಕರ ನಾನಾ ಬಗೆಯಾದ ರುಚಿಯಾದ ಗೆಡ್ಡೆ ಗೆಣಸುಗಳನ್ನೂ ಕಾಯಿ ಪಲ್ಯಗಳನ್ನೂ ಊಟಕ್ಕೆ ಬಡಿಸಿದನು.

೧೩೨. ಅಮೃತದಂತಿರುವ ಆ ಅನ್ನವನ್ನು ಆ ರಾಮನು ಊಟಮಾಡಿದನು. ಪ್ರೀತಿಹೊಂದಿದನು. ತೃಪ್ತನೂ ಆದನು. ಮತ್ತು ಆ ರಾತ್ರಿಯೆಲ್ಲಾ ಅಲ್ಲಿಯೇ ಇದ್ದನು.

೧೩೩. ಬೆಳಗ್ಗೆ ಹೊತ್ತಿಗೆ ಮುಂಚೆ ಎದ್ದು ರಾಮನು ಆಹ್ನಿಕಗಳೆಲ್ಲವನ್ನೂ ಮಾಡಿಕೊಂಡು ಹೊರಡಲು ಸಿದ್ಧವಾಗಿ ಋಷಿಯ ಬಳಿಗೆ ಹೋದನು.

೧೩೪–೧೩೫. ಆ ಋಷಿಗೆ ರಾಮನು ನಮಸ್ಕರಿಸಿ ಎಲೈ ಋಷಿಯೆ ! ಊರಿಗೆ ಹೋಗುತ್ತೇನೆ. ಅನುಜ್ಞೆಯನ್ನು ದಯಪಾಲಿಸು. ನಿನ್ನ ದರ್ಶನದಿಂದ ಧನ್ಯನಾದೆ.

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ದರ್ಶನೇನ ಮಹಾಮುನೇ ।
ದ್ರಷ್ಟುಂ ಚೈವಾಗಮಿಷ್ಯಾಮಿ ಪಾವನಾರ್ಥಮಹಾತ್ಮನಃ ॥ ೧೩೫ ॥

ಏವಂ ಬ್ರುವತಿ ಕಾಕುತ್ಸ್ಥೇ ವಾಕ್ಯಮದ್ಭುತದರ್ಶನಂ ।
ಉವಾಚ ಪರಮಪ್ರೀತೋ ರಾಘವಂ ಸ ತಪೋಧನಃ ॥ ೧೩೬ ॥

ಅತ್ಯದ್ಭುತಮಿದಂ ವಾಕ್ಯಂ ತವ ರಾಮ ಶುಭಾಕ್ಷರಂ ।
ಪಾವನಂ ಸರ್ವಭೂತಾನಾಂ ತ್ವಯೋಕ್ತಂ ರಘುನಂದನ ॥ ೧೩೭ ॥

ಮುಹೂರ್ತಮಪಿ ರಾಮ ತ್ವಾಂ ಮೈತ್ರೇಣೇಕ್ಷಂತಿ ಯೇ ನರಾಃ ।
ಪಾವಿತಾಃ ಸರ್ವಭೂತೇಷು ಕಥ್ಯಂತೇ ತ್ರಿದಿವೌಕಸಃ ॥ ೧೩೮ ॥

ಯೇ ಚ ತ್ವಾಂ ಘೋರಚಕ್ಷುರ್ಭಿರೀಕ್ಷಂತೇ ಪ್ರಾಣಿನೋ ಭುವಿ ।
ತೇ ಹತಾ ಬ್ರಹ್ಮದಂಡೇನ ಸದ್ಯೋ ನರಕಗಾಮಿನಃ ॥ ೧೩೯ ॥

---

ಅನುಗ್ರಹವನ್ನು ಹೊಂದಿದೆ. ನನ್ನ ಆತ್ಮವನ್ನು ಪವಿತ್ರಮಾಡಿಕೊಳ್ಳಲು ತಮ್ಮ ದರ್ಶನಕ್ಕೆ ಮತ್ತೆ ಇಲ್ಲಿಗೆ ಬರುತ್ತೇನೆ.

೧೩೬. ರಾಮನು ಅದ್ಭುತಕಾರ್ಯವನ್ನು ಮಾಡಿದ ಆ ಅಗಸ್ತ್ಯನನ್ನು ಕುರಿತು ಇಂತೆನ್ನುತ್ತಿರಲು ಆ ಋಷಿಯು ಪ್ರೀತನಾಗಿ ಇಂತೆಂದನು.

೧೩೭–೧೩೮. ಎಲೈ ರಾಮನೆ! ನೀನು ಹೇಳಿದ ಈ ಶುಭವಾದ ಅಕ್ಷರಗಳುಳ್ಳ ವಾಕ್ಯವು ಅದ್ಭುತವಾದುದು. ಸರ್ವಭೂತಗಳಿಗೂ ಈ ವಾಕ್ಯವೇ ಪಾವನವಾದುದಲ್ಲವೇ? ಎಲೈ ರಾಮನೆ! ಯಾರು ಒಂದು ಕ್ಷಣವಾದರೂ ನಿನ್ನನ್ನು ಪ್ರೀತಿಯಿಂದ ನೋಡುತ್ತಾರೆಯೋ ಅವರು ಸರ್ವ ಪ್ರಾಣಿಗಳಲ್ಲಿಯೂ ಪವಿತ್ರರಾದವರೆಂದು ದೇವತೆಗಳು ಹೇಳುತ್ತಾರೆ.

೧೩೯. ಯಾರು ನಿನ್ನನ್ನು ಕ್ರೂರವಾದ ಕಣ್ಣುಗಳಿಂದ ನೋಡುತ್ತಾರೆಯೋ ಆ ಪ್ರಾಣಿಗಳು ಭೂಮಿಯಲ್ಲಿ ಬ್ರಹ್ಮದಂಡದಿಂದ ಹೊಡೆಯಲ್ಪಟ್ಟವರಾಗಿ ಒಡನೆಯೇ ನರಕವನ್ನು ಹೊಂದುತ್ತಾರೆ.

ಈದೃಶಸ್ತ್ವಂ ರಘುಶ್ರೇಷ್ಠ ಪಾವನಂ ಸರ್ವದೇಹಿನಾಂ ।
ಕಥಯಂತಶ್ಚ ಲೋಕಾಸ್ತ್ವಾಂ ಸಿದ್ಧಿಮೇಷ್ಯಂತಿ ರಾಘವ ॥ ೧೪೦ ॥

ಗಚ್ಛ ತ್ವಮಿಮಮವ್ಯಗ್ರಃ ಪಂಥಾನಮಕುತೋಭಯಃ ।
ಪ್ರಶಾಧಿ ರಾಜ್ಯಂ ಧರ್ಮೇಣ ಗತಿರ್ಹಿ ಜಗತೋ ಭವಾನ್ ॥ ೧೪೧ ॥

ಏವಮುಕ್ತಸ್ತು ನೃಪತಿಃ ಪ್ರಾಂಜಲಿಃ ಪ್ರಶ್ರಿತೋ ನೃಪ ।
ಅಭಿವಾದಯಿತುಂ ಚಕ್ರೇ ಸೋಽಗಸ್ತ್ಯಮೃಷಿಸತ್ತಮಂ ॥ ೧೪೨ ॥

ಅಭಿವಾದ್ಯಮುನಿಶ್ರೇಷ್ಠಾಂಸ್ತಾಂಶ್ಚ ಸರ್ವಾಂಸ್ತಪೋಧನಾನ್ ।
ಅಧ್ಯಾರೋಹತ್ತದಾವ್ಯಗ್ರೋ ಪುಷ್ಪಕಂ ಹೇಮಭೂಷಿತಂ ॥ ೧೪೩ ॥

ತಂ ಪ್ರಯಾಂತಂ ಮುನಿಗಣಾ ಆಶೀರ್ವಾದೈಃ ಸಮಂತತಃ ।
ಅಪೂಜಯನ್ಮಹೇಂದ್ರಾಭಂ ಸಹಸ್ರಾಕ್ಷಮಿವಾಮರಾಃ ॥ ೧೪೪ ॥

---

೧೪೦. ಎಲೈ ರಾಮನೆ! ನೀನು ಈ ರೀತಿಯಾದವನು. ಎಲ್ಲಾ ಪ್ರಾಣಿಗಳನ್ನೂ ಪವಿತ್ರವನ್ನಾಗಿ ಮಾಡತಕ್ಕವನು. ನಿನ್ನ ಹೆಸರನ್ನು ಹೇಳುತ್ತಿದ್ದರೆ ಲೋಕವು ಸಿದ್ಧಿಯನ್ನು ಹೊಂದುತ್ತದೆ.

೧೪೧ ಈ ದಾರಿಯಲ್ಲಿ ಯೋಚನೆಯಿಲ್ಲದೆ ಹೋಗು. ಇಲ್ಲಿ ಭಯವೆಂಬುದೇ ಇಲ್ಲ ಧರ್ಮದಿಂದ ರಾಜ್ಯವಾಳು. ನೀನು ಜಗತ್ತಿಗೆ ಗತಿಯನ್ನು ಕೊಡುವವನಾಗಿದ್ದೀಯೆ.

೧೪೨. ರಾಮನಿಗೆ ಋಷಿಯು ಹೀಗೆನ್ನಲು, ರಾಮನು ಕೈಮುಗಿದುಕೊಂಡು ಅವನನ್ನು ನಮಸ್ಕರಿಸಲು ಹೋದನು.

೧೪೩. ಆಗ ರಾಮನು ಅಲ್ಲಿರುವ ಋಷಿಗಳಿಗೆಲ್ಲಾ ನಮಸ್ಕರಿಸಿ ಚಿನ್ನದಿಂದ ಭೂಷಿತವಾದ ಪುಷ್ಪಕವನ್ನು ಹತ್ತಿದನು.

೧೪೪. ಪ್ರಯಾಣ ಮಾಡುತ್ತಿರುವ ರಾಮನಿಗೆ ಆ ಋಷಿಗಳೆಲ್ಲರೂ ದೇವತೆಗಳು ಇಂದ್ರನನ್ನು ಗೌರವಿಸುವಂತೆ ಆಶೀರ್ವಾದಗಳಿಂದ ಗೌರವಿಸಿದರು.

ತತೋಽರ್ಧದಿವಸೇ ಪ್ರಾಪ್ತೇ ರಾಮಃ ಸರ್ವಾರ್ಥಕೋವಿದಃ ।
ಅಯೋಧ್ಯಾಂ ಪ್ರಾಪ್ಯ ಕಾಕುತ್ಸ್ಥ ಸಪ್ತಕಕ್ಷಮುಪಾತರತ್ ॥ ೧೪೫ ॥

ತತೋ ವಿಸೃಜ್ಯ ರುಚಿರಂ ಪುಷ್ಪಕಂ ಕಾಮವಾಹಿನಂ ।
ಕಕ್ಷಾಂತರಾದ್ವಿನಿರ್ಗಮ್ಯ ದ್ವಾಸ್ಥಾನ್ ರಾಜಾಽಬ್ರವೀದಿದಂ ॥ ೧೪೬ ॥

ಲಕ್ಷ್ಮಣಂ ಭರತಂ ಚೈವ ಗಚ್ಛಧ್ವಂ ಲಘುವಿಕ್ರಮಾಃ ।
ಮಮಾಗಮನಮಾಖ್ಯಾತುಂ ಸಮಾನಯತ ಮಾ ಚಿರಂ ॥ ೧೪೭ ॥

ಶ್ರುತ್ವಾ ತು ಭಾಷಿತಂ ದ್ವಾಸ್ಥಾ ರಾಮಸ್ಯಾಕ್ಲಿಷ್ಟಕರ್ಮಣಃ ।
ಗತ್ವಾ ಕುಮಾರಾವಾಹೂಯ ರಾಘವಾಯ ನ್ಯವೇದಯನ್ ॥ ೧೪೮ ॥

ದ್ವಾಸ್ಥೈಃ ಕುಮಾರಾವಾನೀತೌ ರಾಘವಸ್ಯ ನಿದೇಶತಃ ।
ದೃಷ್ಟ್ವಾ ತು ರಾಘವಃ ಪ್ರೀತಃ ಪ್ರಿಯೌ ಭರತಲಕ್ಷ್ಮಣೌ ॥ ೧೪೯ ॥

ಪರ್ಯಷ್ವಜತ ರಾಮಸ್ತೌ ವಾಕ್ಯಂಚೇದಮುವಾಚ ಹ ।
ಕೃತಂ ಮಯಾ ಯಥಾ ತಥ್ಯಂ ದ್ವಿಜಕಾರ್ಯಮನುತ್ತಮಂ ॥ ೧೫೦ ॥

---

೧೪೫. ಅಂದಿನ ಮಧ್ಯಾಹ್ನದ ಹೊತ್ತಿಗೆ ತಿಳಿವಳಿಕೆಯುಳ್ಳ ರಾಮನು ಅಯೋಧ್ಯೆಗೆ ಬಂದು ತನ್ನ ತೊಟ್ಟಿಯ ಮಹಡಿಯ ಮನೆಯಲ್ಲಿ ಇಳಿದನು.

೧೪೬. ಆ ಮನೋಹರವಾದ ಇಷ್ಟಬಂದಂತೆ ಕರೆದುಕೊಂಡು ಹೋಗಬಲ್ಲ ಪುಷ್ಪಕವನ್ನು ಬಿಟ್ಟು ಕೆಳಗಿಳಿದು ತೊಟ್ಟಿಗಳನ್ನು ದಾಟಿ ಹೊರಟು ಆ ಬಾಗಿಲಿನಲ್ಲಿದ್ದ ಕಾವಲುಗಾರರಿಗೆ ಇಂತೆಂದನು.

೧೪೭. ಎಲೈ ಆಳುಗಳಿರಾ ! ಜಾಗ್ರತೆಯಾಗಿ ಲಕ್ಷ್ಮಣ ಭರತರಲ್ಲಿಗೆ ಹೋಗಿ ನಾನು ಬಂದಿರುವುದನ್ನು ತಿಳಿಸಿ ಕರೆದುಕೊಂಡು ಬನ್ನಿರಿ.

೧೪೮. ಪುಣ್ಯಪುರುಷನಾದ ರಾಮನ ಈ ಮಾತನ್ನು ಕೇಳಿ ಬಾಗಿಲು ಕಾಯುವವರು ಆ ಲಕ್ಷ್ಮಣ ಭರತರನ್ನು ಕರೆದುಕೊಂಡು ಬಂದು ರಾಮನಿಗೆ ತಿಳಿಸಿದರು.

೧೪೯. ಬಾಗಿಲು ಕಾಯುವವರು ರಾಮನ ಮಾತಿನಂತೆ ಆ ಲಕ್ಷ್ಮಣ ಭರತರನ್ನು ಕರೆತರಲು ಅವರನ್ನು ನೋಡಿ ರಾಮನು ಬಹು ಸಂತೋಷಪಟ್ಟನು.

೧೫೦. ಅವರನ್ನು ಆಲಂಗಿಸಿಕೊಂಡು ನಾನು ಆ ಶೂದ್ರ ಮುನಿಯನ್ನು ಕೊಂದೆನು. ಉತ್ತಮವಾದ ಬ್ರಾಹ್ಮಣನ ಕೆಲಸವನ್ನು ಆಗುಮಾಡಿದೆನು.

ಧರ್ಮಹೇತುಮತೋ ಭೂಯಃ ಕರ್ತುಮಿಚ್ಛಾಮಿ ರಾಘವೌ ।
ಭವದ್ಭ್ಯಾಮಾತ್ಮಭೂತಾಭ್ಯಾಂ ರಾಜಸೂಯಂ ಕ್ರತೂತ್ತಮಂ ॥ ೧೫೧ ॥

ಸಹಿತೋ ಯಷ್ಟುಮಿಚ್ಛಾಮಿ ತತ್ರ ಧರ್ಮಶ್ಚ ಶಾಶ್ವತಃ ।
ಪುಷ್ಕರಸ್ಥೇನ ಚೈವಾತ್ರ ಬ್ರಹ್ಮಣಾ ಲೋಕಕಾರಿಣಾ ॥ ೧೫೨ ॥

ಶತಾನಿ ತ್ರೀಣಿ ಯಜ್ಞಾನಾಮಿಷ್ಟಾ ಷಷ್ಟ್ಯಧಿಕಾನಿ ಚ ।
ಇಷ್ಟ್ವಾ ಹಿ ರಾಜಸೂಯೇನ ಸೋಮೋ ಧರ್ಮೇಣ ಧರ್ಮವಿತ್ ॥ ೧೫೩ ॥

ಪ್ರಾಪ್ತಃ ಸರ್ವೇಷು ಲೋಕೇಷು ಕೀರ್ತಿಸ್ಥಾನ ಮನುತ್ತಮಂ ।
ಇಷ್ಟ್ವಾ ತು ರಾಜಸೂಯೇನ ಮಿತ್ರಃ ಶತ್ರುನಿಬರ್ಹಣಃ ॥ ೧೫೪ ॥

ಮುಹೂರ್ತೇನ ಸುಶುದ್ಧೇನ ವರುಣತ್ವಮುಪಾಗತಃ ।
ತಸ್ಮಾದ್ಭವಂತೌ ಸಂಚಿಂತ್ಯ ಕಾರ್ಯೇಽಸ್ಮಿನ್ ವದತಂ ಹಿತಂ ॥ ೧೫೫ ॥

॥ ಭರತ ಉವಾಚ ॥

ತ್ವಂ ಧರ್ಮಃ ಪರಮಃ ಸಾಧೋ ತ್ವಯಿ ಸರ್ವಾ ವಸುಂಧರಾ ।
ಪ್ರತಿಷ್ಠಿತಾ ಮಹಾಬಾಹೋ ಯಶಶ್ಚಾಮಿತವಿಕ್ರಮ ॥ ೧೫೬ ॥

---

೧೫೧-೧೫೫. ಧರ್ಮಕ್ಕೆ ಕಾರಣವಾದ ಇನ್ನೂ ಒಳ್ಳೆಯ ಕೆಲಸಗಳನ್ನು ಮಾಡಲು ಆಸೆಯಿದೆ. ನನ್ನ ಪ್ರಾಣಕ್ಕೆ ಸಮಾನರಾದ ನಿಮ್ಮಗಳಿಂದ ಕೂಡಿಕೊಂಡು ರಾಜಸೂಯಯಾಗವನ್ನು ಮಾಡಲು ಇಚ್ಛಿಸುತ್ತೇನೆ. ಆದರಿಂದ ಬರುವ ಧರ್ಮವು ಶಾಶ್ವತವಾದುದು. ಪುಷ್ಕರದಲ್ಲಿ ಲೋಕಕರ್ತೃವಾದ ಬ್ರಹ್ಮನು ಮುನ್ನೂರು ಅರವತ್ತು ಯಜ್ಞಗಳನ್ನು ಮಾಡಿದನು. ಸೋಮನು ರಾಜಸೂಯಯಾಗವನ್ನು ಮಾಡಿ ಎಲ್ಲಾ ಲೋಕದಲ್ಲಿಯೂ ಉತ್ತಮವಾದ ಕೀರ್ತಿಸ್ಥಾನವನ್ನು ಹೊಂದಿದನು. ಸೂರ್ಯನು ರಾಜಸೂಯಯಾಗವನ್ನು ಮಾಡಿ ಶುದ್ಧನಾಗಿ ಶತ್ರುನಾಶಕನಾದನು. ವರುಣನು ಯಾಗಮಾಡಿ ತನ್ನ ಲೋಕಪಾಲಕತನವನ್ನು ಹೊಂದಿದನು. ಆದ್ದರಿಂದ ನೀವಿಬ್ಬರೂ ನನ್ನ ಕೆಲಸದಲ್ಲಿ ಯೋಚಿಸಿ ಹಿತವನ್ನು ಹೇಳಿರಿ.

೧೫೬. ಭರತನು ಹೇಳಿದನು- ಎಲೈ ಪರಾಕ್ರಮಿಯೆ ! ನೀನೇ ಉತ್ತಮವಾದ ಧರ್ಮವು. ಎಲೈ ಸಾಧುವೆ ! ನೀನೇ ಎಲ್ಲಾ ಭೂಮಿಯನ್ನೂ ಆಳುತ್ತಿರುವೆ. ನಿನ್ನಲ್ಲಿ ಉತ್ತಮವಾದ ಯಶಸ್ಸು ತುಂಬಿದೆ

ಮಹೀಪಾಲಾಶ್ಚ ಸರ್ವೇ ತ್ವಾಂ ಪ್ರಜಾಪತಿಮಿವಾಮರಾಃ ।
ನಿರೀಕ್ಷಂತೇ ಮಹಾತ್ಮಾನೋ ಲೋಕನಾಥ ತಥಾ ವಯಂ ॥ ೧೫೭ ॥

ಪ್ರಜಾಶ್ಚ ಪಿತೃವದ್ರಾಜನ್ ಪಶ್ಯಂತಿ ತ್ವಾಂ ಮಹಾಮತೇ ।
ಪೃಥಿವ್ಯಾಂ ಗತಿಭೂತೋಽಸಿ ಪ್ರಾಣಿನಾಮಿಹ ರಾಘವ ॥ ೧೫೮ ॥

ಏವಂ ವಿಧಾನಾಂ ಯಜ್ಞಾನಾಮಾಹರ್ತಾಸಿ ಪರಂತಪ ।
ಪೃಥಿವ್ಯಾಂ ಸರ್ವಭೂತಾನಾಂ ವಿನಾಶೋ ದೃಶ್ಯತೇ ಯತಃ ॥ ೧೫೯ ॥

ಶ್ರೂಯತೇ ರಾಜಶಾರ್ದೂಲ ಸೋಮಸ್ಯ ಮನುಜೇಶ್ವರ ।
ಜ್ಯೋತಿಷಾಂ ಸುಮಹದ್ಯುದ್ಧಂ ಸಂಗ್ರಾಮೇ ತಾರಕಾಮಯೇ ॥ ೧೬೦ ॥

ತಾರಾ ಬೃಹಸ್ಪತೇರ್ಭಾರ್ಯಾ ಹೃತಾ ಸೋಮೇನ ಕಾಮತಃ ।
ತತ್ರ ಯುದ್ಧೇ ಮಹದ್ವೃತ್ತಂ ದೇವದಾನವನಾಶನಂ ॥ ೧೬೧ ॥

---

೧೫೭. ಮಹಾತ್ಮರಾದ ದೊರೆಗಳೆಲ್ಲರೂ ನಿನ್ನನ್ನು ದೇವತೆಗಳು ಬ್ರಹ್ಮನನ್ನು ಸೇವಿಸುವಂತೆ ಸೇವಿಸುತ್ತಾರೆ. ನಾವೂ ಕೂಡ ಅದರಂತೆಯೇ ಸೇವಿಸುತ್ತಿದ್ದೇವೆ.

೧೫೮. ಎಲೈ ಮಹಾಮತಿಯೇ! ಪ್ರಜೆಗಳೆಲ್ಲರೂ ಕೂಡ ನಿನ್ನನ್ನು ತಂದೆಯಂತೆ ನೋಡುತ್ತಿದ್ದಾರೆ. ಲೋಕದಲ್ಲಿರುವ ಪ್ರಾಣಿಗಳಿಗೆಲ್ಲಾ ನೀನೇ ಗತಿಯಾಗಿದ್ದೀಯೆ.

೧೫೯. ಎಲೈ ಪರಂತಪನೆ! ಈ ರೀತಿಯಾದ ನೀನು ಯಜ್ಞಗಳನ್ನು ಮಾಡಲು ಯೋಗ್ಯನಾಗಿದ್ದೀಯೆ. ಅಲ್ಲದೆ ಭೂಮಿಯಲ್ಲಿ ಹುಟ್ಟಿದ ಪ್ರಾಣಿಗಳಿಗೆ ನಾಶವೆಂಬುದು ಸಿದ್ಧವು. ಆದ್ದರಿಂದ ಇದು ನಶ್ವರವಾದ ಶರೀರವು.

೧೬೦. ಎಲೈರಾಜನೇ! ಸೋಮ (ಚಂದ್ರ) ನಿಗೂ ಉಳಿದ ಜ್ಯೋತಿಸ್ಸುಗಳಿಗೂ ಘೋರವಾದ ಯುದ್ಧ ನಡೆಯಿತೆಂದು ಕೇಳಿದ್ದೇನೆ.

೧೬೧. ಬೃಹಸ್ಪತಿಯ ಹೆಂಡತಿಯನ್ನು ಸೋಮನು ಕಾಮಿಯಾಗಿ ಕದ್ದುಕೊಂಡು ಹೋದನು. ಆಗ ದೇವತೆಗಳೂ ದಾನವರೂ ನಾಶವಾಗುವ ಒಂದು ದೊಡ್ಡ ಯುದ್ಧವು ನಡೆಯಿತು.

ವರುಣಸ್ಯ ಕ್ರತೌ ಘೋರೇ ಸಂಗ್ರಾಮೋ ಮತ್ಸ್ಯಕಚ್ಛಪಾಃ ।
ನಿವೃತ್ತೇ ರಾಜಶಾರ್ದೂಲ ಸರ್ವೇ ಕ್ಷೀಣಾ ಜಲೇಚರಾಃ ॥ ೧೬೨ ॥

ಹರಿಶ್ಚಂದ್ರಸ್ಯ ಯಜ್ಞಾಂತೇ ರಾಜಸೂಯಸ್ಯ ರಾಘವ ।
ಆಡಿಬಕಂ ಮಹದ್ಯುದ್ಧಂ ಸರ್ವಲೋಕವಿನಾಶನಂ ॥ ೧೬೩ ॥

ಪೃಥಿವ್ಯಾಂ ಯಾನಿ ಸತ್ತ್ವಾನಿ ತಿರ್ಯಗ್ಯೋನಿಗತಾನ್ಯಪಿ ।
ಏನ್ಯಾನಾಂ ಪಾರ್ಥಿವಾನಾಂ ಚ ರಾಜಸೂಯೇ ಧ್ರುವಂ ಕ್ಷಯಃ ॥ ೧೬೪ ॥

ಸ ತ್ವಂ ಪುರುಷಶಾರ್ದೂಲ ಬುದ್ಧ್ಯಾ ಸಂಚಿಂತ್ಯ ಪಾರ್ಥಿವ ।
ಪ್ರಾಣಿನಾಂ ಚಿಂತಯ ಶುಭಂ ಪೂರ್ವಂ ಧರ್ಮಂ ಸಮಾಚರ ॥ ೧೬೫ ॥

॥ ಶ್ರೀರಾಮ ಉವಾಚ ॥

ಪ್ರೀತೋಽಸ್ಮಿ ತವ ಧರ್ಮಜ್ಞ ವಾಕ್ಯೇನಾನೇನ ಶತ್ರುಹನ್ ।
ನಿವರ್ತಿತಾ ರಾಜಸೂಯಾತ್ ಮತಿರ್ಮೇ ಧರ್ಮವತ್ಸಲ ॥ ೧೬೬ ॥

---

೧೬೨. ವರುಣನು ಮಾಡಿದ ಯಾಗದಲ್ಲಿ ಯುದ್ಧವು ಪ್ರಾಪ್ತವಾಗಿ ಅನೇಕ ಮೀನುಗಳೂ, ಆಮೆಗಳೂ, ನೀರಿನಲ್ಲಿ ಸಂಚರಿಸುವ ಪ್ರಾಣಿಗಳೂ ಅನೇಕವಾಗಿ ನಾಶವಾದುವು.

೧೬೩. ಹರಿಶ್ಚಂದ್ರನು ಮಾಡಿದ ರಾಜಸೂಯದ ಕೊನೆಯಲ್ಲಿ ಆದೀಬಕಗಳಿಗೆ (ಬಕ ಮರಕುಟಕನ ಹಕ್ಕಿ) ಯುದ್ಧ ನಡೆದು ಸರ್ವ ಲೋಕಗಳೂ ನಾಶವಾದುವು

೧೬೪. ಆದ್ದರಿಂದ ರಾಜಸೂಯ ಯಾಗವನ್ನು ಮಾಡಿದರೆ ಪ್ರಪಂಚದ ಸಣ್ಣ ಪ್ರಾಣಿಗಳಿಂದ ಮೊದಲುಗೊಂಡು ರಾಜರು, ದೇವತೆಗಳೂ ಕೂಡ ನಾಶವಾಗಿರುತ್ತಾರೆ. ಆಗುವುದೂ ಖಂಡಿತವು.

೧೬೫. ಆದ್ದರಿಂದ ಎಲೈ ಪುರುಷಶ್ರೇಷ್ಠನೇ! ನೀನು ಬುದ್ಧಿಯಿಂದ ಯೋಚಿಸಿ ಪ್ರಾಣಿಗಳಿಗೆ ಒಳ್ಳೆಯದನ್ನು ಯೋಚಿಸು. ನಾಶವನ್ನುಂಟುಮಾಡಬೇಡ ಹಿಂದಿನ ಧರ್ಮಗಳನ್ನು ಬಿಡದೆ ಅನುಸರಿಸು.

೧೬೬. ಎಲೈ ಭರತನೆ! ನಿನ್ನ ಮಾತನ್ನು ಕೇಳಿ ನನಗೆ ಬಹು ಸಂತೋಷವಾಯಿತು. ಎಲೈ ಧರ್ಮಿಷ್ಠನೇ! ರಾಜಸೂಯವನ್ನು ಮಾಡಬೇಕೆಂಬ ಬುದ್ಧಿಯನ್ನು ಬಿಟ್ಟುಬಿಟ್ಟೆನು.

ಪೂರ್ತಂ ಧರ್ಮಂ ಕರಿಷ್ಯಾಮಿ ಕಾನ್ಯಕುಬ್ಜೇ ಚ ವಾಮನಂ ।
ಪ್ರತಿಷ್ಠಾಸ್ಯಾಮ್ಯಹಂ ವೀರ ಸಾ ಮೇ ಖ್ಯಾತಿರ್ದಿವಂ ಗತಾ ।
ಭವಿಷ್ಯತಿ ನ ಸಂದೇಹೋ ಗಂಗಾ ಇವ ಭಗೀರಥಾತ್ ॥ ೧೬೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಯಜ್ಞನಿವಾರಣೋನಾಮ
॥ ಚತುಸ್ತ್ರಿಂಶೋಽಧ್ಯಾಯಃ ॥

---

೧೬೭. ಆದ್ದರಿಂದ ಪ್ರತಿಷ್ಠಾಪನೆ ಮುಂತಾದ ಪೂರ್ತ ಧರ್ಮಗಳನ್ನು ಮಾಡುತ್ತೇನೆ. ಕನ್ಯಕುಬ್ಜದಲ್ಲಿ ವಾಮನವನ್ನು ಪ್ರತಿಷ್ಠೆ ಮಾಡುವೆನು. ಹಾಗಾದರೆ ಗಂಗೆಯು ಭಗೀರಥನ ಖ್ಯಾತಿಯನ್ನು ದೇವಲೋಕದಲ್ಲಿಯೂ ಹರಡಿದಂತೆ ಆ ಪ್ರತಿಷ್ಠೆಯಿಂದ ನನ್ನ ಖ್ಯಾತಿಯು ದೇವಲೋಕವನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಯಜ್ಞನಿವಾರಣೆಯೆಂಬ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಪಂಚತ್ರಿಂಶೋಽಧ್ಯಾಯಃ ॥



॥ ಭೀಷ್ಮ ಉವಾಚ ॥

**ಕಥಂ ರಾಮೇಣ ಬ್ರಹ್ಮರ್ಷೇ ಕನ್ಯಾಕುಬ್ಜೇಥ ವಾಮನಃ ।**
**ಸ್ಥಾಪಿತಃ ಕ್ವ ಚ ಲಬ್ಧೋಽಸೌ ವಿಸ್ತರಾತ್ ಮಮ ಕೀರ್ತಯ ॥ ೧ ॥**

**ಹೃದ್ಯಾ ಚ ಮಧುರಾ ಚೈಷಾ ಪಾವನೀ ರಾಮಕೀರ್ತನೇ ।**
**ಕೀರ್ತಿತಾ ಭಗವನ್ ಮಹ್ಯಂ ಹೃದಿ ಕರ್ಣಸುಖಾವಹಾ ॥ ೨ ॥**

**ಅನುರಾಗೇಣ ತಂ ಲೋಕಾಃ ಸ್ನೇಹಾತ್ಪಶ್ಯಂತಿ ರಾಘವಂ ।**
**ಧರ್ಮಜ್ಞಶ್ಚ ಕೃತಜ್ಞಶ್ಚ ಬುದ್ಧ್ಯಾ ಚ ಪರಿನಿಷ್ಠಿತಃ ॥ ೩ ॥**

---

## ಮೂವತ್ತೈದನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು–ಎಲೈ ಬ್ರಹ್ಮರ್ಷಿಯೆ! ಕನ್ಯಾಕುಬ್ಜದಲ್ಲಿ ರಾಮನು ವಾಮನನನ್ನು ಹೇಗೆ ಸ್ಥಾಪಿಸಿದನು? ಆ ವಾಮನಮೂರ್ತಿಯು ಅವನಿಗೆ ಎಲ್ಲಿ ಸಿಕ್ಕಿತು? ನನಗೆ ವಿಸ್ತಾರವಾಗಿ ತಿಳಿಸು.

೨. ರಾಮನ ಕಥೆಯಲ್ಲಿ ಇದು ಚೆನ್ನಾಗಿರುವುದು, ಮಧುರವಾದುದು, ಪವಿತ್ರವಾದುದು. ಎಲೈ ಭಗವಂತನೇ! ನನಗೆ ಮನಸ್ಸು ಕಿವಿಗಳಿಗೆ ಇಂಪಾದ ಈ ರಾಮನ ವಿಷಯವನ್ನು ತಿಳಿಸಿದೆ.

೩. ಜನಗಳು ಪ್ರೀತಿಯಿಂದಲೂ ಸ್ನೇಹದಿಂದಲೂ ಆ ರಾಮನನ್ನು ನೋಡುತ್ತಾರೆ. ಆತನು ಧರ್ಮವನ್ನು ಬಲ್ಲವನು, ಉಪಕಾರವನ್ನು ಮರೆಯದವನು, ಬುದ್ಧಿಯನ್ನು ಸೂಕ್ಷ್ಮವಾಗಿಟ್ಟಿರುವವನು.

ಪ್ರಶಾಸ್ತೇ ಪೃಥಿವೀಂ ಸರ್ವಾಂ ಧರ್ಮೇಣ ಸುಸಮಾಹಿತಃ ।
ತಸ್ಮಿನ್ ಪ್ರಶಾಸತಿ ಮಹೀಂ ಸರ್ವೇ ಚ ಸಫಲಾ ದ್ರುಮಾಃ ॥ ೪ ॥

ರಸವಂತಃ ಪ್ರಭೂತಾಶ್ಚ ವಾಸಾಂಸಿ ವಿವಿಧಾನಿ ಚ ।
ಅಕೃಷ್ಟಪಚ್ಯಾ ಪೃಥಿವೀ ನಿಸ್ಸಪತ್ನಾ ಮಹಾತ್ಮನಃ ॥ ೫ ॥

ದೇವಕಾರ್ಯಕೃತೇ ಯೇನ ರಾವಣೋ ಲೋಕಕಂಟಕಃ ।
ಸ ಪುತ್ರಾಮಾತ್ಯಸಹಿತೋ ಲೀಲಯೈವ ನಿಪಾತಿತಃ ॥ ೬ ॥

ತಸ್ಯ ಬುದ್ಧಿಃ ಸಮುತ್ಪನ್ನಾ ಪೂರ್ಣೇ ಧರ್ಮೇ ದ್ವಿಜೋತ್ತಮ ।
ತಸ್ಯಾಹಂ ಚರಿತ ಸರ್ವಂ ಶ್ರೋತುಮಿಚ್ಛಾಮಿ ವೈ ಮನೇ ॥ ೭ ॥

॥ ಪುಲಸ್ತ್ಯ ಉವಾಚ ॥

ಕಸ್ಯಚಿತ್ತ್ವಥ ಕಾಲಸ್ಯ ರಾಮೋ ಧರ್ಮಪಥೇ ಸ್ಥಿತಃ ।
ಯಚ್ಚಕಾರ ಮಹಾರಾಜ ಶ್ರುಣುಷ್ವೈಕಮನಾ ಇಹ ॥ ೮ ॥

---

೪–೫. ಆ ರಾಮನು ಧರ್ಮದಲ್ಲಿ ಮನಸ್ಸನ್ನು ಇಟ್ಟವನಾಗಿ ಭೂಮಿಯನ್ನಾಳುತ್ತಿದ್ದನು. ಆವನು ಹೀಗೆ ಆಳುತ್ತಿರಲು ಎಲ್ಲಾ ಮರಗಳೂ ಹಣ್ಣಿನಿಂದ ಕೂಡಿದ್ದುವು ಮತ್ತು ರಸದಿಂದ ಕೂಡಿಯೂ ಚೆನ್ನಾಗಿಯೂ ಇರುವಂತೆ ಫಲ ಬಿಡುತ್ತಿದ್ದುವು ಜನರು ಬಗೆಬಗೆಯಾದ ಬಟ್ಟೆಗಳನ್ನು ಉಡುತ್ತಿದ್ದರು. ಭೂಮಿಯು ವ್ಯವಸಾಯವಿಲ್ಲದೇ ಫಲ ಕೊಡುತ್ತಿದ್ದಿತು. ಶತ್ರುಗಳೇ ಇರಲಿಲ್ಲ.

೬–೭. ದೇವತೆಗಳ ಕೆಲಸಕ್ಕೋಸ್ಕರ ಮಕ್ಕಳು ಮಂತ್ರಿಗಳೊಡನೆ ಕೂಡಿದ ರಾವಣನನ್ನು ಯಾವ ರಾಮನು ಲೀಲೆಯಿಂದಲೇ ಕೊಂದನೋ ಆ ರಾಮನಿಗೆ ಧರ್ಮಪ್ರತಿಷ್ಠೆಯ ಕೆಲಸದಲ್ಲಿ ಬುದ್ಧಿಯು ಹುಟ್ಟಿತು. ಎಲೈ ಮುನಿಯೆ! ಅಂತಹವನ ಚರಿತ್ರೆಯನ್ನು ಪೂರ್ಣವಾಗಿ ಕೇಳಲು ಅಪೇಕ್ಷಿಸುತ್ತೇನೆ

೮. ಪುಲಸ್ತ್ಯನು ಹೇಳಿದನು– ಧರ್ಮದ ದಾರಿಯನ್ನು ಬಿಡದಿದ್ದ ಶ್ರೀರಾಮನು ಕೆಲವು ಕಾಲದ ಮೇಲೆ ಏನುಮಾಡಿದನೆಂಬುದನ್ನು ಒಂದೇ ಮನಸ್ಸಿನಿಂದ ಕೇಳು.

ಸಸ್ಮಾರ ರಾಘವೇಂದ್ರಸ್ತು ಕಥಂ ರಾಜ್ಯಂ ವಿಭೀಷಣಃ ।
ಲಂಕಾಯಾಂ ಸಂಸ್ಥಿತೋ ರಾಜಾ ತಥಂ ಕುರ್ವೀತ ರಾಕ್ಷಸಃ ॥ ೯ ॥

ಗೀರ್ವಾಣೇಷು ಪ್ರಾತಿಕೂಲ್ಯಂ ವಿನಾಶಸ್ಯೇತಿ ಲಕ್ಷಣಂ ।
ಮಯಾ ತಸ್ಯ ತು ತದ್ದತ್ತಂ ರಾಜ್ಯಂ ಚಂದ್ರಾರ್ಕಕಾಲಿಕಂ ॥ ೧೦ ॥

ತಸ್ಯಾವಿನಾಶೇನ ಕೀರ್ತಿಃ ಸ್ಥಿರಾ ಮೇ ಶಾಶ್ವತೀ ಭವೇತ್ ।
ರಾವಣೇನ ತಪಸ್ತಪ್ತಂ ವಿನಾಶಾಯಾತ್ಮನಸ್ತ್ವಿಹ ॥ ೧೧ ॥

ವಿಧ್ವಸ್ತಃ ಸರ್ವಪಾಪಿಷ್ಠೋ ದೇವಕಾರ್ಯೇ ಮಯಾಧುನಾ ।
ತದಿದಾನೀಂ ಮಯಾನ್ವೇಷ್ಯಃ ಸ್ವಯಂ ಗತ್ವಾ ವಿಭೀಷಣಃ ॥ ೧೨ ॥

ಸಂದೇಷ್ಟವ್ಯಂ ಹಿತಂ ತಸ್ಯ ಯೇನ ತಿಷ್ಠೇತ ಶಾಶ್ವತಂ ।
ಏವಂ ಚಿಂತಯತಸ್ತಸ್ಯ ರಾಮಸ್ಯಾಮಿತತೇಜಸಃ ॥ ೧೩ ॥

ಆಜಗಾಮಾಥ ಭರತೋ ರಾಮಂ ದೃಷ್ಟ್ವಾಬ್ರವೀದಿದಂ ।
ಕಿಂ ತ್ವಂ ಚಿಂತಯಸೇ ದೇವ ನ ರಹಸ್ಯಂ ವದಸ್ವ ಮೇ ॥ ೧೪ ॥

---

೯-೧೪. ರಾಮನು ಆಗ ಇಂತು ಜ್ಞಾಪಿಸಿಕೊಂಡನು. ವಿಭೀಷಣನು ಹೇಗಿದ್ದಾನೆ ? ಅವನ ರಾಜ್ಯವು ಹೇಗಿದೆ ? ಲಂಕೆಯಲ್ಲಿದ್ದುಕೊಂಡು ರಾಜ್ಯಭಾರವನ್ನು ಹೇಗೆ ಮಾಡುತ್ತಿರುವನು? ದೇವತೆಗಳ ವಿರುದ್ಧವಾಗಿರುವುದು ನಾಶದ ಗುರುತು. ನಾನು ಅವನಿಗೆ ಆ ರಾಜ್ಯವನ್ನು ಸೂರ್ಯ ಚಂದ್ರರಿರುವವರೆಗೂ ಕೊಟ್ಟಿದ್ದೇನೆ. ಅದನ್ನು ಅವನು ನಾಶಮಾಡಿಕೊಳ್ಳದಿದ್ದರೆ ನನಗೆ ಶಾಶ್ವತವಾದ ಕೀರ್ತಿಯು ಬರುತ್ತದೆ. ಮತ್ತು ಸ್ಥಿರವಾಗಿರುತ್ತದೆ. ರಾವಣನು ಮಾಡಿದ ತಪಸ್ಸು ಅವನ ನಾಶಕ್ಕೆ ಕಾರಣವಾಯಿತು. ದೇವತೆಗಳ ನಾಶಕ್ಕೋಸ್ಕರ ನಾನು ಈಗ ಅವನನ್ನು ಕೊಂದೆನು. ಆದ್ದರಿಂದಲೇ ನಾನೇ ಹೋಗಿ ವಿಭೀಷಣನನ್ನು ಪರೀಕ್ಷಿಸಬೇಕು. ಅವನಿಗೆ ಹಿತವಾದ ಬುದ್ಧಿವಾದವನ್ನೂ ಹೇಳಬೇಕು. ಅದರಿಂದ ಅವನು ಶಾಶ್ವತವಾಗಿರಬೇಕು. ಬಹು ಸಮರ್ಥನಾದ ರಾಮನು ಇಂತು ಯೋಚಿಸುತ್ತಿರಲು ಭರತನು ಅಲ್ಲಿಗೆ ಬಂದು ರಾಮನನ್ನು ನೋಡಿ ಇಂತೆಂದನು. ಎಲೈ ದೇವನೆ ! ನೀನು ಏನನ್ನು ಯೋಚಿಸುತ್ತಿರುವಿ ? ಗುಟ್ಟಿಲ್ಲದಿ

ದೇವಕಾರ್ಯೇऽಥ ಪಾರಕ್ಯೇ ಸ್ವಕೀಯೇ ವಾ ನರೋತ್ತಮ ।
ಏವಂ ಬ್ರುವಂತಂ ಭರತಂ ಧ್ಯಾಯಮಾನಮವಸ್ಥಿತಂ ॥ ೧೫ ॥

ಅಬ್ರವೀದ್ರಾಘವೋ ವಾಕ್ಯಂ ರಹಸ್ಯಂ ನ ತು ಮೇ ತವ ।
ಭವಾನ್ ಬಹಿಶ್ಚರಃ ಪ್ರಾಣೋ ಲಕ್ಷ್ಮಣಶ್ಚ ಮಹಾಯಶಾಃ ॥ ೧೬ ॥

ಭವದ್ಭ್ಯಾಂ ರಹಿತಂ ನಾಸ್ತಿ ಮಮ ಸತ್ತ್ವಂ ವಿಧಾರಯ ।
ಏಷಾ ಮೇ ಮಹತೀ ಚಿಂತಾ ಕಥಂ ದೇವೈರ್ವಿಭೀಷಣಃ ॥ ೧೭ ॥

ವರ್ತತೇ ಯದ್ಧಿತಾರ್ಥಂ ವೈ ದಶಗ್ರೀವೋ ನಿಪಾತಿತಃ ।
ಗಮಿಷ್ಯೇ ತದಹಂ ವತ್ಸ ಯತ್ರಾಸೌ ಚ ವಿಭೀಷಣಃ ॥ ೧೮ ॥

ಲಂಕಾಂ ದೃಷ್ಟ್ವಾ ಪುರೀಂ ತಾಂ ತು ಕಾರ್ಯಮುಕ್ತ್ವಾ ತು ರಾಕ್ಷಸಂ ।
ಆಲೋಕ್ಯ ಸರ್ವಾಂ ವಸುಧಾಂ ಸುಗ್ರೀವಂ ಚೈವ ವಾನರಂ ॥ ೧೯ ॥

ಮಹಾರಾಜಂ ಚ ಶತ್ರುಘ್ನಂ ಭ್ರಾತೃಪುತ್ರಾಂಶ್ಚ ಸರ್ವಶಃ ।
ಏವಂ ವದತಿ ಕಾಕುತ್‌ಸ್ಥೇ ಭರತಃ ಪ್ರಾಂಜಲಿಃ ಸ್ಥಿತಃ ॥ ೨೦ ॥

---

ದ್ದರೆ ನನಗೆ ಹೇಳು. ಎಲೈ ನರೋತ್ತಮನೆ! ಇದೇನು ದೇವಕಾರ್ಯವೇ ? ಪರರ ಕಾರ್ಯವೇ ? ನಿನ್ನ ಸಂಬಂಧವಾದುದೆ ? ಹೇಳು. ಹೀಗೆ ಹೇಳಿ ಯೋಚಿಸುತ್ತ ನಿಂತಿರುವ ಭರತನನ್ನು ನೋಡಿ ರಾಮನು, ಎಲೈ ಭರತನೆ! ನಿನ್ನಲ್ಲಿ ನನಗೆ ಯಾವುದೂ ಗುಟ್ಟಾಗಿರತಕ್ಕ ವಿಷಯವಿಲ್ಲ. ನೀನೂ ಲಕ್ಷ್ಮಣನೂ ಹೊರಗೆ ಸಂಚರಿಸುವ ನನ್ನ ಪ್ರಾಣಗಳು. ನಿಮ್ಮ ಇಬ್ಬರಿಗಿಂತಲೂ ಹೊರಗಾದುದು ನನಗೆ ಯಾವುದೂ ಇಲ್ಲ. ನನ್ನ ನಿಶ್ಚಯವನ್ನು ತಿಳಿ. ಯಾವ ದೇವತೆಗಳ ಹಿತಕ್ಕೋಸ್ಕರ ದಶಗ್ರೀವನನ್ನು ಕೊಂದೆನೋ ಆ ದೇವತೆಗಳ ವಿಷಯದಲ್ಲಿ ವಿಭೀಷಣನು ಹೇಗಿರುವನೋ ಎಂಬುದೇ ಈ ದೊಡ್ಡ ಯೋಚನೆಯು. ಆದ್ದರಿಂದ ವಿಭೀಷಣನಿರುವಲ್ಲಿಗೆ ಹೋಗುತ್ತೇನೆ.

೧೯-೨೫. ಆ ಲಂಕಾಪಟ್ಟಣವನ್ನು ನೋಡಿಕೊಂಡು ವಿಭೀಷಣನಿಗೆ ಬಂದ ಸಮಾಚಾರವನ್ನು ತಿಳಿಸಿ ಭೂಮಿಯನ್ನೆಲ್ಲಾ ನೋಡಿಕೊಂಡು ಸುಗ್ರೀವನನ್ನೂ ನೋಡಿಕೊಂಡು ಮಹಾರಾಜನಾದ ಶತ್ರುಘ್ನನನ್ನೂ ಸಹೋದರರಾದ ನಿಮ್ಮ ಮಕ್ಕಳನ್ನೂ ನೋಡಿಕೊಂಡು ಬರುತ್ತೇನೆ ರಾಮನು ಹೀಗೆ ಹೇಳುತ್ತಿರಲು ಭರತನು ಕೈಮುಗಿದುಕೊಂಡು ನಾನು ನಿನ್ನ ಜತೆಯಲ್ಲಿ ಬರುತ್ತೇನೆ ಎಂದನು ಆಗ ರಾಮನು ಹಾಗೆ ಆಗಲೆಂದು ಹೇಳಿ ಲಕ್ಷ್ಮಣನನ್ನು ಕುರಿತು ಎಲೈ ಲಕ್ಷ್ಮಣನೇ ! ನಾವು ಬರುವ

ಉವಾಚ ರಾಘವಂ ವಾಕ್ಯಂ ಗಮಿಷ್ಯೇ ಭವತಾ ಸಹ ।
ಏವಂ ಕುರು ಮಹಾಬಾಹೋ ಸೌಮಿತ್ರಂ ಚಾಹ ವೈ ಪುರೇ ॥ ೨೧ ॥

ರಕ್ಷಾ ಕಾರ್ಯಾ ತ್ವಯಾ ವೀರ ಯಾವದಾಗಮನಂ ಹಿ ನೌ ।
ಏವಂ ಲಕ್ಷ್ಮಣಮಾದಿಶ್ಯ ಧ್ಯಾತ್ವಾ ವೈ ಪುಷ್ಪಕಂ ನೃಪ ॥ ೨೨ ॥

ಆರುರೋಹ ಸ ವೈ ಯಾನಂ ಕೌಸಲ್ಯಾನಂದವರ್ಧನಃ ।
ಪುಷ್ಪಕಂ ಚ ತತಃ ಪ್ರಾಪ್ತಂ ಗಾಂಧಾರವಿಷಯೋ ಯತಃ ॥ ೨೩ ॥

ಭರತಸ್ಯ ಸುತೌ ದೃಷ್ಟ್ವಾ ರಾಜನೀತಿಂ ನಿರೀಕ್ಷ್ಯ ಚ ।
ಪೂರ್ವಾಂ ದಿಶಂ ತತೋ ಗತ್ವಾ ಲಕ್ಷ್ಮಣಸ್ಯ ಸುತೌ ಯತಃ ॥ ೨೪ ॥

ಪುರೇಷು ಷೇಷು ಷಡ್ರಾತ್ರಮುಷಿತ್ವಾ ರಘುನಂದನೌ ।
ಗತೌ ತೇನ ವಿಮಾನೇನ ದಕ್ಷಿಣಾಮಭಿತೋ ದಿಶಂ ॥ ೨೫ ॥

ಗಂಗಾಯಮುನಸಂಭೇದಂ ಪ್ರಯಾಗಮೃಷಿಸೇವಿತಂ ।
ಅಭಿವಾದ್ಯ ಭರದ್ವಾಜ ಮತ್ರೇರಾಶ್ರಮಮಭ್ಯಗಾತ್ ॥
ಸಂಭಾಷ್ಯ ಚ ಮುನಿಂ ತಂ ತು ಜನಸ್ಥಾನಮುಪಾಗತಃ ॥ ೨೬ ॥

---

ವರೆಗೂ ರಾಜ್ಯದ ರಕ್ಷಣೆಯನ್ನು ಮಾಡೆಂದು ಅವನನ್ನು ಆ ಪಟ್ಟಣದಲ್ಲಿಟ್ಟು ಪುಷ್ಪಕವನ್ನು ಸ್ಮರಿಸಿ ಅದು ಬರಲು ಇಬ್ಬರೂ ಅದನ್ನು ಹತ್ತಿದರು. ಅನಂತರ ಪುಷ್ಪಕ ವಿಮಾನವು ಬರಲು ಗಾಂಧಾರ ದೇಶಕ್ಕೆ ಹೋದರು. ಅಲ್ಲಿ ಭರತನ ಇಬ್ಬರು ಮಕ್ಕಳು ರಾಜ್ಯಭಾರ ಮಾಡುತ್ತಿದ್ದರು ಅವರ ಕ್ಷೇಮವನ್ನೂ ಅವರ ರಾಜನೀತಿ ವಿಚಕ್ಷಣೆಯನ್ನೂ ನೋಡಿದರು. ಅನಂತರ ಪೂರ್ವದ ಕಡೆಗೆ ಹೋದರು. ಅಲ್ಲಿ ಲಕ್ಷ್ಮಣನ ಇಬ್ಬರು ಮಕ್ಕಳು ರಾಜ್ಯವಾಳುತ್ತಿದ್ದರು. ಅವರನ್ನು ನೋಡಿಕೊಂಡು ಅವರ ರಾಜ್ಯದ ಆಡಳಿತವನ್ನು ನೋಡಿ ಅವರ ಪಟ್ಟಣದಲ್ಲಿ ಆರು ದಿವಸಗಳು ಇದ್ದರು. ಅನಂತರ ಅದೇ ವಿಮಾನದಲ್ಲಿ ಕುಳಿತು ದಕ್ಷಿಣಕ್ಕೆ ಹೋದರು,

೨೬. ಅಲ್ಲಿ ಗಂಗೆ, ಯಮುನೆಗಳು ಸೇರುವ ಪ್ರಯಾಗವನ್ನು ಹೊಂದಿ ಅಲ್ಲಿ ಭಾರದ್ವಾಜ ಋಷಿಗೆ ನಮಸ್ಕರಿಸಿ ಅಲ್ಲಿಂದ ಅತ್ರಿಯ ಆಶ್ರಮಕ್ಕೆ ಹೋಗಿ ಆತನನ್ನು ವಿಚಾರಿಸಿಕೊಂಡು ಮುಂದೆ ಜನಸ್ಥಾನಕ್ಕೆ ಹೋದರು.

॥ ಶ್ರೀರಾಮ ಉವಾಚ ॥

ಅತ್ರ ಪೂರ್ವಂ ಹೃತಾ ಸೀತಾ ರಾವಣೇನ ದುರಾತ್ಮನಾ ।
ಹತ್ವಾ ಜಟಾಯುಷಂ ಗೃಧ್ರಂ ಯೋಽಸೌ ಪಿತೃಸಖಾ ಹಿ ನಃ ॥ ೨೭ ॥

ಅತ್ರಾಸ್ಮಾಕಂ ಮಹದ್ಯುದ್ಧಂ ಕಬಂಧೇನ ಕುಬುದ್ಧಿನಾ ।
ಹತೇನ ತೇನ ದಗ್ಧೇನ ಸೀತಾರ್ಥೇ ರಾವಣಾಲಯೇ ॥ ೨೮ ॥

ಋಷ್ಯಮೂಕೇ ಗಿರಿವರೇ ಸುಗ್ರೀವೋ ನಾಮ ವಾನರಃ ।
ಸ ತೇ ಕರಿಷ್ಯತೇ ಸಖ್ಯಂ ಪಂಪಾಯಾಂ ವ್ರಜ ಸಾನುಜಃ ॥ ೨೯ ॥

ಪಂಪಾಸರಃ ಸಮಾಸಾದ್ಯ ಶಬರೀಂ ತತ್ರ ತಾಪಸೀಂ ।
ಸಂಭಾಷ್ಯ ದುಃಖಿತೋ ವೀರ ನಿರಾಶೋ ಜೀವಿತೇ ಸ್ಥಿತಃ ॥ ೩೦ ॥

ಇಯಂ ಸಾ ನಲಿನೀ ವೀರ ಯಾಸ್ಯಾಂ ವೈ ಲಕ್ಷ್ಮಣೋಽವದತ್ ।
ಮಾ ಕೃಥಾಃ ಪುರುಷವ್ಯಾಘ್ರ ಶೋಕಂ ಶತ್ರುವಿನಾಶನ ॥ ೩೧ ॥

---

೨೭. ಶ್ರೀರಾಮನು ಹೇಳಿದನು- ಇಲ್ಲಿಯೇ ರಾವಣನು ನಮ್ಮ ತಂದೆಯ ಸ್ನೇಹಿತನಾದ ಜಟಾಯುವನ್ನು ಕೊಂದು ಸೀತೆಯನ್ನು ಕದ್ದುಕೊಂಡು ಹೋದುದು.

೨೮-೨೯. ಇಲ್ಲಿ ನಮಗೂ ಕಬಂಧನಿಗೂ ದೊಡ್ಡ ಯುದ್ಧವು ನಡೆಯಿತು. ಅವನನ್ನು ಕೊಂದು ಸುಡಲು ಅವನಿಂದ ಒಂದು ದಿವ್ಯ ರೂಪವು ಹೊರಟು ಸೀತೆಯು ರಾವಣನ ಮನೆಯಲ್ಲಿದ್ದಾಳೆ. ಋಷ್ಯಮೂಕವೆಂಬ ಬೆಟ್ಟದಲ್ಲಿ ಸುಗ್ರೀವನಿದ್ದಾನೆ. ನೀನು ಅಲ್ಲಿಗೆ ಹೋದರೆ ಅವನು ನಿನಗೆ ಸ್ನೇಹಿತನಾಗಿ ಸಹಾಯಮಾಡುತ್ತಾನೆ. ಅಲ್ಲಿಂದ ಮುಂದೆ ಪಂಪಾಸರಸ್ಸು ಇರುವುದು. ಅಲ್ಲಿಗೂ ಹೋಗೆಂದನು.

೩೦. ಅಲ್ಲಿಂದ ಪಂಪಾಸರೋವರಕ್ಕೆ ಹೋದೆನು. ಅಲ್ಲಿ ಶಬರಿ ಎಂಬ ತಪಸ್ವಿನಿ ಇದ್ದಳು. ಅವಳಲ್ಲಿ ಮಾತನಾಡಿದೆನು. ಸೀತೆಯ ವಿರಹದಿಂದ ಅಲ್ಲಿ ಪ್ರಾಣದ ವಿಷಯದಲ್ಲಿ ನಿರಾಶೆಯಾಗಿದ್ದಿತು.

೩೧-೩೨. ಇದೇ ಪಂಪೆಯೆಂಬ ಸರೋವರವು. ಅಲ್ಲಿ ಲಕ್ಷ್ಮಣನು ನನ್ನನ್ನು ಕುರಿತು ಎಲೈ ಪುರುಷವ್ಯಾಘ್ರನೇ ! ದುಃಖಿಸಬೇಡ, ಶತ್ರುನಾಶಕನೇ ! ಆಜ್ಞೆಯನ್ನು

ಆಜ್ಞಾಕಾರಿಣಿ ಭೃತ್ಯೇ ಚ ಮಯಿ ಪ್ರಾಪ್ಸ್ಯಸಿ ಮೈಥಿಲೀಂ ।
ಅತ್ರ ಮೇ ವಾರ್ಷಿಕಾ ಮಾಸಾ ಗತಾ ವರ್ಷಶತೋಪಮಾಃ ॥ ೩೨ ॥

ಅತ್ರೈವ ನಿಹತೋ ವಾಲೀ ಸುಗ್ರೀವಾರ್ಥೇ ಪರಂತಪ ।
ಏಷಾ ಸಾ ದೃಶ್ಯತೇ ವೀರ ಕಿಷ್ಕಿಂಧಾ ವಾಲಿಪಾಲಿತಾ ॥ ೩೩ ॥

ಯಸ್ಯಾಂ ವಸತಿ ಧರ್ಮಾತ್ಮಾ ಸುಗ್ರೀವೋ ವಾನರೇಶ್ವರಃ ।
ವಾನರೈಃ ಸಹಿತೋ ವೀರ ಯಾವದಾಸ್ತೇ ಸಭಾಂ ಗತಃ ॥ ೩೪ ॥

ತಾವತ್ತತ್ರಾಗತೌ ವೀರೌ ಪುರ್ಯಾಂ ಭರತರಾಘವೌ ।
ದೃಷ್ಟ್ವಾ ತೌ ಭ್ರಾತರೌ ಪ್ರಾಪ್ತೌ ಪ್ರಣಿಪತ್ಯಾಬ್ರವೀದಿದಂ ॥ ೩೫ ॥

ಕ್ವ ಯುವಾಂ ಪ್ರಸ್ಥಿತೌ ವೀರೌ ಕಾರ್ಯಂ ಕಿಂ ತು ಕರಿಷ್ಯತಃ ।
ವಿನಿವೇಶ್ಯಾಸನೇ ತೌ ಚ ಅರ್ಘ್ಯಂ ದತ್ವಾತ್ಮನಾ ಸಹ ॥ ೩೬ ॥

ಏವಂ ಸಭಾಸ್ಥಿತೇ ತತ್ರ ಧರ್ಮಿಷ್ಠೇ ರಘುನಂದನೇ ।
ಅಂಗದೋಽಥ ಹನೂಮಾಂಶ್ಚ ನಲೋ ನೀಲಶ್ಚ ಪಾಟಲಃ ॥ ೩೭ ॥

---

ಪಾಲಿಸುವ ಆಳಾದ ನಾನಿರುವಾಗ ಸೀತೆಯನ್ನು ಖಂಡಿತವಾಗಿಯೂ ಹೊಂದುತ್ತೀಯೆ ಎಂದು ಹೇಳಿದನು. ಇಲ್ಲಿ ನಾನು ಮಳೆಗಾಲವನ್ನು ನೂರು ವರ್ಷಗಳನ್ನು ಕಳೆದಂತೆ ಕಷ್ಟದಿಂದ ಕಳೆದನು.

೩೩-೩೫. ಇಲ್ಲಿಯೇ ಸುಗ್ರೀವನಿಗೋಸ್ಕರ ವಾಲಿಯನ್ನು ಕೊಂದೆನು. ಇದೇ ಕಿಷ್ಕಿಂಧೆಯು. ಆ ವಾಲಿಯು ಆಳುತ್ತಿದ್ದುದನ್ನು ಇಲ್ಲಿಯೇ ವಾನರಾಧಿಪತಿಯಾದ ಧರ್ಮಾತ್ಮನಾದ ಸುಗ್ರೀವನು ರಾಜ್ಯಭಾರಮಾಡುತ್ತಿದ್ದಾನೆ. ಹೀಗೆಂದು ಹೇಳುತ್ತ ಸುಗ್ರೀವನು ವಾನರರೊಡನೆ ಸಭೆಯಲ್ಲಿದ್ದಾಗ ಅವರಿಬ್ಬರೂ ಅಲ್ಲಿಗೆ ಬಂದರು ಆ ರಾಮ ಭರತರು ಬಂದುದನ್ನು ನೋಡಿ ಸುಗ್ರೀವನು ನಮಸ್ಕರಿಸಿ ಇಂತೆಂದನು.

೩೭-೪೦. ಧರ್ಮವಂತನಾದ ರಾಮನು ಹೀಗೆ ಸಭೆಯಲ್ಲಿ ಕುಳಿತಿರುವಾಗ ಅಂಗದ, ಹನುಮಂತ, ನಳ, ನೀಲ, ಪಾಟಲ, ಗವ, ಗವಾಕ್ಷ ಗವಯ, ಪನಸ,

ಗವೋ ಗವಾಕ್ಷೋ ಗವಯಃ ಪನಸಶ್ಚ ಮಹಾಯಶಾಃ ।
ಮಂತ್ರೀ ಪುರೋಧಾ ತು ಯೋ ವೈ ದೈವಜ್ಞಶ್ಚ ದಧೀಮುಖಃ ॥ ೩೮ ॥

ವೀರಃ ಶತಬಲಿ ರ್ಮೈಂದೋ ದ್ವಿವಿದೋ ಗಂಧಮಾದನಃ ।
ವೀರಬಾಹುಃ ಸುಬಾಹುಶ್ಚ ವೀರಸೇನೋ ವಿನಾಯಕಃ ॥ ೩೯ ॥

ಸೂರ್ಯಾಭಃ ಕುಮುದಶ್ಚೈವ ಸುಷೇಣೋ ಹರಿಯೂಥಪಃ ।
ಋಷಭೋ ವಿನತಶ್ಚೈವ ಗವಾಕ್ಷೋ ಭೀಮವಿಕ್ರಮಃ ॥ ೪೦ ॥

ಋಕ್ಷರಾಜಶ್ಚ ಧೂಮ್ರಶ್ಚ ಸಹಸೈನ್ಯಾ ಉಪಾಗತಾಃ ।
ಅಂತಃಪುರಾಣಿ ಸರ್ವಾಣಿ ರಾಮಾ ತಾರಾ ತಥೈವ ಚ ॥ ೪೧ ॥

ಅವರೋಧೋಽಙ್ಗದಸ್ಯಾಪಿ ತಥಾನ್ಯಾಃ ಪರಿಚಾರಿಕಾಃ
ಪ್ರಹರ್ಷಮತುಲಂ ಪ್ರಾಪ್ಯ ಸಾಧು ಸಾಧ್ವಿತಿ ಚಾಬ್ರುವನ್ ॥ ೪೨ ॥

ವಾನರಾಶ್ಚ ಮಹಾತ್ಮಾನಃ ಸುಗ್ರೀವಸಹಿತಾಸ್ತದಾ ।
ವಾನರ್ಯಶ್ಚ ಮಹಾಭಾಗಾಸ್ತಾರಾದ್ಯಾಸ್ತತ್ರ ರಾಘವಂ ॥ ೪೩ ॥

---

ಮಂತ್ರಿಯೂ, ಪುರೋಹಿತನೂ, ಜ್ಯೋತಿಷ್ಕನೂ ಆದ ದಧೀಮುಖ, ಶತಬಲಿ, ಮೈಂದ, ದ್ವಿವಿಜ, ಗಂಧಮಾದನ, ವೀರಬಾಹು, ಸುಬಾಹು, ವೀರಸೇನ, ವಿನಾಯಕ ಸೂರ್ಯಾಭ, ಕುಮುದ, ಸುಷೇಣ, ಋಷಭ, ವಿನತ, ಗವಾಕ್ಷ, ಜಾಂಬವ, ಧೂಮ ಇವರೆಲ್ಲರೂ ಸೈನ್ಯದೊಡನೆ ಬಂದರು.

೪೧-೪೨. ರುಮೆ, ತಾರೆ ಮೊದಲಾದ ಅಂತಃಪುರಸ್ತ್ರೀಯರೂ, ಅಂಗದನ ಅಂತಃಪುರಸ್ತ್ರೀಯರೂ ಉಳಿದ ಪರಿಚಾರಿಕೆಯರೂ ಬಂದು ರಾಮ ಭರತರನ್ನು ನೋಡಿ ಬಹು ಸಂತೋಷಪಟ್ಟು, ಸಾಧು, ಸಾಧು ಎಂದರು.

೪೩-೪೫. ಸುಗ್ರೀವನೇ ಮೊದಲಾದ ವಾನರರೂ ತಾರೆಯೇ ಮೊದಲಾದ ವಾನರಸ್ತ್ರೀಯರೂ ರಾಮನನ್ನು ನೋಡಿ ಕಣ್ಣೀರು ಸುರಿಸುತ್ತಾ ನಮಸ್ಕರಿಸಿ ಗದ್ಗದ

ಅಭಿಪ್ರೇಕ್ಷ್ಯ ಸಾಶ್ರುಕಂಠಾಃ ಪ್ರಣಿಪತ್ಯೇದಮಬ್ರುವನ್ ।
ಕ್ವ ಸಾ ದೇವೀ ತ್ವಯಾ ದೇವ ಯಾ ವಿನಿರ್ಜಿತ್ಯ ರಾವಣಂ ॥ ೪೪ ॥

ಶುದ್ಧಿಂ ಕೃತ್ವಾ ಹಿ ತೇ ವತ್ಸೌ ಪಿತುರಗ್ರೇ ಉಮಾಪತೇಃ ।
ತ್ವಯಾ ನೀತಾ ಪುರೀಂ ರಾಮ ನ ತಾಂ ಪಶ್ಯಾಮಿ ತೇಽಗ್ರತಃ ॥ ೪೫ ॥

ನ ವಿನಾ ತ್ವಂ ತಯಾ ದೇವ ಶೋಭಸೇ ರಘುನಂದನ ।
ತ್ವಯಾ ವಿನಾಪಿ ಸಾ ಸಾಧ್ವೀ ಕ್ವ ನು ತಿಷ್ಠತಿ ಜಾನಕೀ ॥ ೪೬ ॥

ಅನ್ಯಾಂ ಭಾರ್ಯಾಂ ನ ತೇ ವಿದ್ಮೋ ಭಾರ್ಯಾಹೀನೋ ನ ಶೋಭಸೇ ।
ಕ್ರೌಂಚಯೋರ್ಮಿಥುನಂ ಯದ್ವಚ್ಚಕ್ರವಾಕಯುಗಂ ತಥಾ ॥ ೪೭ ॥

ಹಂಸಯೋರ್ವಾಪಿ ರಾಜೇಂದ್ರ ತಥಾ ತ್ವಂ ರಾಮ ಜಾನಕೀ ।
ಪುಷ್ಪಕಸ್ಥಸ್ಯ ತೇ ದೇವ ದೃಷ್ಟಾ ದೇವೀ ಪುರಾ ಮಯಾ ॥ ೪೮ ॥

ಗರುಡಾಸನಸಂಸ್ಥಸ್ಯ ಲಕ್ಷ್ಮೀರಿವ ಹರೇರ್ಯಥಾ ।
ಏವಂ ತಾಂ ಬ್ರುವತೀಂ ತಾರಾಂ ಸಾಶ್ರುನೇತ್ರಾಂ ನರಾಧಿಪ ॥ ೪೯ ॥

---

ಸ್ವರದಿಂದ ಇಂತೆಂದರು ಎಲೈ ರಾಮನೇ ! ರಾವಣನನ್ನು ಜಯಿಸಿ ತಂದ, ರುದ್ರರೇ ಮೊದಲಾದವರ ಎದುರಿಗೆ ಬೆಂಕಿಯಲ್ಲಿ ಶುದ್ಧಿಯನ್ನು ತೋರಿಸಿದ, ಸೀತೆಯನ್ನು ಪಟ್ಟಣಕ್ಕೆ ಕರೆದುಕೊಂಡು ಹೋದೆಯಲ್ಲ? ಆಕೆಯು ನಿನ್ನೆದುರಿಗೆ ಕಾಣುವುದಿಲ್ಲವಲ್ಲ ? ಎಲ್ಲಿಗೆ ಹೋದಳು ?

೪೬-೫೦. ಆ ಸೀತೆಯಿಲ್ಲದಿದ್ದರೆ ಎಲೈ ರಾಮನೆ ! ನೀನು ಶೋಭಿಸಲಾರೆ. ನಿನ್ನನ್ನು ಬಿಟ್ಟುಬಿಟ್ಟುತಾನೆ ಆ ಜಾನಕಿಯು ಎಲ್ಲಿರುವಳು ? ನಿನಗೆ ಬೇರೆ ಹೆಂಡತಿಯೂ ಇಲ್ಲ. ಹೆಂಡತಿಯು ಇಲ್ಲದಿದ್ದರೆ ನೀನು ಶೋಭಿಸುವುದಿಲ್ಲ. ಕ್ರೌಂಚ ಪಕ್ಷಿಗಳ ಯುಗ್ಮದಂತೆಯೂ, ಚಕ್ರವಾಕಗಳ ಜೋಡಿಯಂತೆಯೂ, ಹಂಸಗಳ ದಂಪತಿಗಳಂತೆಯೂ, ರಾಮ ಜಾನಕಿಯರಿದ್ದರೆ ಶೋಭಿಸುವರು. ಎಲೈ ದೇವನೇ ! ನೀನು ಹಿಂದೆ ಪುಷ್ಪಕದಲ್ಲಿ ಆಕೆಯನ್ನು ಕರೆದುಕೊಂಡು ಬಂದಿದ್ದಾಗ ಗರುಡನ ಮೇಲೆ ಕುಳಿತಿರುವ ವಿಷ್ಣುವಿಗೆ ಲಕ್ಷ್ಮಿಯು ಹೇಗಿದ್ದಳೋ ಹಾಗೆ ಇದ್ದ ಆಕೆಯನ್ನು ನೋಡಿದ್ದೆವು. ಚಂದ್ರಮುಖಿಯಾದ, ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ ಇಂತು ಪ್ರಶ್ನಿಸುತ್ತಿರುವ, ತಾರೆ

ನಿರೀಕ್ಷ್ಯ ಸುಚಿರಂ ತಾರಾಂ ತಾರಾಧಿಪಸಮಾನನಾಂ ।
ಪ್ರಾಹ ಪ್ರವಚಸಾಂ ಶ್ರೇಷ್ಠೋ ರಾಮೋ ರಾಜೀವಲೋಚನಃ ॥ ೫೦ ॥

ಮಾ ರುದಸ್ತ್ವಂ ವಿಶಾಲಾಕ್ಷೀ ಕಾಲೋ ಹಿ ದುರತಿಕ್ರಮಃ ।
ಸರ್ವಂ ಕಾಲಕೃತಂ ವಿದ್ಧಿ ಜಗದೇತಚ್ಚರಾಚರಂ ॥
ವಿಸೃಜ್ಯ ತಾಃ ಸ್ತ್ರಿಯಃ ಸರ್ವಾಃ ಸುಗ್ರೀವೋಽಭಿಮುಖಸ್ಥಿತಃ ॥ ೫೧ ॥

॥ ಸುಗ್ರೀವ ಉವಾಚ ॥

ಕಾರ್ಯೇಣ ಕೇನ ಭವಂತಾವಿಹಾಯಾತೌ ನರೇಶ್ವರೌ ।
ತಚ್ಚಾಪಿ ಬ್ರುವಾತಾಂ ಶೀಘ್ರಂ ಕೃತ್ಯಕಾಲೋಽತಿವರ್ತತೇ ॥ ೫೨ ॥

ಬ್ರುವಾಣಮೇವಂ ಸುಗ್ರೀವಂ ಭರತೋ ರಾಮಚೋದಿತಃ ।
ಆಚಚಕ್ಷೇಽಥ ಗಮನಂ ಲಂಕಾಯಾಂ ರಾಘವಸ್ಯ ತು ॥ ೫೩ ॥

ತೌ ಚಾಬ್ರವೀಚ್ಚ ಸುಗ್ರೀವೋ ಭವದ್ಭ್ಯಾಂ ಸಹಿತಃ ಪುರೀಂ ।
ಗಮಿಷ್ಯೇ ರಕ್ಷಸಾಂ ದೇವಂ ದ್ರಷ್ಟುಂ ತತ್ರ ವಿಭೀಷಣಂ ॥ ೫೪ ॥

ಸುಗ್ರೀವೇಣೈವಮುಕ್ತೇ ತು ಗಚ್ಛಸ್ವೇತ್ಯಾಹ ರಾಘವಃ ।
ಸುಗ್ರೀವೋ ರಾಘವೌ ತೌ ಚ ಪುಷ್ಪಕೇ ತು ಸ್ಥಿತಾಸ್ತ್ರಯಃ ॥ ೫೫ ॥

---

ಯನ್ನು ನೋಡಿ ಮಾತುಬಲ್ಲವರಲ್ಲಿ ಮೊದಲನೆಯವನಾದ ರಾಮನು ಅವಳಿಗೆ ಇಂತೆಂದನು.

೫೧. ಎಲೈ ವಿಶಾಲಾಕ್ಷಿಯೆ ! ನೀನು ಅಳಬೇಡ ಕಾಲವನ್ನು ಮೀರಲಾಗುವುದಿಲ್ಲ ಈ ಚರಾಚರವಾದ ಪ್ರಪಂಚವು ಕಾಲಕ್ಕೆ ಅಧೀನವಾದುದೆಂದು ತಿಳಿ, ಎಂದು ಹೇಳಿ ಅವಳನ್ನು ಕಳುಹಿಸಿದನು. ಇತ್ತ ಸುಗ್ರೀವನು ರಾಮನ ಎದುರಿಗೆ ಬಂದನು

೫೨. ಸುಗ್ರೀವನು ಹೇಳಿದನು— ರಾಜರಾದ ನೀವಿಬ್ಬರೂ ಇಲ್ಲಿಗೇಕೆ ಬಂದಿರಿ ? ಆ ಕೆಲಸವನ್ನು ಹೇಳಿರಿ. ನಾನು ನಿಮಗೆ ಈಗಲೇ ಮಾಡಿಕೊಡುತ್ತೇನೆ.

೫೩. ಸುಗ್ರೀವನು ಹೀಗೆನ್ನುತ್ತಿರಲು ರಾಮನಿಂದ ಸಂಜ್ಞೆಮಾಡಲ್ಪಟ್ಟ ಭರತನು ರಾಮನು ಲಂಕೆಗೆ ಪ್ರಯಾಣಮಾಡುವುದನ್ನು ತಿಳಿಸಿದನು.

೫೪. ಸುಗ್ರೀವನು ಅವರಿಬ್ಬರನ್ನೂ ಕುರಿತು ರಾಕ್ಷಸೇಂದ್ರನಾದ ವಿಭೀಷಣನನ್ನು ನೋಡಲು ನಾನು ನಿಮ್ಮ ಜೊತೆಯಲ್ಲಿ ಬರುತ್ತೇನೆ. ಎಂದನು.

ತಾವತ್ಪ್ರಾಪ್ತಂ ವಿಮಾನಂ ತು ಸಮುದ್ರಸ್ಯೋತ್ತರಂ ತಟಂ ।
ಅಬ್ರವೀದ್ಭರತಂ ರಾಮೋ ಹ್ಯತ್ರ ಮೇ ರಾಕ್ಷಸೇಶ್ವರಃ ॥ ೫೫ ॥

ಚತುರ್ಭಿಃ ಸಚಿವೈಃ ಸಾರ್ಧಂ ಜೀವಿತಾರ್ಥೇ ವಿಭೀಷಣಃ ।
ಪ್ರಾಪ್ತಸ್ತತೋ ಲಕ್ಷ್ಮಣೇನ ಲಂಕಾರಾಜ್ಯೇಽಭಿಷೇಚಿತಃ ॥ ೫೬ ॥

ಅತ್ರ ಚಾಹಂ ಸಮುದ್ರಸ್ಯ ಪರೇ ಪಾರೇ ಸ್ಥಿತಸ್ತ್ರ್ಯಹಂ ।
ದರ್ಶನಂ ದಾಸ್ಯತೇ ಮಹ್ಯಂ ಜ್ಞಾತಿಕಾರ್ಯಂ ಕರಿಷ್ಯತಿ ॥ ೫೭ ॥

ತಾವನ್ನ ದರ್ಶನಂ ಮಹ್ಯಂ ದತ್ತವಾನ್ ಮೇತೇನ ಶತ್ರುಹನ್ ।
ತತ್ರ ಕೋಪಃ ಸಮುದ್ಭೂತಶ್ಚತುರ್ಥೇಽಹನಿ ರಾಘವ ॥ ೫೮ ॥

ಧನುರಾನಮ್ಯ ವೇಗೇನ ಅಸ್ತ್ರಂ ದಿವ್ಯಂ ಕರೇ ಧೃತಂ ।
ದೃಷ್ಟ್ವಾ ಮಾಂ ಶರಣಾನ್ವೇಷೀ ಭೀತೋ ಲಕ್ಷ್ಮಣಮಾಶ್ರಿತಃ ॥ ೫೯ ॥

ಸುಗ್ರೀವೇಣಾನುನೀತೋಽಸ್ಮಿ ಕ್ಷಮ್ಯತಾಂ ರಾಘವ ತ್ವಯಾ ।
ತತೋ ಮಯಾ ಶರಃ ಕ್ಷಿಪ್ತೋ ಮರುದೇಶೋ ಮಯಾ ಕೃತಃ ॥ ೬೦ ॥

---

ಸುಗ್ರೀವನು ಹೀಗೆನ್ನಲು, ರಾಮನು ಹೊರಡು, ಎಂದನು. ರಾಮ, ಭರತ, ಸುಗ್ರೀವರು, ಪುಷ್ಪಕದಲ್ಲಿ ಕುಳಿತರು.

೫೫-೫೮. ಪುಷ್ಪಕವು ಹೊರಟು ಸಮುದ್ರದ ಉತ್ತರದಡಕ್ಕೆ ಬಂದಿತು. ಆಗ ರಾಮನು ಭರತನನ್ನು ಕುರಿತು, ಇಂತೆಂದನು. ಇಲ್ಲಿ ರಾಕ್ಷಸೇಶ್ವರನಾದ ವಿಭೀಷಣನು ನಾಲ್ಕುಜನ ಮಂತ್ರಿಗಳೊಡನೆ ಪ್ರಾಣಯಾಚನೆಗೆ ಬಂದನು. ನಾನು ಇಲ್ಲಿ ಆತನನ್ನು ಲಂಕಾರಾಜ್ಯದಲ್ಲಿ ಅಭಿಷೇಕಮಾಡಿಸಿದೆನು. ಇಲ್ಲಿ ಸಮುದ್ರದಡದಲ್ಲಿ ಮೂರು ದಿನಗಳಿದ್ದೆನು. ಸಮುದ್ರರಾಜನು ನನಗೆ ದರ್ಶನವನ್ನು ಕೊಡುವನು. ಜ್ಞಾತಿಯಾದ ದೇವತೆಗಳ ಕಾರ್ಯಕ್ಕೆ ನೆರವಾಗುವನು, ಎಂದಿದ್ದೆನು ಮೂರು ದಿನವಾದರೂ ದರ್ಶನವನ್ನು ಕೊಡಲೇ ಇಲ್ಲ. ನಾಲ್ಕನೇ ದಿನ ನನಗೆ ಕೋಪಬಂದಿತು.

೫೯. ಆಗ ನಾನು ಧನುಸ್ಸನ್ನು ಬಗ್ಗಿಸಿಕೊಂಡು ಕೈಯ್ಯಲ್ಲಿ ಹಿಡಿದು ನಿಂತಿರಲು ನನ್ನನ್ನು ನೋಡಿ ಹೆದರಿ ಶರಣಾರ್ಥಿಯಾಗಿ ಸಮುದ್ರರಾಜನು ಲಕ್ಷ್ಮಣನನ್ನು ಮರೆಹೊಕ್ಕನು.

೬೦. ಸುಗ್ರೀವನೂ ಸಹ ಎಲೈ ರಾಘವನೇ! ಕ್ಷಮಿಸು. ಎಂದು ಕೇಳಿಕೊಳ್ಳಲು ಆಗ ನಾನು ಆ ಬಾಣವನ್ನು ಒಂದು ಕಡೆಗೆ ಬಿಡಲು ಅದು ಮರುದೇಶವಾಯಿತು.

ಉಕ್ತೋಽಹಂ ಸೇತುಬಂಧೇನ ಲಂಕಾಂ ತ್ವಂ ವ್ರಜ ರಾಘವ ।
ಲಂಘಯಿತ್ವಾ ನರವ್ಯಾಘ್ರ ವಾರಿಪೂರ್ಣಂ ಮಹೋದಧಿಂ ॥ ೬೧ ॥

ಏಷ ಸೇತುರ್ಮಹಾನ್ ಬದ್ಧೋ ಸಮುದ್ರೇ ವರುಣಾಲಯೇ ।
ತ್ರಿಭಿರ್ದಿನೈಃ ಸಮಾಪ್ತಿಂ ವೈ ನೀತೋ ವಾನರಸತ್ತಮೈಃ ॥ ೬೨ ॥

ಚತುರ್ದಶ ಯೋಜನಾನಿ ಪ್ರಥಮೇ ದಿವಸೇ ಕೃತಃ ।
ದ್ವಿತೀಯೇಽಹ್ನಿ ತು ಷಟ್‌ತ್ರಿಂಶತ್ತೃತೀಯೇ ಚ ಶತಂ ತಥಾ ॥ ೬೩ ॥

ಇಯಂ ಸಾ ದೃಶ್ಯತೇ ಲಂಕಾ ಸ್ವರ್ಣಪ್ರಾಕಾರತೋರಣಾ ।
ಅವರೋಧೋ ಮಹಾಸ್ತತ್ರ ಕೃತೋ ವಾನರಸತ್ತಮೈಃ ॥ ೬೪ ॥

ಅತ್ರ ಯುದ್ಧ ಮಹದ್ವೃತ್ತಂ ಚೈತ್ರೇ ಶುಕ್ಲತ್ರಯೋದಶೀಂ ।
ಅಷ್ಟಚತ್ವಾರಿಂಶದ್ದಿನಂ ಯತ್ರಾಸೌ ರಾವಣೋ ಹತಃ ॥ ೬೫ ॥

ಅತ್ರ ಪ್ರಹತೋ ನೀಲೇನ ಹತೋ ರಾಕ್ಷಸಪುಂಗವಃ ।
ಹನೂಮತಾ ವೈ ಧೂಮ್ರಾಕ್ಷಸ್ತತ್ರೈವ ವಿನಿಪಾತಿತಃ ॥ ೬೬ ॥

---

೬೧. ಆಗ ಆ ಸಮುದ್ರರಾಜನು ಸೇತುವೆಯನ್ನು ಕಟ್ಟಿಕೊಂಡು ಈ ತುಂಬಿದ ಸಮುದ್ರವನ್ನು ದಾಟಿ ಲಂಕೆಗೆ ಹೋಗೆಂದನು.

೬೨. ಸಮುದ್ರದಲ್ಲಿ ಆಗ ಈ ದೊಡ್ಡ ಸೇತುವೆಯನ್ನು ಕಟ್ಟಿದೆನು. ಈ ಸೇತುವೆಯನ್ನು ಕಪಿಗಳು ಮೂರು ದಿನಗಳಲ್ಲಿ ಕಟ್ಟಿ ಮುಗಿಸಿದವು.

೬೩. ಮೊದಲನೇ ದಿನದಲ್ಲಿ ಹದಿನಾಲ್ಕು ಯೋಜನ, ಎರಡನೇ ದಿನದಲ್ಲಿ ಮೂವತ್ತಾರು ಯೋಜನ, ಮೂರನೇ ದಿನದಲ್ಲಿ ನೂರು ಯೋಜನ ಈ ರೀತಿಯಾಗಿ ಈ ಸೇತುವೆಯನ್ನು ಕಟ್ಟಿದರು.

೬೪. ಸುತ್ತಲೂ ಕೋಟೆಗಳಿಂದ ಆವರಿಸಲ್ಪಟ್ಟ ಹೆಬ್ಬಾಗಲುಳ್ಳ ಈ ಲಂಕೆಯು ಕಾಣುತ್ತದೆ ಇದನ್ನೇ ಕಪಿ ಪುಂಗರು ಅಲ್ಲಿ ಮುತ್ತಿಗೆ ಹಾಕಿದರು

೬೫. ಚೈತ್ರ ಶುಕ್ಲ ತ್ರಯೋದಶಿಯ ದಿನ ಮಹಾಯುದ್ಧವು ನಡೆಯಲು ಮೊದಲಾಯಿತು. ನಾಲ್ವತ್ತೆಂಟು ದಿನ ಯುದ್ಧವು ನಡೆದು ರಾವಣನು ಕೊಲ್ಲಲ್ಪಟ್ಟನು.

೬೬–೬೮. ಇಲ್ಲಿ ನೀಲನು ರಾಕ್ಷಸಶ್ರೇಷ್ಠರನ್ನು ಕೊಂದನು ಹನುಮಂತನು ಧೂಮ್ರಾಕ್ಷನನ್ನು ಕೊಂದನು. ಸುಗ್ರೀವನು ಮಹೋದರ, ಅತಿಕಾಯರನ್ನು

ಮಹೋದರಾತಿಕಾಯೌ ಚ ಸುಗ್ರೀವೇಣ ಮಹಾತ್ಮನಾ ।
ಹತೋ ಮಯಾ ಕುಂಭಕರ್ಣೋ ಲಕ್ಷ್ಮಣೇನೇಂದ್ರಜಿತ್ತಥಾ ॥ ೬೭ ॥

ಮಯಾ ಚಾತ್ರ ದಶಗ್ರೀವೋ ಹತೋ ರಾಕ್ಷಸಪುಂಗವಃ ।
ಅತ್ರ ಸಂಭಾಷಿತುಂ ಪ್ರಾಪ್ತೋ ಬ್ರಹ್ಮಾ ಲೋಕಪಿತಾಮಹಃ ॥ ೬೮ ॥

ಪಾರ್ವತ್ಯಾ ಸಹಿತೋ ದೇವಃ ಶೂಲಪಾಣಿರ್ವೃಷಧ್ವಜಃ ।
ಇಂದ್ರಾದ್ಯಾಃ ಸುರಗಣಾಃ ಸರ್ವೇ ಗಂಧರ್ವಾಶ್ಚ ಸರಾಕ್ಷಸಾಃ ॥ ೬೯ ॥

ಪಿತಾ ಮೇಽತ್ರ ಸಮಾಯಾತೋ ಮಹಾರಾಜಸ್ತ್ರಿವಿಷ್ಟಪಾತ್ ।
ವೃತಶ್ಚಾಪ್ಸರಸಾಂ ಸಂಘೈರ್ವಿದ್ಯಾಧರಗಣೈಸ್ತಥಾ ॥ ೭೦ ॥

ತೇಷಾಂ ಸಮಕ್ಷಂ ಸರ್ವೇಷಾಂ ಜಾನಕೀಶುದ್ಧಿಮಿಚ್ಛತಾಂ ।
ಅತ್ರ ಸೀತಾ ಹವ್ಯವಾಹಂ ಪ್ರವಿಷ್ಟಾ ಶುದ್ಧಿಮಾಗತಾ ॥ ೭೧ ॥

ಲಂಕಾಧಿಪೈಃ ಸುರೈರ್ದೃಷ್ಟಾ ಗೃಹೀತಾ ಪಿತೃಶಾಸನಾತ್ ।
ಅಥಾಪೃಚ್ಛ್ಯೋಽಥ ರಾಜ್ಞಾಹಮಯೋಧ್ಯಾಂ ಗಚ್ಛ ಪುತ್ರಕ ॥ ೭೨ ॥

---

ಕೊಂದನು. ನಾನು ಕುಂಭಕರ್ಣನನ್ನೂ ಲಕ್ಷ್ಮಣನು ಇಂದ್ರಜಿತುವನ್ನೂ ಕೊಂದೆವು ಇಲ್ಲಿ ನಾನು ರಾಕ್ಷಸರಾಜನಾದ ದಶಗ್ರೀವನನ್ನು ಕೊಂದೆನು. ಇಲ್ಲಿ ಬ್ರಹ್ಮನು ನನ್ನೊಡನೆ ಮಾತನಾಡಲು ಬಂದನು.

೬೯–೭೧. ಶಿವನು ಪಾರ್ವತಿಯೊಡನೆ ಇಲ್ಲಿ ಬಂದನು. ಇಂದ್ರಾದಿದೇವತೆಗಳು, ಗಂಧರ್ವರು, ರಾಕ್ಷಸರು, ಇಲ್ಲಿ ಬಂದಿದ್ದರು. ಅಪ್ಸರರೊಡನೆಯೂ, ವಿದ್ಯಾಧರರೊಡನೆಯೂ ಕೂಡಿ ಮಹಾರಾಜನಾದ ನನ್ನ ತಂದೆಯು ಸ್ವರ್ಗದಿಂದ ಇಲ್ಲಿ ಬಂದಿದ್ದನು. ಅವರೆಲ್ಲರೆದುರಿಗೂ ಜಾನಕಿ ಪಾರಿಶುದ್ಧ್ಯವನ್ನಪೇಕ್ಷಿಸಲು ಸೀತೆಯು ಇಲ್ಲಿ ಅಗ್ನಿಯನ್ನು ಪ್ರವೇಶಿಸಿದಳು. ಶುದ್ಧಳೂ ಆದಳು.

೭೨-೭೩. ದೇವತೆಗಳೂ, ಲಂಕೆಯ ಪ್ರಜೆಗಳೂ, ಎಲ್ಲರೂ ನೋಡಿದರು. ತಂದೆಯ ಅಪ್ಪಣೆಯಂತೆ ಆಕೆಯನ್ನು ಪರಿಗ್ರಹಿಸಿದೆನು. ಅನಂತರ ತಂದೆಯು ಎಲೈ ರಾಮನೆ! ಅಯೋಧ್ಯೆಗೆ ಹೋಗು. ನಿನ್ನನ್ನು ಬಿಟ್ಟಿರುವ ನನಗೆ ಸ್ವರ್ಗವೂ ಹಿತವಿಲ್ಲ.

ನ ಮೇ ಸ್ವರ್ಗೋ ಬಹುಮತಸ್ತ್ವಯಾ ಹೀನಸ್ಯ ರಾಘವ ।
ತಾರಿತೋಽಹಂ ತ್ವಯಾ ಪುತ್ರ ಪ್ರಾಪ್ಸ್ಯಾಮೀಂದ್ರಸಲೋಕತಾಂ ॥ ೭೩ ॥

ಲಕ್ಷ್ಮಣಂ ಚಾಬ್ರವೀದ್ರಾಜಾ ಪುಣ್ಯಂ ಪುತ್ರ ತ್ವಯಾರ್ಜಿತಂ ।
ಭ್ರಾತಾ ಸಮ್ಯಗನುಧ್ಯಾತೋ ಲೋಕಾನ್ ಪ್ರಾಪ್ಸ್ಯಸಿ ಚೋತ್ತಮಾನ್ ॥ ೭೪ ॥

ಆಹೂಯ ಜಾನಕೀಂ ರಾಜಾ ವಾಕ್ಯಂ ಚೇದಮುಥಾಬ್ರವೀತ್ ।
ನ ಚ ಮನ್ಯುಸ್ತ್ವಯಾ ಕಾರ್ಯೋ ಭರ್ತಾರಂ ಪ್ರತಿ ಸುವ್ರತೇ ॥ ೭೫ ॥

ಖ್ಯಾತಿರ್ಭವಿಷ್ಯತ್ಯೇವಾಗ್ರ್ಯಾ ಭರ್ತುಸ್ತೇ ಶುಭಲೋಚನೇ ।
ಏವಂ ಬ್ರುವತಿ ರಾಮೇ ತು ಪುಷ್ಪಕೇ ಚ ವ್ಯವಸ್ಥಿತೇ ॥ ೭೬ ॥

ತತ್ರ ಯೇ ರಾಕ್ಷಸವರಾಸ್ತೇ ಗತ್ವಾಶು ವಿಭೀಷಣಂ ।
ಶೀಘ್ರಮಾವೇದಯಾಮಾಸುರ್ಹೃಷ್ಟಾ ರಾಕ್ಷಸ ಪುಂಗವೇ ॥ ೭೭ ॥

ಪ್ರಾಪ್ತೋ ರಾಮಃ ಸಸುಗ್ರೀವೋ ನರಶ್ಚಾನ್ಯಸ್ತಥಾವಿಧಃ ।
ವಿಭೀಷಣಶ್ಚ ತಚ್ಛ್ರುತ್ವಾ ರಾಮಾಗಮನಮಂತಿಕೇ ॥ ೭೮ ॥

---

ನೀನು ನನ್ನನ್ನು ಉದ್ಧಾರಮಾಡಿದೆ. ಈಗ ನಾನು ಇಂದ್ರನ ಜಾಗಕ್ಕೆ ಹೋಗಿ ಅವನಿಗೆ ಸಮಾನನಾಗಿರುತ್ತೇನೆ.

೭೪. ರಾಜನು ಲಕ್ಷ್ಮಣನನ್ನು ಕುರಿತು, ಎಲೈ ಪುತ್ರನೇ! ನೀನು ಪುಣ್ಯವನ್ನು ಸಂಪಾದಿಸಿದೆ. ಭ್ರಾತೃಸೇವೆಯನ್ನು ಸರಿಯಾಗಿ ಮಾಡಿದ್ದೀಯೆ. ಉತ್ತಮ ಲೋಕಗಳನ್ನು ಹೊಂದುತ್ತೀಯೆ.

೭೫. ರಾಜನು ಜಾನಕಿಯನ್ನು ಕರೆದು ಅಮ್ಮಾ! ನೀನು ಗಂಡನ ಮೇಲೆ ಕೋಪಿಸಿಕೊಳ್ಳಬೇಡ. ಇದರಿಂದ ನಿನಗೂ ನಿನ್ನ ಗಂಡನಿಗೂ ಉತ್ತಮವಾದ ಖ್ಯಾತಿ (ಕೀರ್ತಿ)ಯು ಬರುತ್ತದೆ.

೭೬-೭೭. ರಾಮನು ಹೀಗೆ ಹೇಳುತ್ತಿರಲು ಪುಷ್ಪಕವು ಲಂಕೆಗೆ ಬಂದಿತು. ಅಲ್ಲಿದ್ದ ರಾಕ್ಷಸರು ಜಾಗ್ರತೆಯಾಗಿ ವಿಭೀಷನಬಳಿಗೆ ಹೋಗಿ ಸಂತೋಷದಿಂದಿಂತೆಂದರು.

೭೮-೮೦. ರಾಮನೂ, ಸುಗ್ರೀವನೂ ರಾಮನಂತಿರುವ ಮತ್ತೊಬ್ಬನೂ ಬಂದಿದ್ದಾರೆ. ಎನ್ನಲು ವಿಭೀಷಣನು ಆ ಚಾರರನ್ನು ಗೌರವಿಸಿ ಅವರಿಗೆ ಬೇಕಾದುದನ್ನು

ಚಾರಾಂಸ್ತಾನ್ ಪೂಜಯಾಮಾಸ ಸರ್ವಕಾಮಧನಾಗಮೈಃ ।
ಅಲಂಕೃತ್ಯ ಪುರೀಂ ತಾಂ ತು ನಿಷ್ಕ್ರಾಂತಃ ಸಚಿವೈಃ ಸಹ ॥ ೭೯ ॥

ದೃಷ್ಟ್ವಾ ರಾಮಂ ವಿಮಾನಸ್ಥಂ ಮೇರಾವಿವ ದಿವಾಕರಂ ।
ಅಷ್ಟಾಂಗಪ್ರಣಿಪಾತೇನ ನತ್ವಾ ರಾಘವಮಬ್ರವೀತ್ ॥ ೮೦ ॥

ಅದ್ಯ ಮೇ ಸಫಲಂ ಜನ್ಮ ಪ್ರಾಪ್ತಾಃ ಸರ್ವೇ ಮನೋರಥಾಃ ।
ಯದ್ದೃಷ್ಟೌ ದೇವಚರಣೌ ಜಗದ್ವಂದ್ಯೌ ಚ ವಂದಿತೌ ॥ ೮೧ ॥

ಕೃತಶ್ಲಾಘೋ ಹಿ ಭಗವಾನ್ ಶಕ್ರಾದೀನಾಂ ದಿವೌಕಸಾಂ ।
ಆತ್ಮಾನಮಧಿಕಂ ಮನ್ಯೇ ತ್ರಿದಶೇಶಾತ್ಪುರಂದರಾತ್ ॥ ೮೨ ॥

ದೇವಸ್ಯ ದರ್ಶನಾತ್ತಸ್ಯ ಸ್ಪೃಹಣೀಯೋ ದಿವೌಕಸಾಂ ।
ಅಭಿವಂದ್ಯ ಸ ರಾಮಂ ತು ಆಲಿಂಗ್ಯ ಭರತಂ ಹರಿಂ ॥ ೮೩ ॥

ಲಂಕಾಂ ಪ್ರವೇಶಯಾಮಾಸ ವಿಶಿಷ್ಟಾಯಾಂ ತ್ರಿವಿಷ್ಟಪಾತ್ ।
ರಾವಣಸ್ಯ ಗೃಹೇ ದೀಪ್ತೇ ಸರ್ವರತ್ನೋಪಶೋಭಿತೇ ॥ ೮೪ ॥

---

ಕೊಟ್ಟನು. ಪಟ್ಟಣವೆಲ್ಲವನ್ನೂ ಅಲಂಕರಿಸಿ ಮಂತ್ರಿಗಳೊಡನೆ ಹೊರಟನು. ಮೇರು ಪರ್ವತದ ಮೇಲಿರುವ ಸೂರ್ಯನಂತೆ ಪುಷ್ಪಕದಲ್ಲಿ ಪ್ರಕಾಶಿಸುತ್ತಿರುವ ರಾಮನನ್ನು ನೋಡಿ ಸಾಷ್ಟಾಂಗವಾಗಿ ನಮಸ್ಕರಿಸಿ ರಾಮನನ್ನು ಕುರಿತು ಇಂತೆಂದನು.

೮೧-೮೫. ಈಗ ನನ್ನ ಜನ್ಮವು ಸಫಲವಾಯಿತು. ನನ್ನ ಇಷ್ಟಾರ್ಥಗಳೆಲ್ಲವೂ ಕೈಗೂಡಿದವು. ಎಲೈ ಸ್ವಾಮಿಯೇ ! ಪ್ರಪಂಚವೇ ನಮಸ್ಕರಿಸುತ್ತಿರುವ ನಿನ್ನ ಪಾದಗಳನ್ನು ದರುಶನ ಮಾಡಿದೆನು. ಇಂದ್ರ ಮೊದಲಾದವರೆಲ್ಲರೂ ನಿನ್ನನ್ನು ಹೊಗಳುವರು. ನಿನ್ನ ದರ್ಶನವನ್ನು ಮಾಡಿದುದರಿಂದ ನಾನು ನನ್ನನ್ನು ಇಂದ್ರನಿಗಿಂತಲೂ ಅಧಿಕನನ್ನಾಗಿ ತಿಳಿದುಕೊಂಡಿದ್ದೇನೆ. ನಾನು ನಿನ್ನ ದರ್ಶನವನ್ನು ಮಾಡಿದುದರಿಂದ ದೇವತೆಗಳು ಗೌರವಿಸುವಂತಾದೆನು. ಹೀಗೆಂದು ಹೇಳುತ್ತಾ ರಾಮನನ್ನು ನಮಸ್ಕರಿಸಿ ಭರತನನ್ನೂ, ಸುಗ್ರೀವನನ್ನೂ ಆಲಂಗಿಸಿಕೊಂಡನು. ಅನಂತರ ಸ್ವರ್ಗಕ್ಕಿಂತಲೂ ಮೇಲಾಗಿರುವ ಲಂಕೆಗೆ ಕರೆದುಕೊಂಡು ಹೋದನು ಎಲ್ಲಾ ರತ್ನಗಳಿಂದಲೂ ಪ್ರಕಾಶಿಸುತ್ತಿರುವ ರಾವಣನ ಮನೆಯಲ್ಲಿ ರಾಮನು ಕುಳಿತುಕೊಳ್ಳಲು ವಿಭೀಷಣನು ಅರ್ಘ್ಯ

ಉಪವಿಷ್ಟೇ ತು ಕಾಕುತ್‌ಸ್ಥೇ ಅರ್ಘ್ಯಂ ದತ್ವಾ ವಿಭೀಷಣಃ ।
ಉವಾಚ ಪ್ರಾಂಜಲಿರ್ಭೂತ್ವಾ ಸುಗ್ರೀವಂ ಭರತಂ ತಥಾ ॥ ೮೫ ॥

ಇಹಾಗತಸ್ಯ ರಾಮಸ್ಯ ಯದ್ದಾಸ್ಯೇ ನ ತದಸ್ತಿ ಮೇ ।
ಇಯಂ ಚ ಲಂಕಾ ರಾಮೇಣ ರಿಪುಂ ತ್ರೈಲೋಕ್ಯಕಂಟಕಂ ॥ ೮೬ ॥

ಜಿತ್ವಾ ತಂ ಪಾಪಕರ್ಮಾಣಂ ದತ್ತಾ ಪೂರ್ವಂ ಪುರೀ ಮಮ ।
ಇಯಂ ಪುರೀ ಇಮೇ ದಾರಾ ಅಮೀ ಪುತ್ರಾಸ್ತಥಾ ಹ್ಯಹಂ ॥ ೮೭ ॥

ಸರ್ವಮೇತಂ ಮಯಾದತ್ತಂ ಪ್ರತಿಗ್ರಾಹ್ಯಂ ನಮೋಽಸ್ತು ತೇ ।
ಪ್ರಕೃಯಸ್ತತಃ ಸರ್ವಾ ಲಂಕಾವಾಸೀಜನಸ್ತಥಾ ॥ ೮೮ ॥

ಆಜಗ್ಮೂ ರಾಘವಂ ದ್ರಷ್ಟುಂ ಕೌತೂಹಲಸಮನ್ವಿತಾಃ ।
ಉಕ್ತೋ ವಿಭೀಷಣಸ್ತೈಸ್ತು ರಾಮಂ ದರ್ಶಯ ನಃ ಪ್ರಭೋ ॥ ೮೯ ॥

ವಿಭೀಷಣೇನ ಕಥಿತಾ ರಾಘವಾಯ ಮಹಾತ್ಮನೇ ।
ತೇಷಾಮುಪಾಯನಂ ಸರ್ವಂ ಭರತೋ ರಾಮಚೋದಿತಃ ॥ ೯೦ ॥

---

ಪಾದ್ಯಗಳನ್ನು ಕೊಟ್ಟು ಕೈಮುಗಿದುಕೊಂಡು ರಾಮನಿಗೂ, ಸುಗ್ರೀವನಿಗೂ, ಭರತನಿಗೂ ಇಂತೆಂದನು.

೮೬–೯೩. ಈ ರಾಮನು ಮೂರು ಲೋಕಕ್ಕೂ ಕಂಟಕನೂ ಪಾಪಿಯೂ ಶತ್ರುವೂ ಆದ ರಾವಣನನ್ನು ಕೊಂದು ಈ ಲಂಕೆಯನ್ನು ನನಗೆ ಕೊಟ್ಟಿರುವನ. ಅಂತಹ ರಾಮನು ಇಲ್ಲಿ ಬಂದಿರುವಾಗ ಅವನಿಗೆ ಕೊಡಲು ಯೋಗ್ಯವಾದ ಯಾವ ಪದಾರ್ಥವೂ ನನ್ನಲ್ಲಿಲ್ಲ. ಈ ಪಟ್ಟಣ, ಈ ಹೆಂಡಿರು, ಈ ಮಕ್ಕಳು, ಈ ನಾನು ಎಲ್ಲವನ್ನೂ ಎಲೈ ರಾಮನೇ! ನಿನಗೆ ಒಪ್ಪಿಸಿದ್ದೇನೆ. ತೆಗೆದುಕೋ. ನಿನಗೆ ನಮಸ್ಕಾರವು. ಆಮೇಲೆ ಸುತ್ತುಮುತ್ತಿನ ಜನರೂ ಲಂಕೆಯ ನಿವಾಸಿಗಳೂ ಆಸೆಯಿಂದ ಕೂಡಿ ರಾಮನನ್ನು ನೋಡಲು ಬಂದರು. ಆ ಜನರೆಲ್ಲರೂ ವಿಭೀಷಣನನ್ನು ಕುರಿತು ನಮಗೆ ರಾಮನ ದರ್ಶನ ಮಾಡಿಸೆಂದರು. ವಿಭೀಷಣನು ರಾಮನಿಗೆ ಈ ವಿಷಯವನ್ನು ಹೇಳಲು ರಾಮನು ಒಪ್ಪಿಕೊಂಡು ದರ್ಶನವನ್ನು ಕೊಟ್ಟನು. ರಾಮನಿಂದ ಸಂಜ್ಞೆ

ಜಗ್ರಾಹ ರಾಕ್ಷಸೇಂದ್ರಾಣಾಂ ಧನರತ್ನೌಘಸಂಚಯಾನ್ ।
ಏವಂ ತತ್ರ ತ್ರ್ಯಹ್ಯಂ ರಾಮೋ ಹ್ಯವಸದ್ರಾಕ್ಷಸಾಲಯೇ ॥ ೯೧ ॥

ಚತುರ್ಥೇಽಹನಿ ಸಂಪ್ರಾಪ್ತೇ ರಾಮೇ ಚಾಪಿ ಸಭಾಸ್ಥಿತೇ ।
ಕೈಕಸೀ ಪುತ್ರಮಾಹೇದಂ ರಾಮಂ ದ್ರಕ್ಷ್ಯಾಮಿ ಪುತ್ರಕ ॥ ೯೨ ॥

ವಧೂಭಿಃ ಸಹಿತಾ ಗತ್ವಾ ತ್ವಂ ವಿಜ್ಞಾಪಯ ಪುತ್ರಕ ।
ದೃಷ್ಟೇ ತಸ್ಮಿನ್ ಮಹಾಪುಣ್ಯಂ ಪ್ರಾಪ್ಯತೇ ಮುನಿಸತ್ತಮೈಃ ॥ ೯೩ ॥

ವಿಷ್ಣುರೇಷ ಮಹಾಭಾಗಶ್ಚತುರ್ಮೂರ್ತಿಃ ಸನಾತನಃ ।
ಸೀತಾ ಲಕ್ಷ್ಮೀರ್ಮಹಾಭಾಗಾ ನ ಬುದ್ಧಾ ಸಾಗ್ರಜೇನ ತೇ ॥ ೯೪ ॥

ಪಿತ್ರಾ ತೇ ಪೂರ್ವಮಾಖ್ಯಾತಂ ದೇವಾನಾಂ ಸಂನಿಧೌ ಗತೇ ।
ಕುಲೇ ರಘೂಣಾಂ ವೈ ವಿಷ್ಣುಃ ಪುತ್ರೋ ದಶರಥಸ್ಯ ತು ॥ ೯೫ ॥

ಭವಿಷ್ಯತಿ ವಿನಾಶಾಯ ದಶಗ್ರೀವಸ್ಯ ರಾಘವಃ ॥ ೯೬ ॥

---

ಮಾಡಲ್ಪಟ್ಟ ಭರತನು ಆ ರಾಕ್ಷಸರ ಧನ, ರತ್ನ ರೂಪವಾದ ಕಾಣಿಕೆಗಳನ್ನು ತೆಗೆದು ಕೊಂಡನು. ಈ ರೀತಿ ರಾಮನು ಮೂರು ದಿನಗಳು ಆ ರಾಕ್ಷಸನ ಮನೆಯಲ್ಲಿದ್ದನು. ನಾಲ್ಕನೆಯ ದಿನದಲ್ಲಿ ರಾಮನು ಸಭೆಯಲ್ಲಿರಲು ವಿಭೀಷಣನ ತಾಯಿಯಾದ ಕೈಕ ಸೆಯು ರಾಮನನ್ನು ನಾನು ನನ್ನ ಸೊಸೆಯರೊಡನೆ ನೋಡಬೇಕು. ವಿಜ್ಞಾಪಿಸು. ಅವನ ದರ್ಶನವನ್ನು ಮಾಡಿದರೆ ಋಷಿಶ್ರೇಷ್ಠರಿಗೂ ಪುಣ್ಯವು ಬರುತ್ತದೆ.

೯೪. ಇವನೇನೆ ಸಾಕ್ಷಾದ್ವಿಷ್ಣುವು. ನಾಲ್ಕು ಭಾಗವಾಗಿ ಅವತರಿಸಿದ್ದಾನೆ. ಸೀತೆಯೂ ಕೂಡ ಆ ಮಹಾಮಹಿಮಳಾದ ಲಕ್ಷ್ಮಿಯು. ಅದನ್ನು ನಿಮ್ಮ ಅಣ್ಣನು ತಿಳಿದುಕೊಳ್ಳಲಿಲ್ಲ.

೯೫-೯೬. ಒಂದು ಸಾರಿ ನಿನ್ನ ತಂದೆಯು ದೇವತೆಗಳ ಬಳಿಗೆ ಹೋಗಿರಲು ಅಲ್ಲಿ ರಘುಕುಲದಲ್ಲಿ ದಶರಥನಿಗೆ ಮಗನಾಗಿ ವಿಷ್ಣುವು ಹುಟ್ಟುವನು. ಆಗ ಅವನು ದಶಗ್ರೀವನಾದ ರಾವಣನನ್ನು ನಾಶಮಾಡುವನೆಂದು ಹೇಳಿದರೆಂದು ಹೇಳಿದನು

॥ ವಿಭೀಷಣ ಉವಾಚ ॥

ಏವಂ ಕುರುಷ್ವ ವೈ ಮಾತರ್ಗೃಹ್ಯ ಶುಕ್ಲಾಂಬರಂ ನವಂ ।
ಪಾತ್ರೇ ಚ ಚಂದನಂ ಮುಖ್ಯಂ ದಧಿಕ್ಷೌದ್ರಂ ಸಹಾಕ್ಷತೈಃ ॥ ೯೭ ॥

ದೂರ್ವಾಸಸರ್ಷಪೈಃ ಸಾರ್ಧಂ ಕುರು ಪುತ್ರಸ್ಯ ದರ್ಶನಂ ।
ಸರಮಾಮಗ್ರತಃ ಕೃತ್ವಾ ಯಾಶ್ಚಾನ್ಯಾ ದೇವಕನ್ಯಕಾಃ ॥ ೯೮ ॥

ವ್ರಜಸ್ವ ರಾಘವಾಭ್ಯಾಸಂ ತಸ್ಮಾದಗ್ರೇ ವ್ರಜಾಮ್ಯಹಂ ।
ಏತಮುಕ್ತ್ವಾ ಗತೋ ರಕ್ಷೋ ಯತ್ರ ರಾಮೋ ವ್ಯವಸ್ಥಿತಃ ॥ ೯೯ ॥

ಉತ್ಸಾರ್ಯ ಚ ಜನಾನ್ ಸರ್ವಾನ್ ರಾಮಂ ದ್ರಷ್ಟುಂ ಸಮಾಗತಾನ್ ।
ಸಭಾಂ ತಾಂ ವಿಮಲಾಂ ಕೃತ್ವಾ ರಾಮಂ ಚಾಭಿಮುಖಂ ಸ್ಥಿತಃ ॥ ೧೦೦ ॥

ವಿಜ್ಞಾಪ್ಯಂ ಶೃಣು ಮೇ ದೇವ ವದತಶ್ಚ ವಿಶಾಂ ಪತೇ ।
ದಶಗ್ರೀವಂ ಕುಂಭಕರ್ಣಂ ಯಾ ಚ ಮಾಮಪ್ಯಜೀಜನತ್ ॥ ೧೦೧ ॥

ಇಯಂ ಸಾ ದೇವ ಮಾತಾ ನಃ ಪಾದೌ ತೇ ದ್ರಷ್ಟುಮಿಚ್ಛತಿ ।
ತಸ್ಮಾತ್ತ್ವಂ ತು ಕೃಪಾಂ ಕೃತ್ವಾ ದರ್ಶನಂ ದಾತುಮರ್ಹಸಿ ॥ ೧೦೨ ॥

---

೯೭-೧೦೦. ವಿಭೀಷಣನು ಹೇಳಿದನು-ಅಮ್ಮಾ! ಹಾಗೆ ಆಗಲಿ. ಹೊಸದಾದ ಬಿಳಿಯ ಬಟ್ಟೆಯನ್ನು ತೆಗೆದುಕೊಂಡು ಪಾತ್ರದಲ್ಲಿ ಚಂದನವನ್ನೂ ಮೊಸರು, ಜೇನು ಅಕ್ಷತೆ, ಗರಿಕೆ, ಬಿಳಿಯ ಸಾಸುವೆಗಳನ್ನೂ ತೆಗೆದುಕೊಂಡು ಆ ಪುತ್ರಸಮಾನನಾದ ರಾಮನ ದರ್ಶನವನ್ನು ಮಾಡು. ಸರಮೆಯನ್ನು ಮುಂದುಮಾಡಿಕೊಂಡು ರಾಘವನ ಬಳಿಗೆ ಹೋಗು. ನಾನು ಮುಂದೆ ಹೋಗುತ್ತೇನೆ. ಹೀಗೆಂದು ಹೇಳಿ ವಿಭೀಷಣನು ರಾಮನಿದ್ದಲ್ಲಿಗೆ ಬಂದು ರಾಮನನ್ನು ನೋಡಲು ಬಂದಿದ್ದ ಜನರನ್ನು ಕಳುಹಿಸಿ ಸಭೆಯನ್ನು ಶುದ್ಧವನ್ನಾಗಿ ಮಾಡಿ ಆ ರಾಮನ ಎದುರಿಗೆ ನಿಂತನು.

೧೦೧-೧೦೨. ವಿಭೀಷಣನು ಹೇಳಿದನು- ಎಲೈ ಸ್ವಾಮಿಯೇ ! ಒಂದು ವಿಜ್ಞಾಪನೆಯಿದೆ. ಹೇಳುತ್ತಿರುವುದನ್ನು ಲಾಲಿಸು, ದಶಗ್ರೀವ, ಕುಂಭಕರ್ಣ, ಮತ್ತು ನಾನು ಇವರನ್ನು ಹೆತ್ತ ಈ ನಮ್ಮತಾಯಿಯು ತಮ್ಮ ಪಾದಗಳನ್ನು ನೋಡಲು ಇಚ್ಛಿಸುತ್ತಾಳೆ ಆದ್ದರಿಂದ ನೀನು ಕೃಪೆಯಿಟ್ಟು ದರ್ಶನವನ್ನು ಕೊಡು.

॥ ಶ್ರೀರಾಮ ಉವಾಚ ॥

ಅಹಂ ತಸ್ಯಾಃ ಸಮೀಪಂ ತು ಮಾತೃದರ್ಶನಕಾಂಕ್ಷಯಾ ।
ಗಮಿಷ್ಯೇ ರಾಕ್ಷಸೇಂದ್ರ ತ್ವಂ ಶೀಘ್ರಂ ಯಾಹಿ ಮಮಾಗ್ರತಃ ॥ ೧೦೩ ॥

ಪ್ರತಿಜ್ಞಾಯ ತು ತದ್ವಾಕ್ಯಮುತ್ತಸ್ಥೌ ತು ವರಾಸನಾತ್ ।
ಮೂರ್ಧ್ನಿ ಚಾಂಜಲಿಮಾಧಾಯ ಪ್ರಣಾಮಮಕರೋತ್ಪ್ರಭುಃ ॥ ೧೦೪ ॥

ಅಭಿವಾದಯೇಽಹಂ ಭವತೀಂ ಮಾತಾ ಭವಸಿ ಧರ್ಮತಃ ।
ಮಹತಾ ತಪಸಾ ಚಾಪಿ ಪುಣ್ಯೇನ ವಿವಿಧೇನ ಚ ॥ ೧೦೫ ॥

ಇಮೌ ತೇ ಚರಣೌ ದೇವಿ ಮಾನವೋ ಯದಿ ಪಶ್ಯತಿ ।
ಪೂರ್ಣೋಽಸ್ಮಿ ತದಹಂ ಪೂತೋ ದೃಷ್ಟ್ವೇಮೌ ಪುತ್ರವತ್ಸಲೇ ॥ ೧೦೬ ॥

ಕೌಶಲ್ಯಾ ಮೇ ಯಥಾ ಮಾತಾ ಭವತೀ ಚ ತಥಾ ಹ್ಯಸಿ ।
ಕೈಕಸೀ ಚಾಬ್ರವೀದ್ರಾಮಂ ಚಿರಂ ಜೀವ ಜಯಸ್ವ ಚ ॥ ೧೦೭ ॥

---

೧೦೩. ಶ್ರೀರಾಮನು ಹೇಳಿದನು- ಎಲೈ ರಾಕ್ಷಸೇಂದ್ರನೇ! ನಾನು ತಾಯಿಯ ದರ್ಶನದ ಅಪೇಕ್ಷೆಯಿಂದ ಆಕೆಯ ಬಳಿಗೆ ಹೋಗುತ್ತೇನೆ. ನೀನು ನನ್ನೆದುರಿಗೆ ಬೇಗ ಹೊರಡು.

೧೦೪. ಹೀಗೆಂದು ಹೇಳಿ ಸಿಂಹಾಸನದಿಂದೆದ್ದು ತಲೆಯ ಮೇಲೆ ಕೈಮುಗಿದು ಕೊಂಡು ಹೋಗಿ ನಮಸ್ಕರಿಸಿದನು.

೧೦೫-೧೦೬. ನಾನು ನಿನ್ನನ್ನು ನಮಸ್ಕರಿಸುತ್ತೇನೆ ಧರ್ಮದಿಂದ ನೀನು ನನಗೆ ತಾಯಿಯಾಗಿದ್ದೀಯೆ. ಮಹತ್ತಾದ ತಪಸ್ಸಿನಿಂದಲೂ ನಾನಾ ಬಗೆಯಾದ ಪುಣ್ಯದಿಂದಲೂ ಈ ನಿನ್ನ ಪಾದಗಳನ್ನು ಮನುಷ್ಯನು ನೋಡುತ್ತಾನೆ. ಎಲೈ ಪುತ್ರ ವತ್ಸಲೆಯೇ ! ನಾನು ಪರಿಶುದ್ಧನಾಗಿದ್ದೇನೆ. ಧನ್ಯನಾಗಿದ್ದೇನೆ.

೧೦೭-೧೧೧. ಕೌಶಲ್ಯೆಯು ಹೇಗೆ ನನಗೆ ತಾಯಿಯೋ ಹಾಗೆಯೇ ನೀನೂ ನನಗೆ ತಾಯಿಯಾಗಿದ್ದೀಯೆ. ಆಗ ಕೈಕಸೆಯು ರಾಮನನ್ನು ಕುರಿತು ಪುತ್ರನೇ

ಭರ್ತ್ರಾ ಮೇ ಕಥಿತಂ ವೀರ ವಿಷ್ಣುರ್ಮಾನುಷರೂಪಧೃಕ್ ।
ಅವತೀರ್ಣೋ ರಘುಕುಲೇ ಹಿತಾರ್ಥಂ ಚ ದಿವೌಕಸಾಂ ॥ ೧೦೮ ॥

ದಶಗ್ರೀವವಿನಾಶಾಯ ಭೂತಿಂ ದಾತುಂ ವಿಭೀಷಣೇ ।
ವಾಲಿನೋ ನಿಧನಂ ಚೈವ ಸೇತುಬಂಧಂ ತು ಸಾಗರೇ ॥ ೧೦೯ ॥

ದಶರಥಸ್ಯ ವೈ ಪುತ್ರಃ ಕೃತ್ಯಂ ಸರ್ವಂ ಕರಿಷ್ಯತಿ ।
ಇದಾನೀಂ ತ್ವಂ ಮಯಾ ಜ್ಞಾತಃ ಸ್ಮೃತ್ವಾ ತದ್ಭರ್ತೃಭಾಷಿತಂ ॥ ೧೧೦ ॥

ಸೀತಾ ಲಕ್ಷ್ಮೀರ್ಭವಾನ್ ವಿಷ್ಣುರ್ದೇವಾ ವೈ ವಾನರಾಸ್ತಥಾ ।
ಗಮಿಷ್ಯಾಮಿ ಗೃಹಂ ಪುತ್ರ ಸ್ಥಿರಾಂ ಕೀರ್ತಿಮವಾಪ್ನುಹಿ ॥ ೧೧೧ ॥

॥ ಸರಮೋವಾಚ ॥

ಇಹೈವ ವತ್ಸರಂ ಪೂರ್ಣಮಶೋಕವನಿತಾಸ್ಥಿತಾ ।
ಸೇವಿತಾ ಜಾನಕೀ ದೇವೀ ಸುಖಂ ತಿಷ್ಠತಿ ತೇ ಪ್ರಿಯಾ ॥ ೧೧೨ ॥

---

ಚಿರಂಜೀವಿಯಾಗು- ಎಂದು ಹರಸಿದಳು. ಎಲೈ ರಾಮನೆ! ನನ್ನ ಗಂಡನು ನನಗೆ ಹೇಳಿದ್ದನು. ವಿಷ್ಣುವು ಮನುಷ್ಯರೂಪವನ್ನು ಹೊಂದಿ ಅವತರಿಸುತ್ತಾನೆ. ಅವನು ದೇವತೆಗಳಿಗೆ ಹಿತವನ್ನೂ, ದಶಗ್ರೀವನ ನಾಶವನ್ನೂ ಮಾಡಿ ವಿಭೀಷಣನಿಗೆ ಐಶ್ವರ್ಯ ವನ್ನು ಕೊಡುತ್ತಾನೆ, ವಾಲಿಯನ್ನು ಕೊಲ್ಲುತ್ತಾನೆ. ಸಾಗರದಲ್ಲಿ ಸೇತುವೆಯನ್ನು ಕಟ್ಟುತ್ತಾನೆ. ದಶರಥನ ಮಗನಾಗಿ ಹುಟ್ಟಿ ಈ ರೀತಿಯಾದ ಕೆಲಸಗಳೆಲ್ಲವನ್ನು ಮಾಡು ತ್ತಾನೆ. ಆ ನನ್ನ ಗಂಡನ ಮಾತನ್ನು ಸ್ಮರಿಸಿಕೊಂಡು ಈಗ ನಿನ್ನನ್ನು ನಾನು ತಿಳಿದು ಕೊಂಡಿದ್ದೇನೆ. ಸೀತೆಯೇ ಲಕ್ಷ್ಮಿಯು, ನೀನೇ ವಿಷ್ಣುವು, ವಾನರರೆಲ್ಲರೂ ದೇವತೆ ಗಳು, ಅಪ್ಪ! ನಾನು ಮನೆಗೆ ಹೋಗುತ್ತೇನೆ. ಶಾಶ್ವತವಾದ ಕೀರ್ತಿಯನ್ನು ಹೊಂದು.

೧೧೨-೧೧೩. ಸರಮೆಯು ಹೇಳಿದಳು- ಎಲೈ ವತ್ಸನೇ! ಈ ಅಶೋಕವನದ ಲ್ಲಿಯೇ ಪೂರ್ತಿಯಾಗಿ ಸೀತೆಯು ಒಂದು ವರ್ಷ ಕಾಲವಿದ್ದಳು. ಆಗ ಆ ಜಾನಕಿ ಯನ್ನು ಆ ಒಂದು ವರ್ಷಕಾಲವೂ ನಾನು ಸೇವಿಸಿದ್ದೇನೆ. ಆ ಜಾನಕಿಯು ಸುಖವಾ ಗಿದ್ದಾಳೆಯೇ? ಪ್ರತಿದಿನವೂ ಆಕೆಯ ಪಾದಗಳನ್ನು ಜ್ಞಾಪಿಸಿಕೊಳ್ಳುತ್ತಿರುತ್ತೇನೆ ಮತ್ತೆ ಯಾವಾಗ ಆ ದೇವಿಯನ್ನು ನೋಡುವೆನು? ಎಂದು ಯೋಚಿಸುತ್ತಿರುತ್ತೇನೆ

ನಿತ್ಯಂ ಸ್ಮರಾಮಿ ವೈ ಪಾದೌ ಸೀತಾಯಾಸ್ತು ಪರಂತಪ ।
ಕದಾ ದ್ರಕ್ಷ್ಯಾಮಿ ತಾಂ ದೇವೀಂ ಚಿಂತಯಾನಾ ತ್ವಹರ್ನಿಶಂ ॥ ೧೧೩ ॥

ಕಿಮರ್ಥಂ ದೇವದೇವೇನ ನಾನೀತಾ ಜಾನಕೀ ತ್ವಿಹ ।
ಏಕಾಕೀ ನೈವ ಶೋಭಾಂ ತ್ವಂ ಪ್ರಾಪ್ನೋಷಿ ಚ ವಿನಾ ತಯಾ ॥ ೧೧೪ ॥

ಸಮೀಪೇ ಶೋಭತೇ ಸೀತಾ ತ್ವಂ ತು ತಸ್ಯಾಃ ಪರಂತಪ ।
ಏವಂ ಬ್ರುವತೀ ಭರತಃ ಕಾಪ್ಯೇಷಾ ರಾಘವಂ ವಚಃ ॥ ೧೧೫ ॥

ಬ್ರೂತೇ ಚೇಂಗಿತವಿದ್ರಾಮೋ ಭರತಂ ಪ್ರಾಹ ಸತ್ವರಂ ।
ವಿಭೀಷಣಸ್ಯ ಭಾರ್ಯಾ ವೈ ಸರಮಾ ನಾಮ ನಾಮತಃ ॥ ೧೧೬ ॥

ಪ್ರಿಯಾ ಸಖೀ ಮಹಾಭಾಗಾ ಸೀತಾಯಾಃ ಸುಹೃದ್ಧಂ ಮತಾ ।
ಸರ್ವಂ ಕಾಲಕೃತಂ ಪಶ್ಯ ನ ಜಾನೇ ಕಿಂ ಕರಿಷ್ಯತಿ ॥ ೧೧೭ ॥

ಗಚ್ಛ ತ್ವಂ ಸುಭಗೇ ಭರ್ತುರ್ಗೃಹಂ ಪಾಲಯ ಶೋಭನೇ ।
ಮಾಂ ತ್ಯಕ್ತ್ವಾ ಹಿ ಗತಾ ದೇವೀ ಭಾಗ್ಯಹೀನಂ ನಿಧಿರ್ಯಥಾ ॥ ೧೧೮ ॥

---

೧೧೪. ದೇವದೇವನಾದ ನೀನು ಆಕೆಯನ್ನೇಕೆ ಕರೆದುಕೊಂಡು ಬರಲಿಲ್ಲ? ಅವಳು ಜೊತೆಯಲ್ಲಿಲ್ಲದೆ ನೀನು ಪ್ರಕಾಶಮಾನನಾಗುವುದಿಲ್ಲ.

೧೧೫-೧೧೭. ಆ ಸೀತೆಯು ನಿನ್ನ ಸಮೀಪದಲ್ಲಿದ್ದರೆ ನೀನು ಆಕೆಯ ಸಮೀಪದಲ್ಲಿದ್ದರೇನೇ ಶೋಭಿಸುತ್ತೀರಿ. ಎಂದು ಎನ್ನುತ್ತಿರುವಷ್ಟರಲ್ಲಿಯೇ ಭರತನು ಇವಳಾರು? ರಾಮವನ್ನು ಹೀಗೆ ಕೇಳುವವಳಲ್ಲ, ಎಂದು ಆಗ್ರಹಪಟ್ಟು ಕೇಳುವುದರಲ್ಲಿದ್ದನು. ಒಡನೆಯೇ ಆತನ ಮನಸ್ಸಿನ ಅಭಿಪ್ರಾಯವನ್ನು ಬಲ್ಲ ರಾಮನು ಜಾಗ್ರತೆಯಾಗಿ ಇಂತೆಂದನು. ಅಪ್ಪ! ಈಕೆಯು ವಿಭೀಷಣನ ಹೆಂಡತಿ. ಹೆಸರು ಸರಮೆ ಎಂದು. ಸೀತೆಗೆ ಈಕೆಯು ಬಹಳ ಬೇಕಾದ ಸ್ನೇಹಿತೆಯು. ಎಲ್ಲವನ್ನೂ ಕಾಲವು ಹೇಗೆ ಮಾರ್ಪಡಿಸುತ್ತದೆ? ನೋಡು. ಇನ್ನೂ ಏನನ್ನು ಮಾಡುತ್ತದೆಯೋ ಕಾಣೆನು.

೧೧೮. ಅಮ್ಮ! ನೀನು ನಿನ್ನ ಗಂಡನ ಮನೆಗೆ ಹೋಗು. ಆ ಮನೆಯ ಮೇಲ್ವಿಚಾರಣೆಯನ್ನು ನೋಡಿಕೋ. ಅದೃಷ್ಟಹೀನನನ್ನು ನಿಧಿಯು ಬಿಟ್ಟು ಹೋಗುವಂತೆ, ಆಕೆಯು ನನ್ನನ್ನು ಬಿಟ್ಟು ಹೊರಟುಹೋದಳು.

ತಯಾ ವಿರಹಿತಃ ಸುಭ್ರೂ ರತಿಂ ವಿಂದೇ ನ ಕರ್ಹಿಚಿತ್ ।
ಶೂನ್ಯಾ ಇವ ದಿಶಃ ಸರ್ವಾಃ ಪಶ್ಯಾಮೀಹ ಮತಿಭ್ರಮಾತ್ ॥ ೧೧೯ ॥

ವಿಸೃಜ್ಯ ತಾಂ ತು ಸರಮಾಂ ಸೀತಾಯಾಸ್ತು ಪ್ರಿಯಾಂ ಸಖೀಂ ।
ಗತಾಯಾಮಥ ಕೈಕೆಸ್ಯಾಂ ರಾಮಃ ಪ್ರಾಹ ವಿಭೀಷಣಂ ॥ ೧೨೦ ॥

ದೇವತಾಭ್ಯಃ ಪ್ರಿಯಂ ಕಾರ್ಯಂ ನಾಪರಧ್ಯಾಸ್ತ್ವಯಾ ಸುರಾಃ ।
ಆಜ್ಞಯಾ ದೇವರಾಜಸ್ಯ ವರ್ತಿತವ್ಯಂ ತ್ವಯಾನಘ ॥ ೧೨೧ ॥

ಲಂಕಾಯಾಂ ಮಾನುಷೋ ಯೋ ಹಿ ಸಮಾಗಚ್ಛೇತ್ಕಥಂ ತ್ವಿಹ ।
ರಾಕ್ಷಸೈರ್ನ ಚ ಹಂತವ್ಯೋ ಪ್ರಷ್ಟವ್ಯಃ ಸ ಯಥಾ ತ್ವಹಂ ॥ ೧೨೨ ॥

॥ ವಿಭೀಷಣ ಉವಾಚ ॥

ಆಜ್ಞಯಾ ತೇ ನರವ್ಯಾಘ್ರ ಕರಿಷ್ಯೇ ಸರ್ವಮೇವ ತತ್ ।
ವಿಭೀಷಣೇ ಹಿ ವದತಿ ವಾಯೂ ರಾಮಮುವಾಚ ಹ ॥ ೧೨೩ ॥

---

೧೧೯. ಎಲೈ ಸುಭ್ರುವೇ ! ಅವಳಿಲ್ಲದ್ದರಿಂದ ನನಗೆಲ್ಲಿಯೂ ಸುಖವೇ ಕಾಣು ತ್ತಿಲ್ಲ. ಬುದ್ಧಿಯು ಕೆಟ್ಟುಹೋಗಿರುವುದರಿಂದ ದಿಕ್ಕೆಲ್ಲವೂ ಶೂನ್ಯವಾಗಿ ಕಾಣುತ್ತಿವೆ.

೧೨೦. ಹೀಗೆ ಹೇಳಿ ಸೀತೆಯ ಪ್ರಿಯಸಖಿಯಾದ ಸರಮೆಯನ್ನು ಕಳುಹಿಸಿ ದನು. ಕೈಕಸೆಯೂ ಇತ್ತ ಹೊರಟು ಹೋದಳು. ಅನಂತರ ರಾಮನು ವಿಭೀಷಣ ನನ್ನು ಕುರಿತು, ಇಂತೆಂದನು.

೧೨೧. ಎಲೈ ನಿರ್ದುಷ್ಟನಾದ ವಿಭೀಷಣನೇ ! ದೇವತೆಗಳಿಗೆ ಪ್ರಿಯವಾದು ದನ್ನು ಮಾಡು. ಅವರಿಗೆ ಅಪರಾಧವನ್ನು ಮಾಡಬೇಡ. ದೇವದೇವನಾದ ಇಂದ್ರನ ಅಪ್ಪಣೆಗಳನ್ನು ಪಾಲಿಸು.

೧೨೨. ಈ ಲಂಕೆಗೆ ಏನಾದರೂ ಮನುಷ್ಯರು ಹೇಗಾದರೂ ಬಂದರೆ ರಾಕ್ಷಸರು ಅವರನ್ನು ಕೊಲ್ಲಕೂಡದು. ಅವರನ್ನು ನನ್ನನ್ನು ವಿಚಾರಿಸುವಂತೆ ವಿಚಾರಿಸಬೇಕು.

೧೨೩. ವಿಭೀಷಣನು ಹೇಳಿದನು- ಎಲೈ ನರಶ್ರೇಷ್ಠನೇ ! ನಿನ್ನ ಅಪ್ಪಣೆ ಯಂತೆ ಎಲ್ಲವನ್ನೂ ನಡೆಸುತ್ತೇನೆ. ಎಂದು ವಿಭೀಷಣನು ಹೇಳುತ್ತಿರಲು ರಾಮನನ್ನು ಕುರಿತು ವಾಯುವು ಇಂತೆಂದನು.

ಇಹಾಸ್ತೇ ವೈಷ್ಣವೀ ಮೂರ್ತಿಃ ಪೂರ್ವಂ ಬದ್ಧೋ ಬಲಿರ್ಯಯಾ ।
ತಾಂ ನಯಸ್ವ ಮಹಾಭಾಗ ಕಾನ್ಯಕುಬ್ಜೇ ಪ್ರತಿಷ್ಠಯ ॥ ೧೨೪ ॥

ವಿದಿತ್ವಾ ರಾಘವಮತಂ ವಾಯುನಾ ಸಮುದಾಹೃತಂ ।
ವಿಭೀಷಣಸ್ತ್ವಲಂಕೃತ್ಯ ರತ್ನೈಃ ಸರ್ವೈಶ್ಚ ವಾಮನಂ ॥ ೧೨೫ ॥

ಆನೀಯ ಚಾರ್ಪಯದ್ರಾಮೇ ವಾಕ್ಯಂ ಚೇದಮುವಾಚ ಹ ।
ಯದಾ ವೈ ನಿರ್ಜಿತಃ ಶಕ್ರೋ ಮೇಘನಾದೇನ ರಾಘವ ॥ ೧೨೬ ॥

ತದಾ ವೈ ವಾಮನಸ್ತ್ವೇಷ ಆನೀತೋ ಜಯಲಕ್ಷಣಂ ।
ನಯಸ್ವ ತ್ವಮಿಮಂ ದೇವಂ ದೇವದೇವ ಪ್ರತಿಷ್ಠಯ ॥ ೧೨೭ ॥

ತಥೇತಿ ರಾಘವಃ ಕೃತ್ವಾ ಪುಷ್ಪಕಂ ತು ಸಮಾರುಹತ್ ।
ಧನರತ್ನಮಸಂಖ್ಯೇಯಂ ವಾಮನಂ ಚ ಸುರೋತ್ತಮಂ ॥ ೧೨೮ ॥

ಗೃಹ್ಯ ಸುಗ್ರೀವಭರತಾವಾರೂಢೌ ಪುಷ್ಪಕಂ ತದಾ ।
ವ್ರಜನ್ನೇವಾಂಬರೇ ರಾಮಸ್ತಿಷ್ಠೇತ್ಯಾಹ ವಿಭೀಷಣಂ ॥ ೧೨೯ ॥

---

೧೨೪. ಇಲ್ಲಿ ಬಲಿಯನ್ನು ಕಟ್ಟಿಹಾಕಿದ ಒಂದು ವಿಷ್ಣುವಿನ ವಾಮನಮೂರ್ತಿಯಿದೆ. ಅದನ್ನು ತೆಗೆದುಕೊಂಡು ಹೋಗು. ಕನ್ಯಾಕುಬ್ಜದಲ್ಲಿ ಪ್ರತಿಷ್ಠೆಮಾಡು.

೧೨೫-೧೨೭. ವಾಯುವು ಹೇಳಿದುದನ್ನು ನೋಡಿ ರಾಮನ ಇಷ್ಟವನ್ನು ತಿಳಿದು ವಿಭೀಷಣನು ಆ ವಾಮನ ಮೂರ್ತಿಯನ್ನು ನಾನಾ ಬಗೆಯಾದ ರತ್ನಗಳಿಂದ ಅಲಂಕರಿಸಿ ತಂದು ರಾಮನಿಗೆ ಸಮರ್ಪಿಸಿ ಇಂತೆಂದನು. ಮೇಘನಾದನು ಇಂದ್ರನನ್ನು ಜಯಿಸಿದಾಗ ಈ ವಿಜಯಮೂರ್ತಿಯಾದ ವಾಮನ ಪ್ರತಿಮೆಯನ್ನು ತಂದಿದ್ದನು. ಎಲೈ ರಾಮನೇ! ಇದನ್ನು ನೀನು ತೆಗೆದುಕೊಂಡು ಹೋಗು ಪ್ರತಿಷ್ಠೆ ಮಾಡು.

೧೨೮-೧೨೯. ರಾಮನು ಹಾಗೆಯೇ ಆಗಲೆಂದು ಪುಷ್ಪಕ ವಿಮಾನದಲ್ಲಿ ಹತ್ತಿದನು. ಬಹುವಾದ ಹಣ, ರತ್ನಗಳನ್ನೂ ವಾಮನಮೂರ್ತಿಯನ್ನೂ ತೆಗೆದುಕೊಂಡ. ಸುಗ್ರೀವ, ಭರತರೂ ವಿಮಾನವನ್ನು ಹತ್ತಿದರು. ರಾಮನು ಅಂತರಿಕ್ಷದಲ್ಲಿ ಹೋಗುತ್ತಲೇ ನಿಲ್ಲೆಂದು ವಿಭೀಷಣನಿಗೆ ಹೇಳಿದನು.

ರಾಘವಸ್ಯ ವಚಃ ಶ್ರುತ್ವಾ ಭೂಯೋಽಪ್ಯಾಹ ಸ ರಾಘವಂ ।
ಕರಿಷ್ಯೇ ಸರ್ವಮೇತದ್ಧಿ ಯದಾಜ್ಞಪ್ತಂ ವಿಭೋ ತ್ವಯಾ ॥ ೧೩೦ ॥

ಸೇತುನಾನೇನ ರಾಜೇಂದ್ರ ಪೃಥಿವ್ಯಾಂ ಸರ್ವಮಾನವಾಃ ।
ಆಗಮ್ಯ ಪ್ರತಿಬಾಧೇಯುರಾಜ್ಞಾಘಾತೋ ಭವೇತ್ತವ ॥ ೧೩೧ ॥

ಕೋಽತ್ರ ಮೇ ನಿಯಮೋ ದೇವ ಕಿಂತು ಕಾರ್ಯಂ ಮಯಾ ವಿಭೋ ।
ಶ್ರುತ್ವೈತದ್ರಾಘವೋ ವಾಕ್ಯಂ ರಕ್ಷಸಾ ತೇನ ಭಾಷಿತಂ ॥ ೧೩೨ ॥

ಕಾರ್ಮುಕಂ ಗೃಹ್ಯ ಹಸ್ತೇನ ರಾಮಃ ಸೇತುಂ ದ್ವಿಧಾಚ್ಛಿನತ್ ।
ತ್ರಿರ್ವಿಭಜ್ಯ ಚ ವೇಗೇನ ಮಧ್ಯೇ ವೈ ದಶಯೋಜನಂ ॥ ೧೩೩ ॥

ಛಿತ್ವಾ ತು ಯೋಜನಂ ಚೈಕಮೇವಂ ಖಂಡತ್ರಯಂ ಕೃತಂ ।
ವೇಲಾವನಂ ಸಮಾಸಾದ್ಯ ರಾಮಃ ಪೂಜಾಮುಪಾಪತೇಃ ॥ ೧೩೪ ॥

---

೧೩೦. ರಾಮನ ಮಾತನ್ನು ಕೇಳಿ ವಿಭೀಷಣನು, ಸ್ವಾಮಿ ! ತಮ್ಮ ಅಪ್ಪಣೆಯೆಲ್ಲವನ್ನೂ ನಡೆಸುತ್ತೇನೆ ಎಂದನು.

೧೩೧. ಎಲೈ ರಾಜೇಂದ್ರನೇ! ಭೂಮಿಯ ಮನುಷ್ಯರೆಲ್ಲರೂ ಈ ಸೇತುವೆಯ ಮೂಲಕ ಇಲ್ಲಿಗೆ ಬಂದು ತೊಂದರೆ ಪಡಿಸಿಯಾರು ? ಆಗ ನಿನ್ನ ಅಪ್ಪಣೆಗೆ ವಿಘಾತವು ಬರುವುದು.

೧೩೨. ಈ ವಿಷಯದಲ್ಲಿ ಎಲೈ ಸ್ವಾಮಿಯೇ ! ನೀನು ನನಗೆ ಒಂದು ನಿಯಮವನ್ನು ಮಾಡು ಎಂದನು.

೧೩೩-೧೩೪. ರಾಮನು ವಿಭೀಷಣನ ಈ ಮಾತನ್ನು ಕೇಳಿ ಧನುಸ್ಸನ್ನು ತೆಗೆದುಕೊಂಡು ಸೇತುವೆಯನ್ನು ಎರಡು ಪಾಲು ಮಾಡಿದನು. ಮತ್ತೆ ಹತ್ತು ಯೋಜನಗಳ ಈಚೆಗೆ ಬಂದು ಮತ್ತೆ ಒಂದು ಬಾರಿ ಕತ್ತರಿಸಿದನು. ಇಲ್ಲಿ ಒಂದು ಯೋಜನದಷ್ಟು ಕತ್ತರಿಸಿದನು. ಈ ರೀತಿ ಎರಡೇಟಿನಲ್ಲಿ ಮೂರು ಭಾಗವನ್ನಾಗಿ ಮಾಡಿದನು. ಅನಂತರ ಸಮುದ್ರದ ದಡಕ್ಕೆ ಬಂದು ರಾಮನು ಅಲ್ಲಿರುವ ಈಶ್ವರನನ್ನು ಪೂಜಿಸಿದನು.

ದಕ್ಷಿಣೋದಧೇ ತ್ವಂ ಚೈವಂ ಮಾ ಗರ್ಜ ಮಾ ಪ್ರವಾಹಯ ।
ಏವಂ ಚ ಪ್ರತಿಷಿಧ್ಯೈನಂ ತಂ ಚ ದೈವ್ಯಂ ವ್ಯಸರ್ಜಯತ್ ॥ ೧೩೫ ॥
ಅಂತರಿಕ್ಷಾದಭೂದ್ವಾಣೀ ಮೇಘಗಂಭೀರನಿಸ್ವನಾ ॥ ೧೩೬ ॥

॥ ರುದ್ರ ಉವಾಚ ॥

ಭೋ ಭೋ ರಾಘವ ಭದ್ರಂ ತೇ ಸ್ಥಿತೋಽಹಮಿಹ ಸಾಂಪ್ರತಂ ।
ಯಾವಜ್ಜಗದಿದಂ ವೀರ ಯಾವದೇಷಾ ಧರಾ ಸ್ಥಿತಾ ॥ ೧೩೭ ॥

ಯಾವದೇವ ಚ ತೇ ಸೇತುಸ್ತಾವತ್‌ಸ್ಥಾಸ್ಯಾಮಿ ರಾಘವ ।
ಶ್ರುತ್ವೈತದ್ದೇವದೇವಸ್ಯ ಗಿರಂ ತಾಮಮೃತೋಪಮಾಂ ॥
ಉವಾಚ ರಾಘವಃ ಪ್ರೀತೋ ವಾಕ್ಯಂ ಮತಿಮತಾಂ ವರಃ ॥ ೧೩೮ ॥

॥ ಶ್ರೀರಾಮ ಉವಾಚ ॥

ನಮಸ್ತೇ ದೇವದೇವೇಶ ಭಕ್ತಾನಾಮಭಯಂಕರ ।
ಗೌರೀಕಾಂತ ನಮಸ್ತುಭ್ಯಂ ದಕ್ಷಯಜ್ಞವಿನಾಶನ ॥ ೧೩೯ ॥

---

೧೩೫-೧೩೬. ಎಲೈ ದಕ್ಷಿಣ ಸಮುದ್ರವೇ! ನೀನು ಗರ್ಜಿಸಕೂಡದು. ಮತ್ತು ಪ್ರವಾಹವನ್ನು ಹರಿಸಕೂಡದು, ಎಂದು ನಿಷೇಧಮಾಡಿದನು. ಮತ್ತು ದೇವಸ್ಥಾನವನ್ನು ಬಿಟ್ಟು ಹೊರಟನು. ಆಗ ಆಕಾಶದಿಂದ ಗುಡುಗಿನಂತಿರುವ ಒಂದು ಶಬ್ದವು ಕೇಳಿಬಂದಿತು.

೧೩೭. ರುದ್ರನು ಹೇಳಿದನು.– ಎಲೈ ರಾಘವನೆ! ನಿನಗೆ ಮಂಗಳವಾಗಲಿ. ಈ ಜಗತ್ತೂ, ಈ ಭೂಮಿಯೂ, ಈ ನಿನ್ನ ಸೇತುವೆಯೂ ಇರುವವರೆಗೆ ನಾನು ಇಲ್ಲಿ ಇರುತ್ತೇನೆ.

೧೩೮. ದೇವದೇವನಾದ ಶಂಭುವಿನ ಅಮೃತದಂತಿರುವ ಈ ಮಾತನ್ನು ಕೇಳಿ ರಾಮನು ಸಂತೋಷಪಟ್ಟು ಇಂತೆಂದನು.

೧೩೯-೧೪೦. ಶ್ರೀರಾಮನು ಹೇಳಿದನು.– ದೇವದೇವನೆ! ನಿನಗೆ ನಮಸ್ಕಾರವು. ಭಕ್ತರಿಗೆ ಅಭಯವನ್ನು ಕೊಡುವವನೇ! ನಿನಗೆ ನಮಸ್ಕಾರವು. ಗೌರಿಯ ಕಾಂತನೇ! ನಿನಗೆ ನಮಸ್ಕಾರವು. ದಕ್ಷಯಜ್ಞ ನಾಶಕನೇ! ನಿನಗೆ ನಮಸ್ಕಾರವು.

ನಮಃ ಶರ್ವಾಯ ರುದ್ರಾಯ ಭವಾಯ ವರದಾಯ ಚ ।
ಪಶೂನಾಂ ಪತಯೇ ನಿತ್ಯಮುಗ್ರಾಯ ಚ ಕಪರ್ದಿನೇ ॥ ೧೪೦ ॥

ಮಹಾದೇವಾಯ ಭೀಮಾಯ ತ್ರ್ಯಂಬಕಾಯ ವಿಶಾಂ ಪತೇ ।
ಈಶಾನಾಯ ಭಗಘ್ನಾಯ ನಮೋಽಸ್ತ್ವಂಧಕ ಘಾತಿನೇ ॥ ೧೪೧ ॥

ನೀಲಗ್ರೀವಾಯ ಭೀಮಾಯ ವೇಧಸೇ ವೇಧಸಾ ಸ್ತುತ ।
ಕುಮಾರಶತ್ರುವಿಘ್ನಾಯ ಕುಮಾರ ಜನನಾಯ ಚ ॥ ೧೪೨ ॥

ವಿಲೋಹಿತಾಯ ಧೂಮ್ರಾಯ ಶಿವಾಯ ಕ್ರಥನಾಯ ಚ ।
ನಿತ್ಯಂ ನೀಲಶಿಖಂಡಾಯ ಶೂಲಿನೇ ದಿವ್ಯಶಾಯಿನೇ ॥ ೧೪೩ ॥

ಉಗ್ರಾಯ ಚ ತ್ರಿಣೇತ್ರಾಯ ಹಿರಣ್ಯವಸುರೇತಸೇ ।
ಅಚಿಂತ್ಯಾಯಾಂಬಿಕಾಭರ್ತ್ರೇ ಸರ್ವದೇವಸ್ತುತಾಯ ಚ ॥ ೧೪೪ ॥

ಅಭಿಗಮ್ಯಾಯ ಕಾಮ್ಯಾಯ ಸದ್ಯೋಜಾತಾಯ ವೈ ನಮಃ ।
ವೃಷಧ್ವಜಾಯ ಮುಂಡಾಯ ಜಟಿನೇ ಬ್ರಹ್ಮಚಾರಿಣೇ ॥ ೧೪೫ ॥

---

ಶರ್ವನೇ, ರುದ್ರನೇ, ಭವನೇ, ವರದನೇ ! ನಿನಗೆ ನಮಸ್ಕಾರವು. ಉಗ್ರನೇ, ಕಪರ್ದಿಯೆ ! ನಿನಗೆ ನಮಸ್ಕಾರವು.

೧೪೧-೧೪೨. ಮಹಾದೇವನೆ, ಭೀಮನೆ, ತ್ರ್ಯಂಬಕನೆ, ವಿಶಾಂಪತಿಯೆ ! ನಿನಗೆ ನಮಸ್ಕಾರವು. ಈಶಾನನೇ, ಭಗನನ್ನು ನಾಶಮಾಡಿದವನೇ, ಅಂಧಕಾಸುರ ನಾಶಕನೇ ! ನಿನಗೆ ನಮಸ್ಕಾರವು. ನೀಲಗ್ರೀವನೇ, ಭೀಮನೆ, ವೇದಸನೆ, ಬ್ರಹ್ಮನಿಂದ ಹೊಗಳಲ್ಪಟ್ಟವನೇ ! ನಿನಗೆ ನಮಸ್ಕಾರವು. ಕುಮಾರಸ್ವಾಮಿಯ ಶತ್ರುಗಳಿಗೆ ವಿಘ್ನದಾಯಕನೆ ! ಕುಮಾರಸ್ವಾಮಿಯ ಜನಕನೆ ! ನಿನಗೆ ನಮಸ್ಕಾರವು.

೧೪೩. ವಿಲೋಹಿತನೆ, ಧೂಮ್ರನೆ, ಶಿವನೆ, ಕ್ರಥನನೆ ! ನಿನಗೆ ನಮಸ್ಕಾರವು. ನವಿಲುಗರಿಯನ್ನು ಯಾವಾಗಲೂ ತಲೆಯಲ್ಲೂ, ಶೂಲವನ್ನು ಕೈಯಲ್ಲೂ ಹಿಡಿದಿರುವ ಕೈಲಾಸವಾಸಿಯಾದ ನಿನಗೆ ನಮಸ್ಕಾರವು.

೧೪೪-೧೪೫. ಉಗ್ರನೆ, ತ್ರಿಣೇತ್ರನೇ, ಹಿರಣ್ಯವಸುವೆ, ಹಿರಣ್ಯಶೀತಸನೆ, ಅಚಿಂತ್ಯನೆ, ಅಂಬಿಕಾಪತಿಯೆ, ಸರ್ವದೇವಸ್ತುತನೆ, ಅಭಿಗಮ್ಯನೆ, ಕಾಮ್ಯನೆ, ಸದ್ಯೋಜಾತನೆ ! ನಿನಗೆ ನಮಸ್ಕಾರವು. ವೃಷಧ್ವಜನೆ, ಮುಂಡನೆ, ಜಟಿಯೆ, ಬ್ರಹ್ಮಚಾ

ತಪ್ಯಮಾನಾಯ ಸಲಿಲೇ ಬ್ರಹ್ಮಣ್ಯಾಯ ಜಯಾಯ ಚ
ವಿಶ್ವಾತ್ಮನೇ ವಿಶ್ವಸೃಜೇ ವಿಶ್ವಮಾವೃತ್ಯ ತಿಷ್ಠತೇ ॥ ೧೪೬ ॥

ನಮೋ ನಮಸ್ತೇ ದಿವ್ಯಾಯಾ ಪ್ರಪನ್ನಾರ್ತಿಹರಾಯ ಚ ।
ಭಕ್ತಾನುಕಂಪಿನೇ ನಿತ್ಯಂ ವಿಶ್ವತೇಜೋ ಮನೋಗತೇ ॥ ೧೪೭ ॥

॥ ಪುಲಸ್ತ್ಯ ಉವಾಚ ॥

ಏವಂ ಶಂಸ್ತೂಯ ಮಾನಸ್ತು ದೇವದೇವೋ ಹರೋ ನೃಪ ।
ಉವಾಚ ರಾಘವಂ ವಾಕ್ಯಂ ಭಕ್ತಿನಮ್ರಂ ಪುರಃ ಸ್ಥಿತಂ ॥ ೧೪೮ ॥

॥ ರುದ್ರ ಉವಾಚ ॥

ಭೋ ಭೋ ರಾಘವ ಭದ್ರಂ ತೇ ಬ್ರೂಹಿ ಯತ್ತೇ ಮನೋಗತಂ ।
ಯಾವ ದೇವ ಪ್ರಯಚ್ಛಾಮಿ ನಾಸ್ತ್ಯದೇಯಂ ಮಯಾ ಹಿ ತೇ ॥ ೧೪೯ ॥

ಪುಷ್ಕರಾಕ್ಷ ಮಹಾದೇವ ದೇವದೇವಃ ಸನಾತನಃ ।
ಭವಾದ್ನಾರಾಯಣೋ ನೂನಂ ಗೂಢೋ ಮಾನುಷಯೋನಿಷು ॥ ೧೫೦ ॥

---

ರಿಯೆ, ನೀರಿನಲ್ಲಿ ಜಪಿಸುವವನೆ, ಬ್ರಹ್ಮಣ್ಯನೆ, ಜಯನೆ, ವಿಶ್ವಾತ್ಮನೆ, ವಿಶ್ವಸೃಷ್ಟನೆ ವಿಶ್ವವನ್ನೇ ಆವರಿಸಿಕೊಂಡು ಇರುವವನೇ ನಿನಗೆ ನಮಸ್ಕಾರವು, ದಿವ್ಯನೇ, ಶರಣಾಗತ ರಕ್ಷಕನೆ. ಭಕ್ತರಲ್ಲಿ ದಯೆ ತೋರುವವನೆ, ವಿಶ್ವತೇಜನೆ, ಮನೋಗತನೆ! ನಿನಗೆ ನಮಸ್ಕಾರವು.

೧೪೮. ಪುಲಸ್ತ್ಯನು ಹೇಳಿದನು- ಈ ರೀತಿಯಾಗಿ ಹೊಗಳಿಸಿಕೊಂಡ ದೇವದೇವನಾದ ಶಂಭುವು ಭಕ್ತಿಯಿಂದ ಬಗ್ಗಿಕೊಂಡಿರುವ ರಾಮನನ್ನು ಕುರಿತು ಇಂತೆಂದನು.

೧೪೯. ರುದ್ರನು ಹೇಳಿದನು- ಎಲೈ ರಾಘವನೆ, ನಿನಗೆ ಮಂಗಳವಾಗಲಿ. ನಿನ್ನ ಮನಸ್ಸಿನಲ್ಲಿರುವುದನ್ನು ಹೇಳು. ಒಡನೆಯೇ ಕೊಡುತ್ತೇನೆ. ನಿನಗೆ ಕೊಡದಿರತಕ್ಕದ್ದು ಯಾವುದೂ ಇಲ್ಲ.

೧೫೦. ಎಲೈ ಕಮಲದಂತೆ ಕಣ್ಣುಳ್ಳವನೆ, ಮಹಾದೇವನಾದ ನಾರಾಯಣನೇ ನೀನು. ಮನುಷ್ಯ ರೂಪಿನಲ್ಲಿ ಹುಟ್ಟಿ ಮರೆಮಾಚಿಕೊಂಡಿದ್ದೀಯೆ.

ಅವತೀರ್ಣೋ ದೇವಕಾರ್ಯಂ ಕೃತಂ ತಚ್ಚ ತ್ವಯಾನಘ ।
ಇದಾನೀಂ ವ್ರಜ ಸ್ವಸ್ಥಾನಂ ಕೃತಕಾರ್ಯೋ ಹಿ ಶತ್ರುಹನ್ ॥ ೧೫೧ ॥

ಇಹ ತ್ವಯಾ ಕೃತಸ್ಥಾನೇ ಮದೀಯೇ ರಘುನಂದನ ।
ಆಗತ್ಯ ಮಾನವಾ ರಾಮ ಪಶ್ಯೇಯುರಿಹ ಸಾಗರೇ ॥ ೧೫೨ ॥

ಮಹಾಪಾತಕಯುಕ್ತಾ ಯೇ ತೇಷಾಂ ಪಾಪಂ ವಿನಂಕ್ಷ್ಯತಿ ।
ಬ್ರಹವಧ್ಯಾದಿ ಪಾಪಾನಿ ದುಷ್ಟಾನಿ ಯಾನಿ ಕಾನಿಚಿತ್ ॥ ೧೫೩ ॥

ದರ್ಶನಾದೇವ ನಶ್ಯಂತಿ ನಾತ್ರ ಕಾರ್ಯಾ ವಿಚಾರಣಾ ।
ಗಚ್ಛ ತ್ವಂ ವಾಮನಂ ಸ್ಥಾಪ್ಯ ಗಂಗಾತೀರೇ ರಘೂದ್ವಹ ॥ ೧೫೪ ॥

ಪೃಥಿವ್ಯಾಂ ಬಹುಶಃ ಕೃತ್ವಾ ಭಾಗಾನಷ್ಟೌ ಪರಂತಪ ।
ಶ್ವೇತದ್ವೀಪಂ ಸ್ವಕಂ ಸ್ಥಾನಂ ವ್ರಜ ದೇವ ನಮೋಽಸ್ತು ತೇ ॥ ೧೫೫ ॥

ಪ್ರಣಿಪತ್ಯ ತತೋ ರಾಮಃ ತೀರ್ಥಂ ಪ್ರಾಪ್ತಸ್ತು ಪುಷ್ಕರಂ ।
ವಿಮಾನಂ ತು ನ ಯತ್ಯೂರ್ಧ್ವಂ ವೇಷ್ಟಿತಂ ತತ್ತು ರಾಘವಃ ॥ ೧೫೬ ॥

---

೧೫೧. ಅವತಾರಮಾಡಿ ದೇವತೆಗಳ ಕಾರ್ಯವನ್ನು ಮಾಡಿದ್ದೀಯೆ. ಎಲೈ ಶತ್ರುನಾಶಕನೇ! ನೀನು ಅವತರಿಸಿದ ಕೆಲಸ ಮಾಡಿದುದಾಗಿದೆ. ಈಗ ನಿನ್ನ ಸ್ಥಾನಕ್ಕೆ ಮತ್ತೆ ಹೋಗು.

೧೫೨-೧೫೫. ನೀನು ನನ್ನನ್ನು ಸ್ಥಾಪಿಸಿರುವ ಈ ಸಮುದ್ರದ ಬಳಿಯಲ್ಲಿ ಯಾರು ನೋಡುತ್ತಾರೆಯೋ ಅವರು ಮಹಾಪಾತಕಗಳಿಂದ ಕೂಡಿದ್ದರೂ ಅವರ ಪಾಪವು ಹೋಗಲಿ. ಬ್ರಹ್ಮಹತ್ಯೆಯೇ ಮುಂತಾದ ಯಾವಯಾವ ದುಷ್ಟ ಪಾಪಗಳುಂಟೋ ಅವೆಲ್ಲವೂ ಕೂಡ ನಾಶವಾಗುತ್ತವೆ. ಇದರಲ್ಲಿ ಸಂಶಯವಿಲ್ಲ. ನೀನು ಹೊರಡು. ಗಂಗಾತೀರದಲ್ಲಿ ವಾಮನ ಮೂರ್ತಿಯನ್ನು ಪ್ರತಿಷ್ಠೆಮಾಡು. ಭೂಮಿಯಲ್ಲಿ ಎಂಟು ಜಾಗದಲ್ಲಿ ದೇವತೆಗಳನ್ನು ಪ್ರತಿಷ್ಠೆಮಾಡಿ ಶ್ವೇತದ್ವೀಪವನ್ನು ನಿನ್ನ ಸ್ಥಾನವನ್ನಾಗಿ ಮಾಡಿಕೊ. ನಿನಗೆ ನಮಸ್ಕಾರವು, ಹೊರಡು.

೧೫೬. ರಾಮನು ಆ ಶಿವನಿಗೆ ನಮಸ್ಕರಿಸಿ ಪುಷ್ಕರ ತೀರ್ಥದ ಬಳಿಗೆ ಹೋಗಲು ಮೇಲುಗಡೆ ವಿಮಾನವು ಹೋಗದೆ ಕಟ್ಟಿದಂತೆ ನಿಂತುಹೋಯಿತು.

ಕಿಮಿದಂ ವೇಷ್ಟಿತಂ ಯಾನಂ ನಿರಾಲಂಬೇಽಂಬರೇ ಸ್ಥಿತಂ ।
ಭವಿತವ್ಯಂ ಕಾರಣೇನ ಸುಗ್ರೀವೈತನ್ನಿಶಾಮಯ ॥ ೧೫೭ ॥

ಸುಗ್ರೀವೋ ರಾಮವಚನಾದವತೀರ್ಯ ಧರಾತಲಂ ।
ತಾವತ್ಪಶ್ಯತಿ ಬ್ರಹ್ಮಾಣಂ ಸುರಸಿದ್ಧಸಮನ್ವಿತಂ ॥ ೧೫೮ ॥

ಬ್ರಹ್ಮರ್ಷಿಪೂಗ ಸಹಿತಂ ಚತುರ್ವೇದಸಮನ್ವಿತಂ ।
ದೃಷ್ಟ್ವಾಗತ್ಯಾಬ್ರವೀದ್ರಾಮಂ ಸರ್ವಲೋಕಪಿತಾಮಹಃ ॥ ೧೫೯ ॥

ಸಹಿತೋ ಲೋಕಪಾಲೈಶ್ಚ ವಸ್ವಾದಿತ್ಯಮರುದ್ಗಣೈಃ ।
ತೇನೈವ ಪುಷ್ಪಕೋ ದೇವ ನ ಲಂಘತಿ ಪಿತಾಮಹಂ ॥ ೧೬೦ ॥

ಅವತೀರ್ಯ ತತೋ ರಾಮಃ ಪುಷ್ಪಕಾದ್ಧೇಮಭೂಷಿತಾತ್ ।
ನತ್ವಾ ವಿರಿಂಚಿನಂ ದೇವಂ ಗಾಯತ್ರ್ಯಾ ಸಹ ಸಂಸ್ಥಿತಂ ॥ ೧೬೧ ॥

ಅಷ್ಟಾಂಗಪ್ರಣಿಪಾತೇನ ಪಂಚಾಂಗಾಲಿಂಗಿತಾವನಿಃ ।
ತುಷ್ಟಾವ ಪ್ರಣತೋ ಭೂತ್ವಾ ನತ್ವಾ ದೇವಂ ವಿರಿಂಚಿನಂ ॥ ೧೬೨ ॥

---

೧೫೭. ಇದೇನು? ಈ ಆಧಾರವಿಲ್ಲದಿರುವ ಆಕಾಶದಲ್ಲಿಯೂ ಕೂಡ ಪುಷ್ಪಕವು ಕಟ್ಟಿದಂತೆ ನಿಂತುಬಿಟ್ಟಿರುವುದಲ್ಲ ! ಏನೋ ಕಾರಣವಿರಬೇಕು ಎಲೈ ಸುಗ್ರೀವನೆ! ಇದೇನು ತಿಳಿ.

೧೫೮-೧೫೯ ಸುಗ್ರೀವನು ರಾಮನು ಹೇಳಿದಂತೆ ಭೂಮಿಗೆ ಇಳಿದು ನೋಡಿದನು. ಅಷ್ಟರಲ್ಲಿ ಸುರರು, ಸಿದ್ಧರು, ಬ್ರಹ್ಮರ್ಷಿಗಳು, ಚತುರ್ವೇದಗಳು, ಇವುಗಳಿಂದ ಕೂಡಿದ ಬ್ರಹ್ಮನು ಅಲ್ಲಿದ್ದನು. ಅಲ್ಲಿಂದ ಸುಗ್ರೀವನು ಬಂದು ರಾಮನೊಡನೆ ಇಂತೆಂದನು

೧೬೦. ಎಲೈ ರಾಮನೆ ! ಲೋಕಪಾಲಕರಿಂದಲೂ, ವಸುಗಣ, ಆದಿತ್ಯಗಣ, ಮರದ್ಗಣಗಳಿಂದಲೂ ಕೂಡಿಕೊಂಡ ಪಿತಾಮಹನಾದ ಬ್ರಹ್ಮನು ಇಲ್ಲಿದ್ದಾನೆ. ಆದ್ದರಿಂದಲೇ ಪುಷ್ಪಕವು ಆವನಿಂದ ಮುಂದೆ ಹೋಗಲಾರದು. ಎಂದನು.

೧೬೧-೧೬೨. ರಾಮನು ಚಿನ್ನದ ಒಡವೆಯಿಂದ ಅಲಂಕೃತವಾದ ಪುಷ್ಪಕದಿಂದಿಳಿದು ಗಾಯಿತ್ರಿಯೊಡನೆ ಕೂಡಿರುವ ಬ್ರಹ್ಮನನ್ನು ಸಾಷ್ಟಾಂಗ ನಮುಸ್ಕರಿಸಿದನು. ಅವುಗಳಲ್ಲಿ ಪಂಚಾಂಗಗಳನ್ನು ನೆಲಕ್ಕೆ ತಗುಲಿಸಿಯೂ ನಮುಸ್ಕರಿಸಿದನು. ನಮುಸ್ಕರಿಸಿ ಆ ವಿರಂಚಿಯನ್ನು ಸ್ತೋತ್ರಮಾಡಿದನು.

॥ ಶ್ರೀರಾಮ ಉವಾಚ ॥

ನಮಾಮಿ ಲೋಕಕರ್ತಾರಂ ಪ್ರಜಾಪತಿಸುರಾರ್ಚಿತಂ ।
ದೇವನಾಥಂ ಲೋಕನಾಥಂ ಪ್ರಜಾನಾಥಂ ಜಗತ್ಪತಿಂ ॥ ೧೬೩ ॥

ನಮಸ್ತೇ ದೇವದೇವೇಶ ಸುರಾಸುರನಮಸ್ಕೃತ ।
ಭೂತಭವ್ಯಭವನ್ನಾಥ ಹರ ಪಿಂಗಲೋಚನ ॥ ೧೬೪ ॥

ಬಾಲಸ್ತ್ವಂ ವೃದ್ಧರೂಪೀ ಚ ನೀಲಗ್ರೀವ ಮಹೋದರ ।
ತಾರಣಶ್ಚಾಸಿ ದೇವಸ್ತ್ವಂ ತ್ರೈಲೋಕ್ಯಪ್ರಭುರೀಶ್ವರಃ ॥ ೧೬೫ ॥

ಹಿರಣ್ಯಗರ್ಭ ಪದ್ಮಗರ್ಭ ವೇದಗರ್ಭ ಸ್ಮೃತಿಪ್ರಿಯ ।
ಮಹಾಸಿಶ್ಚ ಮಹಾಪದ್ಮೀ ಮಹಾದಂಡೀ ಚ ಮೇಖಲೀ ॥ ೧೬೬ ॥

ಕಾಲಶ್ಚ ಕಾಲರೂಪೀ ಚ ನೀಲಗ್ರೀವೋ ವಿದಾಂ ವರಃ ।
ವೇದಕರ್ತಾರ್ಭಕೋ ನಿತ್ಯಃ ಪಶೂನಾಂ ಪತಿರವ್ಯಯಃ ॥ ೧೬೭ ॥

---

೧೬೩-೧೬೪. ಶ್ರೀರಾಮನು ಹೇಳಿದನು– ಲೋಕಕರ್ತೃವಾದ ದೇವಪೂಜಿತನಾದ ಪ್ರಜಾಪತಿಯನ್ನು ನಮಸ್ಕರಿಸುತ್ತೇನೆ. ದೇವನಾಥ, ಲೋಕನಾಥ, ಪ್ರಜಾನಾಥ, ಜಗತ್ಪತಿಯೇ! ನಿನಗೆ ನಮಸ್ಕಾರವು. ದೇವದೇವನೆ ! ನಿನಗೆ ನಮಸ್ಕಾರವು. ದೇವದಾನವರಿಂದ ನಮಸ್ಕೃತನೆ ! ನಿನಗೆ ನಮಸ್ಕಾರವು. ಕಳೆದುದು, ನಡೆವುದು, ಮುಂದೆ ನಡೆವುದು, ಈ ಕಾಲಗಳಿಗೆಲ್ಲಾ ಒಡೆಯನಾದ ಪಿಂಗಳಲೋಚನನಾದ ನಿನಗೆ ನಮಸ್ಕಾರವು.

೧೬೫-೧೬೭. ನೀನು ಬಾಲನೂ ಆಗಿದ್ದೀಯೆ. ಮುದುಕನೂ ಆಗಿದ್ದೀಯೆ. ನೀಲಬಣ್ಣದ ಕತ್ತುಳ್ಳವನಾಗಿದ್ದೀಯೆ. ಮಹೋದರನು. ಎಲ್ಲದಕ್ಕೂ ಕಾರಣರೂಪನು. ಮೂರು ಲೋಕಕ್ಕೂ ಪ್ರಭುವೂ, ಈಶ್ವರನೂ ಆಗಿದ್ದೀಯೆ. ನಿನ್ನ ಹೊಟ್ಟೆಯಲ್ಲಿ ಪದ್ಮವೂ, ಚಿನ್ನವೂ ಇವೆ. ವೇದವು ನಿನ್ನಲ್ಲಿದೆ. ಸ್ಮೃತಿಗಳಲ್ಲಿ ಪ್ರೀತಿಯುಳ್ಳವನು. ದೊಡ್ಡ ಕತ್ತಿಯೂ, ದೊಡ್ಡ ಪದ್ಮವೂ ನಿನ್ನಲ್ಲಿವೆ. ದಂಡವನ್ನೂ ಮೇಖಲವನ್ನೂ ಧರಿಸಿದ್ದೀಯೆ. ನೀನೇ ಕಾಲವು. ಕಾಲದ ರೂಪವೂ ನೀನೇ. ನೀಲವಾದ ಕತ್ತುಳ್ಳವನು. ವಿದ್ವಾಂಸನು. ವೇದವನ್ನು ಮಾಡಿದವನು. ಮಗುವು, ನಿತ್ಯನು, ಪಶುಪತಿಯು, ನಾಶರಹಿತನೂ ನೀನಾಗಿದ್ದೀಯೆ.

**ದರ್ಭಪಾಣಿರ್ಹಂಸಕೇತುರ್ಭೋಕ್ತಾ ಗೋಪ್ತಾ ಹರೋ ಹರಿಃ ।**
**ಜಟೀ ಮುಂಡೀ ಶಿಖೀ ದಂಡೀ ಲಗುಡೀ ಚ ಮಹಾಯಶಾಃ ॥ ೧೬೮ ॥**

**ಭೂತೇಶ್ವರಃ ಸುರಾಧ್ಯಕ್ಷಃ ಸರ್ವಾತ್ಮಾ ಸರ್ವಭಾವನಃ ।**
**ಸರ್ವಗಃ ಸರ್ವಹಾರೀ ಚ ಸ್ರಷ್ಟಾ ಚ ಗುರುರವ್ಯಯಃ ॥ ೧೬೯ ॥**

**ಕಮಂಡಲುಧರೋ ದೇವಃ ಸ್ರುಕ್‌ಸ್ರುವಾದಿಧರಸ್ತಥಾ ।**
**ಹವನೀಯೋऽರ್ಚನೀಯಶ್ಚ ಓಂಕಾರೋ ಜ್ಯೇಷ್ಠಸಾಮಗಃ ॥ ೧೭೦ ॥**

**ಮೃತಶ್ಚೈವಾಮೃತಶ್ಚೈವ ಪಾರಿಯಾತ್ರಶ್ಚ ಸುವ್ರತಃ ।**
**ಬ್ರಹ್ಮಚಾರೀ ವ್ರತಧರೋ ಗುಹವಾಸೀ ಸುಪಂಕಜಃ ॥ ೧೭೧ ॥**

**ಅಮರೋ ದರ್ಶನೀಯಶ್ಚ ಬಾಲಸೂರ್ಯನಿಭಸ್ತಥಾ ।**
**ಪದ್ಮವಾಸೀ ಚ ಭಗವಾನ್ ಸಾವಿತ್ರೀಪತಿರಚ್ಯುತಃ ॥ ೧೭೨ ॥**

---

೧೬೮-೧೬೯. ದರ್ಭೆಯೇ ಕೈಯಲ್ಲುಳ್ಳ ಹಂಸವೇ ಧ್ವಜವಾಗುಳ್ಳ ಅನುಭವಿಸುವ, ಕಾಪಾಡುವ, ಬ್ರಹ್ಮಸ್ವರೂಪನಾದ, ವಿಷ್ಣುಸ್ವರೂಪನಾದ ಜಟೆಯನ್ನು ಧರಿಸಿರುವ, ಸನ್ಯಾಸಿಯಾದ, ಬೋಳಾದ ತಲೆಯುಳ್ಳ, ದಂಡಧಾರಿಯಾದ, ಕೋಲನ್ನು ಹಿಡಿದಿರುವ, ಮಹಾಯಶಸ್ಸುಳ್ಳ, ಭೂತಗಳೊಡೆಯನಾದ, ದೇವತೆಗಳೊಡೆಯನಾದ, ಸರ್ವಾತ್ಮನಾದ, ಎಲ್ಲವನ್ನೂ ತಿಳಿಯುವವನಾದ, ಎಲ್ಲಾ ಕಡೆಯಲ್ಲೂ ಇರುವ, ಸರ್ವವನ್ನೂ ಅಪಹರಿಸುವ, ಸೃಷ್ಟಿಸುವ, ಗುರುವಾದ, ನಾಶರಹಿತನಾದ ಸ್ವಾಮಿಗೆ ನಮಸ್ಕಾರವು.

೧೭೦. ಕಮಂಡಲುವನ್ನು ಧರಿಸಿದ್ದೀಯೆ. ಸ್ರುಕ್ಕು, ಸ್ರುವಗಳನ್ನು ಧರಿಸಿದ್ದೀಯೆ. ಹೋಮಮಾಡಲು ಯೋಗ್ಯನಾಗಿದ್ದೀಯೆ. ಪೂಜೆಗೆ ಯೋಗ್ಯನಾಗಿದ್ದೀಯೆ. ಓಂಕಾರ ಸ್ವರೂಪಿಯು, ಜೇಷ್ಠಸಾಮವನ್ನು ಗಾನಮಾಡುತ್ತೀಯೆ.

೧೭೧-೧೭೪. ಸಾವಿರುವವನೂ ಮತ್ತು ಸಾವಿಲ್ಲದವನೂ ಆಗಿದ್ದೀಯೆ. ಸಂಸಾರವನ್ನು ದಾಟಿಸುವವನೂ ಆಗಿದ್ದೀಯೆ. ಒಳ್ಳೆಯ ವ್ರತವುಳ್ಳವನು, ಬ್ರಹ್ಮಚರ್ಯದ ವ್ರತವನ್ನು ಧರಿಸಿದವನೂ ಆಗಿದ್ದೀಯೆ. ಗುಹೆಯಲ್ಲಿ ವಾಸಮಾಡುತ್ತೀಯೆ. ಕಮಲರೂಪದವನಾಗಿದ್ದೀಯೆ. ಸಾವಿಲ್ಲದವನು, ಸುಂದರ, ಬಾಲಸೂರ್ಯನಂತಿದ್ದೀಯೆ. ಪದ್ಮದಲ್ಲಿ ವಾಸಮಾಡುತ್ತೀಯೆ. ಸಾವಿತ್ರಿಗೆ ಗಂಡನಾಗಿದ್ದೀಯೆ. ನಾಶ

ವರಪ್ರದೋ ದಾನವಾನಾಂ ವಿಷ್ಣೋರ್ಲಬ್ಧವರಸ್ತಥಾ ।
ಕರ್ಮಕರ್ತಾಽಧರ್ಮಹರ್ತಾ ಅಭಯಹಸ್ತ ಏವ ಚ ॥ ೧೭೩ ॥

ಅಗ್ನಿಮುಖೋ ಹ್ಯಗ್ನಿಕೇತುರ್ಮುನಿರೂಪೋ ದಿಶಾಂ ಪತಿಃ ।
ಉತ್ಸವೋ ವೇಧಸ್ರಷ್ಟಾಪಿ ಚತುರ್ವರ್ಗಾಧಿಪಸ್ತಥಾ ॥ ೧೭೪ ॥

ದಕ್ಷಿಣೇ ವಾಮತಶ್ಚಾಪಿ ಪತ್ನೀಭ್ಯಾಮುಪಸೇವಿತಃ ।
ಭಿಕ್ಷುಶ್ಚ ಭಿಕ್ಷುರೂಪೀ ಚ ತ್ರಿಜಟೀ ಜಟಿಲಶ್ಚ ಯಃ ॥ ೧೭೫ ॥

ಚಿತ್ತವೃತ್ತಿಕರಃ ಕಾಮೋ ಮಧುರ್ಮಧುಕರಸ್ತಥಾ ।
ವಾನಪ್ರಸ್ಥೋ ವನಗತ ಆಶ್ರಮ್ಯೈಃ ಪೂಜಿಸ್ತಥಾ ॥ ೧೭೬ ॥

ಜಗದ್ಧಾತಾ ಚ ಕರ್ತಾ ಚ ಪುರುಷಃ ಶಾಶ್ವತೋ ಧ್ರುವಃ ।
ಧರ್ಮಾಧ್ಯಕ್ಷೋ ವಿರೂಪಾಕ್ಷೋ ನೃವರ್ತ್ಮಾ ಭೂತಭಾವನಃ ॥ ೧೭೭ ॥

---

ರಹಿತನು, ದಾನವರಿಗೆ ವರಕೊಡತಕ್ಕವನು, ವಿಷ್ಣುವಿನಿಂದ ವರವನ್ನು ಪಡೆದವನೂ ಆಗಿದ್ದೀಯೆ. ಕರ್ಮಗಳನ್ನು ಮಾಡತಕ್ಕವನು, ಅಧರ್ಮವನ್ನು ನಾಶಮಾಡುವವನು, ಅಭಯವನ್ನು ನೀಡುವವನೂ ಆಗಿದ್ದೀಯೆ, ಮುನಿಯಾಗಿದ್ದೀಯೆ, ದಿಕ್ಪತಿಯು ನೀನಾಗಿದ್ದೀಯೆ, ಉತ್ಸವರೂಪನಾಗಿದ್ದೀಯೆ, ವೇದಗಳನ್ನು ನಿರ್ಮಿಸಿದವನೂ, ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಕೊಡತಕ್ಕವನೂ ಆಗಿದ್ದೀಯೆ.

೧೭೫. ಎಡಬಲ ಬಾಗಗಳೆರಡರಲ್ಲಿಯೂ ಹೆಂಡಿರಿಂದ ಸೇವಿಸಲ್ಪಡುತ್ತಿದ್ದೀಯೆ ಸನ್ಯಾಸಿಯಾಗಿದ್ದೀಯೆ, ಅದೇ ವೇಷವೂ ಇದೆ, ಜಟೆಯುಳ್ಳವನೂ ಇಲ್ಲದವನೂ ಕೂಡ ಆಗಿದ್ದೀಯೆ.

೧೭೬-೧೭೮. ನೀನು ಮನಸ್ಸಿನಲ್ಲಿ ಆಸೆಗಳನ್ನು ಹುಟ್ಟಿಸುವ ಕಾಮನಾಗಿದ್ದೀಯೆ, ಧರ್ಮ ಅಧರ್ಮಗಳನ್ನುಂಟುಮಾಡುವವನೂ ನೀನೇನೆ, ವಾನಪ್ರಸ್ಥಾಶ್ರಮಿಯಾಗಿ ವನಕ್ಕೆ ಹೋಗಿದ್ದೀಯೆ, ಆಶ್ರಮಗಳೇ ನಿನ್ನನ್ನು ಪೂಜಿಸುತ್ತವೆ. ಜಗತ್ತನ್ನು ಧರಿಸಿದವನೂ ಅದಕ್ಕೆ ಕರ್ತನೂ ಆಗಿದ್ದೀಯೆ, ಶಾಶ್ವತನೂ ಧ್ರುವನೂ ಆಗಿದ್ದೀಯೆ, ಧರ್ಮಕ್ಕೆ ಅಧ್ಯಕ್ಷನು, ವಿರೂಪಾಕ್ಷನು, ಮನುಷ್ಯರಂತೆ ನಡೆಯುವವನು, ಕಳೆದುದು ಬರುವುದು, ಇವನ್ನು ಬಲ್ಲವನು. ಮೂರು ವೇದಗಳ ರೂಪನಾಗಿದ್ದೀಯೆ. ಸಾವಿ

ತ್ರಿವೇದೋ ಬಹುರೂಪಶ್ಚ ಸೂರ್ಯಾಯುತಸಮಪ್ರಭಃ ।
ಮೋಹಕೋ ಬಂಧಕಶ್ಚೈವ ದಾನವಾನಾಂ ವಿಶೇಷತಃ ॥ ೧೭೮ ॥

ದೇವದೇವೋಽತಿದೇವಶ್ಚ ಪದ್ಮಾಂಕಿತಜಟಸ್ತಥಾ ।
ಹರಿಶ್ಚ ಶ್ಮಶ್ರುರ್ಧನುರ್ಧಾರೀ ಭೀಮೋ ಧರ್ಮಪರಾಕ್ರಮಃ ॥ ೧೭೯ ॥

ಏವಂ ಸ್ತುತಸ್ತು ರಾಮೇಣ ಬ್ರಹ್ಮಾ ಬ್ರಹ್ಮವಿದಾಂ ವರಃ ।
ಉವಾಚ ಪ್ರಣತಂ ರಾಮಂ ಕರೇ ಗೃಹ್ಯ ಪಿತಾಮಹಃ ॥ ೧೮೦ ॥

॥ ಬ್ರಹ್ಮೋವಾಚ ॥

ವಿಷ್ಣುಸ್ತ್ವಂ ಮಾನುಷೇ ದೇಹೇ ಮಯಾ ಪೂರ್ವಂ ಪ್ರವೇಶಿತಃ ।
ದೇವಾನಾಂ ಕಾರ್ಯಕರಣೇ ಅವತೀರ್ಣೋ ಮಹೀತಲೇ ॥ ೧೮೧ ॥

ಕೃತಂ ತದ್ಭವತಾ ಸರ್ವಂ ದೇವಕಾರ್ಯಂ ತ್ವಯಾ ವಿಭೋ ।
ಇಮಂ ತು ವಾಮನಂ ಸ್ಥಾಪ್ಯ ಜಾಹ್ನವ್ಯಾ ದಕ್ಷಿಣೇ ತಟೇ ॥ ೧೮೨ ॥

---

ರಾರು ಸೂರ್ಯರಿಗೆ ಸಮವಾದ ಕಾಂತಿಯುಳ್ಳವನಾಗಿದ್ದೀಯೆ. ಸಂತೋಷಪಡಿಸುವವನೂ, ಕಟ್ಟಿಹಾಕುವವನೂ ನೀನೆ ಆಗಿದ್ದೀಯೆ. ಅದರಲ್ಲಿಯೂ ದಾನವರಿಗೆ ಇದನ್ನು ಹೆಚ್ಚಾಗಿ ಮಾಡುತ್ತೀಯೆ.

೧೭೯. ನೀನು ದೇವನು. ದೇವತೆಗಳಿಗೆಲ್ಲ ದೇವನು. ಜಟೆಯಲ್ಲಿ ಪದ್ಮಗಳಿವೆ. ಕೆಂಚಗಿರುವ ಗಡ್ಡವುಳ್ಳವನು. ಧನುಸ್ಸನ್ನು ಧರಿಸಿದ್ದೀಯೆ. ಭಯಂಕರನು, ಧರ್ಮವಾದ ಪರಾಕ್ರಮಿಯು

೧೮೦. ಈರೀತಿ ರಾಮನು ಬ್ರಹ್ಮನನ್ನು ಸ್ತುತಿಸಲು ಆ ಬ್ರಹ್ಮನು ರಾಮನ ಕೈಯ್ಯನ್ನು ಹಿಡಿದುಕೊಂಡು ನಮ್ರನಾದ ಆ ರಾಮನಿಗಿಂತೆಂದನು.

೧೮೧. ಬ್ರಹ್ಮನು ಹೇಳಿದನು- ಅಯ್ಯ ನೀನು ವಿಷ್ಣುವು. ನಾನು ನಿನ್ನನ್ನು ಮನುಷ್ಯನ ದೇಹದಲ್ಲಿ ಅವತಾರಃಮಾಡುವಂತೆ ಮಾಡಿದ್ದೇನೆ. ದೇವತೆಗಳ ಕಾರ್ಯಕ್ಕೆ ಭೂಲೋಕದಲ್ಲಿ ಅವತರಿಸಿದ್ದೀಯೆ.

೧೮೨-೧೯೩. ವಿಭುವೆ! ದೇವಕಾರ್ಯವೆಲ್ಲವನ್ನೂ ಮಾಡಿದ್ದೀಯೆ ಈ ವಾಮನ ಮೂರ್ತಿಯನ್ನು ಗಂಗೆಯ ಬಲದಡದಲ್ಲಿ ಸ್ಥಾಪಿಸಿ ಅಯೋಧ್ಯೆಗೆ ಹೋಗಿ ಅನಂತರ

ಅಯೋಧ್ಯಾಂ ಸ್ವಪುರೀಂ ಗತ್ವಾ ಸುರಲೋಕಂ ವ್ರಜಸ್ವ ಹ ।
ವಿಸೃಷ್ಟೋ ಬ್ರಹ್ಮಣಾ ರಾಮಃ ಪ್ರಣಿಪತ್ಯ ಪಿತಾಮಹಂ ॥ ೧೮೩ ॥

ಆರೂಢಃ ಪುಷ್ಪಕಂ ಯಾನಂ ಪ್ರಾಯಾದ್ವೈ ಮಧುರಾಂ ಪುರೀಂ ।
ಸಭಾರ್ಯಂ ಪುತ್ರಸಹಿತಂ ಶತ್ರುಘ್ನಂ ಶತ್ರುಕರ್ಷಣಂ ॥ ೧೮೪ ॥

ತುತೋಷ ರಾಘವಃ ಶ್ರೀಮಾನ್ ಭರತಃ ಸಹರೀಶ್ವರಃ ।
ಶತ್ರುಘ್ನೋ ಭ್ರಾತರೌ ಪ್ರಾಪ್ತೌ ಶಕ್ರೋಪೇಂದ್ರಾವಿವಾಗತೌ ॥ ೧೮೫ ॥

ಪ್ರಣಿಪತ್ಯ ತತೋ ಮೂರ್ಧ್ನಾ ಪಂಚಾಂಗಾಲಿಂಗಿತಾವನಿಃ ।
ಉತ್ಥಾಪ್ಯ ಚಾಂಕಮಾರೋಪ್ಯ ರಾಮೋ ಭ್ರಾತರಮಂಜಸಾ ॥ ೧೮೬ ॥

ಭರತಶ್ಚ ತತಃ ಪಶ್ಚಾತ್ಸುಗ್ರೀವಸ್ತದನಂತರಂ ।
ಉಪವಿಷ್ಟಾಯ ರಾಮಾಯ ಅರ್ಘ್ಯಮಾದಾಯ ಸತ್ವರಃ ॥ ೧೮೭ ॥

ರಾಜ್ಯಂ ನಿವೇದಯಾಮಾಸ ಅಷ್ಟಾಂಗಂ ರಾಘವೇ ತದಾ ।
ಪ್ರಾಪ್ತಂ ಶ್ರುತ್ವಾ ತತೋ ರಾಮಂ ಸರ್ವೋ ವೈ ಮಾಥುರೋ ಜನಃ॥೧೮೮॥

ವರ್ಣಾ ಬ್ರಾಹ್ಮಣಭೂಯಿಷ್ಠಾ ದ್ರಷ್ಟುಂ ಚೈನಂ ಸಮಾಗತಾಃ ।
ಸಂಭಾಷ್ಯ ಪ್ರಕೃತೀಃ ಸರ್ವಾ ನೈಗಮಾ ಬ್ರಾಹ್ಮಣೈಃ ಸಹ ॥ ೧೮೯ ॥

---

ದೇವಲೋಕವನ್ನು ಹೊಂದು. ಬ್ರಹ್ಮನಿಂದ ಬೀಳ್ಕೊಂಡ ರಾಮನು ಬ್ರಹ್ಮನಿಗೆ ನಮಸ್ಕರಿಸಿ ಪುಷ್ಪಕವನ್ನೇರಿ ಮಧುರಾಪುರಿಗೆ ಬಂದು ಅಲ್ಲಿ ರಾಜ್ಯವಾಳುತ್ತಿದ್ದ ಶತ್ರುಘ್ನನಿಗೂ ಅವನ ಹೆಂಡತಿ ಮಕ್ಕಳಿಗೂ ದರ್ಶನವನ್ನು ಕೊಟ್ಟು ಸಂತೋಷಪಡಿಸಿದನು. ಭರತನೂ, ಸುಗ್ರೀವನೂ ಅಂತೆಯೇ ಸಂತೋಷಗೊಳಿಸಿದರು. ಶತ್ರುಘ್ನನು ಇಂದ್ರ ಉಪೇಂದ್ರರಂತೆ ಬಂದಿರುವ ಸಹೋದರರನ್ನು ನೋಡಿ ಸಾಷ್ಟಾಂಗವೆರಗಿದನು. ರಾಮನು ಶತ್ರುಘ್ನನನ್ನೆಬ್ಬಿಸಿ ತೊಡೆಯಮೇಲೆ ಕೂರಿಸಿಕೊಂಡನು. ಅಂತೆಯೇ ಭರತನೂ, ಸುಗ್ರೀವನೂ ಗೌರವಿಸಿದರು. ಅನಂತರ ರಾಮನು ಕುಳಿತುಕೊಳ್ಳಲು ಶತ್ರುಘ್ನನು ಅವನಿಗೆ ಅರ್ಘ್ಯ-ಪಾದ್ಯಗಳನ್ನು ಕೊಟ್ಟು ರಾಜ, ಮಂತ್ರಿ, ಸ್ನೇಹಿತ, ಕೋಶ, ರಾಜ್ಯ, ಕೋಟೆ, ಸೇನೆ, ಪ್ರಜೆಗಳುಳ್ಳ ಎಂಟು ಭಾಗವನ್ನೊಪ್ಪಿಸಿದನು ರಾಮನು ಬಂದುದನ್ನು ಕೇಳಿ ಆ ಮಧುರೆಯ ಜನರೆಲ್ಲರೂ ರಾಮನನ್ನು ನೋಡಲು ಬಂದರು. ಆ ರಾಮನು ಎಲ್ಲಾ ಪ್ರಜೆಗಳೊಡನೆಯೂ ಮಾತನಾಡಿ ಐದು ದಿನಗಳು ಅಲ್ಲಿದ್ದು ಹೊರಡಲು ಮನಸ್ಸು ಮಾಡಿದನು. ಆಗ ಶತ್ರುಘ್ನನು ಆನೆ, ಕುದುರೆ,

ದಿನಾನಿ ಪಂಚ ವೈ ರಾಮ ಉಷ್ಯ ಗಂತುಂ ಮನೋ ದಧೇ ।
ಶತ್ರುಘ್ನಸ್ತು ತತೋ ರಾಮೋ ವಾಜಿನೋಽಥ ಗಜಾಂಸ್ತಥಾ ॥ ೧೯೦ ॥

ಕೃತಾಕೃತಂ ಚ ಕನಕಂ ತಸ್ಮೈ ಪ್ರಾಯನಮಾಹರತ್ ।
ರಾಮಸ್ತ್ವಾಹ ತತಃ ಪ್ರೀತಃ ಸರ್ವಮೇತನ್ಮಯಾ ತವ ॥ ೧೯೧ ॥

ದತ್ತಂ ಪುತ್ರೌ ಚಾಭಿಷಿಂಚ ರಾಜಾನೌ ಮಾಥುರೇ ಜನೇ ।
ಏವಮುಕ್ತ್ವಾ ಗತೋ ರಾಮಃ ಪ್ರಾಪ್ತೇ ಮಧ್ಯಂದಿನೇ ರವೌ ॥ ೧೯೨ ॥

ಮಹೋದಯಂ ಸಮಾಸಾದ್ಯ ಗಂಗಾತೀರೇ ಸ ವಾಮನಂ ।
ಪ್ರತಿಷ್ಠಾಪ್ಯ ದ್ವಿಜಾನಾಹ ಭಾವಿನಃ ಪಾರ್ಥಿವಾಂಸ್ತಥಾ ॥ ೧೯೩ ॥

ಕೃತೋಽಯಂ ಧರ್ಮಸ್ಯ ಮಯಾ ಸೇತುರ್ಭೂತಿವಿವರ್ಧನಃ ।
ಪ್ರಾಪ್ತೇ ಕಾಲೇ ಪಾಲನೀಯೋ ನ ಚ ಲೋಪ್ಯಃ ಕಥಂಚನ ॥ ೧೯೪ ॥

ಪ್ರಸಾರಿತಕರೇಣೈವಂ ಪ್ರಾರ್ಥನೈಷಾ ಮಯಾ ಕೃತಾ ।
ನೃಪಾಃ ಕೃತೇ ಮಯಾರ್ಥಿತ್ವೇ ಯಜ್ಞಃ ಸಂಕ್ರಿಯತಾಮಿತಿ ॥ ೧೯೫ ॥

ನಿತ್ಯಂ ಸುನಂದಿನೀ ಪೂಜಾ ಕಾರ್ಯಾ ಸರ್ವೈರತಂದ್ರಿತೈಃ ।
ಗ್ರಾಮಾನ್ ದತ್ವಾ ಧನಂ ತಚ್ಚ ಲಂಕಾಯಾ ಆಹೃತಂ ಚ ಯತ್ ॥ ೧೯೬ ॥

---

ಅನೇಕಹಣ, ಚಿನ್ನ ಇವನ್ನೆಲ್ಲಾ ತಂದು ಕಾಣಿಕೆಯಾಗಿ ಕೊಟ್ಟನು. ಇದಕ್ಕೆ ರಾಮನು ಸಂತೋಷಗೊಂಡು ನಾನೆಲ್ಲವನ್ನೂ ನಿನಗೆ ಕೊಟ್ಟಿದ್ದೇನೆ. ನಿನ್ನ ಇಬ್ಬರು ಮಕ್ಕಳಿಗೂ ಈ ಮಧುರೆಯಲ್ಲಿ ಪಟ್ಟಾಭಿಷೇಕ ಮಾಡು, ಎಂದು ಹೇಳಿ ಹೊರಟನು. ಮಧ್ಯಾಹ್ನದ ವೇಳೆಗೆ ಗಂಗಾತೀರದ ಮಹೋದಯಕ್ಕೆ ಬಂದು ಅಲ್ಲಿ ವಾಮನ ಮೂರ್ತಿಯನ್ನು ಪ್ರತಿಷ್ಠೆಮಾಡಿ ಅಲ್ಲಿನ ಬ್ರಾಹ್ಮಣರಿಗೂ ಮುಂದೆ ಬರುವ ರಾಜರಿಗೂ ಇಂತೆಂದನು.

೧೯೪–೧೯೫. ನಾನು ಉತ್ತರೋತ್ತರ ಅಭಿವೃದ್ಧಿಯನ್ನು ಕೊಡುವ ಈ ಧರ್ಮಸೇತುವನ್ನು ಮಾಡಿದ್ದೇನೆ. ಕೈ ಮುಗಿದುಕೊಂಡು ಕೇಳಿಕೊಳ್ಳುತ್ತೇನೆ. ಯಾವ ರೀತಿಯಲ್ಲಿಯೂ ಇದಕ್ಕೆ ಲೋಪಮಾಡಬೇಡಿರಿ. ಇದರ ಪೂಜೆಗೆ ಸರಿಯಾಗಿ ಏರ್ಪಡಿಸಬೇಕೆಂದು ರಾಜರನ್ನು ಕೈಯೆತ್ತಿಕೊಂಡು ಕೇಳಿಕೊಳ್ಳುತ್ತೇನೆ.

೧೯೬. ಎಲ್ಲರೂ ಕೂಡ ಇದಕ್ಕೆ ಆನಂದವಾಗುವ ರೀತಿಯಲ್ಲಿ ಪೂಜೆಮಾಡಿರೆಂದು ಹೇಳಿ ಗ್ರಾಮಗಳನ್ನು ಕೊಟ್ಟು ಲಂಕೆಯಿಂದ ತಂದಿದ್ದ ಹಣವನ್ನೆಲ್ಲಾ ಅಲ್ಲಿನವರಿಗೆ ಕೊಟ್ಟನು.

ಪ್ರೇಷಯಿತ್ವಾ ತು ಕಿಷ್ಕಿಂಧಾಂ ಸುಗ್ರೀವಂ ವಾನರೇಶ್ವರಂ ।
ಅಯೋಧ್ಯಾಮಾಗತೋ ರಾಮಃ ಪುಷ್ಪಕಂ ತಮಥಾಬ್ರವೀತ್ ॥ ೧೯೭ ॥

ನಾಗಂತವ್ಯಂ ತ್ವಯಾ ಭೂಯಸ್ತಿಷ್ಠ ಯತ್ರ ಧನೇಶ್ವರಃ ।
ಕೃತಕೃತ್ಯಸ್ತತೋ ರಾಮಃ ಕರ್ತವ್ಯಂ ನಾಪ್ಯಮನ್ಯತ ॥ ೧೯೮ ॥

॥ ಪುಲಸ್ತ್ಯ ಉವಾಚ ॥

ಏವಂ ತೇ ಭೀಷ್ಮ ರಾಮಸ್ಯ ಕಥಾಯೋಗೇನ ಪಾರ್ಥಿವ ।
ಉತ್ಪತ್ತಿರ್ವಾಮನಸ್ಯೋಕ್ತಾ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೧೯೯ ॥

ಕಥಯಾಮಿ ಚ ತೇ ಸರ್ವಂ ಯತ್ರ ಕೌತೂಹಲಂ ನೃಪ ।
ಸರ್ವಂ ತೇ ಕೀರ್ತಯಿಷ್ಯಾಮಿ ಯೇನಾರ್ಥೀ ನೃಪಸತ್ತಮ ॥ ೨೦೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ವಾಮನಪ್ರತಿಷ್ಠಾವರ್ಣನಂ
ನಾಮ ಪಂಚತ್ರಿಂಶತಮೋಽಧ್ಯಾಯಃ

---

೧೯೭-೧೯೮. ಸುಗ್ರೀವನನ್ನು ಕಿಷ್ಕಿಂಧೆಗೆ ಕಳುಹಿಸಿ ರಾಮನು ಅಯೋಧ್ಯೆಗೆ ಬಂದು ಪುಷ್ಪಕವನ್ನು ಕುರಿತು ಎಲೈ ಪುಷ್ಪಕವೆ! ಇನ್ನುಮೇಲೆ ನೀನು ಬರಬೇಡ. ಧನೇಶ್ವರನಾದ ಕುಬೇರನಿರುವಲ್ಲಿಯೇ ಇರು, ಎಂದನು. ಈರೀತಿ ರಾಮನು ಮಾಡ ತಕ್ಕುದೆಲ್ಲವನ್ನೂ ಮಾಡಿದನು. ಮತ್ತೇನೂ ಉಳಿದಿರಲಿಲ್ಲ.

೧೯೯. ಪುಲಸ್ತ್ಯನು ಹೇಳಿದನು– ಎಲೈ ಭೀಷ್ಮನೇ! ರಾಮನ ಕಥೆಗಳ ಸಂದರ್ಭದಿಂದ ವಾಮನಮೂರ್ತಿಯ ಸ್ಥಾಪನೆಯನ್ನು ಹೇಳಿದೆ. ಮತ್ತೇನನ್ನು ಹೇಳಬೇಕು.

೨೦೦. ನಿನಗೆ ಯಾವುದರಲ್ಲಿ ಆಸೆಯಿದೆ, ಕೇಳು. ಅದೆಲ್ಲವನ್ನೂ ಹೇಳುತ್ತೇನೆ ನಿನಗೆ ಬೇಕಾದುದನ್ನು ಕೇಳು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ವಾಮನಪ್ರತಿಷ್ಠೆಯವರ್ಣನವೆಂಬ
ಮೂವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–×–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ॥ ಷಟ್ತ್ರಿಂಶೋಽಧ್ಯಾಯಃ ॥



॥ ಭೀಷ್ಮ ಉವಾಚ ॥

**ಕಥಿತಂ ರಾಮದೇವಸ್ಯ ಮಾಹಾತ್ಮ್ಯಂ ವಿಸ್ತರೇಣ ವೈ ।**
**ಪುನಸ್ತಸ್ಯೈವ ಮಾಹಾತ್ಮ್ಯಂ ವಿಷ್ಣೋರೇವ ವದಸ್ವ ಮೇ ॥ ೧ ॥**

**ಪದ್ಮರೂಪಮಭೂದೇತತ್ಕಥಂ ಹೇಮಮಯಂ ಜಗತ್ ।**
**ಕಥಂ ಚ ವೈಷ್ಣವೀ ಸೃಷ್ಟಿಃ ಪದ್ಮಮಧ್ಯೇಽಭವತ್ಪುರಾ ॥ ೨ ॥**

**ಕಥಂ ಪಾದ್ಮೇ ಮಹಾಕಲ್ಪೇಽಭವತ್ಪದ್ಮಮಯಂ ಜಗತ್ ।**
**ಜಲಾರ್ಣವಗತಸ್ಯೇಹ ನಾಭೌ ಜಾತಂ ಜಲೋದ್ಭವಂ ॥ ೩ ॥**

---

## ಮೂವತ್ತಾರನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು– ಎಲೈ ದ್ವಿಜಶ್ರೇಷ್ಠನೇ! ರಾಮನ ಮಹಿಮೆಯನ್ನು ವಿಸ್ತಾರವಾಗಿ ಹೇಳಿದ್ದೀಯೆ. ಮತ್ತೆ ಅದೇ ವಿಷ್ಣುವಿನ ಮಹಿಮೆಯನ್ನು ಹೇಳು.

೨. ಈ ಪ್ರಪಂಚವು ಹೇಮಮಯವಾದುದು. ಪದ್ಮರೂಪವಾಗಿ ಹೇಗೆ ಆಯಿತು? ಆ ವಿಷ್ಣುವಿನ ಸೃಷ್ಟಿಯು ಪದ್ಮದ ಮಧ್ಯೆ ಹೇಗೆ ನಿರ್ಮಿತವಾಯಿತು?

೩-೫. ಪದ್ಮಮಹಾಕಲ್ಪದಲ್ಲಿ ಪ್ರಪಂಚವು ಪದ್ಮಮಯವಾದುದು ಹೇಗೆ? ದೊಡ್ಡ ಸಮುದ್ರದಲ್ಲಿ ಮಲಗಿರುವ ಆ ವಿಷ್ಣುವಿನ ಹೊಕ್ಕಳಿನಲ್ಲಿ ಕಮಲವು ಹುಟ್ಟಿ

ಪ್ರತಾಪಂ ಪದ್ಮನಾಭಸ್ಯ ಸ್ವಪತಸ್ಸಾಗರಾಂಭಸಿ ।
ಪುಷ್ಕರೇತು ಕಥಂ ಜಾತಾ ದೇವಾ ಋಷಿಗಣಾಃ ಪುರಾ ॥ ೪ ॥

ಏತದಾಖ್ಯಾಹಿ ನಿಖಿಲಂ ಯೋಗಂ ಯೋಗವಿದಾಂವರ ।
ಶೃಣ್ವತಸ್ತಸ್ಯ ಮೇ ಕೀರ್ತಿಂ ನ ತೃಪ್ತಿರುಪಜಾಯತೇ ॥ ೫ ॥

ಕಿಯತಾ ಚೈವ ಕಾಲೇನ ಶೋಭತೇ ಪುರುಷೋತ್ತಮಃ ।
ಕಿಯನ್ತ ವೈ ಸ್ವಪಿತಿ ಚ ಕತಿ ಕಾಲಸ್ಯ ಸಂಭವಾಃ ॥ ೬ ॥

ಕಿಯತಾ ವಾಥ ಕಾಲೇನ ಉತ್ತಿಷ್ಠತಿ ಮಹಾಯಶಾಃ ।
ಕಥಂ ಚೋತ್ಥಾಯ ಭಗವಾನ್ಸೃಜತೇ ನಿಖಿಲಂ ಜಗತ್ ॥ ೭ ॥

ಕೇ ಪ್ರಜಾಪತಯಸ್ತಾವದಾಸನ್ಪೂರ್ವೇ ಮಹಾಮುನೇ ।
ಕಥಂ ನಿರ್ಮಿತವಾಂಶ್ಚೈವ ಚಿತ್ರಂ ಲೋಕಂ ಸನಾತನಂ ॥ ೮ ॥

ಕಥಮೇಕಾರ್ಣವೇ ಶೂನ್ಯೇ ನಷ್ಟೇ ಸ್ಥಾವರಜಂಗಮೇ ।
ನಷ್ಟದೇವಾಸುರವರೇ ಪ್ರಣಷ್ಟೋರಗರಾಕ್ಷಸೇ ॥ ೯ ॥

---

ದುದು ಹೇಗೆ? ಸಮುದ್ರದ ನೀರಿನಮೇಲೆ ಮಲಗಿರುವ ಆ ಪದ್ಮನಾಭನ ಮಹಿಮೆಯು ಎಷ್ಟರಮಟ್ಟಿಗಿದ್ದಿತು ? ಎಲೈ ಯೋಗಿಶ್ರೇಷ್ಠನೇ! ಈ ಯೋಗದ ವಿಷಯವನ್ನು ತಿಳಿಸು. ಆ ಸ್ವಾಮಿಯ ಕೀರ್ತಿಯನ್ನು ಕೇಳುತ್ತಿದ್ದರೆ ತೃಪ್ತಿಯೇ ಉಂಟಾಗುವುದಿಲ್ಲ !

೬-೮, ಆ ಪುರುಷೋತ್ತಮನು ಹಾಗೆ ಎಷ್ಟು ಕಾಲದವರೆಗೂ ಇದ್ದನು ? ಎಷ್ಟು ಕಾಲಮಲಗಿದ್ದನು ? ಎಷ್ಟು ಕಾಲದ ಮೇಲೆ ಎದ್ದನು ? ಅವನು ಎದ್ದು ಯಾವಾಗಪ್ರಪಂಚವನ್ನು ಸೃಷ್ಟಿಮಾಡಿದನು ? ಪೂರ್ವದಲ್ಲಿ ಪ್ರಜಾಪತಿಗಳು ಯಾರು ಯಾರುಇದ್ದರು ? ನಾನಾ ಬಗೆಯಾದ ಈ ಲೋಕಗಳನ್ನು ಹೇಗೆ ಸೃಷ್ಟಿಮಾಡಿದನು ?

೯-೧೧. ಸಮುದ್ರವು ತನ್ನ ನೀರನ್ನೆಲ್ಲಾ ಎಲ್ಲಾ ಕಡೆಯಲ್ಲಿಯೂ ಹರಡಲು ಚರಾಚರಗಳೆಲ್ಲ ನಷ್ಟವಾಗಲು, ದೇವಾಸುರರು ನಷ್ಟವಾಗಲು, ಸರ್ಪ ರಾಕ್ಷಸರೆಲ್ಲರೂ

ನಷ್ಟಾನಲಾನಿಲೇ ಲೋಕೇ ನಷ್ಟಧರ್ಮೇ ಮಹೀತಳೇ ।
ಕೇವಲೇ ಗಹ್ವರೀಭೂತೇ ಮಹಾಭೂತ ವಿಪರ್ಯಯೇ ॥ ೧೦ ॥

ವಿಭುರ್ಭೂತಪತಿಸ್ತಾಕ್ಷಾನ್ಮಹಾತೇಜಾ ಮಖಾಕೃತಿಃ ।
ಸುಪ್ತಸ್ಸುರವರಶ್ರೇಷ್ಠೋ ವಿಧಿಮಾಸ್ಥಾಯ ಯೋಗವಿತ್ ॥ ೧೧ ॥

ಶೃಣ್ವತಃ ಪರಯಾ ಭಕ್ತ್ಯಾ ಬ್ರಹ್ಮನ್ನೇತದಶೇಷತಃ ।
ವಕ್ತುಮರ್ಹಸಿ ಧರ್ಮಿಷ್ಠ ಯಶೋನಾರಾಯಣಾತ್ಮಕಂ
ಶ್ರದ್ಧಿನಶ್ಚೋಪವಿಷ್ಟಸ್ಯ ಭಗವನ್ವಕ್ತುಮರ್ಹಸಿ । ॥ ೧೨ ॥

॥ ಪುಲಸ್ತ್ಯ ಉವಾಚ ॥

ನಾರಾಯಣಸ್ಯ ಯಶಸಃ ಶ್ರವಣೇ ಯಾ ತವ ಸ್ಪೃಹಾ ।
ಸದ್ವಂಶಾನ್ವಯಭೂತಸ್ಯ ನ್ಯಾಯ್ಯಂ ಕುರುಕುಲೋದ್ಭವ ॥ ೧೩ ॥

ಶೃಣುಷ್ವಾದಿಪುರಾಣೇಷು ದೇವೇಭ್ಯಶ್ಚ ಯಥಾಶ್ರುತಿ ।
ಚಾಬ್ರಹ್ಮಸಾನಾಂ ಚ ವದತಾಂ ಶ್ರುತ್ವಾ ಚೈತನ್ಮಹಾತ್ಮನಾಂ ॥ ೧೪ ॥

---

ನಷ್ಟವಾಗಲು, ಗಾಳಿ ಬೆಂಕಿಗಳೂ ನಾಶವಾಗಲು, ಭೂಮಿಯಲ್ಲಿ ಧರ್ಮವೇ ನಾಶವಾಗಲು, ಮಹಾಭೂತಗಳೆಲ್ಲವೂ ನಾಶವಾದ ಮೇಲೆ ಪ್ರಪಂಚವೆಲ್ಲವೂ ಗುಹೆಯಂತಾಗಲು ವಿಭುವೂ, ಒಡೆಯನೂ, ಮಹಾ ತೇಜಸ್ವಿಯೂ ಯಜ್ಞದ ಆಕಾರವುಳ್ಳವನೂ, ಆದ ಆ ಸ್ವಾಮಿಯು ಯೋಗದ ವಿಧಿಯಿಂದ ಹೇಗೆ ಮಲಗಿದನು ?

೧೨. ಎಲೈ ಧರ್ಮಿಷ್ಠನೇ ! ಶ್ರದ್ಧೆಯಿಂದ ಕುಳಿತುಕೊಂಡು ಪರಮ ಭಕ್ತಿಯಿಂದ ನಾರಾಯಣಾತ್ಮಕವಾದ ಯಶಸ್ಸನ್ನು ಪೂರ್ತಿಯಾಗಿ ಕೇಳಬೇಕೆಂದಿರುವ ನನಗೆ ತಾವು ಹೇಳಬೇಕು.

೧೩. ಪುಲಸ್ತ್ಯನು ಹೇಳಿದನು– ಎಲೈ ಭೂಪನೇ ! ಒಳ್ಳೆಯ ವಂಶದಲ್ಲಿ ಹುಟ್ಟಿದ ನಿನಗೆ ನಾರಾಯಣನ ಯಶಸ್ಸನ್ನು ಕೇಳಬೇಕೆಂಬ ಆಸೆಯು ಯುಕ್ತವಾಗಿದೆ.

೧೪-೧೫ ಹಿಂದಿನ ಪುರಾಣಗಳನ್ನೋದಿ ದೇವತೆಗಳಿಂದ ತಿಳಿದು ವೇದದಲ್ಲಿ ನೋಡಿ ಬ್ರಾಹ್ಮಣರು ಹೇಳಿರುವುದನ್ನು ಆಲೋಚಿಸಿ ಮಹಾತ್ಮರಿಂದ ವಿಷಯವನ್ನು

ಯಥಾ ಚ ತಪಸಾ ದೃಷ್ಟ್ವಾ ಬೃಹಸ್ಪತಿಸಮದ್ಯುತಿಃ ।
ಪರಾಶರಸುತಶ್ಶ್ರೀಮಾನ್ಗುರುರ್ದ್ವೈಪಾಯನೋಽಬ್ರವೀತ್ ॥ ೧೫ ॥

ತತ್ತೇಽಹಂ ಕಥಯಿಷ್ಯಾಮಿ ಯಥಾಮತಿ ಯಥಾಶ್ರುತಂ ।
ಯದಿ ಜ್ಞಾತಂ ಮಯಾ ಸಮ್ಯಗೃಷಿಮಾತ್ರೇಣ ಸತ್ತಮ ॥ ೧೬ ॥

ಕಸ್ಸಮುತ್ಸಹತೇ ಜ್ಞಾತುಂ ಪರಂ ನಾರಾಯಣಾತ್ಮಕಂ ।
ವಿಶ್ವಂ ಪಿತಾ ಯಂ ಬ್ರಹ್ಮಾಪಿ ನ ವೇದಯತಿ ತತ್ವತಃ ॥ ೧೭ ॥

ತತ್ಕರ್ಮ ವಿಶ್ವದೇವಾನಾಂ ತದ್ರಹಸ್ಯಂ ಮಹರ್ಷಿಣಾಂ ।
ತದಿಜ್ಯಂ ಸರ್ವಯಜ್ಞಾನಾಂ ತತ್ತತ್ವಂ ಸರ್ವದರ್ಶಿನಾಂ ॥ ೧೮ ।

ತದಧ್ಯಾತ್ಮಮಧ್ಯಾತ್ಮವಿದಾಂ ನರಕಂ ಚ ವಿಕರ್ಮಿಣಾಂ ।
ಅಧಿದೈವಂ ಚ ತದ್ದೈವಮಧಿದೈವತಸಂಜ್ಞಿತಂ ॥ ೧೯ ॥

---

ಸಂಗ್ರಹಿಸಿ ತಪಸ್ಸಿನಿಂದಲೂ, ತಿಳಿದು ಬೃಹಸ್ಪತಿಯಂತಿರುವ ಪರಾಶರನ ಮಗನಾದ, ಗುರುವಾದ, ವ್ಯಾಸರು ಹೇಳಿರುವುದನ್ನು ಹೇಳುತ್ತೇನೆ. ಮನಸ್ಸಿಟ್ಟು ಕೇಳು.

೧೬. ಋಷಿಯು ಹೇಳಿರುವ ರೀತಿಯಲ್ಲಿ ನಾನು ಚೆನ್ನಾಗಿ ತಿಳಿದಿರುವುದನ್ನೂ, ಕೇಳಿರುವುದನ್ನೂ, ನನ್ನ ಬುದ್ಧಿಗೆ, ತಿಳಿದಿರುವಂತೆ ನಿನಗೆ ಹೇಳುತ್ತೇನೆ.

೧೭. ತಂದೆಯಾದ ಬ್ರಹ್ಮನೂ ಕೂಡ ನಾರಾಯಣಾತ್ಮಕವಾದ ಯಾವ ಪ್ರಪಂಚವನ್ನು ಸರಿಯಾಗಿ ತಿಳಿದಿಲ್ಲವೋ, ಅದನ್ನು ಹೇಳಲು ಯಾರಿಗೆ ತಾನೇ ಸಾಧ್ಯವಾದೀತು ?

೧೮. ಎಲ್ಲಾ ದೇವತೆಗಳಿಗೂ ಎಲ್ಲಾ ಋಷಿಗಳಿಗೂ, ಅದು ರಹಸ್ಯವು ಅವರಿಗೆ ಅದು ಗೊತ್ತಾಗುವಂತಿಲ್ಲ. ಎಲ್ಲ ಯಜ್ಞಗಳಿಗೂ ಅದೇ ಹೋಮಕ್ಕೆ ವಿಷಯ ವಾದುದು. ಎಲ್ಲಾ ಶಾಸ್ತ್ರಗಳಿಗೂ ಅದೇ ಮುಖ್ಯಾಂಶವು.

೧೯. ಅಧ್ಯಾತ್ಮದಲ್ಲಿ ಆಸಕ್ತರಾದವರಿಗೆ ಇದೇ ಅಧ್ಯಾತ್ಮವು. ಕೆಟ್ಟ ಕೆಲಸ ಮಾಡುವವರಿಗೆ ಇದೇ ನರಕವು. ದೇವರಿಗೆಲ್ಲಾ ಇದೇ ದೊಡ್ಡ ದೇವರು. ಇದಕ್ಕೇನೇ ಅಧಿದೈವತವೆಂದು ಹೇಳುತ್ತಾರೆ.

ಅಧಿಭೂತಂ ಚ ತದ್ರೂಪಂ ಪರಂ ಚ ಪರಮರ್ಷಿಣಾಂ ।
ಸ ಯಜ್ಞೋ ವೇದನಿರ್ದಿಷ್ಟಸ್ತತ್ತಪಃ ಕವಯೋ ವಿದುಃ ॥ ೨೦ ॥

ಯಃ ಕರ್ತಾ ಕಾರಕಂ ಬುದ್ಧಿಃ ಮನಃ ಕ್ಷೇತ್ರಜ್ಞ ಏವ ಚ ।
ಪ್ರಣವಃ ಪುರುಷಃ ಶಾಸ್ತಾ ಏಕಶ್ಚೇತಿ ವಿಭಾವ್ಯತೇ ॥ ೨೧ ॥

ಪ್ರಾಣಃ ಪಂಚವಿಧಶ್ಚೈವ ಧ್ರುವಮಕ್ಷರಮೇವ ಚ ।
ಕಾಲಃ ಪಾಕಶ್ಚ ಯಜ್ಞಶ್ಚ ದ್ರಷ್ಟಾ ಚಾಧೀತ ಏವ ಚ ॥ ೨೨ ॥

ಉಚ್ಯತೇ ವಿವಿಧೈರ್ಭಾವೈಃ ಸ ಏವಾಯಂ ತು ತತ್ಪರಂ ।
ಸ ಏವ ಭಗವಾನ್ಸರ್ವಂ ಕರೋತಿ ನ ಕರೋತಿ ಚ ॥ ೨೩ ॥

ಸೋಽಸ್ಮಾನ್ಕಾರಯತೇ ಸರ್ವಾನನ್ಯೇಽಪಿ ವ್ಯಾಕುಲೀಕೃತಾಃ ।
ಯಜಾಮಹೇ ತಮೇವಾದ್ಯಂ ತಮೇವೇಚ್ಛಾಮಿ ನಿರ್ವೃತಃ ॥ ೨೪ ॥

---

೨೦. ಆರೂಪವು ಭೂತಗಳಿಗೂ ಮೇಲುತರವಾದ ಭೂತವು, ಪರಮಋಷಿಗಳಿಗೂ ಉತ್ತಮವಾದುದು. ವೇದದಿಂದ ಹೇಳಲ್ಪಟ್ಟ ಯಜ್ಞವೇ ಅದು. ಅದನ್ನು ತಪಸ್ಸೆಂದು ಕವಿಗಳು ತಿಳಿದಿರುವರು.

೨೧. ಅವನೇ ಮಾಡುವವನು, ಮಾಡಿಸುವವನು, ಮನಸ್ಸೂ ಅವನೇನೆ, ಪರಮಾತ್ಮನೂ ಅವನೇ, ಪ್ರಣವನೂ, ಪುರುಷನೂ, ನಿಯಾಮಕನೂ, ಅವನೇ ಆಗಿರುತ್ತಾನೆ. ಅಲ್ಲದೆ ಒಬ್ಬನೆಂದೂ ತಿಳಿಯಲ್ಪಡುತ್ತಾನೆ.

೨೨. ಐದು ವಿಧವಾದ ಪ್ರಾಣಗಳೂ ಅವನೇನೆ, ಶಾಶ್ವತನು, ಕ್ಷಯಿಸದವನು, ಕಾಲರೂಪಿಯು, ಪಾಕನು, ಯಜ್ಞರೂಪನು, ನೋಡುವವನು, ತಿಳಿದವನು ಕೂಡ ಅವನೇ ಆಗಿರುತ್ತಾನೆ.

೨೩. ನಾನಾರೀತಿಯಿಂದ ಅವನನ್ನೇ ಗ್ರಹಿಸುತ್ತೇವೆ. ಅವನೇ ಪರಾತ್ಪರ ರೂಪನು. ಅವನೇ ಭಗವಂತನು. ಸರ್ವವೂ ಅವನೇನೆ. ಎಲ್ಲವನ್ನೂ ಮಾಡುತ್ತಾನೆ, ಮಾಡದಂತೆಯೂ ಇರುತ್ತಾನೆ.

೨೪. ಅವನು ನಮ್ಮನ್ನು ಎಲ್ಲರನ್ನೂ ಸುಖಿಗಳನ್ನಾಗಿಯೂ, ದುಃಖಿಗಳನ್ನಾಗಿಯೂ ಮಾಡುತ್ತಾನೆ ಆ ಆದಿಪುರುಷನನ್ನು ಪೂಜಿಸುತ್ತೇವೆ. ಅವನನ್ನೇ ಸುಖಿಗಳಾದಾಗ ಅಪೇಕ್ಷಿಸುತ್ತೇವೆ.

ಯೋ ವಕ್ತಾ ಯಶ್ಚ ವಕ್ತವ್ಯಂ ಯಶ್ಚಾಯಂ ತದ್ಬ್ರವೀಮಿ ತೇ ।
ಶ್ರೂಯತೇ ಯಚ್ಚ ವೈ ಶ್ರಾವ್ಯಂ ಯಚ್ಚಾನ್ಯತ್ಪರಿಜಲ್ಪಿತಂ ॥ ೨೫ ॥

ಯಾ ಕಥಾ ಯಾಶ್ಚ ಶ್ರುತಯೋ ಯೋ ಧರ್ಮೋ ಧರ್ಮತತ್ಪರಃ ।
ವಿಶ್ವಂ ವಿಶ್ವಪತಿರ್ಯಶ್ಚ ಸ ತು ನಾರಾಯಣಃ ಸ್ಮೃತಃ ॥ ೨೬ ॥

ಯತ್ಸತ್ಯಂ ಯದನೃತಮಾದ್ಯಮುದ್ಯಭೂತಂ
ಯಚ್ಚಾನ್ತ್ಯಂ ನಿರವಧಿಕಂ ಚ ಯದ್ಭವಿಷ್ಯಂ ।
ಯತ್ಕಿಂಚಿಚ್ಚರಮಚರಂ ಯದಸ್ತಿ ಚಾನ್ಯ
ತ್ತತ್ಸರ್ವಂ ಪುರುಷವರಃ ಪ್ರಧಾನಭೂತಃ ॥ ೨೭ ॥

ಚತ್ವಾರ್ಯಾಹುಸ್ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಂ ।
ತಸ್ಯ ತಾವಚ್ಛತೀ ಸಂಧ್ಯಾ ದ್ವಿಗುಣಾ ಕುರುನಂದನ ॥ ೨೮ ॥

ಯತ್ರ ಧರ್ಮಶ್ಚತುಷ್ಪಾದಸ್ತ್ವಧರ್ಮಃ ಪಾದವಿಗ್ರಹಃ ।
ಸ್ವಧರ್ಮನಿರತಾಶ್ಶಾನ್ತಾ ಜಾಯಂತೇಯತ್ರ ಮಾನವಾಃ ॥ ೨೯ ॥

---

೨೫. ಹೇಳತಕ್ಕವನೂ, ಹೇಳಿಸಿಕೊಳ್ಳುವವನೂ, ಕೇಳತಕ್ಕವನೂ, ಕೇಳಿಸಿಕೊಳ್ಳತಕ್ಕವನೂ ಯಾರೆಂಬುದನ್ನು ಹೇಳುತ್ತೇನೆ.

೨೬. ಕಥೆಗಳೂ, ಶ್ರುತಿಗಳೂ, ಧರ್ಮವೂ, ಧರ್ಮ ಮಾಡುವವನೂ, ಪ್ರಪಂಚ, ಪ್ರಪಂಚಕ್ಕೆ ಒಡೆಯ ಅವೆಲ್ಲವೂ ಆ ನಾರಾಯಣನೇನೆ ಆಗಿದ್ದಾನೆ.

೨೭. ನಿಶ್ಚಯ, ಸುಳ್ಳು, ಆದಿಭೂತ, ಅಂತ್ಯ, ಮಧ್ಯ, ಮೊದಲು, ಕೊನೆಯಿಲ್ಲದ್ದು, ಮುಂದೆ ಬರತಕ್ಕದ್ದು, ಚರ, ಅಚರ, ಮತ್ತು ಏನೇನಿವೆಯೋ ಅವೆಲ್ಲವೂ ಕೂಡ ಮುಖ್ಯನಾದ ಪುರುಷಶ್ರೇಷ್ಠನಾದ ಆ ನಾರಾಯಣನೇ ಆಗಿದ್ದಾನೆ.

೨೮. ಕೃತಯುಗವು ನಾಲ್ಕು ಸಾವಿರ ವರ್ಷಗಳವರೆಗೂ ಇರುವುದು. ಇನ್ನೂರು ಸಂಧ್ಯೆಗಳಷ್ಟು ದಿನವು ಹೆಚ್ಚಾಗಿರುವುದು. ಈ ಇನ್ನೂರು ವರ್ಷಗಳೂ ಸಂಧ್ಯೆ ಎಂದೆನಿಸಿಕೊಳ್ಳುತ್ತವೆ. ಹಿಂದಕ್ಕೆ ಇನ್ನೂರು ಮುಂದಕ್ಕೆ ಇನ್ನೂರು ವರ್ಷಗಳೂ ಒಟ್ಟಿನಲ್ಲಿ ನಾನೂರು ವರ್ಷಗಳಾಗುತ್ತವೆ.

೨೯. ಆ ಕೃತಯುಗದಲ್ಲಿ ಧರ್ಮವು ನಾಲ್ಕು ಪಾದಗಳುಳ್ಳದ್ದಾಗಿ, ಅಧರ್ಮವು ಒಂದು ಕಾಲುಳ್ಳದ್ದಾಗಿರುತ್ತೆ. ಧರ್ಮವು ಪೂರ್ತಿಯಾಗಿರುತ್ತೆ, ಮತ್ತು ಜನಗಳು ಅವರವರ ಧರ್ಮಗಳಲ್ಲಿ ಆಸಕ್ತರಾಗಿಯೂ, ಶಾನ್ತರಾಗಿಯೂ ಇರುತ್ತಾರೆ.

ವಿಪ್ರಾಸ್ಸ್ಥಿತಾ ಧರ್ಮಪರಾ ರಾಜವೃತ್ತೇಸ್ಥಿತಾ ನೃಪಾಃ ।
ಕೃಷ್ಯಾಮಭಿರತಾ ವೈಶ್ಯಾಶ್ಶೂದ್ರಾಶ್ಶುಶ್ರೂಷವಸ್ತಥಾ ॥ ೩೦ ॥

ತದಾ ಸತ್ಯಂ ಚ ಶೌತಂಚ ಚ ಧರ್ಮಶ್ಚೈವ ವಿವರ್ಧತೇ ।
ಸದ್ಭಿರಾಚರಿತಂ ಕರ್ಮ ಕ್ರಿಯತೇ ಕಾರ್ಯತೇ ಚ ಯತ್ ॥ ೩೧ ॥

ಏತತ್ಕೃತಯುಗೇ ವೃತ್ತಂ ಸರ್ವೇಷಾ ಮೇವ ಪಾರ್ಥಿವ ।
ಪ್ರಾಣಿನಾಂ ಧರ್ಮಶೀಲಾನಾಂ ನರಾಣಾಂ ನೀಚಜನ್ಮನಾಂ ॥ ೩೨ ॥

ತ್ರೀಣಿ ವರ್ಷಸಹಸ್ರಾಣಿ ತ್ರೇತಾಯುಗಮಿಹೋಚ್ಯತೇ ।
ತಸ್ಯ ತಾವಚ್ಛತೀ ಸಂಧ್ಯಾ ದ್ವಿಗುಣಾ ಪರಿಕೀರ್ತಿತಾ ॥ ೩೩ ॥

ದ್ವಾಭ್ಯಾಮಧರ್ಮಃ ಪಾದಾಭ್ಯಾಂ ತ್ರಿಭಿರ್ಧರ್ಮೋ ವ್ಯವಸ್ಥಿತಃ ।
ಯತ್ರ ಸತ್ಯಂ ಚ ಶೌಚಂ ಚ ಕ್ರಿಯಾಧರ್ಮೋ ವಿಧೀಯತೇ ॥ ೩೪ ॥

---

೩೦. ಬ್ರಾಹ್ಮಣರು ಧರ್ಮದಲ್ಲಿ ಆಸಕ್ತರಾಗಿಯೂ, ರಾಜರು ಕ್ಷತ್ರಿಯ ಧರ್ಮದಲ್ಲಿ ಆಸಕ್ತರಾಗಿಯೂ, ವೈಶ್ಯರು ಕೃಷಿಯಲ್ಲಿ ಆಸಕ್ತರಾಗಿಯೂ, ಶೂದ್ರರು ಶುಶ್ರೂಷೆಯಲ್ಲಿ ಮನಸ್ಸಿಟ್ಟೂ ಇರುವರು.

೩೧ ಆಗ ಸತ್ಯ, ಶೌಚ, ಧರ್ಮಗಳು ವೃದ್ಧಿ ಹೊಂದುತ್ತವೆ. ಸತ್ಪುರುಷರು ಮಾಡುವ ಕೆಲಸವನ್ನು ಎಲ್ಲರೂ ಮಾಡುತ್ತಾರೆ. ಮತ್ತು ಮಾಡಿಸುತ್ತಾರೆ

೩೨. ಮತ್ತು ನೀಚಕುಲದಲ್ಲಿ ಹುಟ್ಟಿದ ಪ್ರಾಣಿಗಳೆಲ್ಲರೂ ಧರ್ಮಶೀಲರಾಗಿ ಅದೇ ಕೆಲಸದಲ್ಲಿ ಆಸಕ್ತರಾಗಿರುವರು. ಇದು ಕೃತಯುಗದಲ್ಲಿ ನಡೆಯುವ ಧರ್ಮದ ಸ್ಥಿತಿಯು.

೩೩. ಮೂರು ಸಾವಿರ ವರ್ಷಗಳ ಕಾಲ ತ್ರೇತಾಯುಗವಿರುವುದು. ಮತ್ತು ಅದರಲ್ಲಿಯೂ ಇನ್ನೂರು ಸಂಧ್ಯೆಗಳಷ್ಟು ದಿನವು ಹೆಚ್ಚಾಗಿರುತ್ತದೆ.

೩೪. ಅಧರ್ಮವು ಎರಡು ಕಾಲಿನಿಂದಲೂ, ಧರ್ಮವು ಮೂರು ಕಾಲಿನಿಂದಲೂ ನಿಂತಿರುತ್ತದೆ. ಆಗ ಸತ್ಯವೂ, ಶೌಚವೂ, ಧರ್ಮವೂ, ಕ್ರಿಯೆಯೂ, ಹೆಚ್ಚುತ್ತವೆ. ಆಗ ಮಾಡುವುದಕ್ಕೆ ಆಜ್ಞೆ ಮಾಡುವುದು ಹೆಚ್ಚು.

ತ್ರೇತಾಯಾಂ ವಿಕೃತಿಂ ಯಾಂತಿ ವರ್ಣಾ ಲೋಭೇನ ಸಂಯುತಾಃ ।
ಚಾತುರ್ವರ್ಣ್ಯಸ್ಯ ವೈಕೃತ್ಯಾಃ ಯಾಂತಿ ದೌರ್ಬಲ್ಯಮಾಶ್ರಮಾಃ ॥ ೩೫ ॥

ಏಷಾ ತ್ರೇತಾಯುಗಗತಿಃ ವಿಚಿತ್ರಾ ದೇವನಿರ್ಮಿತಾ ।
ದ್ವಾಪರಂ ದ್ವಿಸಹಸ್ರಂ ತು ವರ್ಷಾಣಾಂ ಕುರುನಂದನ ॥ ೩೬ ॥

ತಸ್ಯ ತಾವಚ್ಛತೀ ಸಂಧ್ಯಾ ದ್ವಿಗುಣಂ ಯುಗಮುಚ್ಯತೇ ।
ತತ್ರಾಪ್ಯತೀವಾರ್ಥಪರಾಃ ಪ್ರಾಣಿನೋ ರಜಸಾ ಹತಾಃ ॥ ೩೭ ॥

ಶಠಾ ನೈಷ್ಕೃತಿಕಾಃ ಕ್ಷುದ್ರಾ ಜಾಯಂತೇ ಕುರುನಂದನ ।
ದ್ವಾಭ್ಯಾಂ ಧರ್ಮಸ್ಥಿತಃ ಪದ್ಭ್ಯಾಮಧರ್ಮಸ್ತ್ರಿಭಿರುತ್ಥಿತಃ ॥ ೩೮ ॥

ವಿಪರ್ಯಯಶತೈರ್ಧರ್ಮಃ ಕ್ಷಯಮೇತಿ ಕಲೌ ಯುಗೇ ।
ಬ್ರಹ್ಮಣ್ಯಭಾವೋ ವ್ಯಯತೇ ತಥಾಸ್ತಿಕ್ಯೇ ವಿವರ್ಜಿತೇ ॥ ೩೯ ॥

---

೩೫. ಆಗ ವರ್ಣಾಶ್ರಮಗಳು ಲೋಭದಿಂದ ಕೂಡಿಕೊಂಡು ಧರ್ಮವು ಲೋಪವನ್ನು ಹೊಂದಿ ವಿಕಾರವನ್ನು ಹೊಂದುತ್ತವೆ. ಆಗ ವರ್ಣಾಶ್ರಮಗಳು ದೌರ್ಬಲ್ಯವನ್ನು ಹೊಂದುತ್ತವೆ. ಅಲ್ಲದೆ ಅವುಗಳ ಕೃತ್ಯಗಳೂ ದುರ್ಬಲವಾಗುತ್ತವೆ ಇದೇ ತ್ರೇತಾಯುಗದ ದೇವನಿರ್ಮಿತವಾದ ಗತಿಯು.

೩೬-೩೭. ದ್ವಾಪರಯುಗವು ಎರಡು ಸಾವಿರ ವರ್ಷಗಳು ಇರುತ್ತದೆ. ಅದರಲ್ಲಿಯೂ ಮೇಲೆ ಇನ್ನೂರು ಸಂಧ್ಯೆಗಳು ಹೆಚ್ಚಾಗಿರುತ್ತವೆ. ಅದರಲ್ಲಿಯೂ ಜನಗಳು ಹಣದಲ್ಲಿ ಆಶೆಪಡುತ್ತಾ ರಜೋಗುಣದಿಂದ ಕೂಡಿರುತ್ತಾರೆ.

೩೮. ಈ ಯುಗದಲ್ಲಿ ಜನರು ಶಠರಾಗಿಯೂ, ಕರುಣಾಹೀನರೂ, ಕ್ಷುದ್ರರೂ, ಆಗಿರುತ್ತಾರೆ. ಆಗ ಧರ್ಮವು ಎರಡು ಕಾಲಿನಿಂದಲೂ, ಅಧರ್ಮವು ಮೂರುಕಾಲಿನಿಂದಲೂ ನಿಂತಿರುತ್ತದೆ.

೩೦. ಕಲಿಯುಗದಲ್ಲಿ ಅನೇಕ ವ್ಯತ್ಯಾಸಗಳಿಂದ ಧರ್ಮವು ನಾಶವಾಗುತ್ತದೆ. ಬ್ರಾಹ್ಮಣ್ಯವು ಕ್ಷಯಿಸುತ್ತ ಬರುತ್ತದೆ. ಜನಗಳಲ್ಲಿ ಆಸ್ತಿಕ್ಯವೇ ಇರುವುದಿಲ್ಲ. ವ್ರತಗಳೂ, ಉಪವಾಸಗಳೂ ಎಲ್ಲವೂ ಬಿಡಲ್ಪಡುತ್ತವೆ.

ವ್ರತೋಪವಾಸಾಸ್ತ್ಯಜ್ಯಂತೆ ಕಲೌ ವೈ ಯುಗಪರ್ಯಯೇ ।
ತದಾ ವರ್ಷಸಹಸ್ರಂ ತು ವರ್ಷಾಣಾಂ ದ್ವೇಶತಂ ತಥಾ ॥ ೪೦ ॥

ಸಂಧ್ಯಯಾ ಸಹ ಸಂಖ್ಯಾತಂ ಕ್ರೂರಂ ಕಲಿಯುಗಂ ತಥಾ ।
ಯತ್ರಾಧರ್ಮಶ್ಚತುಷ್ಪಾದಃ ಸ್ಯಾದ್ಧರ್ಮಃ ಪಾದವಿಗ್ರಹಃ ॥ ೪೧ ॥

ಕಾಮಿನಸ್ತಾಮಸಾಃ ಕ್ಷುದ್ರಾಃ ಜಾಯಂತೇಯತ್ರ ಮಾನವಾಃ ।
ನೈವಾತ್ರ ಸಾಧಕಃ ಕಶ್ಚಿನ್ನ ಸಾಧುರ್ನಚ ಸತ್ಯವಾಕ್ ॥ ೪೨ ॥

ನಾಸ್ತಿಕಾ ಬ್ರಾಹ್ಮಣಾಭಕ್ತಾ ಜಾಯಂತೇ ಯತ್ರ ಮಾನವಾಃ ।
ಅಹಂಕಾರಗೃಹೀತಾಶ್ಚ ಪ್ರಕ್ಷೀಣಸ್ನೇಹಬಂಧನಾಃ ॥ ೪೩ ॥

ವಿಪ್ರಾಶ್ಶೂದ್ರಸಮಾಚಾರಾ ಸಂತಿ ಸರ್ವೇ ಕಲೌ ಯುಗೇ ।
ಆಶ್ರಮಾಣಾಂ ವಿಪರ್ಯಾಸಃ ಕಲೌ ಸಂಪ್ರತಿ ವರ್ತತೇ ॥ ೪೪ ॥

ವರ್ಣಾನಾಂ ಚೈವ ಸಂದೇಹೋ ಯುಗಾಂತೇ ಕುರುನಂದನ ।
ಏಷಾ ದ್ವಾದಶಸಾಹಸ್ರೀ ಯುಗಾಖ್ಯಾ ಪೂರ್ವನಿರ್ಮಿತಾ ॥ ೪೫ ॥

---

೪೦-೪೧. ಒಂದು ಸಾವಿರದ ಇನ್ನೂರು ವರ್ಷಗಳು ಕಲಿಯುಗವಿರುತ್ತದೆ. ಸಂಧ್ಯೆಯೂ ಇದರೊಡನೆ ಸೇರಿದೆ. ಈ ಕಲಿಯುಗವು ಬಹು ಕ್ರೂರವಾದುದು. ಇದರಲ್ಲಿ ಅಧರ್ಮವು ನಾಲ್ಕು ಕಾಲುಗಳಿಂದಲೂ, ಧರ್ಮವು ಒಂದು ಕಾಲಿನಿಂದಲೂ ನಿಂತಿರುತ್ತದೆ.

೪೨-೪೩. ಮನುಷ್ಯರು ಕಾಮಿಗಳಾಗಿಯೂ, ತಮೋಗುಣವಂತರಾಗಿಯೂ, ಕ್ಷುದ್ರರಾಗಿಯೂ ಆಗುತ್ತಾರೆ ಯೋಗಾಭ್ಯಾಸ ಸಾಧಕನು ಒಬ್ಬನೂ ಇರುವುದೇ ಇಲ್ಲ. ಸಾಧುವಾಗಲಿ, ಸತ್ಯವಂತನಾಗಲಿ ಇರುವುದೇ ಇಲ್ಲ. ಮತ್ತು ನಾಸ್ತಿಕರೂ, ಬ್ರಾಹ್ಮಣರಲ್ಲಿ ಭಕ್ತಿಯಿಲ್ಲದವರೂ ಆಗುತ್ತಾರೆ. ಅಹಂಕಾರಿಗಳೂ, ಸ್ನೇಹವಿಲ್ಲದವರೂ ಕೂಡ ಆಗುತ್ತಾರೆ.

೪೪-೪೫. ಬ್ರಾಹ್ಮಣರೆಲ್ಲರೂ ಶೂದ್ರರ ಆಚಾರವುಳ್ಳವರಾಗುತ್ತಾರೆ. ಕಲಿಯುಗದಲ್ಲಿ ಆಶ್ರಮಗಳು ಬಹು ವ್ಯತ್ಯಾಸದಿಂದಿರುತ್ತವೆ. ಯುಗಾನ್ತದಲ್ಲಿಯಂತೂ ವರ್ಣಗಳು ತಿಳಿಯದಂತೆ ಸಂದೇಹವುಳ್ಳವುಗಳಾಗುತ್ತವೆ. ಈ ರೀತಿಯಾಗಿ ಹನ್ನೆರಡು ಸಾವಿರ ವರ್ಷಗಳ ನಾಲ್ಕು ಯುಗಗಳು ದೇವರಿಂದ ನಿರ್ಮಿತವಾಗಿವೆ.

ಏವಂ ಸಹಸ್ರಪರ್ಯಂತಂ ತದಹೋ ಬ್ರಾಹ್ಮಮುಚ್ಯತೇ ।
ತತೋಽಹನಿ ಗತೇ ತಸ್ಮಿನ್ಸರ್ವೇಷಾಮೇವ ಜೀವಿನಾಂ ॥ ೪೬ ॥

ಶರೀರನಿರ್ವೃತಿಂ ದೃಷ್ಟ್ವಾ ಕಾಲಸ್ಸಂಹಾರಬುದ್ಧಿಮಾನ್ ।
ದೇವತಾನಾಂ ಚ ಸರ್ವೇಷಾಂ ಬ್ರಾಹ್ಮಣಾನಾಂ ಮಹೀಪತೇ ॥ ೪೭ ॥

ದೈತ್ಯಾನ್ಯಾನಾಂ ದಾನವಾನಾಂ ಚ ಯಕ್ಷರಾಕ್ಷಸಪಕ್ಷಿಣಾಂ ।
ಗಂಧರ್ವಾಣಾಮಪ್ಸರಸಾಂ ಭುಜಂಗಾನಾಂ ಚ ಪಾರ್ಥಿವ ॥ ೪೮ ॥

ಪರ್ವತಾನಾಂ ನದೀನಾಂ ಚ ಪಶೂನಾಂ ಚೈವ ಸತ್ತಮ ।
ತಿರ್ಯಗ್ಯೋನಿಗತಾನಾಂ ಚ ಸತ್ವಾನಾಂ ಕೃಮಿಣಾಂ ತಥಾ ॥ ೪೯ ॥

ಮಹಾಭೂತಪತಿಃ ಪಂಚ ಭೂತ್ವಾ ಭೂತಾನಿ ಭೂತಕೃತ್ ।
ಜಗತ್ಸಂಹರಣಾರ್ಥಾಯ ಕುರುತೇ ವೈಶಸಂ ಮಹತ್ ॥ ೫೦ ॥

ಭೂತ್ವಾ ಸೂರ್ಯಶ್ಚಕ್ಷುಷೀ ಚಾದದಾನೋ
ಭೂತ್ವಾ ವಾಯುಃ ಪ್ರಾಣಿನಾಂ ಪ್ರಾಣಜಾತಂ ।
ಭೂತ್ವಾ ವಹ್ನಿರ್ನಿರ್ದಹನ್ಸರ್ವಲೋಕಾ
ನ್ಭೂತ್ವಾ ಮೇಘೋ ಭೂಯ ಏವಾಭ್ಯವರ್ಷತ್ ॥ ೫೧ ॥

---

೪೬–೫೦. ಈ ಹನ್ನೆರಡು ಸಾವಿರವರ್ಷಗಳ ನಾಲ್ಕು ಯುಗಗಳು ಒಂದು ಸಾವಿರವಾದರೆ ಅದು ಬ್ರಹ್ಮನಿಗೆ ಒಂದು ಹಗಲಾಗುತ್ತದೆ. ಬ್ರಹ್ಮನು ಸುಖವಾಗಿ ಮಲಗುವುದನ್ನು ನೋಡಿ ಯಮನು ಸಂಹಾರಮಾಡಲು ಬುದ್ಧಿಯುಳ್ಳವನಾಗುತ್ತಾನೆ. ದೇವತೆಗಳು, ಬ್ರಾಹ್ಮಣರು, ದೈತ್ಯರು, ದಾನವರು, ಯಕ್ಷರು, ರಾಕ್ಷಸರು, ಪಕ್ಷಿಗಳು, ಗಂಧರ್ವರು, ಅಪ್ಸರರು, ಭುಜಂಗರು, ಪರ್ವತಗಳು, ನದಿಗಳು, ಪಶುಗಳು, ಇನ್ನೂ ಕೀಳು ಪ್ರಾಣಿಗಳು ಹುಳುಹಬಟೆಗಳು ಇವುಗಳನ್ನೂ ಆ ಯಮನು ಪಂಚಭೂತ ಗಳಾಗಿ ಪರಿಣಮಿಸಿ ಜಗತ್ತನ್ನೇ ಸಂಹಾರಮಾಡಲು ಉಪಕ್ರಮಿಸುತ್ತಾನೆ.

೫೧. ಆಗ ಆ ಕಾಲನು ಸೂರ್ಯನಾಗಿ ಪ್ರಾಣಿಗಳ ಕಣ್ಣುಗಳನ್ನೂ, ವಾಯು ವಾಗಿ ಪ್ರಾಣಿಗಳ ಪ್ರಾಣಗಳನ್ನೂ ತೆಗೆದುಕೊಳ್ಳುವನು. ಬೆಂಕಿಯಾಗಿ ಎಲ್ಲಾ ಲೋಕಗಳನ್ನೂ ಸುಡುವನು. ಮೇಘವಾಗಿ ಮಳೆಗಳನ್ನು ಸುರಿಸಿ ಪ್ರಪಂಚವನ್ನು ನಾಶಮಾಡುವನು.

ಭೂತ್ವಾ ನಾರಾಯಣೋ ಯೋಗೀ ಸರ್ವಮೂರ್ತಿರ್ವಿಭಾವಸುಃ ।
ಗಭಸ್ತಿಭಿಃ ಪ್ರದೀಪ್ತಾಭಿಃ ಸಂಶೋಷಯತಿ ಸಾಗರಾನ್ ॥ ೫೨ ॥

ತತಃ ಪೀತ್ವಾರ್ಣವಾನ್ಸರ್ವಾನ್ನದೀಃ ಕೂಪಾಂಸ್ತು ಸರ್ವಶಃ ।
ಪರ್ವತಾನಾಂ ಚ ಸಲಿಲಂ ಸರ್ವಮಾದಾಯ ರಶ್ಮಿಭಿಃ ॥ ೫೩ ॥

ಪೀತ್ವಾ ಸಹಸ್ರಭಿಶ್ಚೈವ ಮಹೀ ದೃಷ್ಟ್ವಾ ರಸಾತಳೇ ।
ರಸಾತಳಾತ್ಸಮಾದಾಯ ಪಿಬತೇ ರಸಮುತ್ತಮಂ ॥ ೫೪ ॥

ಮೂತ್ರಶುಕ್ರೇ ತದನ್ಯಚ್ಚ ಯದಸ್ತಿ ಪ್ರಾಣಿಷು ಧ್ರುವಂ ।
ತತ್ಸರ್ವಮರವಿಂದಾಕ್ಷ ಆದತ್ತೇ ಪುರುಷೋತ್ತಮಃ ॥ ೫೫ ॥

ವಾಯುಶ್ಚ ಬಲವಾನ್ಭೂತ್ವಾ ವಿಧುನ್ವಾನೋಽಖಿಲಂ ಜಗತ್ ।
ಪ್ರಾಣಾಪಾನಸಮಾನಾದ್ಯವಾಯೂನಾಕ್ರಮತೇ ಹರಿಃ ॥ ೫೬ ॥

ತತೋ ದೇವಗಣಾನಾಂ ಚ ಸರ್ವೇಷಾಂ ಚೈವ ದೇಹಿನಾಂ ।
ಪಂಚೇಂದ್ರಿಯಗುಣಾಸ್ಸರ್ವೇ ಭೂತಾನ್ಯೇವ ಚ ಯಾನೀ ಚ ॥ ೫೭ ॥

---

೫೨. ಯೋಗಿಯಾದ ನಾರಾಯಣನು ಸೂರ್ಯನಾಗಿ ಕಿರಣಗಳಿಂದ ಸಮುದ್ರಗಳನ್ನು ಒಣಗಿಸುತ್ತಾನೆ.

೫೩. ಹೀಗೆ ಸಮುದ್ರಗಳ ನೀರನ್ನು ಕುಡಿದು, ನದಿಗಳು, ಬಾವಿಗಳ ನೀರನ್ನು ಕುಡಿದು, ಬೆಟ್ಟಗಳ ನೀರನ್ನೂ, ತನ್ನ ಕಾಂತಿಗಳಿಂದೆಳೆಯುತ್ತಾನೆ. ಹೀಗೆ ನೀರನ್ನು ಕುಡಿಯುವುದರಿಂದ ಪಾತಾಳದವರೆಗೂ ಭೂಮಿಯು ಒಣಗುತ್ತದೆ.

೫೪-೫೫. ಆ ಸೂರ್ಯನು ರಸಾತಳದಿಂದಲೂ, ರಸವನ್ನು ಹೀರುತ್ತಾನೆ. ಈ ರೀತಿ ಪ್ರಾಣಿಗಳಲ್ಲಿ ಮೂತ್ರ, ಶುಕ್ರ, ಮತ್ತು ಏನೇನಿದೆಯೋ ಅವೆಲ್ಲವನ್ನೂ ಆ ಪುರುಷೋತ್ತಮನು ಹೀರಿ ಬಿಡುವನು.

೫೬-೫೭. ಆ ಸ್ವಾಮಿಯು ಬಲಿಷ್ಠವಾದ ವಾಯುವಾಗಿ ಪ್ರಪಂಚವನ್ನೆಲ್ಲಾ ಅಲ್ಲಾಡಿಸುತ್ತ, ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರೂಪವಾದ ವಾಯುಗಳನ್ನು ಸೆಳೆದುಕೊಳ್ಳುತ್ತಾನೆ. ಈ ರೀತಿ ದೇವತೆಗಳೇ ಮುಂತಾದ ಪ್ರಾಣಿಗಳೆಲ್ಲವೂ ಪಂಚೇಂದ್ರಿಯಗಳ ಗುಣಗಳೂ, ಭೂತಗಳನ್ನೇ ಹೊಂದುತ್ತವೆ.

ಘ್ರೇಯಂ ಘ್ರಾಣಂ ಶರೀರಂ ಚ ಪೃಥಿವೀಸಂಶ್ರಿತಾ ಗುಣಾಃ ।
ಜಿಹ್ವಾ ರಸಶ್ಚ ಸ್ನೇಹಶ್ಚ ಸಂಶ್ರಿತಾಸ್ಸಲಿಲೇ ಗುಣಾಃ ॥ ೫೮ ॥

ರೂಪಂ ಚಕ್ಷುರ್ವಿಕಾರಶ್ಚ ನೇತ್ರಂ ಜ್ಯೋತಿಶ್ಶ್ರಿತಾ ಗುಣಾಃ ।
ಸ್ಪರ್ಶಃ ಪ್ರಾಣಶ್ಚ ಚೇಷ್ಟಾ ಚ ಪವನಂ ಸಂಶ್ರಿತಾ ಗುಣಾಃ ॥ ೫೯ ॥

ಶಬ್ದಶ್ಶ್ರೋತ್ರೇ ಚ ಶ್ರವಣಂ ಗಗನಂ ಸಂಶ್ರಿತಾ ಗುಣಾಃ ।
ಲೋಕಯಾತ್ರಾ ಭಗವತಾ ಮುಹೂರ್ತೇನ ವಿನಾಶಿತಾ ॥ ೬೦ ॥

ಮನೋ ಬುದ್ಧಿಶ್ಚ ಚಿತ್ತಂ ಚ ಕ್ಷೇತ್ರಜ್ಞಶ್ಚೇತಿ ಸಂಶ್ರಿತಾಃ ।
ಪರೇಣ ಪರಮೇಷ್ಠೀ ಚ ಹೃಷೀಕೇಶಮುಪಾಶ್ರಿತಃ ॥ ೬೧ ॥

ತತೋ ಭಗವತಸ್ತಸ್ಯ ರಶ್ಮಿಭಿಃ ಪರಿವಾರಿತಾಃ ।
ವಾಯುನಾಕ್ರಮ್ಯಮಾಣಾಶ್ಚ ದ್ರುಮಶಾಖಾಮುಪಾಶ್ರಿತಾಃ ॥ ೬೨ ॥

ತೇಷಾಂ ಸಂಹರಣೋದ್ಭೂತಃ ಪಾವಕಶ್ಶತಧಾ ಜ್ವಲನ್ ।
ಅದಹನ್ನಖಿಲಂ ವಿಶ್ವಂ ವೃತ್ತಸ್ಸಂವರ್ತಕೋಽನಲಃ ॥ ೬೩ ॥

---

೫೮-೬೦. ಗಂಧ, ಗಂಧವನ್ನು, ಹಿಡಿಯುವುದು, ಇಂದ್ರಿಯ. ಶರೀರ, ಇವು ಭೂಮಿಯ ಗುಣಗಳು. ನಾಲಗೆ, ರಸ, ಸ್ನೇಹ, ಇವು ನೀರಿನ ಗುಣವು. ರೂಪ, ಕಣ್ಣಿನ ರೂಪವಾದ ವಿಕಾರ ಇವು ಜ್ಯೋತಿಸ್ಸಿನ ಗುಣಗಳು, ಸ್ಪರ್ಶ ಪ್ರಾಣ. ಚೇಷ್ಟೆಗಳು ವಾಯುವನ್ನಾಶ್ರಯಿಸಿದ ಗುಣಗಳು. ಶಬ್ದ, ಕಿವಿ ಕೇಳುವಿಕೆ, ಇವು ಆಕಾಶವನ್ನು ಆಶ್ರಯಿಸಿದ ಗುಣಗಳು. ಈ ರೀತಿಯಿಂದ ಲೋಕಯಾತ್ರೆಗೆ ಅನುರೂಪವಾದವುಗಳೆಲ್ಲವೂ ಭಗವಂತನಿಂದ ಕ್ಷಣಕಾಲದಲ್ಲಿ ನಾಶಮಾಡಲ್ಪಟ್ಟವು.

೬೧. ಮನಸ್ಸು, ಬುದ್ಧಿ, ಚಿತ್ತ, ಆತ್ಮ, ಪರಮೇಷ್ಠೀ ಎಲ್ಲವೂ ಆ ವಿಷ್ಣುವನ್ನೇ ಹೊಂದುತ್ತವೆ.

೬೨-೬೩. ಆ ಸ್ವಾಮಿಯ ರಶ್ಮಿಗಳಿಂದುಂಟಾದ ಬೆಂಕಿಯು ವಾಯುವಿನಿಂದ ಜ್ವಲಿತವಾಗಿ ಮರಗಳನ್ನು ಆಶ್ರಯಿಸಿಕೊಂಡು ನಾನಾ ಬಗೆಯಾಗಿ ಹರಡುತ್ತಾ ಪ್ರಪಂಚವೆಲ್ಲವನ್ನೂ ಸುಡುತ್ತದೆ.

ಸ ಪರ್ವತದ್ರುಮಾನ್ಗುಲ್ಮಾಂಲ್ಲತಾವಲ್ಲೀಸ್ತೃಣಾನಿ ಚ ।
ವಿಮಾನಾನಿ ಚ ದಿವ್ಯಾನಿ ಪುರಾಣಿ ವಿವಿಧಾನಿ ಚ ॥ ೬೪ ॥

ಯಾನಿ ಚಾಶ್ರಯಣೀಯಾನಿ ತಾನಿ ಸರ್ವಾಣಿ ಸೋದಹೇತ್ ।
ಭಸ್ಮೀಕೃತ್ವಾ ತತಸ್ಸರ್ವಾಂಲ್ಲೋಕಾಂಲ್ಲೋಕಗುರೋರ್ಗುರುಃ ॥ ೬೫ ॥

ಸ ಭೂತಿಂ ಧಾರಯಾಮಾಸ ಯುಗಾಂತೇ ಲೋಕಸಂಭವಾಂ ।
ಸಹಸ್ರದೃಷ್ಟಿಶ್ಚತಥಾ ಭೂತ್ವಾ ಕೃಷ್ಣೋ ಮಹಾಘನಃ ॥ ೬೬ ॥

ದಿವ್ಯತೋಯೇನ ಹವಿಷಾ ತರ್ಪಯಾಮಾಸ ಮೇದಿನೀಂ ।
ತತಃ ಕ್ಷೀರನಿಕಾಶೇನ ಸ್ವಾದುನಾ ಪರಮಾಂಭಸಾ ॥ ೬೭ ॥

ಶಿಶಿರೇಣ ಚ ದಿವ್ಯೇನ ಮಹೀ ನಿರ್ವಾಣಮಾಗಮತ್ ।
ತೇನ ತೋಯೇನ ಸಂಛನ್ನಾ ಪಯಸ್ವಾಥಮರ್ತ್ಯತೋ ಧರಾ ॥ ೬೮ ॥

ಏಕಾರ್ಣವಜಲೀಭೂತಾ ಸರ್ವಸತ್ವವಿವರ್ಜಿತಾ ।
ಮಹಾಸತ್ವಾನ್ಯಪಿ ವಿಭುಂ ಪ್ರವಿಷ್ಟಾನ್ಯಮಿತೌಜಸಂ ॥ ೬೯ ॥

---

೬೪–೬೯. ಪರ್ವತ, ಮರ, ಪೊದರು, ಬಳ್ಳಿಗಳು, ಹುಲ್ಲುಗಳು, ಮನೆಗಳು ಊರುಗಳು, ಇನ್ನೂ ಯಾವಯಾವುದು ಆಶ್ರಯವಾಗಿರುತ್ತವೆಯೋ ಅವೆಲ್ಲವನ್ನೂ ಸುಟ್ಟುಬಿಡುವನು. ಈ ರೀತಿ ಲೋಕಗುರುವಾದ ಆ ಸ್ವಾಮಿಯು ಎಲ್ಲವನ್ನೂ ಬೂದಿಯನ್ನಾಗಿ ಮಾಡಿ ಯುಗದ ಕೊನೆಯಲ್ಲಿ ಈ ಲೋಕಗಳನ್ನು ಸುಟ್ಟುದರಿಂದ ಉತ್ಪನ್ನವಾದ ಬೂದಿಯನ್ನು ಧರಿಸಿಕೊಳ್ಳುವನು. ಈ ರೀತಿ ಸಾವಿರ ಕಣ್ಣುಳ್ಳ ಆ ಸ್ವಾಮಿಯು ಕಪ್ಪಗಿರುವ ಮೋಡವಾಗಿ ಉತ್ತಮವಾದ ನೀರಿನ ಮಳೆಯನ್ನು ಸುರಿಸಿ ಭೂಮಿಯನ್ನು ತಣ್ಣಗೆ ಮಾಡಿ ತೃಪ್ತಿಪಡಿಸುವನು. ಅನಂತರ ಹಾಲಿನಂತಿರುವ ಒಳ್ಳೆಯ ನೀರಿನಿಂದ ಭೂಮಿಯನ್ನು ನೆನೆಸಿ ಬಿಸಿಯು ಹೋಗುವಂತೆ ಏರ್ಪಡಿಸುತ್ತಾನೆ. ಆ ನೀರು ಎಲ್ಲಾ ಕಡೆಯಲ್ಲೂ ಹರಡಿಕೊಂಡು ಸಮುದ್ರವೂ, ಭೂಮಿಯೂ ಒಂದೇ ಆಕಾರವುಳ್ಳದ್ದಾಗಿ ಆಗುತ್ತದೆ. ಮತ್ತು ಪ್ರಾಣಿಗಳೆಲ್ಲವೂ ನಾಶವಾಗಿ ಹೋಗುತ್ತವೆ. ಆಗ ಮಹಾಸತ್ವಗಳೂ ಕೂಡ ಆ ಸ್ವಾಮಿಯಲ್ಲಿಯೇ ಸೇರಿಕೊಳ್ಳುತ್ತವೆ.

ನಷ್ಟಾರ್ಕಪವನಾಕಾಶೇ ಸೂಕ್ಷ್ಮೇ ಜಗತಿ ಸಂವೃತೇ ।
ಸಂಶೋಷಮಾತ್ಮನಾ ಕೃತ್ವಾ ಸಮುದ್ರಾಣಾಂ ಚ ದೇಹಿನಃ ॥ ೨೦ ॥

ದಗ್ಧ್ವಾ ಸಂಕೋಚ್ಯ ಚ ತಥಾ ಸ್ವಪಿತ್ಯೇಕಸ್ಸನಾತನಃ ।
ಪೌರಾಣಂ ರೂಪಮಾಸ್ಥಾಯ ಸ್ವಪಿತ್ಯಮಿತವಿಕ್ರಮಃ ॥ ೨೧ ॥

ಏಕಾರ್ಣವಜಲವ್ಯಾಪೀ ಯೋಗೀ ಯೋಗಮುಪಾಸತೇ ।
ಅನೇಕಾನಿ ಸಹಸ್ರಾಣಿ ಯುಗಾನ್ಯೇಕಾರ್ಣವಾಂಭಸಿ ॥ ೨೨ ॥

ನ ಚೈವ ಕಶ್ಚಿದವ್ಯಕ್ತಂ ವ್ಯಕ್ತೋ ವೇದಿತುಮರ್ಹತಿ ।
ಕಶ್ಚೈಷ ಪುರುಷೋ ನಾಮ ಕಿಂ ಯೋಗಃ ಕಶ್ಚ ಯೋಗವಾನ್ ॥ ೨೩ ॥

ಅಸೌ ಕಿಯನ್ತಂ ಕಾಲಂ ಚ ಏಕಾರ್ಣವವಿಧಿಂ ವಿಭುಃ ।
ಕರಿಷ್ಯತೀತಿ ಭಗವಾನಿತಿ ಕಶ್ಚಿನ್ನ ಬುಧ್ಯತೇ ॥ ೨೪ ॥

ನ ದ್ರಷ್ಟುಂ ನೈವಮಭಿತೋ ನೈವಪಾರ್ಶ್ವೇ ನ ಚಾಗ್ರತಃ ।
ತಸ್ಯ ನ ಜ್ಞಾಯತೇ ಕಶ್ಚಿತ್ತ್ವನ್ಯತೇ ದೇವಸತ್ತಮಂ ॥ ೨೫ ॥

---

೨೦-೨೨. ಸೂರ್ಯಚಂದ್ರರೂ, ಆಕಾಶಗಳೂ ನಾಶವಾಗಿ ಸೂಕ್ಷ್ಮರೂಪದಿಂದ ಭೂಮಿಯಿರಲು ಅನಂತರ ಆ ಸಮುದ್ರವನ್ನೂ ಒಣಗಿಸಿ ಅದರಲ್ಲಿರುವ ದೇಹಿಗಳನ್ನೂ ಸುಟ್ಟು ತಾನು ಕೈಕಾಲುಗಳನ್ನು ಮುದುರಿಕೊಂಡು ಸನಾತನನಾದ ಆ ಸ್ವಾಮಿಯು ಒಬ್ಬನೇ ಮಲಗಿರುತ್ತಾನೆ. ಹಳೆಯದಾದ ಆ ರೂಪವನ್ನು ಹೊಂದಿ ಈ ಸ್ವಾಮಿಯು ಮಲಗಿರುತ್ತಾನೆ. ಒಂದೇ ಸಮವಾಗಿ ಸಮುದ್ರದಂತಿರುವ ಆ ನೀರಿನಲ್ಲಿ ಮಲಗಿ ಯೋಗವನ್ನು ಆ ಸ್ವಾಮಿಯು ಅನೇಕ ವರ್ಷಗಳೂ, ಅನೇಕ ಯುಗಗಳೂ, ಕಳೆಯುವವರೆಗೂ ಆ ಒಂದೇ ರೂಪವಾದ ಸಮುದ್ರದಲ್ಲಿ ಮಲಗಿರುತ್ತಾನೆ.

೨೩-೨೪. ಇಂತಹ ಸ್ವಾಮಿಯು ಕಾಣುವನೇ ಕಾಣದಿರುವನೇ ಎಂಬುದನ್ನು ಯಾರೂ ತಿಳಿಯಲಾರರು. ಪುರುಷನೆಂಬುವನು ಯಾರು ? ಯೋಗಿ ಯಾರು ? ಯೋಗವೆಂದರೇನು ? ಎಂಬುದನ್ನೂ ಯಾರೂ ತಿಳಿಯಲಾರರು. ಈ ಸ್ವಾಮಿಯು ಈ ಪ್ರಪಂಚವನ್ನು ಒಂದೇ ಸಮುದ್ರವಾಗಿರುವಂತೆ ಎಷ್ಟು ದಿವಸಗಳವರೆಗೂ ಮಾಡಿರುವನು, ಎಂಬುದನ್ನೂ ಒಬ್ಬರೂ ತಿಳಿಯರು.

೨೫. ಆ ಸ್ವಾಮಿಯನ್ನು ನೋಡಲು ಹಿಂದೆ ಮುಂದೆ ಪಾರ್ಶ್ವದಲ್ಲಿ ಎಲ್ಲೆಲ್ಲಿಯೂ ಆ ಸ್ವಾಮಿಯು ಹೊರತಾಗಿ ಮತ್ತೊಬ್ಬರೂ ಇರುವುದಿಲ್ಲ.

ನಭಃ ಕ್ಷಿತಿಂ ಪವನಮಪಃ ಪ್ರಕಾಶಂ
ಪ್ರಜಾಪತೀನ್ಭುವನವರಂ ಸುರೇಶ್ವರಂ ।
ಪಿತಾಮಹಂ ಶ್ರುತಿನಿಲಯಂ ಮುನಿಃ ಪ್ರಶಾಮ್ಯ
ಭೂಯ ಶ್ಶಯನಮರೋಚಯತ್ಪ್ರಭುಃ ॥ ೭೬ ॥

ಏವಮೇಕಾರ್ಣವೀಭೂತೇ ಶೇತೇ ಲೋಕೇ ಮಹಾದ್ಯುತಿಃ ।
ಪ್ರಚ್ಛಾದ್ಯ ಸಲಿಲೇನೋರ್ವೀಂ ಹಂಸೋ ನಾರಾಯಣಾಯತೇ ॥ ೭೭ ॥

ಮಹತೋ ರಜಸೋ ಮಧ್ಯೇ ಮಹಾರ್ಣವ ಸಮುಸ್ಯ ವೈ ।
ವಿರಜಸ್ಕೋ ಮಹಾಬಾಹುರಕ್ಷಯಂ ಬ್ರಹ್ಮ ಯದ್ವಿದುಃ ॥ ೭೮ ॥

ಆತ್ಮರೂಪಪ್ರಕಾಶೇನ ತಮಸಾ ಸಂವೃತಃ ಪ್ರಭುಃ ।
ಮನಸ್ಸಾತ್ವಿಕಮಾಧಾಯ ಯತ್ರ ತತ್ಸತ್ವಮಾಹಿತಂ ॥ ೭೯ ॥

ಯಥಾ ತಥ್ಯಂ ಪರಂ ಜ್ಞಾನಂ ಭೂತಯೇ ಬ್ರಹ್ಮಣೋ ಮತಂ ।
ರಹಸ್ಯಾರಣ್ಯತೋ ದೃಷ್ಟಂ ಯಥೋಪನಿಷದಂ ಸ್ಮೃತಂ ॥ ೮೦ ॥

---

೭೬. ಆಕಾಶ, ಭೂಮಿ, ಗಾಳಿ, ನೀರು, ತೇಜಸ್ಸು, ಪ್ರಜಾಪತಿಗಳು, ಪ್ರಪಂಚಗಳು, ಇಂದ್ರಾದಿಗಳು, ವೇದಗಳಿಗೆ ಮನೆಯಾದ ಬ್ರಹ್ಮ ಇವೆಲ್ಲವನ್ನೂ ನಾಶಮಾಡಿ ಇಂತು ಸ್ವಾಮಿಯು ನಿದ್ರೆಯನ್ನು ಅಪೇಕ್ಷಿಸುವನು.

೭೭. ಪ್ರಪಂಚವೆಲ್ಲವೂ ಈ ರೀತಿಯಲ್ಲಿ ಒಂದೇ ಸಮುದ್ರದಂತಾಗಲು ಭೂಮಿಯನ್ನು ನೀರಿನಿಂದ ಮುಚ್ಚಿ ಆ ಪರಮಹಂಸ ರೂಪವಾದ ತೇಜಸ್ಸು ನಾರಾಯಣನೆನಿಸಿಕೊಂಡು ಆ ನೀರಿನ ಮೇಲೆ ಮಲಗುತ್ತದೆ.

೭೮ ದೊಡ್ಡ ಸಮುದ್ರದಷ್ಟು ರಜೋಗುಣವುಳ್ಳ ಈ ಪ್ರಪಂಚದ ಮಧ್ಯದಲ್ಲಿ ಆ ಮಹಾ ಬಾಹುವಾದ ಪರಬ್ರಹ್ಮಸ್ವರೂಪವೆಂದೂ, ಅಕ್ಷಯನೆಂದೂ, ಹೇಳಲ್ಪಡುವ, ಆ ಸ್ವಾಮಿಯು ರಜೋಗುಣವನ್ನು ಬಿಟ್ಟು ಮಲಗಿರುತ್ತಾನೆ.

೭೯. ಇದುವರೆಗೂ ತಮೋಗುಣದಿಂದ ಇದ್ದ ಆ ಸ್ವಾಮಿಯು ಈಗ ಸ್ವಪ್ರಕಾಶದಿಂದ ಸಾತ್ವಿಕಮನಸ್ಸಿನಿಂದ ಮನಸ್ಸನ್ನು ಏಕರೀತಿಯಲ್ಲಿಟ್ಟುಕೊಂಡು ಮಲಗಿರುತ್ತಾನೆ.

೮೦. ಸರಿಯಾದ ಬ್ರಹ್ಮನ ಸಂಬಂಧವಾದ ಜ್ಞಾನವು ಉತ್ಕರ್ಷವನ್ನುಂಟುಮಾಡುತ್ತದೆ. ಅರಣ್ಯಕದ ರಹಸ್ಯದಿಂದಲೂ, ಉಪನಿಷತ್ತುಗಳಿಂದಲೂ ಆ ಸ್ವಾಮಿಯ ಯಥಾರ್ಥವನ್ನು ಹೀಗೆ ತಿಳಿದಿದ್ದೇವೆ.

ಪುರುಷೋ ಯಜ್ಞ ಇತ್ಯೇವ ಯತ್ಪರಂ ಪರಿಕೀರ್ತಿತಂ ।
ಯಚ್ಚಾನ್ಯತ್ಪುರುಷಾಖ್ಯಂ ಸ್ಯಾತ್ಸ ಏವ ಪುರುಷೋತ್ತಮಃ ॥ ೮೧ ॥

ಯೇ ಚ ಯಜ್ಞಕರಾ ವಿಪ್ರಾ ಯ ಋತ್ವಿಜ ಇತಿ ಸ್ಮೃತಾಃ ।
ಅಸ್ಮಾದೇವ ಪುರಾಭೂತಾ ಯಜ್ಞೇಭ್ಯಃ ಶ್ರೂಯತೇ ಯಥಾ ॥ ೮೨ ॥

ಬ್ರಾಹ್ಮಣಂ ಪ್ರಥಮಂ ವಕ್ತ್ರಾದುದ್ಗಾತಾರಂ ಚ ಸಾಮಗಂ ।
ಹೋತಾರಂ ಚ ತಥಾಧ್ವರ್ಯುಂ ಬಾಹುಭ್ಯಾಮಸೃಜತ್ಪ್ರಭುಃ ॥ ೮೩ ॥

ಬ್ರಹ್ಮಾಣಂ ಬ್ರಾಹ್ಮಣಾಚ್ಛಂಸೀ ಪ್ರಸ್ತೋತಾರೌ ಚ ಸರ್ವಶಃ ।
ಮೇಢ್ರಾಚ್ಚ ಮೈತ್ರಾವರುಣಂ ಪ್ರತಿಷ್ಠಾತಾರಮೇವ ಚ ॥ ೮೪ ॥

ಉದರಾತ್ಪ್ರತಿಹರ್ತಾರಂ ಪೋತಾರಂ ಚೈ ಪಾರ್ಥಿವ ।
ಪಾಣಿಭ್ಯಾಮಥವಾಗ್ನೀಧ್ರಮುನ್ನೇತಾರಂ ಚ ಯಾಜುಷಂ ॥ ೮೫ ॥

ಅಚ್ಛಾವಾಕಮಥೋರುಭ್ಯಾಂ ಸುಬ್ರಹ್ಮಣ್ಯಂ ಚ ಜಾನುಷು ।
ಏವಮೇವಂ ಸ ಭಗವಾನ್ ಷೋಡಶೈತಾನ್ ಜಗತ್ಪತಿಃ ॥ ೮೬ ॥

---

೮೧. ಯಾವುದನ್ನು ಪುರುಷನು ಯಜ್ಞವೆನ್ನುತ್ತಾನೋ ಯಾವುದು ಪರವಸ್ತು ಎಂದೆನಿಸಿಕೊಳ್ಳುವುದೋ ಅಂತಹ ಪುರುಷನೆಂದು ಹೆಸರನ್ನು ಹೊಂದಿರುವವನೇ ಆ ಪುರುಷೋತ್ತಮನು.

೮೨. ಯಜ್ಞದ ಯಜಮಾನನೆಂದೂ ಋತ್ವಿಕ್ಕುಗಳೆಂದೂ ಯಾರನ್ನು ನಾವು ಹೇಳುತ್ತೇವೆಯೋ, ಅವರೆಲ್ಲರೂ ಪೂರ್ವದಲ್ಲಿ ಈತನಿಂದಲೇ ಯಜ್ಞಕ್ಕೋಸ್ಕರ ಹುಟ್ಟಿದರು.

೮೩-೮೮. ಈ ಬ್ರಹ್ಮನು ಉದ್ಗಾತೃವಾದ ಬ್ರಾಹ್ಮಣನನ್ನು ಮುಖದಿಂದಲೂ, ಹೋತೃ ಅಧ್ವರ್ಯುಗಳನ್ನು ತೋಳುಗಳಿಂದಲೂ, ಉತ್ಪತ್ತಿಮಾಡಿದನು. ಬ್ರಹ್ಮ, ಅಚ್ಛಾವಾಕ, ಪ್ರಸ್ತೋತೃಗಳಿಬ್ಬರು, ಇವರನ್ನು ದೇಹದ ಎಲ್ಲಾ ಕಡೆಯಿಂದಲೂ ಸೃಷ್ಟಿಸಿದನು. ಮೈತ್ರಾವರುಣನನ್ನೂ, ಪ್ರತಿಷ್ಠಾತೃವನ್ನೂ ಮೇಢ್ರದಿಂದ (ತರುದು) ಹುಟ್ಟಿಸಿದನು. ಪ್ರತಿಹರ್ತೃವನ್ನೂ, ಪೋತೃವನ್ನೂ ಹೊಟ್ಟೆಯಿಂದಲೂ, ಆಗ್ನೀಧ್ರನನ್ನೂ ಉನ್ನೇತೃವನ್ನೂ ಕೈಗಳಿಂದ ಹುಟ್ಟಿಸಿದನು. ಅಚ್ಛಾವಾಕನನ್ನು ತೊಡೆಯಿಂದಲೂ, ಸುಬ್ರಹ್ಮಣ್ಯನನ್ನು ಮಂಡಿಯಿಂದಲೂ ಹುಟ್ಟಿಸಿದನು. ಈ ರೀತಿ ಹದಿನಾರು ಜನ ಋತ್ವಿಕ್ಕುಗಳನ್ನೂ ಆ ಬ್ರಹ್ಮನ ರೂಪನಾದ ನಾರಾಯಣನು ತನ್ನ ದೇಹದಿಂದ ಹುಟ್ಟಿ

ಸ್ವಯಂಭೂಸ್ಸರ್ವಯಜ್ಞಾನಾಮ್ಯತ್ರಿಜೋಸ್ಸೃಜದುತ್ತಮಾನ್ ।
ತದಾ ಸ ವೈ ವೇದಮಯಃ ಪುರುಷೋ ಯಜ್ಞಸಂಜ್ಞಿತಃ ॥ ೮೭ ॥

ವೇದಾಶ್ಚೈತೇಽಭಯಾಸ್ಸರ್ವೇ ಸಹಾಂಗೋಪನಿಷತ್ಕ್ರಿಯಾಃ ।
ಸ್ವಪಿತ್ಯೇಕಾರ್ಣವೇ ಚೈವ ಯದಾಶ್ಚರ್ಯಮಭೂತ್ಪುರಾ ॥ ೮೮ ॥

ಶ್ರೂಯತಾಂ ತತ್ತಥಾ ವಿಪ್ರೋ ಮಾರ್ಕಂಡೇಯಃ ಕುತೂಹಲಾತ್ ।
ಗೀರ್ಣೋ ಭಗವತಸ್ತಸ್ಯ ಕುಕ್ಷಾವಾಸೀನ್ಮಹಾಮುನಿಃ ॥ ೮೯ ॥

ಬಹುವರ್ಷಸಹಸ್ರಾಯುಸ್ತಸ್ಯೈವ ವರತೇಜಸಾ ।
ಅಟಂಸ್ತೀರ್ಥಪ್ರಸಂಗೇನ ಪೃಥಿವೀತೀರ್ಥಗೋಚರಂ ॥ ೯೦ ॥

ಆಶ್ರಮಾಣಿ ಚ ಪುಣ್ಯಾನಿ ದೇವತಾಯತನಾನಿ ಚ ।
ದೇಶಾನ್ರಾಷ್ಟ್ರಾಣಿ ಚಿತ್ರಾಣಿ ಪುರಾಣಿ ವಿವಿಧಾನಿ ಚ ॥ ೯೧ ॥

ಜಪಹೋಮಪರಶ್ಶಾಂತಃ ತಪೋರತಿಮಯಸ್ಸ್ಮೃತಃ ।
ಮಾರ್ಕಂಡೇಯಸ್ತತಸ್ತಸ್ಯ ಶನೈರ್ವಕ್ತ್ರಾದ್ವಿನಿಸ್ಸೃತಃ ॥ ೯೨ ॥

---

ಸಿದನು. ವೇದ ಮಯನೂ, ಯಜ್ಞಪುರುಷನೂ ಎಂದು ಹೆಸರುಳ್ಳ ಆ ಸ್ವಾಮಿಯು ಈ ವೇದಗಳನ್ನೂ ಅಂಗಗಳನ್ನೂ, ಉಪನಿಷತ್ತುಗಳನ್ನೂ ಸೃಷ್ಟಿಸಿ, ಹೆಸರುವಾಸಿಯಾದ ಒಂದೇ ರೀತಿಯಾಗಿ ನೀರಿನಿಂದ ಕೂಡಿದ ಸಮುದ್ರದಲ್ಲಿ ಒಬ್ಬಂಟಿಗನಾಗಿ ಮಲಗಿರುವನು. ಅದು ಆಶ್ಚರ್ಯವು.

೮೯. ಹಿಂದೆ ಮಾರ್ಕಂಡೇಯನೆಂಬ ಋಷಿಯು ಆ ಸ್ವಾಮಿಯಿಂದ ನುಂಗಲ್ಪಟ್ಟವನಾಗಿ ಹೊಟ್ಟೆಯಲ್ಲಿಯೇ ಇದ್ದನು.

೯೦-೯೨. ಆ ಸ್ವಾಮಿಯ ವರದಿಂದಲೂ, ತೇಜಸ್ಸಿನಿಂದಲೂ, ಅನೇಕಸಾವಿರ ವರ್ಷಗಳವರೆಗೂ, ಆಯುಸ್ಸನ್ನು ಹೊಂದಿ ತೀರ್ಥಯಾತ್ರೆ ಮಾಡುವ ಆಸೆಯಿಂದ ಭೂಮಿಯಲ್ಲಿರುವ ತೀರ್ಥಗಳನ್ನು ಸುತ್ತುತ್ತಾ, ಆಶ್ರಮಗಳು, ದೇವಸ್ಥಾನಗಳು, ದೇಶಗಳು, ರಾಷ್ಟ್ರಗಳು, ನಾನಾ ಬಗೆಯಾದ ಪಟ್ಟಣಗಳು ಇವನ್ನು ಸುತ್ತಿಕೊಂಡು ಜಪಹೋಮಗಳನ್ನೂ ಮಾಡುತ್ತಾ ಶಾಂತವಾಗಿ ತಪಸ್ಸಿನಲ್ಲಿ ಆಶೆಗೊಂಡು ಮಾಡುತ್ತಿದ್ದು ಅನಂತರ ಮೆಲ್ಲಗೆ ಅವನ ಬಾಯಿಂದ ಈಚೆಗೆ ಬಂದನು

ನಿಷ್ಕ್ರಾಮನ್ತಂ ಸಚಾತ್ಮಾನಂ ಜಾನೀತೇ ದೇವಮಾಯಯಾ ।
ನಿಷ್ಕ್ರಮ್ಯ ತಸ್ಯ ವದನಾದೇಕಾರ್ಣವಮಥೋ ಜಗತ್ ॥ ೯೩ ॥

ಸರ್ವತಸ್ತಮಸಾಚ್ಛನ್ನಂ ಮಾರ್ಕಂಡೇಯೋನ್ವವೈಕ್ಷತ ।
ತಸ್ಯೋತ್ಪನ್ನಂ ಭಯಂ ತೀವ್ರಂ ವ್ಯತ್ಯಯಂ ಚಾತ್ಮಜೀವಿತಂ ॥ ೯೪ ॥

ದೇವದರ್ಶನಸಂಹೃಷ್ಟೋ ವಿಸ್ಮಯಂ ಪರಮಂ ಗತಃ ।
ಸೋಚಿಂತಯತ ಮಧ್ಯಸ್ಥೋ ಮಾರ್ಕಂಡೇಯೋಥ ಶಂಕಿತಃ ॥ ೯೫ ॥

ಕಿನ್ನುಸ್ಯಾಚ್ಚಿತ್ತಸಮ್ಮೋಹಃ ಕಿನ್ನು ಸ್ವಪ್ನೋನುಭೂಯತೇ ।
ವ್ಯಕ್ತಮನ್ಯತರೋ ಭಾವಃ ಏತಯೋರ್ಭವಿತಾ ಮಮ ॥ ೯೬ ॥

ನಹಿ ಸ್ವಪ್ನೋಹ್ಯಯಂ ಸತ್ಯಯುಕ್ತಂ ಯತ್ಸತ್ಯಮರ್ಹತಿ ।
ನಷ್ಟಚಂದ್ರಾರ್ಕಪವನೋ ನಷ್ಟಪರ್ವತಭೂತಳಃ ॥ ೯೭ ॥

ಕತಮಸ್ಸ್ಯಾದಯಂ ಲೋಕಃ ಇತಿ ಚಿಂತಾಮವಸ್ಥಿತಃ ।
ದದರ್ಶ ಚಾಪಿ ಪುರುಷಂ ಸ್ವಪಂತಂ ಪರ್ವತೋಪಮಂ ॥ ೯೮ ॥

---

೯೩-೯೬. ಆ ಮಾರ್ಕಂಡೇಯನು ದೇವಮಾಯೆಯಿಂದ ತಾನು ಹೊರಗೆ ಬರುವುದನ್ನು ತಿಳಿದನು. ಬಾಯಿಂದ ಹೊರಹೊರಟು ಜಗತ್ತೆಲ್ಲವೂ ಒಂದೇರೀತಿಯಾಗಿ ಸಮುದ್ರವಾಗಿರುವುದನ್ನೂ, ಕತ್ತಲೆಯಿಂದ ಕೂಡಿರುವುದನ್ನೂ, ನೋಡಿದನು. ಆಗ ಅವನಿಗೆ ಬಹುವಾದ ಭಯವುಂಟಾಯಿತು. ತನ್ನ ಜೀವಿತದಲ್ಲಿಯೇ ವ್ಯತ್ಯಾಸವು ಕಂಡುಬಂದಿತು ಆದರೆ ಸ್ವಾಮಿಯ ದರ್ಶನದಿಂದ ಸಂತೋಷಗೊಂಡು ಆಶ್ಚರ್ಯವನ್ನು ಹೊಂದಿದನು. ಸ್ವಾಮಿಗೂ, ಪ್ರಪಂಚಕ್ಕೂ ಮಧ್ಯದಲ್ಲಿರುವವನಾಗಿ ಸಂದೇಹಗೊಂಡು ಇಂತೆಂದು ಯೋಚಿಸಿದನು.

೯೭-೧೦೩. ಇದು ಸ್ವಪ್ನವಲ್ಲ. ಇದು ಸತ್ಯವಾದ ಅಂಶವಾಗಿದೆ. ಆದರೆ ಸೂರ್ಯಚಂದ್ರರೂ, ಗಾಳಿಯೂ, ಪರ್ವತ ಭೂಮಿಗಳೂ ಇಲ್ಲದ ಈ ಲೋಕವು ಯಾವುದಿರಬಹುದು ? ಎಂದು ಯೋಚನೆಗೊಳಗಾದನು. ಆಗ ನೀರಿನಲ್ಲಿ ಮುಳುಗಿದ್ದ ಒಬ್ಬ ಪರ್ವತಾಕಾರವಾದ ಮನುಷ್ಯನನ್ನು ನೋಡಿದನು. ಅವನು ನೀರಿನಲ್ಲಿ ಅರ್ಧ

ಸಲಿಲೇರ್ಘನಮಧ್ಯೋನ್ಮಗ್ನಂ ಜೀಮೂತಮಿವ ಸಾಗರೇ ।
ತಪಸ್ತಮಿವ ತೇಜೋಭಿರ್ಗೋಮುಕ್ತಮಿವ ಭಾಸ್ಕರಂ ॥ ೯೯ ॥

ಗಾಂಭೀರ್ಯಾತ್ಸಾಗರಮಿವ ಭಾಸಹಸ್ರಮಿವೌಜಸಾ ।
ದೇವಂ ಚಂದ್ರಮಿವಾಯಾಂತಂ ಕೋಽ ಭವಾನಿತಿ ವಿಸ್ಮಯಾತ್ ॥ ೧೦೦ ॥

ತಥೈವ ಚ ಮುನಿಃ ಕುಕ್ಷಿಂ ಪುನರೇವ ಪ್ರವೇಶಿತಃ ।
ಸ ಪ್ರವಿಷ್ಟಃ ಪುನಃ ಕುಕ್ಷಿಂ ಮಾರ್ಕಂಡೇಯಸ್ಸವಿಸ್ಮಯಂ ॥ ೧೦೧ ॥

ತಥೈವ ಚ ಪುನರ್ಭೂಯೋ ವಿಜ್ಞಾನಸ್ಸ್ವಪ್ನದರ್ಶನಂ ।
ಸ ತಥೈವ ಯಥಾಪೂರ್ವಂ ಪೃಥಿವೀಮಟತೇ ವನಂ ॥ ೧೦೨ ॥

ಪುಣ್ಯತೀರ್ಥಜಲೋಪೇತಾಂ ವಿವಿಧಾನ್ಯಾಶ್ರಮಾಣಿ ಚ ।
ಕ್ರತುಭಿರ್ಯಜಮಾನಾಂಶ್ಚ ಸಮಾಪ್ತವರದಕ್ಷಿಣೈಃ ॥ ೧೦೩ ॥

ಅಪಶ್ಯದ್ದೇವಕುಕ್ಷಿಸ್ಥಾನ್ಯಜ್ಞಾರ್ಸ್ಥಾಶ್ಶತಶೋ ದ್ವಿಜಾನ್ ।
ಸದ್ವೃತ್ತಮಾಸ್ಥಿತಾಸ್ಸರ್ವೇ ವರ್ಣಾ ಬ್ರಾಹ್ಮಣಪೂರ್ವಕಾಃ ॥ ೧೦೪ ॥

---

ಮುಳುಗಿರುವ ಮೇಘದಂತೆಯೂ ಕಿರಣಗಳನ್ನು ಬಿಟ್ಟು ಬಿಟ್ಟು ತನ್ನ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಸೂರ್ಯನಂತೆಯೂ, ಗಾಂಭೀರ್ಯದಲ್ಲಿ ಸಮುದ್ರದಂತೆಯೂ, ಕಾಂತಿಯಲ್ಲಿ ಅನೇಕ ಕಿರಣಗಳಂತೆಯೂ, ಇದ್ದನು. ಆ ಸ್ವಾಮಿಯನ್ನು ನೋಡಿದರೆ ಚಂದ್ರನು ಬರುತ್ತಿರುವನೋ ? ಎಂಬಂತಿದ್ದನು. ಆಶ್ಚರ್ಯದಿಂದ ಇವನಾರೆಂದು ಯೋಚಿಸಿದನು. ಈ ರೀತಿ ಯೋಚಿಸುತ್ತಿದ್ದಂತೆಯೇ ಮತ್ತೆ ಹೊಟ್ಟೆಗೆ ಹೋದನು. ಮಾರ್ಕಂಡೇಯನು ಮತ್ತೆ ಅವನ ಹೊಟ್ಟೆಯನ್ನೇ ಹೊಕ್ಕು ಆಶ್ಚರ್ಯಪಡುತ್ತಿದ್ದನು. ಮತ್ತೆ ಅದೇ ಸ್ವಪ್ನದ ವಿಷಯವು ಜ್ಞಾಪಕ ಬರುತ್ತಿತ್ತು, ಮತ್ತು ಹೊಟ್ಟೆಯೊಳಗೇ ಭೂಮಿಯನ್ನು ಸುತ್ತಲು ಮೊದಲು ಮಾಡಿದನು.

೧೦೩-೧೧೦. ಪುಣ್ಯತೀರ್ಥಗಳಿಂದ ಕೂಡಿದ ನಾನಾ ಬಗೆಯಾದ ಆಶ್ರಮಗಳನ್ನೂ ಪೂರ್ತಿಯಾದ ದಕ್ಷಿಣೆಗಳನ್ನೂ ಕೊಟ್ಟು ಯಾಗ ಮಾಡುತ್ತಿರುವ ಋತ್ವಿಕ್ಕು ಯಜಮಾನರನ್ನೂ ದೇವರ ಹೊಟ್ಟೆಯೊಳಗಿದ್ದುಕೊಂಡೇ ನೋಡಿದನು. ಬ್ರಾಹ್ಮಣ ಮುಂತಾದ ವರ್ಣಗಳವರು ಅವರವರ ವೃತ್ತಿಯಲ್ಲಿದ್ದುಕೊಂಡಿದ್ದರು. ನಾಲ್ಕು ಆಶ್ರ

ಚತ್ವಾರಶ್ಚಾಶ್ರಮಾಸ್ಸಮ್ಯಗ್ಯಥೋದ್ದಿಷ್ಟಾಃ ಪುರಾ ಮಮ ।
ಏವಂ ವರ್ಷಶತಂ ಸಾಗ್ರಂ ಮಾರ್ಕಂಡೇಯೇನ ಧೀಮತಾ ॥ ೧೦೫ ॥

ಚರತಾ ಪೃಥಿವೀಂ ಸರ್ವಾಂ ತತ್ಕುಕ್ಷೌ ಹಿ ಸಮೀಕ್ಷತೇ ।
ತತಃ ಕದಾಚಿದಥ ವೈ ಪುನರ್ವಕ್ತ್ರಾದ್ವಿನಿಸ್ಸೃತಃ ॥ ೧೦೬ ॥

ಸುಪ್ತಂ ನ್ಯಗ್ರೋಧಶಾಖಾಯಾಂ ಬಾಲಮೇಕಂ ನಿರೈಕ್ಷತ ।
ತಥೈವೈಕಾರ್ಣವಜಲೇ ನೀಹಾರೇಣ ವೃತಾಂತರೇ ॥ ೧೦೭ ॥

ಅವ್ಯಕ್ತಕ್ರೀಡನೇ ಲೋಕೇ ಸರ್ವಭೂತವಿವರ್ಜಿತೇ ।
ಸಮುನಿರ್ವಿಸ್ಮಯಾವಿಷ್ಟಃ ಕೌತೂಹಲಸಮನ್ವಿತಃ ॥ ೧೦೮ ॥

ಬಾಲಮಾದಿತ್ಯಸಂಕಾಶಂ ನ ಶಕ್ನೋತ್ಯಭಿವೀಕ್ಷಿತುಂ ।
ಸೋಽಪ್ಯಚಿಂತಯದೇಕಾಂತೇ ಸ್ಥಿತ್ವಾ ಸಲಿಲಸನ್ನಿಧೌ ॥ ೧೦೯ ॥

ಪೂರ್ವದೃಷ್ಟಮಿದಂ ಮೇನೇ ಶಂಕಿತೋ ದೇವಮಾಯಯಾ ।
ಅಗಾಧೇ ಸಲಿಲೇ ಮಗ್ನೋ ಮಾರ್ಕಂಡೇಯಸ್ಸಸ್ಮಯಃ ॥ ೧೧೦ ॥

---

ಮಗಳೂ ಹಿಂದೆ ಹೇಳಿದಂತೆ ಸರಿಯಾದ ಸ್ಥಿತಿಯಲ್ಲಿದ್ದುವು. ಈ ರೀತಿ ಮಾರ್ಕಂಡೇಯನು ನೂರು ವರ್ಷಗಳು ಪೂರ್ತಿಯಾಗಿ ಸುತ್ತುತ್ತ ಹೊಟ್ಟೆಯಲ್ಲಿ ನೋಡಿದನು. ಹೀಗಿರಲು ಮತ್ತೆ ಒಂದು ಬಾರಿ ಆ ಸ್ವಾಮಿಯ ಬಾಯಿಂದ ಈಚೆಗೆ ಬಂದನು. ಆಗ ಆಲದೆಲೆಯ ಮೇಲೆ ಮಲಗಿದ್ದ ಒಂದು ಮಗುವನ್ನು ನೋಡಿದನು. ಭೂಮಿಯೆಲ್ಲವೂ ಒಂದೇ ಸಮುದ್ರದಿಂದ ತುಂಬಿದ್ದಿತು. ಆಕಾಶವೆಲ್ಲವೂ ಮಂಜಿನಿಂದ ಕವಿದಿದ್ದಿತು. ಈ ಸ್ವಾಮಿಯ ತಿಳಿಯದ ಈ ಆಟದಲ್ಲಿ ಪ್ರಾಣಿಗಳೊಂದೂ ಇಲ್ಲದೇ ಇರುವುದನ್ನು ನೋಡಿದನು. ಮತ್ತೆ ಅವನು ಆಶ್ಚರ್ಯದಿಂದಲೂ, ಆಸೆಯಿಂದಲೂ ಕೂಡಿ ನೀರಿನ ಮಧ್ಯದಲ್ಲಿ ಸೂರ್ಯನಂತೆ ಪ್ರಕಾಶಮಾನವಾದ ಒಂದು ಮಗುವನ್ನು ನೋಡಿದನು. ಆದರೂ ಅದನ್ನು ನೋಡಲು ಈ ಕಣ್ಣುಗಳಿಂದ ಆತನಿಗೆ ಸಾಧ್ಯವಾಗಲಿಲ್ಲ. ದೇವ ಮಾಯೆಯಿಂದ ಕೂಡಿ ಆ ನೀರಿನದಡದಲ್ಲಿ ನಿಂತುಕೊಂಡು ಈ ರೀತಿ ಯೋಚಿಸಿದನು. ಇದನ್ನು ಮೊದಲು ನೋಡಿದಂತೆ ಸಂದೇಹಿಸಿದನು. ಆಗ ಈ ದೊಡ್ಡ ನೀರಿನಲ್ಲಿ ಮುಳುಗಿರುವುದನ್ನು ತಿಳಿಯುವುದಕ್ಕೆ ಪ್ರಯತ್ನಪಟ್ಟು ಆಶ್ಚರ್ಯದಿಂದ ಹೋದನು

ಪೂರ್ವವೃತ್ತಮಥೋದ್ರಷ್ಟುಮವ್ರಜತ್ತ್ರಸ್ತಲೋಚನಃ ।
ಸ ತಸ್ಮೈ ಭಗವಾನಾಹ ಸ್ವಾಗತಂ ಬಾಲಯೋಗವಾನ್ ॥ ೧೧೧ ॥

ಬಭಾಷೇ ಮೇಘತುಲ್ಯೇನ ಸ್ವರೇಣ ಪುರುಷೋತ್ತಮಃ ।
ಮಾರ್ಕಂಡೇಯ ನ ಭೇತವ್ಯಮಾಗಚ್ಛಸ್ವ ಮಮಾಂತಿಕಂ ॥ ೧೧೨ ॥

॥ ಮಾರ್ಕಂಡೇಯ ಉವಾಚ ॥

ಕೋ ನಾಮ್ನಾ ಕೀರ್ತಯತಿ ಮಾಂ ಕುರ್ವನ್ಪರಿಭವಂ ಮಮ ।
ದಿವ್ಯಂ ವರ್ಷಸಹಸ್ರಾಖ್ಯಂ ವರ್ಷಾಣಾಂ ಚೈವ ಮೇ ವಯಃ ॥ ೧೧೩ ॥

ನ ಹ್ಯೇಷ ಚ ಸದಾಚಾರೋ ದೇವೇಷ್ವಪಿ ಮಮೋಚಿತಃ ।
ಮಾಂ ಬ್ರಹ್ಮಾಪಿ ಹಿ ಸ ಸ್ನೇಹೋ ದೀರ್ಘಾಯುರಿತಿ ಭಾಷತೇ ॥ ೧೧೪ ॥

ಕಸ್ತಪೋ ಘೋರಮಾಸಾದ್ಯ ಮಮಾದ್ಯ ತ್ಯಕ್ತಜೀವಿತಃ ।
ಮಾರ್ಕಂಡೇಯೇತಿ ಮಾಮುಕ್ತ್ವಾ ಮೃತ್ಯುಮೀಕ್ಷಿತುಮರ್ಹತಿ ॥ ೧೧೫ ॥

ಏವಮಾಭಾಷಿತಃ ಕ್ರೋಧಾನ್ಮಾರ್ಕಂಡೇಯೋ ಮಹಾಮುನಿಃ ।
ತದೈನಂ ಭಗವಾನ್ಭೂಯೋ ಬಭಾಷೇ ಮಧುಸೂದನಃ ॥ ೧೧೬ ॥

---

೧೧೧-೧೧೨. ಹಿಂದಿನ ವಿಷಯವನ್ನು ನೋಡಲು ಹೆದರಿಕೊಂಡು ಹೋಗುತ್ತಿದ್ದನು. ಆಗ ಮಗುವಾಗಿ ಯೋಗವನ್ನು ಹೊಂದಿದ್ದ ಆ ಸ್ವಾಮಿಯು ಎಲೈ ಬಾಲನೇ ! ಯೋಗವುಳ್ಳವನೇ ! ನಿನಗೆ ಸ್ವಾಗತವೇ ? ಎಲೈ ಮಾರ್ಕಂಡೇಯನೇ ! ಹೆದರಬೇಡ ನನ್ನ ಬಳಿಗೆ ಬಾ ಎಂದು ಗುಡುಗಿನಂತಿರುವ ಧ್ವನಿಯಿಂದ ಹೇಳಿದನು

೧೧೩-೧೧೫. ಮಾರ್ಕಂಡೇಯನು ಹೇಳಿದನು– ಯಾರು ನನ್ನನ್ನು ಹೆಸರು ಹಿಡಿದು ಕೂಗಿ ಅವಮಾನ ಮಾಡುವವರು ? ನನಗೆ ದೇವತೆಗಳ ಸಾವಿರ ವರ್ಷಗಳಾಗಿವೆ. ಈ ರೀತಿಯಾದ ನನ್ನನ್ನು ದೇವತೆಗಳೂ ಕೂಡ ಕೂಗುವುದು ಆಚಾರವಲ್ಲ. ನನ್ನನ್ನು ಬ್ರಹ್ಮನೂ ಕೂಡ ಸ್ನೇಹದಿಂದ ದೀರ್ಘಾಯುವೆಂದು ಕರೆಯುತ್ತಾನೆ. ಘೋರವಾದ ತಪಸ್ಸನ್ನು ಮಾಡಿರುವ ನನ್ನನ್ನು ಜೀವದ ಮೇಲೆ ಹಂಗಿಲ್ಲದ ಯಾವನು ತಾನೆ ಮಾರ್ಕಂಡೇಯ ಎಂದು ಕೂಗಿ ಯಮನನ್ನು ನೋಡಲಪೇಕ್ಷಿಸುವನು ?

೧೧೬. ಮಹಾಮುನಿಯಾದ ಮಾರ್ಕಂಡೇಯನು ಕೋಪದಿಂದ ಇಂತೆನ್ನಲು ಆಗ ಭಗವಂತನಾದ ಮಧುಸೂದನನು ಅವನನ್ನು ಕುರಿತು ಮತ್ತೆ ಇಂತೆಂದನು.

॥ ಭಗವಾನುವಾಚ ॥

ಅಹಂ ತೇ ಜನಕೋ ವತ್ಸ ಹೃಷೀಕೇಶಃ ಪಿತಾಮಹಃ ।
ಆಯುಷ್ಪ್ರದಾತಾ ಪೌರಾಣಃ ಕಿಂ ಮಾಂ ತ್ವಂ ನೋಪಸರ್ಪಸಿ ॥ ೧೧೭ ॥

ಮಾಂ ಪುತ್ರಕಾಮಃ ಪ್ರಥಮಂ ಪಿತಾ ತೇಂಗಿರಸೋ ಮುನಿಃ ।
ಪೂರ್ವಮಾರಾಧಯಾಮಾಸ ತಪಸ್ತೀವ್ರಂ ಸಮಾಶ್ರಿತಃ ॥ ೧೧೮ ॥

ಸ ತಪ್ತ್ವಾ ಘೋರತಪಸಾ ಪ್ರಾವೃಣೋತ್ತ್ವಾಂ ಸುತೇಜಸಂ ।
ಉಕ್ತವಾಂಸ್ತ್ವಮಹಂ ಸತ್ಯಂ ಮಹರ್ಷಿಮಮಿತೌಜಸಂ ॥ ೧೧೯ ॥

ಕಸ್ಸಮುತ್ಸಹತೇ ಚಾನ್ಯೋ ಯೇನ ಭೂತಾತ್ಮಕಾತ್ಮಕಃ ।
ದೃಷ್ಟ್ವಾ ಚೈಕಾರ್ಣವಗತಂ ಕ್ರೀಡಂತಂ ಯೋಗವರ್ತ್ಮನಾ ॥ ೧೨೦ ॥

ತತಃ ಪ್ರಹೃಷ್ಟಹೃದಯೋ ವಿಸ್ಮಯೋತ್ಫುಲ್ಲಲೋಚನಃ ।
ಮೂರ್ಧ್ನಿ ಬದ್ಧಾಂಜಲೀಪುಟೋ ಮಾರ್ಕಂಡೇಯೋ ಮಹಾತಪಾಃ॥೧೨೧॥

ನಾಮಗೋತ್ರೇಣ ತತ್ಪ್ರೋಕ್ತೋ ದೀರ್ಘಾಯುರ್ಲೋಕಪೂಜಿತಃ ।
ತಸ್ಮೈ ಭಗವತೇ ಭಕ್ತ್ಯಾ ನಮಸ್ಕಾರಾನ್ಪ್ರಕುರ್ವತ ॥ ೧೨೨ ॥

---

೧೧೭. ಭಗವಂತನು ಹೇಳಿದನು- ಎಲೈ ವತ್ಸನೆ! ನಾನು ನಿನಗೆ ತಂದೆಯಾದ ಹೃಷೀಕೇಶನು. ಆಯುಸ್ಸನ್ನು ಕೊಡುವ ಪುರಾಣಪುರುಷನಾದ ಪಿತಾಮಹನು. ನನ್ನ ಬಳಿಗೇಕೆ ನೀನು ಬರುವುದಿಲ್ಲ?

೧೧೮. ನಿನ್ನ ತಂದೆಯಾದ ಅಂಗೀರಸ ಮುನಿಯು ಮಗನನ್ನು ಪಡೆಯಬೇಕೆಂದು ತೀವ್ರವಾದ ತಪಸ್ಸನ್ನು ಆಶ್ರಯಿಸಿ ನನ್ನನ್ನು ಆಶ್ರಯಿಸಿದನು.

೧೧೯. ಅವನು ಆ ಘೋರವಾದ ತಪಸ್ಸನ್ನು ಮಾಡಿ ತೇಜೋವಂತನಾದ ನಿನ್ನನ್ನು ಪಡೆದನು. ಆಗ ಅವನನ್ನು ಕುರಿತು ನಾನು ಇಂತೆಂದೆನು.

೧೨೦. ಪ್ರಾಣಿಗಳ ಆತ್ಮವನ್ನು ಹೊಂದಿರುವ ಈ ಒಂದೇ ಒಂದಾಗಿರುವ ಸಮುದ್ರದಲ್ಲಿ ಯೋಗದ ರೀತಿಯಿಂದ ಕ್ರೀಡಿಸುತ್ತಿರುವ ನನ್ನನ್ನು ಬಿಟ್ಟು ಯಾವನು ತಾನೆ ಹೀಗೆ ನಿನ್ನನ್ನು ಕೂಗಲು ಯೋಗ್ಯನಾದಾನು?

೧೨೧-೧೨೨. ಆಗ ಮಾರ್ಕಂಡೇಯನು ಕಣ್ಣುಗಳನ್ನು ಸಂತೋಷದಿಂದ ಅರಳಿಸುತ್ತ ತಲೆಯಮೇಲೆ ಕೈಮುಗಿದುಕೊಂಡು ತನ್ನ ಹೆಸರುಕುಲಗಳನ್ನು ಹೇಳಿಕೊಂಡು ಆ ಸ್ವಾಮಿಗೆ ಭಕ್ತಿಯಿಂದ ನಮಸ್ಕಾರಗಳನ್ನು ಮಾಡಿದನು.

॥ ಮಾರ್ಕಂಡೇಯ ಉವಾಚ ॥

ಇಚ್ಛಾಮಿ ತತ್ತ್ವತೋ ಜ್ಞಾತುಮಿಮಾಂ ಮಾಯಾಂ ತವಾನಘ ।
ಯದೇಕಾರ್ಣವಮಧ್ಯಸ್ಥಃ ಶೇಷೇ ತ್ವಂ ಬಾಲರೂಪವಾನ್ ॥ ೧೨೩ ॥

ಕಿಂ ಸಂಜ್ಞಶ್ಚೈವ ಭಗವಾಂಲ್ಲೋಕೇ ವಿಜ್ಞಾಯಸೇ ಪ್ರಭೋ ।
ತರ್ಕಯೇ ತ್ವಂ ಮಹಾತ್ಮಾನಂ ಕೋನ್ಯೋವಸ್ಥಾತು ಮರ್ಹತಿ ॥ ೧೨೪ ॥

॥ ಶ್ರೀ ಭಗವಾನುವಾಚ ॥

ಅಹಂ ನಾರಾಯಣೋ ಬ್ರಹ್ಮನ್ಸರ್ವಭೂತವಿನಾಶನಃ ।
ಅಹಂ ಸಹಸ್ರಶೀರ್ಷೋ ಯಃ ಪಾದಸಾಹಸ್ರ ಸಂಜ್ಞಿತಃ ॥ ೧೨೫ ॥

ಆದಿತ್ಯವರ್ಣಃ ಪುರುಷೋ ಮುಖೇ ಬ್ರಹ್ಮಮಯೋಹ್ಯಹಂ ।
ಅಹಮಗ್ನಿರ್ಹವ್ಯವಾಹಃ ಸಪ್ತಸಪ್ತಿಭಿರನ್ವಿತಃ ॥ ೧೨೬ ॥

ಅಹಮಿಂದ್ರಪದೇ ಶಕ್ರಃ ಋತೂನಾಂ ಪರಿವತ್ಸರಃ ।
ಅಹಂ ಯೋಗಿಷು ಸಂಖ್ಯಾಖ್ಯೋ ಯುಗಾಂತಶ್ಚಾಂತ ಏವ ಚ ॥ ೧೨೭ ॥

---

೧೨೩. ಮಾರ್ಕಂಡೇಯನು ಹೇಳಿದನು- ಎಲೈ ಭಗವಂತನೇ ! ಈ ಒಂದೇ ರೀತಿಯಾದ ಸಮುದ್ರದಲ್ಲಿ ಬಾಲರೂಪವನ್ನು ಹೊಂದಿ ಮಲಗಿರುವ ಈ ನಿನ್ನ ಮಾಯೆಯನ್ನು ಸತ್ಯವಾಗಿ ತಿಳಿಯಲು ಅಪೇಕ್ಷಿಸುತ್ತೇನೆ.

೧೨೪. ಎಲೈ ಭಗದಂತನೇ ! ನೀನು ಯಾವ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧನಾಗಿದ್ದೀಯೆ ? ನೀನು ಮಹಾತ್ಮನೆಂದು ಊಹಿಸುತ್ತೇನೆ. ಹಾಗಿಲ್ಲದಿದ್ದರೆ ಯಾವನು ತಾನೆ ಈ ಸಮುದ್ರದಲ್ಲಿರುವುದಕ್ಕೆ ಶಕ್ತನಾದಾನು ?

೧೨೫-೧೨೬. ಭಗವಂತನು ಹೇಳಿದನು– ಎಲೈ ಬ್ರಾಹ್ಮಣನೇ ! ನಾನೇ ಸರ್ವಪ್ರಾಣಿಗಳನ್ನು ನಾಶಮಾಡುವ ನಾರಾಯಣನು. ನಾನೇ ಆ ಸಾವಿರ ತಲೆಯೂ ಆ ಸಾವಿರ ಕಾಲೂ ಉಳ್ಳವನು. ನಾನೇ ಆ ಆದಿತ್ಯ ಕಾಂತಿಯುಳ್ಳವನು. ಮುಖದಲ್ಲಿ ಬ್ರಹ್ಮರೂಪದಿಂದಿದ್ದೇನೆ. ನಾನೇನೇ ಹೋಮಮಾಡಿದ ವಸ್ತುಗಳನ್ನು ಹೊತ್ತುಕೊಂಡು ಹೋಗುವ ಅಗ್ನಿಯು. ನಾನೇ ಆ ಏಳು ಕುದುರೆಗಳಿಂದ ಕೂಡಿರುವ ಸೂರ್ಯನು.

೧೨೭-೧೨೮. ನನ್ನನ್ನು ಇಂದ್ರನ ಸ್ಥಾನದಲ್ಲಿ ಶಕ್ರನೆಂದೂ, ಋತುಗಳಿಗೆ ಪರಿವತ್ಸರನೆಂದೂ, ಯೋಗಿಗಳಲ್ಲಿ ಸಾಂಖ್ಯನೆಂದೂ ಯುಗಾಂತದಲ್ಲಿ ಯಮನೆಂದೂ ಎನ್ನು

ಅಹಂ ಸರ್ವಾಣಿ ಸತ್ವಾನಿ ದೈವತಾನ್ಯಖಿಲಾನಿ ಚ ।
ಉರಗಾಣಾಮಹಂ ಶೇಷಸ್ತಾರ್ಕ್ಷ್ಯೋಽಹಂ ಸರ್ವಪಕ್ಷಿಣಾಂ ॥ ೧೨೮ ॥

ಕೃತಾಂತಸ್ಸರ್ವಭೂತಾನಾಂ ವಿಜ್ಞೇಯಃ ಕಾಲಸಂಜ್ಞಿತಃ ।
ಅಹಂ ಧರ್ಮಸ್ತಪಶ್ಚಾಹಂ ಸರ್ವಾಶ್ರಮನಿವಾಸಿನಾಂ ॥ ೧೨೯ ॥

ಅಹಂ ದಯಾಪರೋ ಧರ್ಮಃ ಕ್ಷೀರೋದೋಽಹಂ ಮಹಾರ್ಣವಃ ।
ಯತ್ತತ್ಸತ್ಯಂ ಚ ಪರಮಮಹಮೇಕಃ ಪ್ರಜಾಪತಿಃ ॥ ೧೩೦ ॥

ಅಹಂ ಸಾಂಖ್ಯಮಹಂ ಯೋಗಮಹಂ ತತ್ಪರಮಂ ಪದಂ ।
ಅಹಮಿಜ್ಯಾ ಕ್ರಿಯಾ ಚಾಹಮಹಂ ವಿಪ್ರಾಧಿಪಸ್ಮೃತಃ ॥ ೧೩೧ ॥

ಅಹಂ ಜ್ಯೋತಿರಹಂ ವಾಯುರಹಂ ಭೂಮಿರಹಂ ನಭಃ ।
ಅಹಮಾಪಸ್ಸಮುದ್ರಶ್ಚ ನಕ್ಷತ್ರಾಣಿ ದಿಶೋ ದಶ ॥ ೧೩೨ ॥

ಅಹಂ ವರ್ಷಮಹಂ ಸೋಮಃ ಪರ್ಜನ್ಯೋಽಹಮಹಂ ಹರಿಃ ।
ಕ್ಷೀರೋದಸಾಗರೇ ಚಾಹಂ ಸಮುದ್ರೇ ಬಡಬಾಮುಖೇ ॥ ೧೩೩ ॥

---

ವರು. ನಾನೇನೆ ಎಲ್ಲಾ ಪ್ರಾಣಿಗಳೂ, ಎಲ್ಲಾ ದೇವತೆಗಳೂ, ಆಗಿದ್ದೇನೆ. ಸರ್ಪಗಳಲ್ಲಿ ನಾನು ಶೇಷನೂ, ಪಕ್ಷಿಗಳಲ್ಲಿ ಗರುಡನೂ ಆಗಿದ್ದೇನೆ.

೧೨೯-೧೩೦. ನಾನೇ ಎಲ್ಲಾ ಪ್ರಾಣಿಗಳಿಗೂ ನಾಶಕನಾದ ಕಾಲನು. ನಾನೇ ಧರ್ಮನು. ಸರ್ವಾಶ್ರಮಿಗಳಿಗೂ ನಾನೇ ತಪಸ್ಸು. ನಾನೇ ದಯಾಪರನಾದ ಧರ್ಮನು. ನಾನೇ ಕ್ಷೀರಸಮುದ್ರನು, ನಾನೇ ಸತ್ಯವು, ನಾನೇ ಪ್ರಜಾಪತಿಯು, ನಾನೇ ಸಾಂಖ್ಯನು, ನಾನೇ ಯೋಗವು, ನಾನೇ ಪರಮಪದವು, ನಾನೇ ಯಾಗಕ್ರಿಯೆಯು, ನಾನೇ ಬ್ರಾಹ್ಮಣರಿಗೆ ಅಧಿಪತಿಯು.

೧೩೨-೧೩೪. ನಾನೇ ಜ್ಯೋತಿಸ್ಸು, ನಾನೇ ಭೂಮಿಯು, ನಾನೇ ಆಕಾಶವು, ನಾನೇ ನೀರು, ನಾನೇ ಸಮುದ್ರವು, ನಾನೇ ನಕ್ಷತ್ರವು, ನಾನೇ ಹತ್ತು ದಿಕ್ಕುಗಳು, ನಾನೇ ಮಳೆಯು, ನಾನೇ ಸೋಮನು, ನಾನೇ ಪರ್ಜನ್ಯನು, ನಾನೇ ಹವಿಸ್ಸು, ನಾನೇ ಕ್ಷೀರಸಮುದ್ರದ ಬಡಬಾಕುದುರೆಯ ಮುಖದಲ್ಲಿರುವ ಬೆಂಕಿಯು, ಸಂವರ್ತಕ

ವಹ್ನಿಸ್ಸಂವರ್ತಕೋ ಭೂತ್ವಾ ಪಿಬಂಸ್ತೋಯಮಹಂ ರವಿಃ ।
ಅಹಂ ಪುರಾಣಂ ಪರಮಂ ತಥೈವಾಹಂ ಪರಾಯಣಂ ॥ ೧೩೪ ॥

ಭವಿಷ್ಯೇ ಚಾಪಿ ಸರ್ವತ್ರ ಭವಿಷ್ಯತ್ಸರ್ವಸಂಭವಃ ।
ಯತ್ಕಿಂಚಿತ್ಪಶ್ಯಸೇ ವಿಪ್ರ ಯಚ್ಛೃಣೋಷಿ ಚ ಕಿಂಚನ ॥ ೧೩೫ ॥

ಯಚ್ಚಾನುಭವಸೇ ಲೋಕೇ ತತ್ಸರ್ವಂ ಮಾಮನುಸ್ಮರ ।
ವಿಶ್ವಂ ಸೃಷ್ಟಂ ಮಯಾ ಪೂರ್ವಂ ಸೃಜೇ ಚಾದ್ಯಾಪಿ ಪಶ್ಯ ಮಾಂ ॥ ೧೩೬ ॥

ಯುಗೇಯುಗೇ ಚ ರಕ್ಷಾಮಿ ಮಾರ್ಕಂಡೇಯಾಖಿಲಂ ಜಗತ್ ।
ತದೇತದಖಿಲಂ ಸರ್ವಂ ಮಾರ್ಕಂಡೇಯಾವಧಾರಯ ॥ ೧೩೭ ॥

ಶುಶ್ರೂಷುರಪಿ ಧರ್ಮೇಷು ಕುಕ್ಷೌ ಚರ ಸುಖಂ ಮಮ ।
ಮಮ ಬ್ರಹ್ಮಾ ಶರೀರಸ್ಥೋ ದೇವಾಶ್ಚ ಋಷಿಭಿಸ್ಸಹ ॥ ೧೩೮ ॥

ವ್ಯಕ್ತಮವ್ಯಕ್ತಯೋಗಂ ಮಾಮವಗಚ್ಛಾಸುರದ್ವಿಷಂ ।
ಅಹಮೇಕಾಕ್ಷರೋ ಮಂತ್ರಸ್ತ್ರ್ಯಕ್ಷರಶ್ಚ ಪಿತಾಮಹಃ ॥ ೧೩೯ ॥

---

ನೆಂದು ಹೆಸರನ್ನು ಹೊಂದಿ ನೀರನ್ನು ಕುಡಿಯುವ ಸೂರ್ಯನು ನಾನೇ ಪುರಾಣ ಪುರುಷನು ನಾನೇ. ಪಾರಾಯಣನು (ಉತ್ತಮನು) ನಾನೇ.

೧೩೫-೧೩೬. ಮುಂದೆಯೂ, ಎಲ್ಲಾ ಕಡೆಯಲ್ಲಿಯೂ ಇರುತ್ತೇನೆ. ಮುಂದೆ ಹುಟ್ಟುವುದೆಲ್ಲವೂ ನಾನೇನೆ. ಎಲೈ ಬ್ರಾಹ್ಮಣನೇ! ನೀನು ಕೇಳುವುದೆಲ್ಲವೂ ನೀನು ನೋಡುವುದೆಲ್ಲವೂ, ನೀನು ಅನುಭವಿಸುವುದೆಲ್ಲವೂ ನಾನೇ ಎಂದು ತಿಳಿ. ನಾನೇ ಪೂರ್ವದಲ್ಲಿ ಈ ಜಗತ್ತನ್ನು ಸೃಷ್ಟಿಸಿದೆನು. ಈಗಲೂ ಸೃಷ್ಟಿಸುತ್ತಿರುವೆನು ನೋಡು.

೧೩೭-೧೩೯. ಎಲೈ ಮಾರ್ಕಂಡೇಯನೇ! ಎಲ್ಲಾ ಯುಗದಲ್ಲಿಯೂ ಇವನ್ನೆಲ್ಲಾ ಕಾಪಾಡುತ್ತೇನೆ. ಧರ್ಮಗಳನ್ನು ಕೇಳುತ್ತ ನನ್ನ ಹೊಟ್ಟೆಯಲ್ಲಿ ಸುಖವಾಗಿ ಸಂಚರಿಸುತ್ತಿರು. ಬ್ರಹ್ಮನು ದೇವತೆಗಳು ಋಷಿಗಳೊಡನೆ ನನ್ನ ಶರೀರದಲ್ಲಿದ್ದಾನೆ. ನಾನು ವ್ಯಕ್ತನೂ, ಅವ್ಯಕ್ತನೂ ಆಗಿ ರಾಕ್ಷಸದ್ವೇಷಿಯಾಗಿದ್ದೇನೆಂದು ತಿಳಿ. ನಾನೇ ಏಕಾಕ್ಷರ ಮಂತ್ರವೂ ಮೂರು ಅಕ್ಷರಗಳ ಮಂತ್ರವೂ ಆಗಿ ಪಿತಾಮಹನೂ ಆಗಿದ್ದೇನೆ.

ಪರಸ್ತ್ರಿವರ್ಗಾದೋಂಕಾರಃ ಪರಮಾತ್ಮಾ ಪ್ರದರ್ಶನಃ ।
ಏವಮಾದಿಪುರಾಣೋಽಸೌ ವದನ್ನೇವ ಮಹಾಮತಿಃ ॥ ೧೪೦ ॥

ವಕ್ತ್ರಮಾಹೃತವಾನಾಶು ಮಾರ್ಕಂಡೇಯಂ ಮಹಾಮುನಿಂ ।
ತತೋ ಭಗವತಃ ಕುಕ್ಷಿಂ ಪ್ರವಿಷ್ಟೋ ಮುನಿಸತ್ತಮಃ ॥ ೧೪೧ ॥

ನೇನಾಸಮ್ಮುಖಮೇಕಾಂತೇ ಶುಶ್ರೂಷುಂ ಹಂಸಮವ್ಯಯಂ ॥ ೧೪೨ ॥

ಯದಕ್ಷಯಂ ವಿವಿಧಮುಪಾಶ್ರಿತಂ ತನುಂ ।
ಮಹಾರ್ಣವೇ ವ್ಯಪಗತಚಂದ್ರಭಾಸ್ಕರೇ ॥
ಶನೈಶ್ಚರನ್ವಿಭುರಥಹಂಸಸಂಜ್ಞಿತಃ ।
ಸೃಜನ್ಜಗದ್ವಿಹರತಿ ಕಾಲಪರ್ಯಯೇ ॥ ೧೪೩ ॥

ಅಥ ಏವಂ ಶುಚಿರ್ಭೂತ್ವಾ ಚರಯಾಮಾಸ ವೈ ತಪಃ ।
ಛಾದಯಿತ್ವಾತ್ಮನೋ ದೇಹಂ ಪಯಸಾಂಬುಜಸಂಭವಃ ॥ ೧೪೪ ॥

---

೧೪೦-೧೪೨. ಧರ್ಮಕಾಮ, ಅರ್ಥಗಳನ್ನು ಮೀರಿದ ಮೋಕ್ಷರೂಪನೂ ನಾನೇ. ನಾನೇ ಓಂಕಾರನು, ಪರಮಾತ್ಮನೂ ನಾನೇ, ತೋರಿಸುವವನೂ ನಾನೇ, ಆ ಮಹಾಬುದ್ಧಿಯುಳ್ಳ ಸ್ವಾಮಿಯು ಈ ರೀತಿಯಾದ ಹಿಂದಿನ ವಿಷಯವನ್ನು ಹೇಳುತ್ತಿರುವಂತೆಯೇ ಆ ಮಾರ್ಕಂಡೇಯನನ್ನು ಬಾಯೊಳಕ್ಕೆ ಎಳೆದುಕೊಂಡನು. ಆಗ ಋಷಿಯು ಆ ಭಗವಂತನ ಹೊಟ್ಟೆಯನ್ನು ಹೊಕ್ಕನು. ಅಲ್ಲಿ ಅವ್ಯಯನಾದ ಹಂಸರೂಪನಾದ ಪರಮಾತ್ಮನ ವಿಷಯವನ್ನು ಎದುರಿಗೆ ನಿಂತು ಕೇಳದೆ, ಮರೆಯಾಗಿ ಹೇಳುವಂತೆ ಮಾಡಿದನು.

೧೪೩. ಅಕ್ಷಯನಾದ, ನಾನಾ ಬಗೆಯನ್ನು ತನ್ನಲ್ಲಿ ಹೊಂದಿರುವ, ಈ ಸ್ವಾಮಿಯು ಚಂದ್ರಸೂರ್ಯರಿಲ್ಲದ ಈ ಸಮುದ್ರದಲ್ಲಿ ಪ್ರಳಯಕಾಲದಲ್ಲಿ ಹಂಸಸಂಜ್ಞೆಯುಳ್ಳವನಾಗಿ ಮೆಲ್ಲಮೆಲ್ಲಗೆ ಓಡಾಡುತ್ತ ವಿಹರಿಸುತ್ತಿದ್ದಾನೆ.

೧೪೪. ಕಮಲನಾಭನಾದ ಆ ಸ್ವಾಮಿಯು ತನ್ನ ದೇಹವನ್ನು ನೀರಿನಿಂದ ಮುಚ್ಚಿಕೊಂಡು ಈ ರೀತಿ ಶುಚಿಯಾಗಿ ತಪಸ್ಸನ್ನೂ ಮಾಡಿದನು.

ತತೋ ಮಹಾತ್ಮಾ ವಿಮಲೋ ಮತಿಂ ಲೋಕವಿಸರ್ಜನೇ ।
ಉತ್ಪತ್ತಿಂ ಚೈವ ಭೂತಾನಾಂ ವಿಶ್ವೋ ವಿಶ್ವಮಚಿಂತಯತ್ ॥ ೧೪೫ ॥

ತಸ್ಯ ಚಿಂತಯಮಾನಸ್ಯ ನಿಯತೇ ಸಂಸ್ಥಿತೇಽರ್ಣವೇ ।
ನಿರಾಕಾಶೇ ತೋಯಮಯೇ ಸೂಕ್ಷ್ಮೇ ಜಗತಿ ಗಹ್ವರೇ ॥ ೧೪೬ ॥

ಈಶಸ್ಸಂಕ್ಷೋಭಯಾಮಾಸ ಅರ್ಣವಂ ಸಲಿಲಂ ಗತಃ ।
ತಥಾಂತರಾದಪಾಂ ಸೂಕ್ಷ್ಮಮಥ ಛಿದ್ರಮಭೂತ್ಪುರಾ ॥ ೧೪೭ ॥

ಶಬ್ದಂ ಪ್ರತಿತತೋಭೂತೋ ಮಾರುತಚ್ಛಿದ್ರಸಂಭವಃ ।
ಸ ಸಪ್ತಾರ್ಣವಮಾಕ್ಷೋಭ್ಯ ವ್ಯವರ್ಧತ ಸಮೀರಣಃ ॥ ೧೪೮ ॥

ನಭಸ್ವತಾ ಬಲವತಾ ವೇಗಾದ್ವಿಕ್ಷೋಭಿತೋಽರ್ಣವಃ ।
ತಸ್ಯಾರ್ಣವಸ್ಯ ಕ್ಷುಬ್ಧಸ್ಯ ತಸ್ಮಿನ್ನಭಸಿ ಕ್ಷುಭ್ಯತಿ ॥ ೧೪೯ ॥

ಕೃಷ್ಣವರ್ತ್ಮಾ ಸಮಭವತ್ಪ್ರಭುರ್ವೈಶ್ವಾನರೋ ಮಹಾನ್ ।
ತತಃ ಸಂಶೋಷಯಾಮಾಸ ಪಾವಕಸ್ಸಲಿಲಂ ಬಹು ॥ ೧೫೦ ॥

---

೧೪೫. ಅನಂತರ ಆ ಪರಿಶುದ್ಧನಾದ ಸ್ವಾಮಿಯು ಲೋಕಗಳನ್ನು ಉತ್ಪತ್ತಿ ಮಾಡಬೇಕೆಂದು ಪ್ರಪಂಚವನ್ನು ಜ್ಞಾಪಿಸಿಕೊಂಡನು.

೧೪೬-೧೪೭. ಒಂದೇ ಸಮವಾಗಿ ಹರಡಿರುವ ಸ್ವಲ್ಪವೂ ಎಡಬಿಡದಿರುವ ಜಗತ್ತೆಲ್ಲವೂ ಸೂಕ್ಷ್ಮರೂಪದಿಂದಿರುವ ಆ ನೀರಿನಲ್ಲಿ ಈಶನು ಈ ರೀತಿ ಯೋಚಿಸಿ ನೀರಿನೊಳಗಿದ್ದುಕೊಂಡೇ ನೀರನ್ನು ಅಲ್ಲಾಡಿಸಿದನು. ಆ ನೀರು ಸಂದಿಯನ್ನೂ ಬಿಟ್ಟಿತು.

೧೪೮. ಆ ನೀರಿನ ಸಂದಿಯಿಂದ ಗಾಳಿಯು ಹೊರಟಿತು. ಆ ಸಂದಿನಿಂದ ಹೊರಟ ಗಾಳಿಯು ಏಳು ಸಮುದ್ರಗಳನ್ನೂ ಅಲ್ಲೋಲಕಲ್ಲೋಲ ಮಾಡಿತು.

೧೪೯-೧೫೦. ಬಲಿಷ್ಠವಾದ ಆ ಗಾಳಿಯಿಂದ ಸಮುದ್ರವು ಕ್ಷೋಭಹೊಂದಿದ ಮೇಲೆ ಅದರಿಂದ ಬೆಂಕಿಯು ಉತ್ಪನ್ನವಾಗಿ ಆಕಾಶವೆಲ್ಲವೂ ಕ್ಷೋಭ ಹೊಂದುವಷ್ಟರಮಟ್ಟಿಗೆ ದೊಡ್ಡದಾಗಿ ಆ ಬೆಂಕಿಯು ಸಮುದ್ರದ ನೀರನ್ನು ಬಹುವಾಗಿ ಕ್ಷಯಿಸುವಂತೆ ಮಾಡಿತು.

ಹ್ರಿಯಮಾಣಮಿವ ಛಿದ್ರಮಭವದ್ವಿವೃತಂ ನಭಃ ।
ಆತ್ಮತೇಜೋದ್ಭವಾಃ ಪುಣ್ಯಾ ಆಪೋಽಮೃತರಸೋಪಮಾಃ ॥ ೧೫೧ ॥

ಆಕಾಶಂ ಛಿದ್ರಸಂಭೂತಂ ವಾಯುರಾಕಾಶಸಂಭವಃ ।
ಆಭ್ಯಾಂ ಸಂಘರ್ಷಸಂಭೂತಂ ಪಾವಕಂ ಚಾಸ್ಯಸಂಭವಂ ॥ ೧೫೨ ॥

ದೃಷ್ಟ್ವಾ ಪಿತಾಮಹೋ ದೇವೋ ಮಹಾಭೂತವಿನಾಶನಃ ।
ದೃಷ್ಟ್ವಾ ಭೂತಾನಿ ಭಗವಾಂಲ್ಲೋಕಸೃಷ್ಟ್ಯರ್ಥಮುತ್ತಮಂ ॥ ೧೫೩ ॥

ಬ್ರಹ್ಮಣೋ ಜನ್ಮಸಹಿತಂ ಬಹುರೂಪೋಹ್ಯಚಿಂತಯತ್ ।
ತತೋ ಯುಗಾನಾಂ ಸಂಖ್ಯಾ ತೇ ಸಹಸ್ರಯುಗಪರ್ಯಯೇ ॥ ೧೫೪ ॥

ಯತ್ಪೃಥಿವ್ಯಾಂ ದ್ವಿಜೇಂದ್ರಾಣಾಂ ತಪಸಾ ಭಾವಿತಾತ್ಮನಾಂ ।
ಬಹುಜನ್ಮವಿಶುದ್ಧಾತ್ಮಾ ಬ್ರಹ್ಮಣೋ ಹರಿರುಚ್ಯತೇ ॥ ೧೫೫ ॥

ಜ್ಞಾನಂ ತು ದೃಷ್ಟ್ವಾ ವಿಶ್ವಾತ್ಮಾ ಯೋಗಿನಾಂ ಯಾತಿ ಯೋಗ್ಯತಾಂ ।
ತಂ ಯೋಗವಂತಂ ವಿಜ್ಞಾಯ ಸಂಪೂರ್ಣೈಶ್ವರ್ಯಮುತ್ತಮಂ ॥ ೧೫೬ ॥

---

೧೫೧. ಅನಂತರ ಆಕಾಶದಲ್ಲಿ ಸಂದು ಹೋಗಿ ಅಗಲವಾಗುವಂತೆ ನೀರೆಲ್ಲವೂ ಶೋಷಿಸಿ ಆಕಾಶವು ಅಗಲವಾಯಿತು. ಈ ನೀರು ಸ್ವಾಮಿಯ ತೇಜಸ್ಸಿನಿಂದಲೇ ಹುಟ್ಟಿ ಪುಣ್ಯರೂಪವಾಗಿ ಅಮೃತದಂತಿದ್ದುವು.

೧೫೨-೧೫೫. ಈ ರೀತಿಯಾಗಿ ಆಕಾಶವೂ ಛಿದ್ರರೂಪವಾದುದಾಯಿತು. ವಾಯುವು ಆ ಆಕಾಶದಲ್ಲಿ ಉತ್ಪನ್ನವಾಯಿತು. ಈ ವಾಯು ಆಕಾಶಗಳ ಒತ್ತಡದಿಂದ ಬೆಂಕಿಯು ಹುಟ್ಟಿತು. ಮಹಾಭೂತಗಳೆಲ್ಲವನ್ನೂ ನಾಶಮಾಡಿದ ಆವಿಷ್ಣುವು ಇದನ್ನು ನೋಡಿ ಸೃಷ್ಟಿಯನ್ನು ಮಾಡಲುದ್ದೇಶಿಸಿ ಅವನು ಬ್ರಹ್ಮಜನ್ಮವನ್ನೂ ಬಹು ವಿಧವಾದ ಈ ಪ್ರಪಂಚವನ್ನೂ, ಬಹು ವಿಧವಾಗಿ ಆಗಲು ಸ್ವಾಮಿಯು ಚಿಂತಿಸಿದನು. ಅನಂತರದಲ್ಲಿ ಸಾವಿರ ಯುಗಗಳು ಕಳೆಯಲು ತಪಸ್ಸಿನಿಂದ ಶುದ್ಧಿಹೊಂದಿದ, ಆತ್ಮವುಳ್ಳವರಿಗೆ ಯಾವುದು ಧ್ಯೇಯವೋ ಅಂತಹ, ಬ್ರಹ್ಮನು ಬಹು ವರ್ಷಗಳಿಂದ ಶುದ್ಧನಾಗಿ ಇದ್ದು ಈ ರೀತಿಯಾಗಿ ಹರಿ ಎಂದೆನಿಸಿಕೊಳ್ಳುತ್ತಾನೆ.

೧೫೬–೧೫೮. ಆ ವಿಶ್ವಾತ್ಮನಾದ ನಾರಾಯಣನು ಯೋಗಿಗಳ ಜ್ಞಾನವನ್ನೂ ಯೋಗ್ಯತೆಯನ್ನೂ ನೋಡಿ ಈ ಹರಿಯು ಯೋಗದಲ್ಲಿಯೂ, ಜ್ಞಾನದಲ್ಲಿಯೂ, ಐಶ್ವ

ಪದೇ ಬ್ರಹ್ಮಣಿ ವಿಶ್ವಸ್ಯ ನಿಯೋಜಯತಿ ಯೋಗವಿತ್ ।
ತತಸ್ತಸ್ಮಿನ್ಮಹಾತೋಯೇ ಮಹೇಶೋ ಹರಿರಚ್ಯುತಃ ॥ ೧೫೭ ॥

ಜಲಕ್ರೀಡಾಂ ಚ ವಿಧಿವತ್ಸಚಕ್ರೇ ಸರ್ವಲೋಕಕೃತ್ ।
ಪದ್ಮಂ ನಾಭ್ಯುದ್ಭವಂ ಚೈಕಂ ಸಮುತ್ಪಾದಿತವಾಂಸ್ತಥಾ ।
ಬಹುವರ್ಣಂ ವಿರಾಜತ್ತದ್ಭಾಸ್ಕರಾಭಂ ಹಿರಣ್ಮಯಂ ॥ ೧೫೮ ॥

ಹುತಾಶನಜ್ವಲಿತಶಿಖೋಜ್ವಲಪ್ರಭಂ ।
ಸಮುತ್ಥಿತಂ ಶರದಮಲಾರ್ಕತೇಜಸಂ ॥
ವಿರಾಜತೇ ಕಮಲಮುದಾರವರ್ಚಸಂ ।
ಮಹಾತ್ಮನಸ್ತನುರುಹಚಾರುಶ್ಚೈವಲಂ ॥ ೧೫೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಪದ್ಮಪ್ರಾದುರ್ಭಾವೋ
॥ ನಾಮ ಷಟ್ತ್ರಿಂಶೋಽಧ್ಯಾಯಃ ॥

---

ರ್ಯದಲ್ಲಿಯೂ ಪೂರ್ಣನಾಗಿರುವನೆಂದು ತಿಳಿದು ಪ್ರಪಂಚದ ಬ್ರಹ್ಮ ಪದ್ಮದಲ್ಲಿ ಅವನನ್ನು ಇಡುತ್ತಾನೆ. ಮಹೇಶ್ವರನಾದ ಆ ಹರಿಯು ಅ ದೊಡ್ಡ ನೀರಿನಲ್ಲಿ ಕ್ರಮವಾಗಿ ಜಲಕ್ರೀಡೆಯನ್ನಾಡುತ್ತಾನೆ. ಆಗ ಆ ಹರಿಯು ತನ್ನ ಹೊಕ್ಕಳಿನಲ್ಲಿ ಚಿನ್ನದ ರೂಪವುಳ್ಳ ನಾನಾ ಬಗೆಯಾದ ಸೂರ್ಯನಂತೆ ಪ್ರಕಾಶಿಸುವ ಒಂದು ಕಮಲವನ್ನು ಸೃಷ್ಟಿಸುತ್ತಾನೆ.

೧೫೯. ಆ ಕಮಲವು ಉರಿಯುವ ಬೆಂಕಿಯ ಜ್ವಾಲೆಯಂತೆ ಕಾಂತಿಯುಳ್ಳದ್ದಾಗಿಯೂ, ಶರತ್ಕಾಲದ ಸೂರ್ಯನಂತೆ ನಿರ್ಮಲವಾದ ತೇಜಸ್ಸುಳ್ಳದ್ದಾಗಿಯೂ ಮೈಗೂದಲೆಂಬ ಮನೋಹರವಾದ ಪಾಚಿಯುಳ್ಳದ್ದಾಗಿಯೂ, ವಿಶೇಷವಾದ ತೇಜಸ್ಸಿನಿಂದ ಕೂಡಿ ಬಹುವಾಗಿ ಪ್ರಕಾಶಿಸುತ್ತಿದ್ದಿತು.

ಇಂತು ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಪದ್ಮದ ಹುಟ್ಟುವಿಕೆಯೆಂಬ
ಮೂವತ್ತಾರನೆಯ ಅಧ್ಯಾಯವು ಮುಗಿದುದು.

